# ನಗರ ಸ್ಥಳೀಯ ಸಂಸ್ಥೆಗಳು ಮತ್ತು ಅಭಿವೃದ್ಧಿ

## (ಬಳ್ಳಾರಿ ಜಿಲ್ಲೆ ಅಧ್ಯಯನ)

---

(ರಾಜ್ಯಶಾಸ್ತ್ರ ವಿಷಯಕ್ಕೆ ಸಂಬಂಧಿಸಿದ ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ
ಸಾದರಪಡಿಸಿದ ಮಹಾಪ್ರಬಂಧ)


ಸಂಶೋಧನಾ ವಿದ್ಯಾರ್ಥಿ

**ಜೋಗಿನಕಟ್ಟೆ ನಾಗರಾಜ**

ಮಾರ್ಗದರ್ಶಕರು

**ಡಾ. ಸಿದ್ದಗಂಗಮ್ಮ**

ಸಹ ಪ್ರಾಧ್ಯಾಪಕರು

ಅಭಿವೃದ್ಧಿ ಅಧ್ಯಯನ ವಿಭಾಗ





**ಅಭಿವೃದ್ಧಿ ಅಧ್ಯಯನ ವಿಭಾಗ**

**ಸಮಾಜ ವಿಜ್ಞಾನಗಳ ನಿಕಾಯ**

**ಕನ್ನಡ ವಿಶ್ವವಿದ್ಯಾಲಯ, ಹಂಪಿ**

ವಿದ್ಯಾರಣ್ಯ – ೫೮೩ ೨೭೬

೨೦೧೫

# ನಗರ ಸ್ಥಳೀಯ ಸಂಸ್ಥೆಗಳು ಮತ್ತು ಅಭಿವೃದ್ಧಿ

(ಬಳ್ಳಾರಿ ಜಿಲ್ಲೆ ಅಧ್ಯಯನ)

(ರಾಜ್ಯಶಾಸ್ತ್ರ ವಿಷಯಕ್ಕೆ ಸಂಬಂಧಿಸಿದ ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಮಹಾಪ್ರಬಂಧ)



ಸಂಶೋಧನಾ ವಿದ್ಯಾರ್ಥಿ

**ಜೋಗಿನಕಟ್ಟೆ ನಾಗರಾಜ**

ಮಾರ್ಗದರ್ಶಕರು

**ಡಾ. ಸಿದ್ಧಗಂಗಮ್ಮ**

ಸಹ ಪ್ರಾಧ್ಯಾಪಕರು

ಅಭಿವೃದ್ಧಿ ಅಧ್ಯಯನ ವಿಭಾಗ



**ಅಭಿವೃದ್ಧಿ ಅಧ್ಯಯನ ವಿಭಾಗ**

**ಸಮಾಜ ವಿಜ್ಞಾನಗಳ ನಿಕಾಯ**

**ಕನ್ನಡ ವಿಶ್ವವಿದ್ಯಾಲಯ, ಹಂಪಿ**

**ವಿದ್ಯಾರಣ್ಯ - ೫೮೩೨೭೬**

**೨೦೧೫**

# ಸಂಶೋಧಕರ ಘೋಷಣಾ ಪತ್ರ

**ನಗರ ಸ್ಥಳೀಯ ಸಂಸ್ಥೆಗಳು ಮತ್ತು ಅಭಿವೃದ್ಧಿ(ಬಳ್ಳಾರಿ ಜಿಲ್ಲೆ ಅಧ್ಯಯನ)** ಎಂಬ ರಾಜ್ಯಶಾಸ್ತ್ರ ವಿಷಯದ ಮಹಾಪ್ರಬಂಧವನ್ನು ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯದ ಅಭಿವೃದ್ಧಿ ಅಧ್ಯಯನ ವಿಭಾಗದ ಸಹ ಪ್ರಾಧ್ಯಾಪಕರಾದ **ಡಾ. ಸಿದ್ದಗಂಗಮ್ಮ** ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ.

ಪ್ರಸ್ತುತ ಮಹಾಪ್ರಬಂಧದ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಉದ್ದೇಶ ಅಥವಾ ಪದವಿಗಳಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ದಿನಾಂಕ: 16.11.15
ಸ್ಥಳ : ವಿದ್ಯಾರಣ್ಯ

J. Nagaraja

**ಜೋಗಿನಕಟ್ಟೆ ನಾಗರಾಜ**
ಪಿಎಚ್.ಡಿ. ಸಂಶೋಧನಾ ವಿದ್ಯಾರ್ಥಿ
ಅಭಿವೃದ್ಧಿ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ- ೫೮೩೨೭೬

# ಮಾರ್ಗದರ್ಶಕರ ದೃಢೀಕರಣ ಪತ್ರ

**ಶ್ರೀ ಜೋಗಿನಕಟ್ಟೆ ನಾಗರಾಜ** ಇವರು ರಾಜ್ಯಶಾಸ್ತ್ರ ವಿಷಯದಲ್ಲಿ ಪಿಎಚ್.ಡಿ. ಪದವಿಗಾಗಿ ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ **ನಗರ ಸ್ಥಳೀಯ ಸಂಸ್ಥೆಗಳು ಮತ್ತು ಅಭಿವೃದ್ಧಿ(ಬಳ್ಳಾರಿ ಜಿಲ್ಲೆ ಅಧ್ಯಯನ)** ಎಂಬ ರಾಜ್ಯಶಾಸ್ತ್ರ ವಿಷಯದ ಮಹಾಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಅಭಿವೃದ್ಧಿ ಅಧ್ಯಯನ ವಿಭಾಗಕ್ಕೆ ಸಲ್ಲಿಸಿದ್ದಾರೆ.

ಪ್ರಸ್ತುತ ಮಹಾಪ್ರಬಂಧದ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಉದ್ದೇಶ ಅಥವಾ ಪದವಿಗಳಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ದಿನಾಂಕ: 18.11.15
ಸ್ಥಳ : ವಿದ್ಯಾರಣ್ಯ

**ಡಾ. ಸಿದ್ದಗಂಗಮ್ಮ**
ಮಾರ್ಗದರ್ಶಕರು
ಸಹ ಪ್ರಾಧ್ಯಾಪಕರು
ಅಭಿವೃದ್ಧಿ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ– ೫೮೩೨೭೬

# ಪರಿವಿಡಿ

ಪ್ರಸ್ತಾವನೆ

# ಅಧ್ಯಯನದ ವಿಷಯ ಮತ್ತು ಸಮಸ್ಯೀಕರಣ

# ಅಧ್ಯಯನದ ಉದ್ದೇಶಗಳು

# ಅಧ್ಯಯನದ ವಿಧಾನ

# ಅಧ್ಯಯನದ ಮಿತಿಗಳು

# ಅಧ್ಯಯನದ ವಿನ್ಯಾಸ

**ಪೀಠಿಕೆ**

ಭಾರತದ ನಗರ ವ್ಯವಸ್ಥೆಯ ತಳಹದಿಯಾಗಿರುವ ನಗರ ಸ್ಥಳೀಯ ಸಂಸ್ಥೆಗಳ ಮೂಲಕ ನಗರ ಪ್ರದೇಶಗಳ ಅಭಿವೃದ್ಧಿ ಚಟುವಟಿಕೆಯನ್ನು ಅಧ್ಯಯನ ಮಾಡುವುದು ಸಂಶೋಧನೆಯ ಪ್ರಮುಖ ಉದ್ದೇಶವಾಗಿದೆ. ಇಂದಿನ ಪ್ರಜಾಪ್ರಭುತ್ವ ಆಡಳಿತ ವ್ಯವಸ್ಥೆಯಲ್ಲಿ ಅಧಿಕಾರ ಕಾರ್ಯ ನಿರ್ವಹಣೆ ಮತ್ತು ಹೊಣೆಗಾರಿಕೆಗಳ ವಿಕೇಂದ್ರೀಕರಣ ಹಿಂದೆಂಗಿಂತಲೂ ಅನಿವಾರ್ಯ ಹಾಗೂ ಹೆಚ್ಚು ಪ್ರಸ್ತುತವಾಗಿದೆ. ಏಕೆಂದರೆ ಇಂದಿನ ರಾಷ್ಟ್ರಗಳು ವಿಶಾಲವಾದ ಭೂಪ್ರದೇಶವನ್ನು ಹೊಂದಿರುವ ಸ್ಥಳೀಯ ಪರಿಸ್ಥಿತಿ ಮತ್ತು ಸಮಸ್ಯೆಗಳ ಬಗ್ಗೆ ಹೆಚ್ಚಿನ ಅರಿವನ್ನು ಹೊಂದಿರದ, ಕೇಂದ್ರ ಸರ್ಕಾರವು ಸ್ಥಳೀಯ ಅವಶ್ಯಕತೆಗೆ ತಕ್ಕಂತೆ ಸರಿಯಾದ ನಿರ್ಧಾರಗಳನ್ನು ತೆಗೆದುಕೊಳ್ಳಲಾಗದೇ ಇರಬಹುದು. ಆದುದರಿಂದ ಆಡಳಿತದ ದಕ್ಷತೆ ಮತ್ತು ಕಾರ್ಯನಿರ್ವಹಣೆಯ ಸಲುವಾಗಿ ವಿಕೇಂದ್ರೀಕರಣವನ್ನು ಆಡಳಿತ ಸಾಧನವಾಗಿ ಬಳಸಲಾಗುತ್ತಿದೆ. ಇಂತಹ ವಿಕೇಂದ್ರೀಕೃತ ಘಟಕಗಳನ್ನು ಜಿಲ್ಲೆ ಮತ್ತು ಜಿಲ್ಲೆಯ ಕೆಳಮಟ್ಟದ ತಾಲ್ಲೂಕು, ನಗರ ಮಟ್ಟಗಳಲ್ಲಿ ಕಾಣಬಹುದು. ಸ್ಥಳೀಯ ಅವಶ್ಯಕತೆಗಳನ್ನು ಪೂರೈಸಲು ಹಲವು ಹಂತಗಳಲ್ಲಿ ಈ ಸ್ಥಳೀಯ ಘಟಕಗಳಿಗೆ ಅಧಿಕಾರವನ್ನು ನೀಡಲಾಗಿದೆ. ಹೀಗೆ ಸ್ಥಳೀಯ ಸಮಸ್ಯೆಗಳನ್ನು ಪರಿಹರಿಸಿಕೊಳ್ಳುವ ಹಾಗೂ ಬೇಡಿಕೆಗಳನ್ನು ಪೂರೈಸಿಕೊಳ್ಳುವ ವಿಕೇಂದ್ರೀಕರಣದ ವ್ಯವಸ್ಥೆಯನ್ನು ಸ್ಥಳೀಯ ಸಂಸ್ಥೆಗಳು ಎಂದು ಗುರುತಿಸಲಾಗಿದೆ. ನಗರ ಸ್ಥಳೀಯ ಸಂಸ್ಥೆಗಳ ಬಹು ಮುಖ್ಯ ಗುರಿ ಸ್ಥಳೀಯರ ಅಭಿವೃದ್ಧಿಯಾಗಿದೆ. ಈ ಹಿನ್ನೆಲೆಯಲ್ಲಿ ಕರ್ನಾಟಕ ರಾಜ್ಯವು ಅಭಿವೃದ್ಧಿಯ ದೆಸೆಯಲ್ಲಿ ಪ್ರಗತಿಯ ಹಂತ ಕಾಣಲು ಅನೇಕ ಪ್ರಜ್ಞಾಪೂರ್ವಕವಾದ ಯೋಜನೆ ಹಾಗೂ ನೀತಿ ನಿರೂಪಣೆಯ ಕಾರ್ಯಕ್ರಮಗಳನ್ನು ಉನ್ನತ ಮಟ್ಟದಲ್ಲಿ ಹಾಕಿಕೊಂಡಿದ್ದರೂ ಸಹ ಅಭಿವೃದ್ಧಿಯಲ್ಲಿ ಪ್ರಾದೇಶಿಕ ಅಸಮಾನತೆಯು ಮುಂದುವರೆದಿರುವುದು ಕಂಡುಬರುತ್ತದೆ. ಅಭಿವೃದ್ಧಿ ಎಂಬುದು ಜನರ ಬದುಕಿನಲ್ಲಿ ಅಂತರ್ಗತಗೊಂಡಿಲ್ಲ ಎಂಬುದು ವಿವಿಧ ಅಧ್ಯಯನಗಳಿಂದ ತಿಳಿದುಬಂದಿದೆ. ಇದರಿಂದ ಅಭಿವೃದ್ಧಿಯ ಬಗ್ಗೆ ಅನೇಕ ಸಮಸ್ಯೆಗಳು ಹುಟ್ಟಿಕೊಳ್ಳದಿರುವುದು ಕಂಡುಬರುತ್ತದೆ. ಆದರೆ ಇತ್ತೀಚೆಗೆ ಪ್ರಾದೇಶಿಕ ಅಸಮಾನತೆಯು ಹೆಚ್ಚಿನ ಪರಿಣಾಮ ಬೀರಿ ಕರ್ನಾಟಕದ ಐಕ್ಯತೆ

ಮತ್ತು ಸಮಗ್ರತೆಗೆ ಧಕ್ಕೆ ಉಂಟುಮಾಡುವ ರೀತಿಯಲ್ಲಿ ಪರಿಸ್ಥಿತಿ ಮುಂದುವರೆದಿದೆ. ಇಂತಹ ಪ್ರಾದೇಶಿಕ ಅಸಮಾನತೆಯನ್ನು ಹೋಗಲಾಡಿಸಲು ಎರಡು ವಿಶಿಷ್ಟ ರೀತಿಯ ಚಳುವಳಿಗಳು ಪ್ರಾರಂಭವಾದವು. ಈ ಚಳವಳಿಯ ಪ್ರಾದೇಶಿಕ ಅಸಮಾನತೆ ಎಂಬ ಸಮಸ್ಯೆಯನ್ನು ಮುಂದಿಟ್ಟುಕೊಂಡು ಕರ್ನಾಟಕ ರಾಜ್ಯವನ್ನು ಎರಡು ಪ್ರತ್ಯೇಕ ರಾಜ್ಯಗಳಾಗಿ ವಿಂಗಡನೆ ಮಾಡುವ ಉದ್ದೇಶ ಹೊಂದಿತ್ತು. ಈ ಪೂರ್ವದಲ್ಲಿ ರಾಜ್ಯವು ೧೯೫೬ರಲ್ಲಿ ಮೈಸೂರು ಸಂಸ್ಥಾನದಲ್ಲಿ ಹಾಗೂ ಬ್ರಿಟೀಷ್ ಆಡಳಿತದಲ್ಲಿ ಸಣ್ಣ ಪುಟ್ಟ ಸಂಸ್ಥಾನಗಳಲ್ಲಿ ಹರಿದು ಹಂಚಿಹೋಗಿತ್ತು. ಮುಂದೆ ಈ ಪ್ರದೇಶಗಳನ್ನು ಒಂದುಗೂಡಿಸಲು ಏಕೀಕರಣ ಚಳುವಳಿಯು ಪ್ರಾರಂಭವಾಯಿತು. ಇಂತಹ ಚಳವಳಿಯೇ ಇಂದು ಪ್ರತ್ಯೇಕ ರಾಜ್ಯಗಳನ್ನು ಮಾಡಿರುವುದು ವಿಷಾದದ ಸಂಗತಿ. ಇಂತಹ ಪ್ರತ್ಯೇಕವಾದಿ ಭಾವನೆಯು ಬಹಳ ದಿನಗಳ ಕಾಲ ಮುಂದುವರಿದು ೧೯೭೦ರಲ್ಲಿ ಬಹಿರಂಗಗೊಂಡಿತು. ಈ ಪ್ರಾದೇಶಿಕ ಅಸಮಾನತೆಯ ಭಾವನೆಯನ್ನು ವಿರೋಧಿಸಿದ ಅಂದಿನ ಮುಖ್ಯಮಂತ್ರಿ ದಿ. ಜೆ.ಎಚ್. ಪಟೇಲರ ವಿರುದ್ಧ ಈ ಚಳವಳಿಯು ಹೆಚ್ಚಿನ ಪರಿಣಾಮ ಭೀರಿ ಉತ್ತರ ಕರ್ನಾಟಕದ ಪ್ರತ್ಯೇಕ ಭೂಪಟವನ್ನು ತಯಾರಿಸುವ ಹಾಗೂ ಹೊಸ ರಾಜ್ಯದ ಬಾವುಟ ಹಾರಿಸುವ ಪ್ರಕ್ರಿಯೆಗೆ ಎಡೆಮಾಡಿಕೊಟ್ಟಿತು. ಇಂತಹ ಪ್ರಕ್ರಿಯೆಯು, ಚಳವಳಿಯು ಬರುಬರುತ್ತ ತನ್ನ ಅವಸಾನವನ್ನು ಕಳೆದುಕೊಂಡಿತು. ತದನಂತರದ ಎರಡನೆಯ ಚಳವಳಿಯು ಪ್ರಾರಂಭವಾಗಿ ತನ್ನದೇ ಆದ ಧ್ಯೇಯೋದ್ದೇಶ ಹೊಂದಿ ರಾಜ್ಯದಲ್ಲಿ ಬಾಂಬೆ-ಕರ್ನಾಟಕ ಪ್ರದೇಶವನ್ನು ಬಿಟ್ಟು ಹೈದರಾಬಾದ್-ಕರ್ನಾಟಕ ಜಿಲ್ಲೆಗಳನ್ನು ಸೇರಿಸಿಕೊಂಡು ಪ್ರತ್ಯೇಕ ರಾಜ್ಯವನ್ನು ಮಾಡುವ ಉದ್ದೇಶ ಹೊಂದಿತ್ತು.[೧] ಇಂತಹ ಎರಡು ಪ್ರತ್ಯೇಕವಾದಿ ಚಳವಳಿಯ ದುಷ್ಪರಿಣಾಮಗಳನ್ನು ಮನಗಂಡ ರಾಜ್ಯಸರ್ಕಾರವು ಪ್ರಾದೇಶಿಕ ಅಸಮಾನತೆಯ ಸಮಸ್ಯೆಗಳನ್ನು ಅಧ್ಯಯನ ಮಾಡಿ ಅದರ ಪರಿಹಾರಕ್ಕೆ ಸೂಕ್ತ ಮಾರ್ಗಗಳನ್ನು ಕಂಡುಹಿಡಿಯಲು ಖ್ಯಾತ ಅರ್ಥಶಾಸ್ತ್ರಜ್ಞ ಡಾ. ಡಿ. ಎಂ. ನಂಜುಂಡಪ್ಪನವರ ಅಧ್ಯಕ್ಷತೆಯಲ್ಲಿ ಉನ್ನತಮಟ್ಟದ ಸಮಿತಿಯನ್ನು ಡಿಸೆಂಬರ್ ೨೦೦೦ರಲ್ಲಿ ನೇಮಿಸಲಾಯಿತು.[೨] ಈ ಸಮಿತಿಯು ಆರ್ಥಿಕ ಮತ್ತು ಸಾಮಾಜಿಕ ಹಾಗೂ ಶೈಕ್ಷಣಿಕ ಕ್ಷೇತ್ರದ ಮೂವತ್ನಾಲ್ಕು ಸೂಚ್ಯಂಕಗಳನ್ನು ಬಳಸಿ ರಾಜ್ಯದ ತಾಲ್ಲೂಕುಗಳನ್ನು ಸಾಪೇಕ್ಷವಾಗಿ ಅಭಿವೃದ್ಧಿ ಹೊಂದಿದ, ಹಿಂದುಳಿದ ಮತ್ತು ಅತ್ಯಂತ ಹಿಂದುಳಿದ ತಾಲ್ಲೂಕುಗಳೆಂದು ಗುರುತಿಸಿ ಮೂಲಭೂತ ಸೌಲಭ್ಯದ ಸೂಚ್ಯಂಕದ ಪ್ರಕಾರ ಉತ್ತರ ಕರ್ನಾಟಕದ ಐವತ್ತೈದು ತಾಲ್ಲೂಕುಗಳು ಮತ್ತು ದಕ್ಷಿಣ ಕರ್ನಾಟಕದ ತೊಂಬತ್ತು ತಾಲ್ಲೂಕುಗಳು ಸಾಪೇಕ್ಷವಾಗಿ ಮುಂದುವರಿದಿದೆ. ಉತ್ತರ ಕರ್ನಾಟಕದಲ್ಲಿ ಎಂಟು ಮತ್ತು ದಕ್ಷಿಣ ಕರ್ನಾಟಕದ ಮೂರು ತಾಲ್ಲೂಕುಗಳು ಸ್ವಲ್ಪ ಹಿಂದುಳಿದಿವೆ, ಅತ್ಯಂತ ಹಿಂದುಳಿದ ತಾಲ್ಲೂಕುಗಳು ಉತ್ತರ ಕರ್ನಾಟಕದಲ್ಲಿ ಮಾತ್ರ ಹತ್ತು ಇದ್ದು, ದಕ್ಷಿಣ ಕರ್ನಾಟಕದಲ್ಲಿ ಇರುವುದಿಲ್ಲ ಎಂಬ ಅಂಶವು ನೀರ್ಮಾಣವಾಗಿರುವುದು ವರದಿಯಿಂದ ತಿಳಿದು ಬಂದಿದೆ.[೩] ಮುಂದುವರಿದು ಐತಿಹಾಸಿಕ ಹಿನ್ನೆಲೆಯನ್ನು ಹೊಂದಿರುವ ಹೈದ್ರಾಬಾದ್ ಕರ್ನಾಟಕದ ಭಾಗವಾದ ಉತ್ತರ ಕರ್ನಾಟಕವೇ ಹಿಂದುಳಿದಿದೆ ಎಂಬ ಕೂಗಿನ ಹಿನ್ನೆಲೆಯಲ್ಲಿ ಚಾರಿತ್ರಿಕ ಕಾರಣಗಳು, ನೈಸರ್ಗಿಕ ಸಂಪನ್ಮೂಲಗಳು ಉಪಯೋಗವಾಗದೇ ಇರುವುದರಿಂದ ಇಲ್ಲಿ ಅಭಿವೃದ್ಧಿಯು ಕಂಡುಬರುವುದಿಲ್ಲ. ಮಾನವ ಸಂಬಂಧಿತವಾದ ಅಭಿವೃದ್ಧಿಯಲ್ಲಿ ಭಾಗವಹಿಸುವಿಕೆಯ ಸೋಲು, ಬಂಡವಾಳ ಹೂಡುವಿಕೆಯ ಕಾರ್ಯಗಳು, ಗ್ರಾಮಸ್ಥರು ಅನುಭೋಗಿ ಸರಕುಗಳು, ಉನ್ನತ ಶಿಕ್ಷಣ, ವೈದ್ಯಕೀಯ ಸೇವೆ ಇಂತಹ ಮುಂತಾದ ಗ್ರಾಮೀಣ ಜನರು ನಗರಗಳ ಅವಲಂಬನೆಯಿಂದಾಗಿ,

ಜನರನ್ನು ಒಳಗೊಳ್ಳುವ ಅಭಿವೃದ್ಧಿ ಅಲ್ಲಿ ಮಾತ್ರ ಸಂಭವಿಸಬಲ್ಲದು, ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಜನರೊಂದಿಗೆ ನೇರ ಸಮಾಲೋಚಿಸಿ ಅವರ ಸಮಸ್ಯೆಗಳನ್ನು ಆಲಿಸಲು ಅವುಗಳು ಚಿಕ್ಕದಾಗಿರುವುದರಿಂದ ಸಾಧ್ಯ ಎಂಬಿತ್ಯಾದಿ ಅಂಶಗಳು ಬಳ್ಳಾರಿ ಜಿಲ್ಲೆಯ ನಗರ ಸ್ಥಳೀಯ ಸಂಸ್ಥೆಗಳಾದ ಹೊಸಪೇಟೆ ನಗರಸಭೆ ಮತ್ತು ಕೂಡ್ಲಿಗಿ ಪಟ್ಟಣ ಪಂಚಾಯಿತಿಯ ಹೊರವಲಯದ ಮತ್ತು ಆಂತರ್ಯದ ರಾಜಕೀಯದ ಮತ್ತು ರಾಜಕೀಯೇತರ ಅಂಶಗಳು ನಗರಗಳ ಬೆಳವಣಿಗೆಯ ಹಿನ್ನೆಲೆಯಲ್ಲಿ ತನ್ನದೇ ಆದ ಪಾತ್ರವನ್ನು ವಹಿಸಿವೆ. ಈ ಎಲ್ಲಾ ಕಾರಣಗಳಿಂದ ರಾಜ್ಯದೊಳಗೆ ತೀವ್ರಗತಿಯಲ್ಲಿ ಆರ್ಥಿಕ ಯೋಜನೆಗಳನ್ನು ಜಾರಿಗೆ ತರುವ ನಿಟ್ಟಿನಲ್ಲಿ ಪ್ರಯತ್ನ ನಡೆಸಲಾಗಿದೆ.[೪] ಇಂತಹ ಯೋಜನೆಗಳು ವಿಕೇಂದ್ರೀಕರಣ ವ್ಯವಸ್ಥೆಯಿಂದಾಗಲಿ, ನಗರ ಅಭಿವೃದ್ಧಿ ಯೋಜನೆಗಳಿಂದಾಗಲಿ ಇಲ್ಲಿ ಹೆಚ್ಚಿನ ಬದಲಾವಣೆಯನ್ನು ತರದೇ ಇರುವ ಪರಿಣಾಮವಾಗಿ ಪ್ರಸ್ತುತ ಅಧ್ಯಯನಕ್ಕೆ ಬಳ್ಳಾರಿ ಜಿಲ್ಲೆಯ ಎರಡು ತಾಲೂಕುಗಳನ್ನು ಆಯ್ಕೆ ಮಾಡಿಕೊಳ್ಳಲಾಗಿದೆ. ಮುಂದುವರಿದು, ಈ ಜಿಲ್ಲೆಯಲ್ಲಿ ಸುಮಾರು ೬೦ಕ್ಕೂ ಹೆಚ್ಚು ಕಬ್ಬಿಣ ಮತ್ತು ಮ್ಯಾಂಗನೀಸ್ ಉತ್ಪಾದನಾ ಗಣಿ ಸಂಸ್ಥೆಗಳು ಗಣಿಗಾರಿಕೆ ನಡೆಸುತ್ತಿದ್ದದ್ದು, ರಾಜ್ಯದ ಬಹುತೇಕ ಗ್ರಾಮೀಣ ಜನರಲ್ಲಿ ಬಡತನ, ಅನಕ್ಷರತೆ ಕಾರಣಕ್ಕೆ ಗ್ರಾಮೀಣ ಜನರು ನಗರಗಳತ್ತ ವಲಸೆ ಹೋಗುತ್ತಾರೆ ಎಂಬುದು ಸಾಂಪ್ರದಾಯಿಕ ನಂಬಿಕೆ. ಆದರೆ ೨೦೧೧ರ ಜನಗಣತಿ ಅಂಕಿ ಅಂಶಗಳು ಇದಕ್ಕೆ ವಿರುದ್ಧವಾದ ಅಂಶಗಳತ್ತ ಬೊಟ್ಟು ಮಾಡುತ್ತಿವೆ. ಗಣಿಗಾರಿಕೆಯಿಂದಾಗಿ ಬಳ್ಳಾರಿ ಜಿಲ್ಲೆಯಾದ್ಯಂತ ನಗರ ಬೆಳವಣಿಗೆ ಪ್ರಕ್ರಿಯೆಯು ವ್ಯಾಪಕವಾಗಿ ಜರುಗಿದೆ. ಕಡಿಮೆ ಸಾಕ್ಷರತೆ ಇರುವ ಜಿಲ್ಲೆಗಳ ಜನರು ಪಟ್ಟಣ-ನಗರಗಳತ್ತ ವಲಸೆ ಹೋಗುವುದಕ್ಕಿಂತ ಹೆಚ್ಚಿನ ಪ್ರಮಾಣದ ಸಾಕ್ಷರತೆ ಇರುವ ಜಿಲ್ಲೆಗಳ ಗ್ರಾಮೀಣ ಜನರು ಮುಂದುವರಿದ ಹೊಸಪೇಟೆ ನಗರಳತ್ತಾ ವಲಸೆ ಹೋಗಿರುವುದು ಅಧ್ಯಯನಗಳಿಂದ ತಿಳಿದು ಬಂದಿದೆ. ಇವು ತೆರೆದ ಗಣಿಗಾರಿಕೆ ಆಗಿರುವುದರಿಂದ ಅತಿಯಾದ ಧೂಳು ಹೊರಹೊಮ್ಮುತ್ತಿವೆ. ಇದರಿಂದಾಗುವ ಪರಿಸರ ಮಾಲಿನ್ಯ ಕಾರಣಗಳಿಂದ ನಗರ ಪ್ರದೇಶದಲ್ಲಿ ಅನೇಕ ವ್ಯತ್ಯಯಗಳು ಕಂಡುಬಂದಿವೆ. ಪ್ರಮುಖವಾಗಿ ಜಿಲ್ಲೆಯ ಪ್ರಧಾನ ಉದ್ಯೋಗವಾದ ಕೃಷಿಯ ಮೇಲೆ ವಿಭಿನ್ನ ಪರಿಣಾಮಗಳನ್ನು ಬೀರಿದೆ. ಅಂದರೆ ಬೆಳೆಯ ಇಳುವರಿ ಕಡಿಮೆಯಾಗಿರುವುದು, ಬೆಳೆದ ಧಾನ್ಯ ಮತ್ತು ತರಕಾರಿಗಳ ಮೇಲೆ ಕೆಂಪು ಮಣ್ಣಿನ ಧೂಳು ಶೇಖರಣೆ, ಇದರಿಂದ ಆಹಾರಧಾನ್ಯ ಉಪಯೋಗಕ್ಕೆ ತೊಡಕುಂಟಾಗಿರುವುದು. ಅದೇ ರೀತಿ ಆರೋಗ್ಯದ ಅಭಿವೃದ್ಧಿಯಾಗಿಯೂ ಇದು ಪರಿವರ್ತನೆಯಾಗದಿರುವುದು ಕಂಡುಬರುತ್ತದೆ. ಈ ವರಮಾನದ ಅಭಿವೃದ್ಧಿಯನ್ನು ಸುಲಭವಾಗಿ ಮೂರು ರೀತಿಯಾಗಿ ಅರ್ಥೈಸಬಹುದು. ಒಂದು ಸಂಪತ್ತು ವೃದ್ಧಿಯಾಗುತ್ತಿದೆ. ಎರಡು ಆರೋಗ್ಯ ಕ್ಷೀಣಿಸುತ್ತದೆ. ಮೂರು ಪರಿಸರ ನಾಶವಾಗುತ್ತಿದೆ. ಆದ್ದರಿಂದ ಇದೊಂದು ವಿಶಿಷ್ಟ ಸಂಗತಿಯಾಗಿ ರೂಪುಗೊಂಡಿರುವುದರಿಂದ ಈ ಜಿಲ್ಲೆಯನ್ನು ಆಯ್ಕೆ ಮಾಡಿಕೊಳ್ಳಲಾಗಿದೆ. ಜೊತೆಗೆ ಪ್ರಾದೇಶಿಕ ಅಸಮಾನತೆ ನಿವಾರಣಾ ಉನ್ನತಾಧಿಕಾರ ಸಮಿತಿ ವರದಿಯಲ್ಲಿ ಗುಲ್ಬರ್ಗಾ ವಿಭಾಗವನ್ನು ಅತ್ಯಂತ ಹಿಂದುಳಿದ ಪ್ರದೇಶವೆಂದು ಗುರುತಿಸಲಾಗಿದೆ. ಆ ಪ್ರಕಾರ ರಾಜ್ಯದ ಅತ್ಯಂತ ಹಿಂದುಳಿದ, ೩೯ ತಾಲೂಕುಗಳ ಪೈಕಿ ಗುಲ್ಬರ್ಗಾ ವಿಭಾಗ ೨೧ ತಾಲೂಕುಗಳನ್ನು ಹೊಂದಿ ಹಿಂದುಳಿದಿರುವಿಕೆಯಲ್ಲಿ ಮೊದಲ ಸ್ಥಾನದಲ್ಲಿರುವುದಾಗಿ ತಿಳಿಸಿದೆ. ಈ ೨೧ ತಾಲೂಕುಗಳಲ್ಲಿ ಎರಡು ತಾಲೂಕುಗಳು ಬಳ್ಳಾರಿ ಜಿಲ್ಲೆಯಲ್ಲಿ ಕಂಡುಬಂದಿವೆ. ಒಂದು ಸಂಡೂರು ಮತ್ತೊಂದು ಕೂಡ್ಲಿಗಿ. ಅದೇ ರೀತಿ ಹೊಸಪೇಟೆ ಮತ್ತು ಬಳ್ಳಾರಿ ತಾಲೂಕುಗಳು

ಸಾಪೇಕ್ಷವಾಗಿ ಅಭಿವೃದ್ಧಿ ಹೊಂದಿದವುಗಳಾಗಿಯೂ, ಉಳಿದ ೩ ತಾಲೂಕುಗಳು ಅತಿ ಹಿಂದುಳಿದವುಗಳ ಪಟ್ಟಿಯಲ್ಲಿ ಸೇರಿವೆ. ಈ ಹಿನ್ನೆಲೆಯಲ್ಲಿ ಗಣಿಗಾರಿಕೆಯಿಲ್ಲದ ಮತ್ತು ಅತ್ಯಂತ ಹಿಂದುಳಿದ ತಾಲೂಕುಗಳಲ್ಲಿ ಒಂದಾದ ಕೂಡ್ಲಿಗಿಯನ್ನು ಸಾಪೇಕ್ಷವಾಗಿ ಅಭಿವೃದ್ಧಿ ಹೊಂದಿದ ಹೊಸಪೇಟೆ ನಗರಸಭೆಯನ್ನು ಅಧ್ಯಯನಕ್ಕೆ ಆಯ್ಕೆ ಮಾಡಿಕೊಳ್ಳಲಾಗಿದೆ. ಇದರಲ್ಲಿ ಸಾಪೇಕ್ಷವಾಗಿ ಮುಂದುವರೆದ ತಾಲೂಕಿನಲ್ಲಿ ಕಂಡುಬರುವ ನಗರಸಭೆ ಅಭಿವೃದ್ಧಿಗೂ ಅತ್ಯಂತ ಹಿಂದುಳಿದ ತಾಲೂಕಿನಲ್ಲಿ ಕಂಡುಬರುವ ಪಟ್ಟಣ ಪಂಚಾಯಿತಿಯ ಅಭಿವೃದ್ಧಿಗೂ ಯಾವ ರೀತಿ ವ್ಯತ್ಯಾಸವಿದೆ ಎನ್ನುವುದನ್ನು ತಿಳಿಯುವುದಕ್ಕಾಗಿ ಇವನ್ನು ಆಯ್ಕೆ ಮಾಡಿಕೊಳ್ಳಲಾಗಿದೆ. ಅದಲ್ಲದೇ, ೨೦೦೫ರ ಮಾನವ ಅಭಿವೃದ್ಧಿ ವರದಿಯ ಪ್ರಕಾರ ಅಭಿವೃದ್ಧಿಯ ಸಾಲಿನಲ್ಲಿ ಜಿಲ್ಲೆ ೧೭ನೇ ಸ್ಥಾನದಲ್ಲಿದ್ದು, ಶೇ. ೩೪.೮೭ರಷ್ಟು ಜನರು ನಗರ ಪ್ರದೇಶದಲ್ಲಿ ನೆಲೆಸಿದ್ದಾರೆ. ೨೦೧೧ರ ಜನಗಣತಿ ಪ್ರಕಾರ ಬಳ್ಳಾರಿ ನಗರ ಶೇ. ೪೯.೬೯ರಷ್ಟು ಅದರಲ್ಲಿ ಹೊಸಪೇಟೆ ನಗರವು ಶೇ. ೨೧.೪೭ರಷ್ಟು ಮತ್ತು ಕೂಡ್ಲಿಗಿ ಪಟ್ಟಣದಲ್ಲಿ ಶೇ. ೧೫ರಷ್ಟು ಶಿಕ್ಷಿತರಿದ್ದು ಬದಲಾಗಿ ಕನಿಷ್ಠ ಮೂಲಭೂತ ಸೌಲಭ್ಯಗಳಾದ ಕುಡಿಯುವ ನೀರು, ನೈರ್ಮಲ್ಯ ಮತ್ತು ವಸತಿ ಶೇ. ೫೧ರಷ್ಟು ಹೊಂದಿರುವುದು ವರದಿಗಳಿಂದ ತಿಳಿದುಬಂದಿದೆ. ಮುಂದುವರಿದು, ಮಾನವ ಅಭಿವೃದ್ಧಿಗಾಗಿ ಅತ್ಯಂತ ಪ್ರಮುಖ ವಲಯಗಳಾದ ಶಿಕ್ಷಣ, ಪೌಷ್ಠಿಕತೆ, ಆರೋಗ್ಯ, ನೈರ್ಮಲೀಕರಣ, ಕುಡಿಯುವ ನೀರು ಮತ್ತು ಉದ್ಯೋಗ ಈ ಕ್ಷೇತ್ರಗಳಲ್ಲಿ ರಾಜ್ಯ ಸರ್ಕಾರವು ಜಿಲ್ಲೆಯಲ್ಲಿ ನಗರ ಸ್ಥಳೀಯ ಸಂಸ್ಥೆಗಳ ಮೂಲಕ ಅತ್ಯಂತ ದುರ್ಬಲ ವರ್ಗಗಳು ಅಂದರೆ ಬಡತನ ರೇಖೆಗಿಂತ ಕೆಳಗಿರುವ ಜನರು, ಮಹಿಳೆಯರು, ಹಾಗೂ ಪರಿಶಿಷ್ಟರ ಜೀವನದ ಮೇಲೆ ಸರ್ಕಾರದ ಕಾರ್ಯಕ್ರಮದಿಂದ ಆಗುವ ಕೆಲಸ ಕಾರ್ಯಗಳನ್ನು ತಿಳಿಯುವ ಹಿನ್ನೆಲೆಯಲ್ಲಿ ನಗರ ಸ್ಥಳೀಯ ಸಂಸ್ಥೆಗಳ ಅಭಿವೃದ್ಧಿಯು ಮತ್ತಷ್ಟು ಪ್ರಾಮುಖ್ಯತೆಯನ್ನು ಗಳಿಸಿದೆ.[೫] ಇಂತಹ ಸಂಗತಿಗಳ ಹಿನ್ನೆಲೆಯಲ್ಲಿ ನಗರ ಪ್ರದೇಶವನ್ನು ಅಧ್ಯಯನ ಮಾಡಲು ೨೦೦ ಕುಟುಂಬಗಳು ಮತ್ತು ೫೫ ಚುನಾಯಿತ ಸದಸ್ಯರನ್ನು ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡು ಅಧ್ಯಯನವನ್ನ ಪ್ರಾಥಮಿಕ ಹಾಗೂ ದ್ವಿತೀಯ ಹಂತದ ಮಾಹಿತಿ ಮೂಲಕ ಮಾಹಿತಿಯನ್ನು ಸಂಗ್ರಹಿಸಿ ಅಂಕಿ ಅಂಶಗಳನ್ನು ಎಕ್ಸಾಲ್‌ನಲ್ಲಿ ದಾಖಲಿಸುವುದರ ಮೂಲಕ ಅದನ್ನು ವಿಶ್ಲೇಷಣೆ ಮಾಡಲಾಗಿದೆ.

ಈ ಮೇಲಿನ ಸಂಗತಿಗಳ ಆಧಾರದ ಮೇಲೆ ೧೯೯೧ರ ಜಾಗತೀಕರಣದಿಂದ ಗ್ರಾಮೀಣ ಮಟ್ಟದಲ್ಲಿ ಕೆಳವರ್ಗ ಮತ್ತು ಅಂಚಿನಲ್ಲಿರುವವರನ್ನು ಕಡೆಗಣಿಸಿ ಮೇಲ್ವರ್ಗದ ಹಿತಾಸಕ್ತಿಯನ್ನು ಪರಿಗಣಿಸಿರುವುದನ್ನು ಕಾಣಲಾಗುತ್ತದೆ. ಇಂತಹ ವಿದ್ಯಮಾನಗಳ ಹಿನ್ನೆಲೆಯಲ್ಲಿ ಗ್ರಾಮೀಣ ಜನರು ಅನೇಕ ಕನಸುಗಳನ್ನು ಇಟ್ಟುಕೊಂಡು ನಗರ ಪ್ರದೇಶಗಳಿಗೆ ವಲಸೆ ಹೋಗುವ ಪ್ರಕ್ರಿಯೆಯಿಂದ ತೀವ್ರಗತಿಯಲ್ಲಿ ನಗರ ಬೆಳವಣಿಗೆಯನ್ನು ಹೊಂದಿರುವುದನ್ನು ಕಾಣುತ್ತೇವೆ. ಇಂತಹ ನಗರ ಪ್ರದೇಶಕ್ಕೆ ಬರುವ ಜನರಿಗೆ ಹೆಚ್ಚಿನ ರೀತಿಯಲ್ಲಿ ಮೂಲಭೂತ ಸೌಲಭ್ಯಗಳನ್ನು ಒದಗಿಸುವುದು ನಗರ ಸ್ಥಳೀಯ ಸಂಸ್ಥೆಗಳ ಆದ್ಯ ಕರ್ತವ್ಯ. ಆದರೆ ನಗರ ಆಡಳಿತ ಕ್ರಮವು ವ್ಯವಸ್ಥಿತವಾಗಿರದೆ ಇರುವುದರಿಂದ ನಗರ ಜನರಿಗೆ ಉತ್ತಮ ಸೇವೆಯನ್ನು ಒದಗಿಸುವುದು ಅಸಾಧ್ಯವಾಗಿತ್ತು. ಈ ನೆಲೆಯಲ್ಲಿ ಸ್ಥಳೀಯ ಜನರ ಸ್ಥಿತಿಯನ್ನು ಸೂಕ್ಷ್ಮವಾಗಿ ಗಮನಿಸಿದಾಗ ಸ್ಥಳೀಯ ಆಡಳಿತವು ರಾಜ್ಯ ಸರ್ಕಾರದ ನಿಯಂತ್ರಣದಲ್ಲಿದ್ದು ಸಮರ್ಥವಾದ ಆಡಳಿತವನ್ನು ನೀಡಲಾಗದೆ ಇದ್ದಿದ್ದರಿಂದ ಜನರ ಉತ್ತಮ ಜೀವನಮಟ್ಟವನ್ನು ಕಾಣುವುದು ಅಸಾಧ್ಯವಾದ ಮಾತಾಗಿತ್ತು. ಹಾಗಾಗಿ ಈ ರೀತಿಯ

ವಿಚಾರಗಳಿಂದ ಬೇಸತ್ತ ಕೇಂದ್ರ ಸರ್ಕಾರವು ಸಮಿತಿಗಳನ್ನು ರಚಿಸಿ ಆ ಸಮಿತಿಗಳು ನೀಡಿದ ಸಲಹೆಯ ಮೇರಿಗೆ ಸ್ಥಳೀಯ ಜನರ ಹಿತಾಸಕ್ತಿಯನ್ನು ಮನಗಂಡು ೧೯೯೨ರಲ್ಲಿ ಗ್ರಾಮ ಪಂಚಾಯಿತಿಗಳಿಗೆ ನೂತನ ತಿದ್ದುಪಡಿಯನ್ನು ತಂದು ಗ್ರಾಮೀಣ ಜನರ ಸಬಲೀರಣಕ್ಕೆ ಪ್ರೋತ್ಸಾಹವನ್ನು ನೀಡಿದರು. ಅದೇ ರೀತಿಯಾಗಿ ನಗರ ಪ್ರದೇಶಗಳ ಜನರ ಸ್ಥಿತಿಯು ಗ್ರಾಮೀಣ ಜನರ ಜೀವನಕ್ಕಿಂತ ಹೊರತಾಗಿರಲಿಲ್ಲ ಹಾಗಾಗಿ ಕೇಂದ್ರ ಸರ್ಕಾರವು ಒಂದು ಹೆಜ್ಜೆ ಮುಂದೆ ಹೋಗಿ ನಗರ ಪ್ರದೇಶಗಳ ಜನರ ಹಿತಾಸಕ್ತಿಯನ್ನು ಸಹ ಮನಗಂಡು ೧೯೯೩ರಲ್ಲಿ ಸಂವಿಧಾನಕ್ಕೆ ೭೪ನೆಯಾ ತಿದ್ದುಪಡಿಯನ್ನು ಜಾರಿಗೊಳಿಸಲಾಯಿತು. ಇದರ ಫಲವಾಗಿ ಮಹಾನಗರ ಪಾಲಿಕೆ, ನಗರ ಸಭೆ, ಪುರಸಭೆ ಮತ್ತು ಪಟ್ಟಣ ಪಂಚಾಯಿತಿಗಳನ್ನು ನಗರ ಸ್ಥಳೀಯ ಸಂಸ್ಥೆಗಳೆಂದು ಗುರುತಿಸಲಾಯಿತು. ಈ ನಿಟ್ಟಿನಲ್ಲಿ ರಾಜ್ಯ ಸರ್ಕಾರವು ಹಣಕಾಸು ಆಯೋಗ, ಚುನಾವಣಾ ಆಯೋಗ, ಕೇಂದ್ರ ಸರ್ಕಾರದಿಂದ ಅನುದಾನ ಹಂಚಿಕೆ ಇನ್ನಿತರ ಆಡಳಿತದ ರಚನೆಯ ಮೂಲಕ ಕಾರ್ಯ ನಿರ್ವಹಣೆಯನ್ನು ಮಾಡುತ್ತಾ ಬಂದಿತು. ಇಷ್ಟೆಲ್ಲಾ ಆಡಳಿತದ ಹಿನ್ನೆಲೆಯನ್ನು ಹೊಂದಿದ ನಗರ ಆಡಳಿತವು ಗ್ರಾಮೀಣ ಪ್ರದೇಶಗಳಿಗೆ ಹೋಲಿಕೆ ಮಾಡಿದರೆ ನಗರಗಳು ತುಂಬಾ ಅಭಿವೃದ್ಧಿಯಲ್ಲಿ ಕುಸಿದಿರುವುದನ್ನು ವಿವಿಧ ಅಧ್ಯಯನಗಳಿಂದ ತಿಳಿದುಬಂದಿದೆ. ಆದರೂ ನಗರಗಳಿಗೆ ವಲಸೆ ಹೋಗುವುದು ವರ್ಷದಿಂದ ವರ್ಷಕ್ಕೆ ಹೆಚ್ಚಾಗುತ್ತಲೆ ಇದೆಯೇ ಹೊರತು ಕಡಿಮೆ ಎನ್ನುವುದು ಇಲ್ಲ. ಇಂತಹ ಬೆಳವಣಿಗೆಯಿಂದ ರಾಜ್ಯ ಸರ್ಕಾರವು ಹೆಚ್ಚಿನ ರೀತಿಯಲ್ಲಿ ರಾಜಕೀಯ ಇಚ್ಛಾಶಕ್ತಿ ಮತ್ತು ಪೂರಕ ಅಭಿವೃದ್ಧಿಯ ವಾತಾವರಣವನ್ನು ನಿರ್ಮಿಸಿದರೆ ನಗರಗಳ ಸಬಲೀಕರಣ ಸಾಧ್ಯ ಎಂದು ಗ್ರಹಿಸಲಾಗಿದೆ. ಈ ಎಲ್ಲಾ ವಿದ್ಯಮಾನವನ್ನು ಸೂಕ್ಷ್ಮವಾಗಿ ಗಮನಿಸಿದಾಗ ದೊಡ್ಡ ನಗರಗಳ ಬಗ್ಗೆ ಇರುವ ಆಸಕ್ತಿ ಸಣ್ಣ ಪುಟ್ಟ ನಗರ ಪ್ರದೇಶಗಳ ಬಗ್ಗೆ ತೋರಿಸದೆ ಇರುವುದರಿಂದ ರಾಜಕೀಯವಾಗಿ, ಸಾಮಾಜಿಕವಾಗಿ, ಆರ್ಥಿಕ ವಿಚಾರಗಳಲ್ಲಿ ಅಭಿವೃದ್ಧಿಯ ಪ್ರಯತ್ನಗಳು ಆಗದೆ ಹಿಂದುಳಿದಿರುವುದನ್ನು ಗುರುತಿಸಲಾಗಿದೆ. ಹಾಗಾಗಿ ನಗರ ಸ್ಥಳೀಯ ಸಂಸ್ಥೆಗಳ ಮೂಲಕ ನಗರ ಅಭಿವೃದ್ಧಿಯನ್ನು ನೋಡುವ ದೃಷ್ಟಿಕೋನವನ್ನು ಇಟ್ಟುಕೊಂಡು ಮುಂದುವರಿದ ಹೊಸಪೇಟೆ ನಗರ ಸಭೆ ಮತ್ತು ಹಿಂದುಳಿದ ಕೂಡ್ಲಿಗಿ ಪಟ್ಟಣ ಪಂಚಾಯಿತಿಗಳನ್ನು ನಗರ ಸ್ಥಳೀಯ ಸಂಸ್ಥೆಗಳೆಂದು ಪರಿಗಣಿಸಿ ಅಧ್ಯಯನಕ್ಕೆ ಆಯ್ಕೆ ಮಾಡಿಕೊಳ್ಳಲಾಗಿದೆ.[೬] ಒಟ್ಟಾರೆಯಾಗಿ ದೇಶದ ಅಭಿವೃದ್ಧಿ ಒಟ್ಟು ಜನರ ಅಭಿವೃದ್ಧಿಯ ಮೇಲೆ ನಿಂತಿದ್ದು, ಪಟ್ಟಣದ ಜನರ ಅಭಿವೃದ್ಧಿಗೆ ಈ ಸಂವಿಧಾನದ ತಿದ್ದುಪಡೆಗಳು ಆಶಾದಾಯಕವಾಗಿದೆ. ಈ ಸಂವಿಧಾನದ ಆಶಯಗಳು ಪ್ರಸ್ತುತ ನಗರಗಳಲ್ಲಿ ಎಷ್ಟರಮಟ್ಟಿಗೆ ಈಡೇರಿವೆ ಎಂಬುದನ್ನು ಅಧ್ಯಯನ ಮಾಡುವುದು ಮಹಾ ಪ್ರಬಂಧದ ಉದ್ದೇಶವಾಗಿದೆ.

### ೧. ಸಮಸ್ಯೀಕರಣ

ಜೆ.ಎಮ್. ಟನ್ನರ್ ಮತ್ತು ಪೈಲೀಸ್ ಬಿ. ಎಲೇವೆತ್ (೧೯೭೬) ಅವರು ಅರ್ಬನೈಜೇಶನ್ ಆಂಡ್ ಗ್ರೋಥ್ ಎಂಬ ಗ್ರಂಥದಲ್ಲಿ ಸಾಂಪ್ರದಾಯಿಕ ಅಭಿವೃದ್ಧಿ ಸಿದ್ಧಾಂತವು ಅಭಿವೃದ್ಧಿಯನ್ನು ಆರ್ಥಿಕ ಬೆಳವಣಿಗೆಯ ನೆಲೆಯಲ್ಲಿ ನೋಡುತ್ತದೆ. ಒಂದು ದೇಶದ ಅಥವಾ ಪ್ರದೇಶದ ಅಭಿವೃದ್ಧಿಯು ಆ ದೇಶದ ಆದಾಯದ ಬೆಳವಣಿಗೆ ಅಥವಾ ವರಮಾನದ ಹೆಚ್ಚಳದಿಂದ ನೋಡಲಾಗುತ್ತದೆ. ಅಲ್ಲದೇ, ಆಯಾ ದೇಶದ ಜನರ ತಲಾ ವರಮಾನ ಹೆಚ್ಚಳವೇ ಅಭಿವೃದ್ಧಿಯಾಗಿದೆ. ಅಂದರೆ ಒಂದು ದೇಶದ ಆದಾಯದಲ್ಲಿ ಹೆಚ್ಚಳವಾದರೆ, ಅದು ತನಗೆ ತಾನೇ ಸಹಜವಾಗಿ ಮೇಲಿನಿಂದ

ಕೆಳಕ್ಕೆ ಹರಿದು ಬರುತ್ತದೆ. ಇಲ್ಲಿ ಆದಾಯವೇ ಅಭಿವೃದ್ಧಿಯ ಮುಖ್ಯ ಸೂಚ್ಯಂಕವಾಗಿರುತ್ತದೆ. ಇಲ್ಲಿ ಜನರು ಅಭಿವೃದ್ದಿಯ ಒಂದು ಸಾಧನ ಮಾತ್ರ. ಯಾವ ಸಾಮಾಜಿಕ ನ್ಯಾಯ ಕಂಡು ಬರುವುದಿಲ್ಲ.[೭] ಎಂಬ ಅಭಿಪ್ರಾವನ್ನು ವ್ಯಕ್ತಪಡಿಸಿರುತ್ತಾರೆ.

ಡೇವಿಡ್ ಸೈಮನ್ (೧೯೮೭)ರವರು ಡೆವಲ್ಪಮೆಂಟ್ ರೀಕನ್ಸಿಡರ್ಡ್ ನ್ಯೂ ಡೈರೆಕ್ಷನ್ ಇನ್ ಡೆವಲ್ಪ್‌ಮೆಂಟ್ ಥಿಂಕಿಂಗ್ ಎಂಬ ಗ್ರಂಥದಲ್ಲಿ ನವ ಉದಾರವಾದಿ ಅಭಿವೃದ್ಧಿ ಸಿದ್ಧಾಂತವು ಮಾರುಕಟ್ಟಗೆ ಪ್ರಾಶಸ್ತ್ಯ ನೀಡುತ್ತದೆ. ಆದಾಯದ ಹಂಚಿಕೆಯು ಮಾರುಕಟ್ಟೆಯಿಂದ ನಿರ್ಧಾರಿಸಲಾಗುತ್ತದೆ. ಈ ಸಿದ್ಧಾಂತದ ಪ್ರಮುಖವಾದ ಅಂಶಗಳೆಂದರೆ, ಬಂಡವಾಳ, ಆದಾಯ, ಉಳಿತಾಯ ಮತ್ತು ಉತ್ಪಾದನೆ ಮುಂತಾದವುಗಳಾಗಿವೆ. ಇವು ಮಾರುಕಟ್ಟೆ ಆಧಾರಿತವಾಗಿ ನಡೆಯುತ್ತಿರುತ್ತವೆ. ಇಲ್ಲಿ ಮಾರುಕಟ್ಟೆ ಆಧಾರಿತ ಆರ್ಥಿಕ ಅಂಶಗಳಿಗೆ ಎಲ್ಲವನ್ನು ನಿಯಂತ್ರಿಸುವ ಶಕ್ತಿಯಿದೆ. ಬಂಡವಾಳವನ್ನು ಊಡಿ ಅದರಿಂದ ಬರುವ ಲಾಭವು ಮುಖ್ಯವೆನಿಸುತ್ತದೆ. ಬಂಡವಾಳಶಾಹಿಗಳಿಗೆ ಹೆಚ್ಚಿನ ಆದ್ಯತೆಯನ್ನು ನೀಡುವುದನ್ನು ನೋಡಬಹುದಾಗಿದೆ[೮] ಎಂದು ಹೇಳಿದ್ದಾರೆ.

ರೋಸ್ಟೋ ಡಬ್ಲ್ಯು. ಡಬ್ಲ್ಯು.(೧೯೬೧)ರವರು ದ ಸ್ಟೇಜಸ್ ಆಫ್ ಎಕನಾಮಿಕ್ ಗ್ರೋಥ್ ಎಂ ಗ್ರಂಥದಲ್ಲಿ ಮಾನವ ಮುಖಿ ಅಭಿವೃದ್ಧಿ ಸಿದ್ಧಾಂತವು ಜನ ಕೇಂದ್ರೀತ ಸಿದ್ಧಾಂತವೆಂದೇ ಹೆಸರು ಪಡೆದಿರುವುದನ್ನು ನೋಡಲಾಗುತ್ತದೆ. ಆದಾಯವು ಇಲ್ಲಿ ಅಭಿವೃದ್ಧಿಯ ಒಂದು ಸಾಧನ ಮಾತ್ರ. ಜನರನ್ನು ಅಭಿವೃದ್ಧಿಯ ಕೇಂದ್ರ ಬಿಂದು ಎಂದು ಹೇಳಲಾಗುತ್ತದೆ. ಶಿಕ್ಷಣ, ಆರೋಗ್ಯ, ಜನರ ಉತ್ತಮ ಜೀವನಮಟ್ಟ ಮತ್ತು ವರಮಾನ ಮಾನವ ಅಭಿವೃದ್ಧಿಯ ಪ್ರಮುಖ ಅಂಶಗಳಾಗುತ್ತವೆ. ಇಲ್ಲಿ ಪ್ರಾದೇಶಿಕ ಅಸಮಾನತೆ, ಸಾಮಾಜಿಕ ನ್ಯಾಯ ಇನ್ನಿತರೆ ಅಂಶಗಳನ್ನು ರಾಜಕೀಯ, ಸಾಮಾಜಿಕ ಮತ್ತು ಆರ್ಥಿಕ ನೆಲೆಗಳಲ್ಲಿ ನೋಡುವುದನ್ನು ಕಾಣಲಾಗುತ್ತದೆ. ಅಂದರೆ ಅಭಿವೃದ್ಧಿಯನ್ನು ಇಡೀಯಾಗಿ ಚರ್ಚಿಸದೆ ಆಯಾ ನೆಲೆಯಲ್ಲಿ ಚರ್ಚಿಸಿ ಅಭಿವೃದ್ಧಿಯ ಸಾಧ್ಯಸಾಧ್ಯತೆಗಳನ್ನು ಕಂಡುಕೊಳ್ಳಲು ಮಾನವ ಅಭಿವೃದ್ಧಿ ಸಿದ್ಧಾಂತವು ಸಹಕರಿಸುತ್ತದೆ[೯] ಎಂಬ ಅಭಿಪ್ರಾಯಗಳನ್ನು ಹೇಳಿರುತ್ತಾರೆ.

ಪಿ. ಸಿ. ಸರ್ಕಾರ್(೧೯೯೯)ರವರು ರೀಜನಲ್ ಡಿಸ್‌ಪಾರಿಟೀಸ್ ಇನ್ ಇಂಡಿಯಾ ಇಶ್ಯೂಸ್ ಆಂಡ್ ಮೇಜರ್‌ಮೆಂಟ್ ಎಂಬ ಗ್ರಂಥದಲ್ಲಿ ಆಡಂಸ್ಮಿತ್‌ರವರ ಅಭಿವೃದ್ಧಿ ಸಿದ್ಧಾಂತದಲ್ಲಿ ಶ್ರಮವಿಭಜನೆ, ತಾಂತ್ರಿಕ ಪ್ರಗತಿ, ವಿನಿಮಯ ಮಾರುಕಟ್ಟೆ ವಿಸ್ತರಣೆ, ಬಂಡವಾಳ ಸಂಚಯನ ಇವು ಸ್ಮಿತ್‌ನ ಅಭಿವೃದ್ಧಿ ಸಿದ್ಧಾಂತದಲ್ಲಿ ಅಡಕವಾಗಿರುವ ಅಂಶಗಳು, ಇವರ ಪ್ರಕಾರ ಅಭಿವೃದ್ಧಿಗೆ ಮತ್ತು ಅನಭಿವೃದ್ಧಿಗೆ ಪ್ರಮುಖ ಕಾರಣ ತಾಂತ್ರಿಕ ಬೆಳವಣಿಗೆ ಮತ್ತು ಜನಸಂಖ್ಯೆಯ ಬೆಳವಣಿಗೆ ಎಂದು ವಿವರಿಸಿದರು. ಇವರ ಪ್ರಕಾರ ಬಂಡವಾಳದ ಸಂಗ್ರಹಣೆಯ ಗಾತ್ರವು ಹೆಚ್ಚುಗುತ್ತಾ ಹೋದಂತೆ ಕೈಗಾರಿಕೆಯು ಅಭಿವೃದ್ಧಿಯಾಗುತ್ತಾ ಹೋಗುತ್ತದೆ. ಅಲ್ಲದೇ ಮಾರುಕಟ್ಟೆಯು ವಿಶಾಲವಾಗಿದ್ದರೆ ಶ್ರಮವಿಭಜನೆ ಹೆಚ್ಚಿ ವಿಸ್ತೃತವಾಗುತ್ತವೆ. ಅದಕ್ಕಾಗಿ ಅಭಿವೃದ್ಧಿಗೆ ನಿರ್ಬಂಧವಿಲ್ಲದ ಮಾರುಕಟ್ಟೆಯು ಅತೀ ಅವಶ್ಯಕವೆಂದು ತಿಳಿಸಿದರು. ಸ್ಮಿತ್‌ರ ಪ್ರಕಾರ ಮುಕ್ತವ್ಯಾಪಾರ, ಮುಕ್ತ ಉದ್ಯಮ ಮತ್ತು ಮುಕ್ತ ಪೈಪೋಟಿಗಳು, ಮಾರುಕಟ್ಟೆಯ ವಿಸ್ತರಣೆಗೆ ಮತ್ತು ಆರ್ಥಿಕ ಅಭಿವೃದ್ಧಿಗೆ ಕಾರಣವಾಗಿವೆ ಎಂದು ತಿಳಿಸಿದರು. ಇವರ ದೃಷ್ಟಿಯಲ್ಲಿ ಕೃಷಿವಲಯ ಅಭಿವೃದ್ಧಿ ಹೊಂದಿದಂತೆ ಔದ್ಯೋಗಿಕರಣ ಹೊಂದುತ್ತದೆ. ತದನಂತರ ಅಭಿವೃದ್ಧಿಯು ವಾಣಿಜ್ಯ ಕ್ಷೇತ್ರಕ್ಕೆ ಮುಂದುವರಿಯುತ್ತದೆ ಎಂಬ ಅಂಶವನ್ನು ತಿಳಿಸಿದರು.

**ಡೇವಿಡ್** ರಿಕಾರ್ಡೋರವರ ತಮ್ಮ ವೆಲ್ತ್ ಆಫ್ ನೇಶನ್ಸ್ ಎಂಬ ಗ್ರಂಥದ ಮುಖಾಂತರ ಆರ್ಥಿಕ ಅಭಿವೃದ್ಧಿಗೆ ತಮ್ಮದೇ ಆದ ತಾತ್ವಿಕ ತಳಹದಿ ಹಾಕಿದರು. ಇವರು ಆರ್ಥಿಕ ಅಭಿವೃದ್ಧಿಯಲ್ಲಿ ಬಂಡವಾಳಕ್ಕೆ ವಿಶೇಷ ಮಹತ್ವ ನೀಡಿದ್ದಾರೆ. ಅಭಿವೃದ್ಧಿಯು ಉತ್ಪಾದನೆ ಮತ್ತು ಅನುಭೋಗಗಳ ನಡುವಣ ವ್ಯತ್ಯಾಸವನ್ನು ಅವಲಂಬಿಸಿದೆ. ಹೀಗಾಗಿ ಉತ್ಪಾದನೆ ಮತ್ತು ಉತ್ಪಾದಕ ಅನುಭೋಗಗಳನ್ನು ಹೆಚ್ಚಿಸುವುದು ಅವಶ್ಯಕವೆಂದು ತಿಳಿಸಿದ್ದಾರೆ. ಒಂದು ಅನಭಿವೃದ್ಧಿ ಹೊಂದಿದ ದೇಶವು, ರಾಜ್ಯವು, ಜಿಲ್ಲೆಯ ಹೆಚ್ಚಿನ ಪ್ರಮಾಣದಲ್ಲಿ ಬಂಡವಾಳ ತೊಡಗಿಸುವದರಿಂದ ಕೈಗಾರಿಕೆಗಳು ಬೆಳವಣಿಗೆ ಹೊಂದಿ ಅಧಿಕಲಾಭವಾಗುತ್ತದೆ. ಅಧಿಕ ಲಾಭವಾಗುವುದರಿಂದ ಬಂಡವಾಳದ ಶೇಖರಣೆಗೆ ಪೂರಕವಾಗುತ್ತದೆ. ಇದರಿಂದ ಅನಭಿವೃದ್ಧಿ ಹೊಂದಿದ ದೇಶಗಳು, ರಾಜ್ಯಗಳು, ಜಿಲ್ಲೆಗಳು ಅಭಿವೃದ್ಧಿ ಹೊಂದಲು ಸಾಧ್ಯವಾಗುತ್ತದೆ ಎಂಬುದು ಅವರ ಸಿದ್ಧಾಂತದ ತತ್ವವಾಗಿದೆ[೧೦] ಎಂದು ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ.

ಆರ್. ಕೆ. ಸಪೂರ್ (೧೯೯೬)ರವರ ಡೆವಲ್ಪಮೆಂಟ್ ಅಡ್ಮಿನಿಸ್ಟ್ರೇಶನ್ ಎಂಬ ಗ್ರಂಥದಲ್ಲಿ ಅಭಿವೃದ್ದಿ ಚಟುವಟಿಕೆಗಳಲ್ಲಿ ಜನರ ಪಾಲ್ಗೊಳ್ಳುವಿಕೆ ಮೌಲ್ಯಮಾಪನ ಮಾಡಬೇಕಾದರೆ ಪ್ರಮುಖವಾಗಿ ಅಭಿವೃದ್ದಿಯ ಕಾರ್ಯಚಟುವಟಿಕೆಯಲ್ಲಿ ಜನರ ಪಾಲ್ಗೊಳ್ಳುವಿಕೆ ಎಷ್ಟಿದೆ ಹಾಗೂ ಅವರ ಮೂಲಭೂತ ಸಮಸ್ಯೆಗಳನ್ನು ನಿವಾರಿಸುವಲ್ಲಿ ಅಭಿವೃದ್ದಿ ರಾಜಕೀಯದ ಪಾತ್ರ ಎಷ್ಟಿದೆ ಎಂಬುದನ್ನು ಕಂಡು ಹಿಡಿಯುವದೇ ಪ್ರಮುಖ ಅಂಶವಾಗಿದೆ. ಒಂದು ಪ್ರದೇಶದ ಅಭಿವೃದ್ದಿ ಕಾರ್ಯಚಟುವಟಿಕೆಗಳಲ್ಲಿ ನಾಗರೀಕರು ತಮ್ಮ ಸಮಸ್ಯೆಗಳ ಬಗ್ಗೆ ತಿಳಿದಿರದ ಕಲ್ಪನೆ ಹಾಗೂ ಆ ಸಮಸ್ಯೆಗಳನ್ನು ಪರಿಹರಿಸಿಕೊಳ್ಳಲು ಮಾಡುವ ಪ್ರಯತ್ನ ಎಷ್ಟಿದೆ ಎಂಬುದನ್ನು ವಿಶ್ಲೇಷಿಸುವುದು ಪ್ರಮುಖ ವಿಷಯವಾಗಿದೆ. ಇಲ್ಲಿ ನಾಗರೀಕರು ಪ್ರಾದೇಶಿಕ ಸಮಸ್ಯೆಗಳ ಬಗ್ಗೆ ಎಷ್ಟರ ಮಟ್ಟಿಗೆ ತಿಳಿದುಕೊಂಡಿರುತ್ತಾರೆ ಎಂಬುದನ್ನು ಕಂಡು ಹಿಡಿಯುವುದು ಮೂಲ ಅಂಶವಾಗಿದ್ದು ಇವರ ಭಾವನೆ ಮತ್ತು ವಿಚಾರಗಳು ಅಭಿವೃದ್ದಿ ಕಾರ್ಯಚಟುವಟಿಕೆಗಳ ಬಗ್ಗೆ ಹೊಂದಿರುವ ತಿಳುವಳಿಕೆಯನ್ನು ಪರಿಶೀಲಿಸುವುದಾಗಿದೆ. ಇಲ್ಲಿ ಜನರು ಅಭಿವೃದ್ದಿಯ ಕಾರ್ಯಚಟುವಟಿಕೆಗಳಲ್ಲಿ ೨ ಹಂತಗಳಲ್ಲಿ ಭಾಗವಹಿಸುವುದು ಕಂಡುಬರುತ್ತದೆ. ಮೊದಲೆಯದಾಗಿ ಔಪಚಾರಿಕ ಹಂತ ಎರಡನೆಯದಾಗಿ ಅನೌಪಚಾರಿಕ ಹಂತ. ಮೊದಲೆಯದಾಗಿ ಔಪಚಾರಿಕ ಹಂತದಲ್ಲಿ ನೀತಿ ಮತ್ತು ಕಾರ್ಯಗಳು ಕಾರ್ಯಾಚರಣೆಯಲ್ಲಿದ್ದು, ಜನರ ಪ್ರತಿನಿಧಿಗಳು, ಮಂಡಳಿಗಳು, ಆಯಾ ನಗರಗಳ ಮುಂಖಾಂತರ ಅಲ್ಲಿಯ ಜನರ ಸಮಸ್ಯೆಗಳಿಗೆ ಸ್ಪಂದಿಸುತ್ತಾ ಆಯಾ ಭೂ ಪ್ರದೇಶವನ್ನು ಅಭಿವೃದ್ದಿ ಪಡಿಸುವಲ್ಲಿ ಪ್ರಮುಖ ಪಾತ್ರವಹಿಸುತ್ತಾರೆ ಎಂಬುದಾಗಿದೆ. ಎರಡನೆಯ ಅನೌಪಚಾರಿಕ ಹಂತದಲ್ಲಿ ಜನರು ಪ್ರಮುಖವಾಗಿ ಸಂಘ ಸಂಸ್ಥೆಗಳು, ಮಹಿಳೆಯರ ಸಂಘ ಸಂಸ್ಥೆಗಳು, ಸಾಮಾಜಿಕ ಪರಿವರ್ತನೆ, ಆರ್ಥಿಕ ಸುಧಾರಣೆ, ಸಾಂಸ್ಕೃತಿಕ, ಧಾರ್ಮಿಕ, ವಲಯದಲ್ಲಿ ಭಾಗವಹಿಸಿ ಒಂದು ಪ್ರದೇಶದ ಅಭಿವೃದ್ದಿಗೆ ಶ್ರಮಿಸುವಲ್ಲಿ ಪಾತ್ರವಹಿಸುತ್ತಾರೆ.[೧೧] ಮೇಲಿನ ಅಂಶಗಳನ್ನು ಅವಲೋಕಿಸಿದಾಗ ಅಭಿವೃದ್ಧಿ ರಾಜಕೀಯದಲ್ಲಿ ಜನರ ಪಾಲ್ಗೋಳ್ಳುವಿಕೆ ಬಗ್ಗೆ ಅವರ ಅಭಿಪ್ರಾಯವನ್ನು ಒಪ್ಪಬಹುದಾಗಿದೆ. ಆದರೆ ಅಭಿವೃದ್ಧಿ ಹೊಂದಿದ ಮತ್ತು ಅಭಿವೃದ್ಧಿ ಹೊಂದದೆ ಇರುವ ದೇಶಗಳಿಗೆ ಅನ್ವಯಿಸಲಾಗದು ಯಾಕೆಂದರೆ ಅಭಿವೃದ್ಧಿ ಹೊಂದಿದ ದೇಶಗಳಲ್ಲಿ ಆರ್ಥಿಕ, ಶಿಕ್ಷಣ, ರಾಜಕೀಯ ಅರಿವು ಇರುತ್ತದೆ. ಆದರೆ ಅಭಿವೃದ್ಧಿ ಹೊಂದಿದದೇ ಇರುವ ದೇಶಗಳಲ್ಲಿ ಇದಕ್ಕೆ ವಿರುದ್ಧವಾದ ಪ್ರಕ್ರೀಯೆಗಳು ನಡೆಯುತ್ತವೆ. ಅದೇ ಪ್ರಕ್ರಿಯೆಗಳು ನಗರದಲ್ಲಿಯೂ

ಕಂಡು ಬರುತ್ತವೆ. ಈ ಹಿನ್ನೆಲೆಯಲ್ಲಿ ನಗರೀಕರಣದ ಸಮಸ್ಯೆಗಳನ್ನು ಬಿಡಿಯಾಗಿ ನೋಡುವುದಕ್ಕಿಂತ ಹಿಡಿಯಾಗಿ ನೋಡುವುದು ಉತ್ತಮ.

ಠಾಕೂರ್ ಆ್ಯಂಡ್ ಸಿನ್ಹ, (೨೦೦೩)ರವರು ಸ್ಟ್ರೀಕ್ಟ್ ಪ್ಲ್ಯಾನಿಂಗ್ ಆ್ಯಂಡ್ ಪಂಚಾಯತ್ ರಾಜ್ ಎಂಬ ಪುಸ್ತಕದಲ್ಲಿ ಪಂಚಾಯತ್ ರಾಜ್ ವ್ಯವಸ್ಥೆಯಲ್ಲಿ ಜಿಲ್ಲೆಯಿಂದ ಗ್ರಾಮೀಣ ಮಟ್ಟದವರೆಗೆ ಅಭಿವೃದ್ಧಿ ಯೋಜನೆಗಳು ಎಷ್ಟರ ಮಟ್ಟಿಗೆ ಫಲಕಾರಿಯಾಗಿವೆ ಎಂಬುದನ್ನು ತಿಳಿಸುತ್ತದೆ. ಅಲ್ಲದೇ ಜಿಲ್ಲೆಯ ಯೋಜನೆಗಳು ನಗರಗಳ ಮೂಲಭೂತ ಸೌಲಭ್ಯಗಳಾದ ಕುಡಿಯುವ ನೀರು, ಶಿಕ್ಷಣ, ಉದ್ಯೋಗ, ವೈದ್ಯಕೀಯ ಸೌಲಭ್ಯ, ಶೌಚಾಲಯ ವ್ಯವಸ್ಥೆ ಇಂತಹ ಮೂಲಭೂತ ಸೌಕರ್ಯಗಳನ್ನು ವಾರ್ಡಿನ ಜನರಿಗೆ ಒದಗಿಸಿ ಕೊಡುವಲ್ಲಿ ವಿಫಲವಾಗಿರುವುದನ್ನು ಎತ್ತಿ ತೋರಿಸುತ್ತವೆ. ಈ ಸಮಸ್ಯೆಗಳು ದಿನದಿಂದ ದಿನಕ್ಕೆ ಹೆಚ್ಚಾಗುತ್ತವೆಯೇ ಹೊರತು ಕಡಿಮೆಯಾಗುವುದಿಲ್ಲ ಎಂದು ಅನೇಕ ಅಧ್ಯಯನಗಳು ಸಾಧರಪಡಿಸಿವೆ.[೨]

ಡಾ. ಎಂ. ಚಂದ್ರ ಪೂಜಾರಿ (೨೦೧೦) ಅವರು ತಮ್ಮ ರಾಜಕೀಯ ಬಡತನ ಎಂಬ ಗ್ರಂಥದಲ್ಲಿ ಸಮಾಜದ ಬಹುತೇಕರು ಸುಖ, ನೆಮ್ಮದಿಯ ಬದುಕನ್ನು ನಡೆಸಲು ಪೂರಕವಾಗುವ ಸಾಮಾಜಿಕ, ಆರ್ಥಿಕ ಹಾಗೂ ರಾಜಕೀಯ ಸಂಸ್ಥೆಗಳ ಸಂಬಂಧಗಳನ್ನು ಹಾಗೂ ಮೌಲ್ಯಗಳನ್ನು ರೂಪಿಸುವುದು ರಾಜಕೀಯದ ಜವಾಬ್ದಾರಿ. ವಾಸ್ತವದಲ್ಲಿ ರಾಜಕೀಯ ಸಮಷ್ಠಿಯ ಏಳಿಗೆಯನ್ನು ಸಾಧಿಸುವ ರೂಪದಲ್ಲಿ ಇದೆಯೇ? ಇಲ್ಲವಾದರೆ ಯಾಕಿಲ್ಲ? ಸಮಾಜದ ಯಾವ ವರ್ಗದ ಹಿತಾಸಕ್ತಿಗಳನ್ನು ರಾಜಕೀಯ ಪೂರೈಸುತ್ತಿದೆ? ಸಮಾಜದ ಬಹುತೇಕ ಆಶಯಗಳನ್ನು ಯಾಕೆ ರಾಜಕೀಯಕ್ಕೆ ಪೂರೈಸಲಾಗುತ್ತಿಲ್ಲ? ಇತ್ಯಾದಿ ಪ್ರಶ್ನೆಗಳಿಗೆ ಉತ್ತರಿಸುತ್ತಾ ವರ್ತಮಾನದ ರಾಜಕೀಯ ವಿದ್ಯಮಾನಗಳು ರಾಜಕೀಯ ನಕಾರಾತ್ಮಕ ಗುಣಗಳನ್ನೇ ಹೆಚ್ಚು ಹೆಚ್ಚು ಬಿಂಬಿಸುತ್ತಿವೆ. ರಾಜಕೀಯ ಕ್ಷೇತ್ರ ಹದಗೆಟ್ಟಿದೆ. ಇದರಿಂದಾಗಿ ಕೆಟ್ಟ ಜನರು ಹೆಚ್ಚು ಹೆಚ್ಚು ರಾಜಕೀಯ ಪ್ರವೇಶಿಸುತ್ತಿದ್ದಾರೆ. ಇಂದು ದುಡ್ಡಿದ್ದವರು ಮಾತ್ರ ರಾಜಕೀಯದಲ್ಲಿ ಯಶಸ್ಸು ಸಾಧಿಸಲು ಸಾಧ್ಯ ಎನ್ನುವ ಸ್ಥಿತಿ ನಿರ್ಮಾಣವಾಗಿದೆ. ಈ ಬಗೆಯ ರಾಜಕೀಯದಿಂದ ಬಹುತೇಕರಿಗೆ ಅನುಕೂಲವಾಗುವ ಸಾಮಾಜಿಕ ಪರಿವರ್ತನೆ ಸಾಧ್ಯವಿಲ್ಲದಾಗಿದೆ. ಪ್ರತಿಯೊಬ್ಬರು ತಮ್ಮ ಬಗ್ಗೆ ಮತ್ತು ತಾವು ಬದುಕುವ ಪರಿಸರದ ಬಗ್ಗೆ ಹೊಂದಿರುವ ದೃಷ್ಟಿಕೋನಗಳನ್ನು ಬದಲಾಯಿಸಿ ಕೊಳ್ಳುವುದು ವ್ಯಕ್ತಿ ಮತ್ತು ಸಾಮಾಜಿಕ ಪರಿವರ್ತನೆಗೆ ತುಂಬಾ ಅವಶ್ಯ. ಆದರೆ ಚಾಲ್ತಿಯಲ್ಲಿರುವ ರಾಜಕಿಯ ಪ್ರಕ್ರಿಯೆಯಲ್ಲಿ ಈ ಬಗೆಯ ಸಾಮಾಜಿಕ ಪರಿವರ್ತನೆಗೆ ಮಹತ್ವ ಇಲ್ಲ. ಆದರೆ ವ್ಯವಸ್ಥೆ ಹಿಂದಿನದೇ ರೀತಿಯಲ್ಲಿ ಸಮಾಜದ ಮೇಲ್ವರ್ಗಗಳ ಆಸಕ್ತಿಗಳನ್ನು ಪೂರೈಸುತ್ತ ತಳ ಸಮುದಾಯಗಳ ಹಿತಾಸಕ್ತಿಗಳನ್ನು ಕಡೆಗಣಿಸುತ್ತಾ ಮುಂದುವರಿಯುವ ಸಾಧ್ಯತೆ ಇದೆ. ಅಲ್ಲದೆ ಕೆಳ ಮತ್ತು ಮಧ್ಯಮ ಸ್ತರದ ಮಧ್ಯಮ ವರ್ಗದ ಆಧುನಿಕ ಜೀತ ಪದ್ಧತಿ ಎಲ್ಲಾ ಕ್ಷೇತ್ರಗಳಲ್ಲಿ ಕಾರಬಾರು ನಡೆಸುತ್ತಿರುವ ಊಳಿಗಮಾನ್ಯ ಮೌಲ್ಯಗಳು, ಹುಡುಕಿದರೂ ಸಿಗದ ಸಮಾನತೆ, ಸ್ವಾತಂತ್ರ್ಯಗಳು, ಸಾರ್ವಜನಿಕ ಬದುಕಿನಲ್ಲಿ ಎದ್ದು ಕಾಣುವ ಜವಾಬ್ದಾರಿ ಹಾಗೂ ಪಾರದರ್ಶಕತೆಯ ಕೊರತೆಗಳು ಮಧ್ಯಮ ವರ್ಗವನ್ನು ಬಡವರಷ್ಟೇ ಅಸಹಾಯಕರನ್ನಾಗಿಸಿವೆ. ಮಧ್ಯಮ ವರ್ಗ ರಾಜಕೀಯವನ್ನು ಗಂಭೀರವಾಗಿ ಪರಿಗಣಿಸಿ ಸಕ್ರೀಯವಾಗಿ ರಾಜಕೀಯದಲ್ಲಿ ಪಾಲುಗೊಂಡರೆ ರಾಜಕೀಯ ಬಡತನ ದೂರವಾಗಬಹುದು ಎಂದು ಅಭಿಪ್ರಾಯ

ಪಡುತ್ತಾರೆ.[೧೩] ಈ ಮೇಲಿನ ಅಂಶಗಳನ್ನು ಪರಿಗಣಿಸುವುದರ ಜೊತೆಗೆ ಇಂತಹ ಸಮಸ್ಯೆಗಳನ್ನು ನಗರ ಪ್ರದೇಶದಲ್ಲಿಯೂ ಕಾಣಬಹುದಾಗಿದೆ. ಕೇವಲ ಸ್ಥಳೀಯ ರಾಜಕೀಯದಲ್ಲಿ ಭಾಗವಹಿಸಿದಾಗ ಮಾತ್ರ ಸಮಸ್ಯೆಗಳು ಈಡೇರುತ್ತವೆ ಎಂದು ಹೇಳುವುದು ಸಮಂಜಸ ಅಲ್ಲ. ಅದರ ಜೊತೆಗೆ ಸ್ಥಳೀಯ ಜನರು ಆಡಳಿತವನ್ನು ಪ್ರಶ್ನಿಸುವುದರ ಜೊತೆಗೆ ಕಾರ್ಯ ಚಟುವಟಿಕೆಯಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಭಾಗವಹಿಸಿದಾಗ ಮಾತ್ರ ನಗರ ಸ್ಥಳೀಯ ಜನರ ಬದುಕು ಉತ್ತಮ ಸ್ಥಿತಿಯಾಗಿ ಬದಲಾವಣೆಯಾಗುವುದನ್ನು ನೋಡಬಹುದು ಎಂದು ತಿಳಿಯಬಹುದಾಗಿದೆ.

ಅಶೋಕ ಮುಖ್ಯೋಪಾಧ್ಯಾಯ (೧೯೮೫) ಅವರು ಮುನ್ಸಿಪಲ್ ಪರ್ಸನಲ್ ಎಡ್ಮಿನಿಸ್ಟ್ರೇಶನ್ ಎಂಬ ಗ್ರಂಥದಲ್ಲಿ ರಾಜಸ್ಥಾನ ಮತ್ತು ಗುಜರಾತ್‌ನಲ್ಲಿನ ಒಗ್ಗೂಡಿದ ಮತ್ತು ಪ್ರತ್ಯೇಕ ಸಿಬ್ಬಂದಿ ವ್ಯವಸ್ಥೆಯ ಒಂದು ಹೋಲಿಕೆಯ ಅಧ್ಯಯನ ಎಂಬ ಲೇಖನದಲ್ಲಿ ಸೀಮಿತ ಸಾಕ್ಷ್ಯಾಧಾರಗಳನ್ನು ಆಧರಿಸಿ ಏಕೀಕೃತ ವ್ಯವಸ್ಥೆಯು ವಾಸ್ತವಿಕವಲ್ಲದಿದ್ದರೂ ಪ್ರತ್ಯೇಕ ಸಿಬ್ಬಂದಿ ವ್ಯವಸ್ಥೆಗಿಂತ ಉತ್ತಮ ಮತ್ತು ಅದನ್ನು ಉಪಯುಕ್ತವಾಗಿ ಸುಧಾರಣೆ ಮಾಡಿದಲ್ಲಿ ಅದು ಸ್ಥಳೀಯ ಸಂಸ್ಥೆಗಳಲ್ಲಿ ಸೇವೆ ಸಲ್ಲಿಸಲು ಸಮರ್ಪಕ ಸಾಧನವಾಗಬಹುದು ಅಲ್ಲದೇ ಅದು ನಗರ ಸ್ಥಳೀಯ ಸಂಸ್ಥೆಗಳ ಸರಕಾರದ ಮೂಲಭೂತ ಮೌಲ್ಯಗಳ ಅನುಸಾರವಾಗಿಯೂ ಇರುವುದು. ಎಲ್ಲಾ ಸಂಘಗಳು, ಸರಕಾರಿ ಸಂಸ್ಥೆಯಾಗಿರಲಿ ಅಥವಾ ಸರ್ಕಾರೇತರ ಸಂಸ್ಥೆಯಾಗಿರಲಿ ಅದರ ಸದಸ್ಯರನ್ನು ತಮ್ಮ ಉದ್ದೇಶಗಳನ್ನು ಸಾಧಿಸಲು ಸಾಮೂಹಿಕ ಪ್ರಯತ್ನ ಮಾಡಲು ಪ್ರೇರೇಪಿಸಲು, ಉತ್ಸಾಹಿಸಲು ಮತ್ತು ಮಾರ್ಗದರ್ಶಿಸಲು ಉತ್ತಮ ನಾಯಕತ್ವದ ಅವಶ್ಯಕತೆ ಇರುದನ್ನು ಗುರುತಿಸುತ್ತಾ ರಾಜ್ಯ ಮತ್ತು ಕೇಂದ್ರ ಸರಕಾರಗಳ ಜೊತೆಗೆ ಹೋಲಿಸಿ ನೋಡಿದಾಗ ಸ್ಥಳೀಯ ಮಟ್ಟದ, ನಗರ ಮಟ್ಟದ ಮತ್ತು ಗ್ರಾಮೀಣ ಮಟ್ಟದ ನಾಯಕತ್ವವು ಬಹಳ ಮಹತ್ವಪೂರ್ಣವಾಗಿದೆ. ಏಕೆಂದರೆ ಅದು ಕಡಿಮೆ ಕ್ಷೇತ್ರಗಳಲ್ಲಿ ಮತ್ತು ಕಡಿಮೆ ಪ್ರಮಾಣದ ಜನಸಂಖ್ಯೆಗೆ ತನ್ನ ಸೇವೆಯನ್ನು ಒದಗಿಸುತ್ತದೆ ಎಂದು ಲೇಖಕರು ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾರೆ.[೧೪] ಮೇಲಿನ ಅಂಶಗಳನ್ನು ಗಮನಿಸಿದಾಗ ತಿಳಿದು ಬರುವ ಸಂಗತಿಯೆಂದರೆ ಭಾರತದ ನಗರಗಳು ಮತ್ತು ಪಟ್ಟಣಗಳು ನಗರ ಸ್ಥಳೀಯ ಸಂಸ್ಥೆಗಳಿಗೆ ಕ್ಷಮತೆಯುಳ್ಳ ಪ್ರತಿನಿಧಿಗಳನ್ನು ಕಳಿಸುವಲ್ಲಿ ವಿಫಲವಾಗಿವೆ. ಕೆಲವೇ ಸಮರ್ಥ ಸಭಾಸದಸ್ಯರನ್ನು ಇಲ್ಲಿ ಅಲ್ಲಿ ಕಾಣಬಹುದು. ಆದರೆ ಅವರು ಸಾಮಾನ್ಯವಾಗಿ ಪೂರ್ಣವಲ್ಲದ ಮತ್ತು ತೀವ್ರ ಅಭಾವದಲ್ಲಿರುತ್ತಾರೆ. ಇದು ಸಮನಾಗಿ ಒಳ್ಳೆಯ ಆಡಳಿತಗಾರರಿಗೂ ಅನ್ವಯಿಸುತ್ತದೆ. ನಗರ ಸ್ಥಳೀಯ ಸಂಸ್ಥೆಯ ಕೆಲಸಗಳಿಗಾಗಿ ನೇಮಕವಾದ ಅಧಿಕಾರಿಗಳು ತಮಗೆ ನಿಯಮಿಸಿದ ಕೆಲಸಗಳಿಗೆ ಹೊಂದಿಕೊಳ್ಳುವುದಿಲ್ಲ. ಸ್ಥಳೀಯ ಮಟ್ಟದ ಮತ್ತು ಏರುತ್ತಿರುವ ಪ್ರಮುಖ ಅಭಿಲಾಷೆಯುತ ವಾತಾವರಣದ ಮುಖಾ-ಮುಖಿ ಸ್ಥಿತಿಯಲ್ಲಿ ಸ್ಥಳೀಯ ಸರ್ಕಾರಗಳ ಅಧಿಕಾರಿಗಳಿಗೆ ಕರ್ತವ್ಯ ನಿರ್ವಹಿಸುವುದು ಕಷ್ಟಕರ. ಇಂತಹ ಬೆಳವಣಿಗೆಯಿಂದ ನಗರ ಸ್ಥಳೀಯ ಸಂಸ್ಥೆಗಳ ಅಭಿವೃದ್ಧಿಯನ್ನು ನೋಡುವುದು ಕಷ್ಟ ಸಾಧ್ಯವಾಗಿದೆ. ಎಂದು ಮನಗಾಣಲಾಗಿದೆ.

ಗುನ್ನರ್ ಮಿರಾಡಲ್ (೧೯೬೮) ಅವರು ಏಶಿಯನ್ ಡ್ರಾಮಃ ಯಾನ್ ಎನ್ಕ್ವೈಯರಿ ಇನ್ ಟು ದ ಪಾವರ್ಟಿ ಆಫ್ ನೇಶನ್ಸ್ ಎಂಬ ಗ್ರಂಥದಲ್ಲಿ ಸ್ಥಳೀಯ ಸಂಸ್ಥೆಗಳಿಗೆ ನೀಡಿದ ಅಧಿಕಾರ ರಚನೆ ಮತ್ತು ನಾಯಕತ್ವದ ಸಾಮಾರ್ಥ್ಯವು ಬಹಳವಾಗಿ ನಾಗರಿಕರ ಸ್ವಭಾವದ ಮೇಲೆ ಅವಲಂಬಿಸಿದೆ. ಪ್ರಬುದ್ಧ ಮತ್ತು ಶಾಸನೀಯ ನಾಗರೀಕರು ಒಂದು ಬಹು ಅಮೂಲ್ಯ ಆಸ್ತಿಯಾಗಿದ್ದಾರೆ. ಇದರ

ಅನುಪಸ್ಥಿತಿಯಲ್ಲಿ ಎಲ್ಲ ಮಟ್ಟದಲ್ಲಿ ರಾಜಕೀಯ ವ್ಯವಸ್ಥೆಯು ಸರಿಯಾಗಿ ಕಾರ್ಯನಿರ್ವಹಿಸಲು ಮತ್ತು ಸೇವೆ ಒದಗಿಸಲು ಸಾಧ್ಯವಿಲ್ಲ. ಆದ್ದರಿಂದ ಅದು ಮೆದು ರಾಜ್ಯದ ಉದ್ಭವಕ್ಕೆ ದಾರಿಯಾಗುತ್ತದೆ. ಮೆದು ರಾಜ್ಯವನ್ನು ಗುನ್ನರ್ ಮಿರಾಡಲ್ ಪುಷ್ಟಿಕರಿಸುತ್ತಾರೆ. ಅದು ನಾಯಕರ ಸಹನಶೀಲತೆ ಮತ್ತು ಸಾಮಾಜಿಕ ಶಾಸನದ ತಳಸ್ತರವನ್ನು ಸೂಚಿಸುತ್ತದೆ.[೧೫] ಈ ಒಂದು ಪದ್ಧತಿಯು ನಗರ ಜನಸಂಖ್ಯೆಯ ಒಡಕಿಗೆ ಕಾರಣವಾಗುತ್ತದೆ, ಆದಕಾರಣ ನಗರ ಸ್ಥಳೀಯ ಸಂಸ್ಥೆಗಳಲ್ಲಿ ಬಹಳಷ್ಟು ತೊಂದರೆಗಳು ಒಳ ಹೊಕ್ಕವು. ಈ ರೀತಿಯ ನಾಗರೀಕತೆಯಿಂದ ನಗರ ಸರಕಾರಗಳ ಪ್ರದರ್ಶನ ಮತ್ತು ಪ್ರಭಾವವು ಪ್ರತಿಬಂಧಿಸಲ್ಪಟ್ಟಿರುವುದನ್ನು ಲೇಖಕರು ಗುರಿತಿಸಿರುವುದನ್ನು ನೋಡಲಾಗಿದೆ.

ಕೆ.ಎಸ್. ಪಾರ್ಥಸಾರಥಿ, (೨೦೧೪) ಅವರು ಮತ್ತೊಂದು ಗಣರಾಜ್ಯ ದಿನ ಒಂದಿಷ್ಟು ಚಿಂತನೆಗಳು ಎಂಬ ಲೇಖನದಲ್ಲಿ ಭಾರತದ ಪರಿಸ್ಥಿತಿಯಲ್ಲಿ ಸ್ವಾತಂತ್ರ್ಯಾನಂತರ ಯೋಜನಾಬದ್ಧ ಆರ್ಥಿಕ ಬೆಳವಣಿಗೆಯೇ ಸರಿಯಾದ ಮಾರ್ಗ ಎಂದು ನಿರ್ಧರಿಸಲಾಗಿತ್ತು. ಅದರನ್ವಯ ಹಲವು ಯೋಜನೆಗಳು, ತನ್ಮೂಲಕ ಮಂದಗತಿಯದಾದರೂ ಸ್ಪಷ್ಟವಾದ ಬೆಳವಣಿಗೆಯೂ ಆಗಿತ್ತು. ಆ ವೇಳೆಗೆ ಸ್ವಾತಂತ್ರ್ಯ ಹೋರಾಟದಲ್ಲಿ ನೇರವಾಗಿ ಭಾಗವಹಿಸಿದ್ದ ನಾಯಕರೂ, ಅವರೊಂದಿಗೆ ಅಂದಿನ ಆರ್ಥಿಕ, ಸಾಮಾಜಿಕ ಕನಸುಗಳೂ ಮರೆಗೆ ಸರಿಯುತ್ತಿದ್ದ ಸಂದರ್ಭದಲ್ಲಿ ಭಾರತ ಯೋಜನಾಬದ್ಧ ಮಾರ್ಗವನ್ನು ಬಿಟ್ಟು 'ಮುಕ್ತ ಮಾರುಕಟ್ಟೆ' ಹೆಸರಿನ ಬಂಡವಾಳ ವ್ಯವಸ್ಥೆಯ ಆರ್ಥಿಕ ನೀತಿಗೆ ಒಳಪಟ್ಟಿರುವುದನ್ನು ಅಧ್ಯಯನಗಳಿಂದ ತಿಳಿಯಬಹುದಾಗಿದೆ. ಮುಂದುವರಿದು ಇದರ ಹಾದಿ ಎರಡು ದಶಕಗಳಷ್ಟು ಸವೆದರೂ ಜಿಡಿಪಿ ಹೆಚ್ಚಿದಂತೆಲ್ಲಾ ಬಡತನವೂ ಹೆಚ್ಚುತ್ತ ಸಾಗಿರುವುದನ್ನು ಕಾಣಲಾಗಿದೆ. ಅಂತೆಯೇ ಸಂಪತ್ತಿನ ಕೇಂದ್ರೀಕರಣವೂ ಹೆಚ್ಚಿದೆ. ರಾಜಕೀಯ ಅಸ್ಥಿರತೆಯೂ ಹೆಚ್ಚಿದೆ. ಈ ಬೆಳವಣಿಗೆಯು ದೇಶದ ಬಹುಸಂಖ್ಯೆಯ ಸಾಧಾರಣ ಜನರನ್ನು ಹಲವು ಸಮಸ್ಯೆಗಳಿಂದ ಹತಾಶರನ್ನಾಗಿಸಿದೆ[೧೬] ಎಂದು ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾರೆ. ಈ ಹಿನ್ನೆಲೆಯಲ್ಲಿ ಮುಖ್ಯವಾಗಿ ನಗರ ಪ್ರದೇಶದಲ್ಲಿ ಊಹಿಸಲು ಸಾಧ್ಯವಾಗದ ಬದಲಾವಣೆಯನ್ನು ಕಾಣುತ್ತೇವೆ. ಅಂದರೆ ಗ್ರಾಮೀಣ ಜನರು ನಗರ ಪ್ರದೇಶಕ್ಕೆ ಅನಿವಾರ್ಯ ಕಾರಣದಿಂದ ವಲಸೆ ಹೋಗುವುದರಿಂದ ನಗರ ಬೆಳವಣೆಗೆಯಾಗಿ ಪ್ರಸ್ತುತ ನಗರ ಪ್ರದೇಶದಲ್ಲಿ ವಾಸಿಸುವವರು ೪೨೦ ಮಿಲಿಯನ್ ಮಧ್ಯಮ ಮತ್ತು ಕೆಳವರ್ಗದ ಜನರಿಗೆ ನಿಯಮಿತವಾದ ಶುದ್ಧ ಕುಡಿಯುವ ನೀರು ಮತ್ತು ನೈರ್ಮಲ್ಯದ ಸಮಸ್ಯೆಯಿಂದ ಬಳಲುತ್ತಿರುವುದರ ಬಗ್ಗೆ ತಿಳಿಸದೆಯಿರುವುದನ್ನು ಅಧ್ಯಯನದಲ್ಲಿ ಕಾಣಬಹುದಾಗಿದೆ.

## ೨. ಅಧ್ಯಯನದ ಪ್ರಶ್ನೆಗಳು

**ಅಧ್ಯಯನ ಸಮಸ್ಯೀಕರಣದ ಆಧಾರದ ಮೇಲೆ ಕೆಳಕಂಡ ಸಂಶೋಧನಾ ಪ್ರಶ್ನೆಗಳನ್ನು ಗುರುತಿಸಲಾಗಿದೆ.**

ನಗರ ಸ್ಥಳೀಯ ಸಂಸ್ಥೆಗಳ ವಾರ್ಡಿನ ಜನತೆ ರಾಜಕೀಯ ಸಮಸ್ಯೆಗಳನ್ನು ಅನುಭವಿಸುತ್ತಿದ್ದಾರೆಯೇ? ನಗರ ಸ್ಥಳೀಯ ಸಂಸ್ಥೆಗಳಲ್ಲಿ ವಾರ್ಡಿನ ಜನರು ಅಭಿವೃದ್ಧಿಯಲ್ಲಿ ಭಾಗವಹಿಸಲು ಇರುವ ಸಮಸ್ಯೆಗಳೇನು? ನಗರ ಸ್ಥಳೀಯ ಸಂಸ್ಥೆಗಳ ಅಧಿಕಾರ ಯಾರಲ್ಲಿ ಕೇಂದ್ರೀಕರಣಗೊಂಡಿದೆ? ಯೋಜನೆಯ ಬಹುಪಾಲು ಹಣ ನಗರ ಪ್ರದೇಶಗಳಿಗೆ ಹರಿದು ಹೋಗುತ್ತಿದೆ ಎಂಬ ಭಾವನೆ ಇದೆ. ಆದರೂ ನಗರದ ಜನತೆ ನಿರೀಕ್ಷಿತ ಪ್ರಮಾಣದಷ್ಟು ಮೂಲಭೂತ ಸೌಲಭ್ಯ ಪಡೆಯುತ್ತಿಲ್ಲ ಏಕೆ? ಸ್ಥಳೀಯ ಸಂಸ್ಥೆಗಳಲ್ಲಿ ಇರುವ ಮೂಲಭೂತ ಸೌಲಭ್ಯಗಳನ್ನು ಮೂರು ರೀತಿಯಾಗಿ

ವರ್ಗೀಕರಿಸಿಕೊಳ್ಳಬಹುದು. ಒಂದು ಕಾರ್ಯ ನಿರ್ವಹಿಸುತ್ತಿರುವ ಯೋಜನೆ, ಎರಡು ಯೋಜನೆ ಇದೆ, ಆದರೆ ಆಡಳಿತದ ನಿರ್ವಹಣೆ ಅಥವಾ ಭ್ರಷ್ಟಾಚಾರದ ಸಮಸ್ಯೆಯಿಂದ ಕಾರ್ಯ ನಿರ್ವಹಣೆಯಾಗುತ್ತಿಲ್ಲ. ಮೂರನೆಯದು ಕಾರ್ಯವನ್ನು ಮಾಡದೇ ಸ್ಥಳೀಯ ಜನರನ್ನು ಸೌಲಭ್ಯಗಳಿಂದ ವಂಚಿಸುತ್ತಿರುವುದು. ಇಂತಹ ಮೂಲಭೂತ ಸಮಸ್ಯೆಗಳು ನಗರಗಳಲ್ಲಿ ಏಕೆ ಮುಂದುವರೆಯುತ್ತಿವೆ? ಬಡವರಿಗಾಗಿ ರೂಪಿಸುತ್ತಿರುವ ಯೋಜನೆಗಳು ಜನರನ್ನು ತಲುಪಲು ಏಕೆ ವಿಫಲವಾಗುತ್ತಿವೆ.? ಇವೆಲ್ಲಾ ಸಮಸ್ಯೆಗಳಿಗೆ ಉತ್ತರ ಕಂಡುಕೊಳ್ಳುವಲ್ಲಿ ಕೆಳಗಿನ ಉದ್ದೇಶಗಳನ್ನು ಇಟ್ಟುಕೊಂಡು ಅಧ್ಯಯನವನ್ನು ಕೈಗೊಳ್ಳಲಾಗಿದೆ.

**೩. ಅಧ್ಯಯನದ ಉದ್ದೇಶಗಳು**

ನಮ್ಮಲ್ಲಿ ವಿಕೇಂದ್ರೀಕರಣಕ್ಕೆ ಎರಡು ಸ್ತರಗಳಿದ್ದು ಮೊದಲನೆಯದಾಗಿ ಮೇಲುಸ್ತರದಲ್ಲಿ, ಅಭಿವೃದ್ಧಿ ಯೋಜನೆಗಳನ್ನು ನಗರ ತಳಸಮುದಾಯ ಜನರಿಗೆ ತಲುಪಿಸುವುದು ಮತ್ತು ಎರಡನೆಯದಾಗಿ ನಗರ ತಳಸಮುದಾಯ ಜನರನ್ನು ಅಭಿವೃದ್ಧಿಗೊಳಿಸುವುದು. ತಳಮಟ್ಟದ ಜನರ ಮುಖ್ಯ ಸಮಸ್ಯೆ ಎಂದರೆ ಕುಡಿಯುವ ನೀರು, ನೈರ್ಮಲ್ಯ, ವಸತಿ, ಉದ್ಯೋಗ ಮತ್ತು ಶಿಕ್ಷಣದ ಕೊರತೆಯಾಗಿದ್ದು, ಈ ಕೊರತೆಗಳನ್ನು ನಿವಾರಿಸಿದರೆ ಇತರ ಕ್ಷೇತ್ರದಲ್ಲಿ ಅಭಿವೃದ್ಧಿಗೊಳ್ಳಲು ಅವರಿಗೆ ಅನುಕೂಲವಾಗುತ್ತದೆ ಎನ್ನುವ ಗ್ರಹಿಕೆ ಇದೆ. ಈ ಗ್ರಹಿಕೆಯನ್ನು ಯಥಾರೀತಿಯಲ್ಲಿ ಒಪ್ಪಿಕೊಂಡು ಕುಡಿಯುವ ನೀರು, ನೈರ್ಮಲ್ಯ, ವಸತಿ, ಉದ್ಯೋಗ ಮತ್ತು ಶಿಕ್ಷಣ ಅವು ಎಷ್ಟರಮಟ್ಟಿಗೆ ಕೆಳಸ್ತರದ ಜನರಿಗೆ ತಲುಪಿವೆ. ನಗರ ಸ್ಥಳೀಯ ಸಂಸ್ಥೆಗಳು ತಮ್ಮ ಹೊಣೆಯನ್ನು ಎಷ್ಟು ಸಮರ್ಪಕವಾಗಿ ನಿಭಾಯಿಸಿವೆ ಎಂದು ಅಭಿವೃದ್ಧಿ ಪ್ರಕ್ರಿಯೆ ಪರಿಣಾಮಕಾರಿಯಾಗಿ ಜಾರಿಗೊಳಿಸಲು ಹಲವು ಸ್ಥಳೀಯ ಸಂಸ್ಥೆಗಳನ್ನು ರಚನೆ ಮಾಡುವುದರ ಜೊತೆಗೆ ಮತ್ತು ಜನರ ಸಹಭಾಗಿತ್ವವನ್ನು ನಿರೀಕ್ಷಿಸಲಾಗುತ್ತದೆ. ಹೀಗೆ ನಗರ ಸ್ಥಳೀಯ ಸರ್ಕಾರಗಳ ಕಾರ್ಯಕ್ಷಮತೆಯ ಮತ್ತು ಸಂಬಂಧಿತ ಇತರ ವಿಚಾರ ವಿಶ್ಲೇಷಣೆಯೂ ಅನಿವಾರ್ಯವಾಗಿದೆ. ಈ ಹಿನ್ನೆಲೆಯಲ್ಲಿ ಅಧ್ಯಯನ ಉದ್ದೇಶಗಳನ್ನು ಈ ಕೆಳಗಿನಂತೆ ನಿರ್ವಹಿಸಿ ಕೊಳ್ಳಲಾಗಿದೆ.

೧. ಭಾರತದಲ್ಲಿ ನಗರ ಸ್ಥಳೀಯ ಸಂಸ್ಥೆಗಳ ಬೆಳವಣಿಗೆಯನ್ನು ಗುರುತಿಸುವುದು.
೨. ನಗರ ಸ್ಥಳೀಯ ಸಂಸ್ಥೆಗಳ ಅಭಿವೃದ್ಧಿ ಚಟುಟಿಕೆಗಳನ್ನು ಅಧ್ಯಯನ ಮಾಡುವುದು.
೩. ನಗರ ಸ್ಥಳೀಯ ಸಂಸ್ಥೆಯ ಆಡಳಿತದಲ್ಲಿ ಚುನಾಯಿತ ಸದಸ್ಯರು ಮತ್ತು ನಗರ ಜನತೆಯ ಪಾಲ್ಗೋಳಿವಿಕೆಯನ್ನು ನೋಡುವುದಾಗಿದೆ.
೪. ನಗರ ಸ್ಥಳೀಯ ಸಂಸ್ಥೆಗಳ ಹಣಕಾಸಿನ ನಿರ್ವಹಣೆಯನ್ನು ನೋಡುವುದು.
೫. ಅಧ್ಯಯನಗಳ ಫಲಿತಗಳನ್ನು ಇಟ್ಟುಕೊಂಡು ನಗರ ಸ್ಥಳೀಯ ಸಂಸ್ಥೆಗಳ ಉತ್ತಮ ಕಾರ್ಯ ನಿರ್ವಹಣೆಗೆ ಅಗತ್ಯ ಸಲಹೆ-ಸೂಚನೆಗಳನ್ನು ಸೂಚಿಸುವುದು. ಈ ಎಲ್ಲಾ ಉದ್ದೇಶಗಳ ಹಿನ್ನೆಲೆಯಲ್ಲಿ ಪ್ರಸ್ತುತ ಅಧ್ಯಯನವನ್ನು ಕೈಗೊಳ್ಳಲಾಗಿದೆ.

**೪. ಅಧ್ಯಯನದ ವಿಧಾನ**

ಪ್ರಸ್ತುತ ಅಧ್ಯಯನ ವಿಧಾನವು ಎಂಪಿರಿಕಲ್ ಮಾದರಿಯ ಅಧ್ಯಯನವಾಗಿರುವುದರಿಂದ. ಅಧ್ಯಯನಕ್ಕೆ ಪೂರಕವಾಗಿ ಉದ್ದೇಶಗಳನ್ನು ವಿಶ್ಲೇಷಣೆಗೆ ಒಳಪಡಿಸಲು ಹಲವು ಮಾಹಿತಿಯ ಅಗತ್ಯವಿದೆ. ಒಂದನೆಯಾದಾಗಿ, ಸ್ಥಳೀಯ ಸಂಸ್ಥೆಗಳ ಮೂಲಭೂತ ಸೌಲಭ್ಯಗಳಾದ ಕುಡಿಯುವ

ನೀರು, ವಿದ್ಯುತ್, ಚರಂಡಿ ವ್ಯವಸ್ಥೆ, ವಸತಿ, ಬೀದಿ ದೀಪ, ಆರೋಗ್ಯ, ವರಮಾನ ಮತ್ತು ಶಿಕ್ಷಣಕ್ಕೆ ಸಂಬಂಧಿಸಿದ ಮಾಹಿತಿ. ಆದರೆ ಶಿಕ್ಷಣ ಮತ್ತು ಆರೋಗ್ಯಕ್ಕೆ ಸಂಬಂಧಿಸಿದ ಜವಾಬ್ದಾರಿಗಳನ್ನು ತುಂಬಾ ಸೀಮಿತಗೊಳಿಸಲಾಗಿದೆ. ಎರಡನೆಯಾದಾಗಿ, ನಗರ ಸ್ಥಳೀಯ ಸಂಸ್ಥೆಗಳಲ್ಲಿ ನೇರವಾಗಿ ಭಾಗವಹಿಸುವ ಚುನಾಯಿತ ಪ್ರತಿನಿಧಿಗಳು, ಅಧಿಕಾರಿಗಳು ಮತ್ತು ಅಭಿವೃದ್ಧಿ ಕಾರ್ಯಗಳ ಫಲಾನುಭವಿಗಳ ಅಭಿಪ್ರಾಯಗಳನ್ನು ಸಹ ಸಂಗ್ರಹಿಸಲಾಯಿತು. ಮೂರನೆಯಾದಾಗಿ, ನಗರ ಸ್ಥಳೀಯ ಸಂಸ್ಥೆಗಳು ಕಾರ್ಯ ನಿರ್ವಹಿಸುತ್ತಿರುವ ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ವಿಚಾರಗಳಿಗೆ ಸಂಬಂಧಿಸಿದ ಮಾಹಿತಿ. ಇಂತಹ ವಿಚಾರಗಳಿಗೆ ಸಂಬಂಧಿಸಿದ ಮಾಹಿತಿಯನ್ನು ಸಂಗ್ರಹಿಸಲು ಸ್ಥೂಲವಾಗಿ ಎರಡು ಮೂಲಗಳನ್ನು ಅಧ್ಯಯನದಲ್ಲಿ ಅಳವಡಿಸಿಕೊಳ್ಳಲಾಗಿದೆ. ಪ್ರತಿಯೊಂದು ಅಧ್ಯಯನಕ್ಕೆ ಸಂಬಂಧಿಸಿದ ಮಾಹಿತಿಯನ್ನು ಒಂದನೆಯಾದಾಗಿ, ಪ್ರಾಥಮಿಕ ಹಾಗೂ ಎರಡನೆಯಾದಾಗಿ, ದ್ವಿತೀಯ ಹಂತದ ಮೂಲಗಳಿಂದ ಬಳಸಿಕೊಳ್ಳಲಾಗಿದೆ. ಮೊದಲೆಯಾದಾಗಿ, ದ್ವಿತೀಯ ಹಂತದ ಮಾಹಿತಿ(ಅನುಷಂಗಿಕ ಮಾಹಿತಿ)ಯನ್ನು ನಗರ ಸ್ಥಳೀಯ ಸಂಸ್ಥೆಗಳಿಗೆ ಸಂಬಂಧಿಸಿದ ಸಂಶೋಧನ ಪ್ರಬಂಧಗಳು, ವರದಿಗಳು, ಗ್ರಂಥಗಳು, ನಿಯತಕಾಲಿಕೆಗಳು, ಜರ್ನಲ್ಸ್‌ಗಳು, ಮೂಲಭೂತ ಸೌಲಭ್ಯಗಳಿಗೆ ಕುರಿತ ಅಂಕಿ ಅಂಶಗಳು, ತೆರಿಗೆ ಸಂಗ್ರಹ, ವಾರ್ಷಿಕ ಬಜೆಟ್, ಚುನಾಯಿತ ಸದಸ್ಯರ ಮತ್ತು ಸ್ಥಳೀಯ ಸಂಸ್ಥೆಗಳಲ್ಲಿ ಕೈಗೊಂಡ ನಿರ್ಣಯಗಳು ಇತ್ಯಾದಿಗಳಿಗೆ ಸಂಬಂಧಿಸಿದ ಮಾಹಿತಿಯನ್ನು ಪಡೆಯಲಾಗಿದೆ. ಕುಡಿಯುವ ನೀರು, ಶಿಕ್ಷಣ ಮತ್ತು ತೆರಿಗೆ ಇನ್ನಿತರ ದಾಖಲೆಗಳನ್ನು ಆಯಾಯ ಇಲಾಖೆಗಳ ಮೂಲಕ ಮೂಲಗಳನ್ನು ಕ್ರೋಢೀಕರಿಸಲಾಗಿದೆ. ನಗರ ಪ್ರದೇಶ ಒಂದರಲ್ಲಿರಬೇಕಾದ ಮೂಲಭೂತ ಸೌಲಭ್ಯಗಳ ಸಂಖ್ಯೆ ಮತ್ತು ವಾಸ್ತವದಲ್ಲಿರುವ ಸಂಖ್ಯೆಯನ್ನು ವಿವಿಧ ಇಲಾಖೆಗಳಿಂದ ಮಾಹಿತಿಯನ್ನು ಸಂಗ್ರಹಿಸಲಾಗಿದೆ. ಅಲ್ಲದೆ ಬಳ್ಳಾರಿ ಜಿಲ್ಲೆಗೆ ಸಂಬಂಧಿಸಿದಂತಹ ಅಧ್ಯಯನಗಳ ಮೂಲಕ ಸಹ ಮಾಹಿತಿಯನ್ನು ಪಡೆಯಲಾಗಿದೆ. ಪ್ರಸ್ತುತ ಅಧ್ಯಯನವು ಪ್ರಮುಖವಾಗಿ ಚುನಾಯಿತ ಸದಸ್ಯರ ಅಧ್ಯಯನವಾಗಿದ್ದರಿಂದ ಎರಡು ನಗರ ಸ್ಥಳೀಯ ಸಂಸ್ಥೆಗಳಲ್ಲಿ ಚುನಾಯಿತ ಸದಸ್ಯರು ವಾರ್ಡಿನ ಜನರ ಏಳಿಗೆಗಾಗಿ ಹೇಗೆ ಕೆಲಸ ಕಾರ್ಯಗಳನ್ನು ಮಾಡಿದ್ದಾರೆ ಎಂಬುದನ್ನು ತಿಳಿಯಲು ಸಮೀಕ್ಷಾ ಅಧ್ಯಯನ ವಿಧಾನವನ್ನು ಬಳಸಿಕೊಂಡು ಇದಕ್ಕೆ ಪೂರಕವಾಗಿ ಪ್ರಶ್ನಾವಳಿಯನ್ನು ತಯಾರಿಸಿ ಮುಂದುವರಿದ ಹೊಸಪೇಟೆ ನಗರಸಭೆಯಲ್ಲಿ ೧೨೦ ಕುಟುಂಬಗಳು ಮತ್ತು ೩೫ ಚುನಾಯಿತ ಸದಸ್ಯರನ್ನು ಹಾಗೂ ಹಿಂದುಳಿದ ಕೂಡ್ಲಿಗಿ ಪಟ್ಟಣ ಪಂಚಾಯಿತಿಯಲ್ಲಿ ೮೦ ಕುಟುಂಬಗಳು ಮತ್ತು ೨೦ ಚುನಾಯಿತ ಸದಸ್ಯರನ್ನು ಆಯ್ಕೆಮಾಡಿಕೊಳ್ಳಲಾಗಿದೆ. ಹೀಗೆ ಗುರುತಿಸಿದ ನಂತರ ಜನರ ಸಂಭಾಷಣೆ, ವಿಚಾರ ವಿನಿಮಯಗಳೊಂದಿಗೆ ಇಲ್ಲಿರುವ ನಗರ ಸ್ಥಳೀಯ ಸಂಸ್ಥೆಗಳ ಸಭೆಗಳಲ್ಲಿ ಭಾಗವಹಿಸಿ ವಿಚಾರ ವಿನಿಮಯ ವಿಷಯಗಳನ್ನು ಪಟ್ಟಿ ಮಾಡಿ ಮೂಲಭೂತ ಸೌಲಭ್ಯ ಅವಶ್ಯಕತೆಗಳ ಬಗ್ಗೆ, ಸ್ಥಳೀಯ ಸಂಸ್ಥೆಗಳ ಯೋಜನೆಯ, ವಾರ್ಷಿಕ ಬಜೆಟ್, ಅನುದಾನದ ಹಂಚಿಕೆ, ಫಲಾನುಭವಿಗಳ ಆಯ್ಕೆ, ಶಿಕ್ಷಣ ಮತ್ತು ಆರೋಗ್ಯ ಅದರ ಜೊತೆಗೆ ಜನತೆ ಮತ್ತು ವಾರ್ಡಿನ ಚುನಾಯಿತ ಸದಸ್ಯರ ಅರಿವು ಮತ್ತು ಭಾಗವಹಿಸುವಿಕೆಯ ಬಗ್ಗೆ ಪ್ರಶ್ನಾವಳಿಗಳನ್ನು ರಚಿಸಿ ಅದರೊಂದಿಗೆ ಜನರನ್ನು ನೇರವಾಗಿ ಸಂದರ್ಶಿಸಿ ಅಭಿಪ್ರಾಯ ಸಂಗ್ರಹಿಸಿ ಈ ಅಧ್ಯಯನಕ್ಕೆ ಬೇಕಾದ ಪ್ರಾಥಮಿಕ ಮಾಹಿತಿಯನ್ನು ಸಂಗ್ರಹಿಸಿರುತ್ತೇನೆ. ಮುಂದುವರಿದು, ಬಳ್ಳಾರಿ ಜಿಲ್ಲೆಯ ಹೊಸಪೇಟೆ ನಗರಸಭೆ ಮತ್ತು ಕೂಡ್ಲಿಗಿ

ಪಟ್ಟಣ ಪಂಚಾಯಿತಿಗೆ ಅಧ್ಯಯನವನ್ನು ಸೀಮಿತಗೊಳಿಸಲಾಗಿದೆ. ಹೊಸಪೇಟೆ ತಾಲೂಕು ಜಿಲ್ಲೆಯಲ್ಲಿ ಅತಿ ಹೆಚ್ಚು ನೀರಾವರಿ ಪ್ರದೇಶವಾಗಿದ್ದು, ಜಿಲ್ಲೆಯಲ್ಲಿ ಅಭಿವೃದ್ಧಿ ಹೊಂದಿದ ತಾಲೂಕುಗಳಲ್ಲಿ ಒಂದಾಗಿದೆ. ಹಾಗೆಯೇ ಜಿಲ್ಲೆಯಲ್ಲಿ ಕೂಡ್ಲಿಗಿ ತಾಲೂಕು ಅತಿಹೆಚ್ಚು ಒಣಭೂಮಿ ಪ್ರದೇಶವನ್ನು ಹೊಂದಿದ್ದು, ಹಿಂದುಳಿದ ಪ್ರದೇಶವಾಗಿದೆ. ಹಾಗಾಗಿ ಜಿಲ್ಲೆಯ ನೀರಾವರಿ ಪ್ರದೇಶವೆಂದು ಮತ್ತು ಒಣಭೂಮಿ ಪ್ರದೇಶವೆಂದು ವಿಂಗಡಿಸಿ ಅಧ್ಯಯನಕ್ಕೆ ಎರಡು ತಾಲೂಕಿನಲ್ಲಿರುವ ನಗರಸಭೆ ಮತ್ತು ಪಟ್ಟಣ ಪಂಚಾಯಿತಿಯನ್ನು ನಗರ ಸ್ಥಳೀಯ ಸಂಸ್ಥೆಗಳೆಂದು ಪರಿಗಣಿಸಿ ಅಧ್ಯಯನಕ್ಕೆ ಆಯ್ಕೆಮಾಡಿಕೊಳ್ಳಲಾಗಿದೆ.

ಇದೇ ಮಾದರಿಯಲ್ಲಿ ಎರಡು ನಗರ ಸ್ಥಳೀಯ ಸಂಸ್ಥೆಗಳನ್ನು ಹಿಂದುಳಿದ ಮತ್ತು ಸಾಪೇಕ್ಷವಾಗಿ ಮುಂದುವರಿದ ಪ್ರದೇಶಗಳೆಂದು ನಗರ ಸ್ಥಳೀಯ ಸಂಸ್ಥೆಗಳಲ್ಲಿರುವ ಒಟ್ಟು ೫೫ ಚುನಾಯಿತ ಸದಸ್ಯರಿಗೆ ಪೂರಕವಾಗಿ ಪ್ರತಿ ಸದಸ್ಯನ ಸುತ್ತ ಮುತ್ತಲ್ಲಿರುವ ನಾಲ್ಕು-ನಾಲ್ಕು ಕುಟುಂಬಗಳನ್ನು ಆಯ್ಕೆ ಮಾಡಿಕೊಂಡು ಅವನಿಗೆ ಸ್ಥಳೀಯ ಆಡಳಿತದಲ್ಲಿರುವ ಅರಿವು ಮತ್ತು ಭಾಗವಹಿಸುವಿಕೆಯಿಂದ ಕೆಲಸ ಕಾರ್ಯದ ಪರಿಣಾಮವನ್ನು ಅಳೆಯಲಿಕ್ಕೆ ನಗರಸಭೆಯಲ್ಲಿ ೧೨೦ ಮತ್ತು ಪಟ್ಟಣ ಪಂಚಾಯಿತಿಯಲ್ಲಿ ೮೦ ಕುಟುಂಬಗಳನ್ನು ಹಾಗೂ (೧೨೦/೩೫=೩.೪೨ ಮತ್ತು ೮೦/೨೦=೪) ಅಧ್ಯಯನದ ಸಂಪೂರ್ಣ ಮಾಹಿತಿಯ ದೃಷ್ಟಿಯಿಂದ ಹಳೆ ಸದಸ್ಯರನ್ನೊಳಗೊಂಡ ೨೦೦೯ರಿಂದ ೨೦೧೪ರ ಅವಧಿಯನ್ನು ಅಧ್ಯಯನಕ್ಕೆ ಆಯ್ಕೆಮಾಡಿಕೊಂಡಿದ್ದೇನೆ. ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡ ಎರಡು ನಗರ ಸ್ಥಳೀಯ ಸಂಸ್ಥೆಗಳು ಬೇರೆ ಬೇರೆ ಕಾರಣಗಳಿಂದ ಭಿನ್ನವಾಗಿದೆ. ಆದ್ದರಿಂದ ಇದೊಂದು ಸ್ಪಷ್ಟ ತುಲಾನಾತ್ಮಕ ಅಧ್ಯಯನವಾಗಿದೆ. ಇದರಲ್ಲಿ ಜಾತಿವಾರು ಮತ್ತು ಲಿಂಗವಾರು ಮಾದರಿ ಬರುವಂತೆ ಆಯ್ಕೆ ಮಾಡಿಕೊಳ್ಳಲಾಗಿದೆ. ಈ ರೀತಿಯಾಗಿ ವಿವಿಧ ಸಂಶೋಧನಾ ವಿಧಾನಗಳನ್ನು ಬಳಸಿಕೊಂಡು ಮಾಹಿತಿ ಸಂಗ್ರಹಿಸಿ ಅದನ್ನು ಕಂಪ್ಯೂಟರ್ ಮೂಲಕ ಹಾಗೂ ಅಂಕಿ-ಅಂಶಗಳ ಆಧಾರದ ಮೇಲೆ ವಿಶ್ಲೇಷಿಸಿ ಗ್ರಂಥ ವಿಮರ್ಶೆ, ವಿಶ್ಲೇಷಣೆ, ನಡೆಸಿದ ಅಧ್ಯಯನದ ವಿಧಾನವು ಪ್ರಸ್ತುತ ಪ್ರಬಂಧದ್ದಾಗಿದೆ.

**೫. ಅಧ್ಯಯನದ ಮಿತಿಗಳು**

ಪ್ರಸ್ತುತ ಮಹಾ ಪ್ರಬಂಧವು ಕೆಲವು ಮಿತಿಗಳನ್ನು ಒಳಗೊಂಡಿದೆ. ಅಧ್ಯಯನವನ್ನು ಬಳ್ಳಾರಿ ಜಿಲ್ಲೆಯ ಹೊಸಪೇಟೆ ನಗರಸಭೆ ಮತ್ತು ಕೂಡ್ಲಿಗಿ ಪಟ್ಟಣ ಪಟ್ಟಣ ಪಂಚಾಯಿತಿಗೆ ಸೀಮಿತಗೊಳಿಸಲಾಗಿದೆ. ಅಧ್ಯಯನವು ಕೇವಲ ನಗರ ಸ್ಥಳೀಯ ಸರ್ಕಾರದಲ್ಲಿಯ ಅಭಿವೃದ್ಧಿಯ ಪ್ರಸ್ತುತ ವಸ್ತುಸ್ಥಿತಿಯನ್ನು ೨೦೦೮-೦೯ರಿಂದ ೨೦೧೩-೧೪ರ ಅವಧಿಗೆ ಸೀಮಿತಗೊಳಿಸಲಾಗಿದೆ. ಈ ಅಧ್ಯಯನವು ಪ್ರಸ್ತುತ ಬಳ್ಳಾರಿ ಜಿಲ್ಲೆಯಲ್ಲಿರುವ ಹೊಸಪೇಟೆ ನಗರಸಭೆ ಮತ್ತು ಕೂಡ್ಲಿಗಿ ಪಟ್ಟಣ ಪಂಚಾಯಿತಿಯಲ್ಲಿರುವ ಚುನಾಯಿತ ಸದಸ್ಯರು ನಗರ ಅಭಿವೃದ್ಧಿಗಾಗಿ ಹೇಗೆ ಕೆಲಸ ಕಾರ್ಯಗಳನ್ನು ಮಾಡಿದ್ದಾರೆ ಮತ್ತು ನಗರ ಜನರು ಹೇಗೆ ಅಭಿವೃದ್ಧಿಯಲ್ಲಿ ಪಾಲ್ಗೊಳ್ಳುತ್ತಾರೆ ಎನ್ನುವುದನ್ನು ನೋಡುವುದಾಗಿದೆ. ಸಂಶೋಧಕರ ಸೀಮಿತ ಅವಧಿ ಮತ್ತು ಸಂಪನ್ಮೂಲಗಳ ಹಿನ್ನೆಲೆಯಲ್ಲಿ ಹೊಸಪೇಟೆ ನಗರಸಭೆಯ ೧೨೦ ಕುಟುಂಬಗಳನ್ನು ಮತ್ತು ಕೂಡ್ಲಿಗಿ ಪಟ್ಟಣ ಪಂಚಾಯಿತಿಯ ೮೦ ಕುಟುಂಬಗಳನ್ನು ಹಾಗೂ ಅಭಿವೃದ್ಧಿಯ ಪಾಲುದಾರರಾದ ಕೂಡ್ಲಿಗಿ ಪಟ್ಟಣ ಪಂಚಾಯಿತಿಯ ೨೦ ಜನಪ್ರತಿನಿಧಿಗಳನ್ನು, ಹೊಸಪೇಟೆ ನಗರಸಭೆಯ ೩೫ ಜನಪ್ರತಿನಿಧಿಗಳನ್ನು ಒಟ್ಟು ೧೨೦ ಪ್ರಶ್ನಾವಳಿಯ ಮೂಲಕ

ಅಧ್ಯಯನವನ್ನು ಸೀಮಿತಗೊಳಿಸಲಾಗಿದೆ. ಅಲ್ಲದೆ ಇದೊಂದು ತುಲಾನಾತ್ಮಕ ಅಧ್ಯಯನವಾಗಿದೆ. ಒಟ್ಟಾರೆಯಾಗಿ ಪ್ರಸ್ತುತ ಅಧ್ಯಯನವು ಎಂಪೆರಿಕಲ್ ಅಧ್ಯಯನವಾಗಿರುವುದರಿಂದ ಸಂಗತಿಗಳು ಕ್ಷೇತ್ರದಲ್ಲಿಯ ಮತ್ತು ಸೈದ್ಧಾಂತಿಕ ಮಾಹಿತಿಯನ್ನೇ ಅವಲಂಬಿಸಿರುತ್ತದೆ. ಅಧ್ಯಯನ ಕ್ಷೇತ್ರದಲ್ಲಿ ಲಭ್ಯವಾಗುವ ಮಾಹಿತಿಯ ನಿಖರತೆಯ ಆಧಾರದ ಮೇಲೆ ಸಂಶೋಧನಾ ವಿಷಯದ ಫಲಿತಗಳು ವಿಶ್ಲೇಷಣೆಯಾಗುತ್ತವೆ. ಆದರೆ ಮಾಹಿತಿ ನೀಡುವುದರ ವಿಷಯಗಳನ್ನು ಅಧ್ಯಯನದ ಮಿತಿಯಾಗಿದೆ. ವಸ್ತುಸ್ಥಿತಿಯನ್ನು ಕಂಡುಕೊಳ್ಳುವಾಗ ಕ್ಷೇತ್ರದ ಮಾಹಿತಿಯನ್ನೆ ಅವಲಂಬಿಸಲಾಗಿದೆ.

## 6. ಅಧ್ಯಯನದ ವಿನ್ಯಾಸ

ಅಧ್ಯಯನವನ್ನು ಏಳು ಭಾಗಗಳಾಗಿ ಮಾಡಲಾಗಿದೆ. ಅಧ್ಯಯನದ ಪ್ರಸ್ತಾವನೆ, ಸಮಸ್ಯೀಕರಣ, ಸಂಶೋದನಾ ಪ್ರಶ್ನೆಗಳು, ಅಧ್ಯಯನದ ಉದ್ದೇಶಗಳು, ವಿಧಾನ, ಮಿತಿ ಹಾಗೂ ಅಧ್ಯಯನ ಒಂದರಲ್ಲಿ ಅಧ್ಯಯನದ ಸೈದ್ಧಾಂತಿಕ ಚೌಕಟ್ಟನ್ನು ಚರ್ಚಿಸಲಾಗಿದೆ. ಅಧ್ಯಾಯ ಎರಡರಲ್ಲಿ ನಗರ ಸ್ಥಳೀಯ ಸಂಸ್ಥೆಗಳ ಬೆಳವಣಿಗೆಯನ್ನು ಗುರುತಿಸುವುದಾಗಿದೆ. ಅಧ್ಯಾಯ ಮೂರರಲ್ಲಿ ಅಧ್ಯಯನ ಕ್ಷೇತ್ರದ ಪರಿಚಯದಲ್ಲಿ ಜಿಲ್ಲೆಯ, ಕೃಷಿ, ಜನಸಂಖ್ಯೆ, ಜನಸಾಂದ್ರತೆ, ಭೂ ಹಿಡುವಳಿ, ಭೂ ಒಡೆತನ, ಕೃಷಿ ಕಾರ್ಮಿಕರ ಸ್ಥಿತಿ, ತಾಲ್ಲೂಕಿನ, ಎರಡು ನಗರ ಸ್ಥಳೀಯ ಸಂಸ್ಥೆಗಳ ಸಾಮಾಜಿಕ ಮತ್ತು ಆರ್ಥಿಕ ಪರಿಸ್ಥಿತಿಯ ವಿವರಗಳನ್ನು ನೀಡಲಾಗಿದೆ. ಅಧ್ಯಾಯ ನಾಲ್ಕರಲ್ಲಿ ನಗರ ಸ್ಥಳೀಯ ಸಂಸ್ಥೆಗಳ ಅಭಿವೃದ್ಧಿ ಚಟುವಟಿಕೆಗಳನ್ನು ವಿಶ್ಲೇಷಿಸಲಾಗಿದೆ. ಅಧ್ಯಾಯ ಐದು ಮತ್ತು ಆರರಲ್ಲಿ ಕ್ಷೇತ್ರ ಕಾರ್ಯದಲ್ಲಿ ಸಂಗ್ರಹಿಸಿದ ಮಾಹಿತಿ ವಿಶ್ಲೇಷಣೆ, ಅಧ್ಯಯನದ ಫಲಿತಾಂಶಗಳು, ಅಧ್ಯಯನದ ವಸ್ತುವಿಗೆ ಸಂಬಂದಿಸಿದ ಸಮಸ್ಯೆಗಳು ಮತ್ತು ಅದಕ್ಕೆ ಸೂಕ್ತ ಪರಿಹಾರ ಮತ್ತು ಸಲಹೆಗಳನ್ನು ಚರ್ಚಿಸಲಾಗಿದೆ. ಅಧ್ಯಾಯ ಏಳರಲ್ಲಿ ಹಣಕಾಸಿನ ನಿರ್ವಹಣೆಯನ್ನು ಕುರಿತು ಚರ್ಚಿಸಲಾಗಿದೆ. ಸಮಾರೋಪದಲ್ಲಿ ಅಧ್ಯಯನದ ಫಲಿತಗಳು ಮತ್ತು ಸಲಹೆ ಸೂಚನೆಗಳನ್ನು ನೀಡಲಾಗಿದೆ.

## ಕೊನೆ ಟಿಪ್ಪಣಿಗಳು

೧. ಮೈಸೂರು ಗ್ಯಾಜೆಟ್, ಜನೆವರಿ ೧, ಪಾರ್ಟ್ ೯.೧. ಪುಟ.೫೧-೬೦, ಗವರ್ನ್‌ಮೆಂಟ್ ಆಫ್ ಮೈಸೂರು, ವೈಡ್ ಗವರ್ನ್‌ಮೆಂಟ್ ಆರ್ಡರ್ ನಂ. ಎಲ್. ೪೫೪೨-೭೪, ಎಲ್. ಬಿ. ೧೦೪-೮೪-೧ ಡೇಟೆಡ್ ೨೩-೧೨-೧೯೨೪ ಇನ್ ದಿ ಮೈಸೂರು ಗ್ಯಾಜೆಟ್, ಪಾರ್ಲ ೯-೧೧-೧೯೨೫, ಪು.೫-೧೦.

೨. ಮೈಸೂರು ಸರಕಾರ ಕರ್ನಾಟಕ ಗ್ರಾಮಪಂಚಾಯಿತಿ ಮತ್ತು ಲೋಕಲ್ ಬೋರ್ಡ್‌ಗಳ ಕಾಯಿದೆ-೧೯೫೯, ಕರ್ನಾಟಕ ಆಕ್ಟ್‌ನ ೧೦/೧೯೫೫, ಮೈಸೂರು ಸರ್ಕಾರ, ಮೈಸೂರು, ೧೯೫೯.

೩. ಎನ್.ಟಿ. ಸೋಮಶೇಖರ್, ಎಕಾನಮಿಕ್ ಡೆವಲಪ್ಮೆಂಟ್, ಹಿಮಾಲಯ ಪಬ್ಲಿಷಿಂಗ್ ಹೌಸ್, ನವದೆಹಲಿ, ೨೦೦೩, ಪುಟ.೧೫.

೪. ಅದೇ ಪುಸ್ತಕ, ಪು.೧೮-೨೮.

೫. ಮಾನವ ಅಭಿವೃದ್ಧಿ ವರದಿ, ಕರ್ನಾಟಕ ಸರ್ಕಾರ, ಬೆಂಗಳೂರು, ೨೦೦೫,

೬. ಪ್ರದೀಪ್ ಸಚದೇವ್, ಅರ್ಬನ್ ಲೋಕಲ್ ಗವರ್ನಮೆಂಟ್ ಆ್ಯಂಡ್ ಅಡ್ಮೀನಿಸ್ಟ್ರೇಶನ್ ಇನ್ ಇಂಡಿಯಾ, ಅಲಹಾಬಾದ್ ಕೀತಾಬ್ ಮಹಲ್, ೧೯೯೩, ಪು.೫೭.

೭. ಜೆ. ಎಮ್. ಟನ್ನರ್ ಮತ್ತು ಪೈಲೀಸ್ ಬಿ. ಎವೆಲೆತ್, ಅರ್ಬನೈಜೇಶನ್ ಆಂಡ್ ಗ್ರೋಥ್, ಆಕ್ಸ್‌ಫರ್ಡ್ ಯುನಿವರ್ಸಿಟಿ ಪ್ರೆಸ್, ೧೯೭೬, ಪುಟ. ೩೪-೯೭.

೮. ಡೇವಿಡ್ ಸೈಮನ್, ಡೆವಲ್ಪಮೆಂಟ್ ರೀಕನ್ಸಿಡರ್ಡ್ ನ್ಯೂ ಡೈರ್‌ಕ್ಷನ್ ಇನ್ ಡೆವಲ್ಪೆಮೆಂಟ್ ಥಿಂಕಿಂಗ್, ಜಿಯಾಗ್ರಾಫಿಕ್ ಆನಾಲರ್, ಸಂ.೭೯, ನಂ.೪, ಪುಟ. ೧೮೩-೨೦೧.

೯. ರೋಸ್ಟೋ ಡಬ್ಲ್ಯು ಡಬ್ಲ್ಯು, ದ ಸ್ಟೇಜಸ್ ಆಫ್ ಎಕನಾಮಿಕ ಗ್ರೋಥ್, ಕೇಂಬ್ರಿಡ್ಜ್ ಯೂನಿವರ್ಸಿಟಿ ಪ್ರೆಸ್, ಸಿಕಾರಡೆಲ್, ೧೯೭೧.

೧೦. ಪಿ.ಸಿ. ಸರ್ಕಾರ, ರೀಜನಲ್ ಡಿಸ್‌ಪಾರಿಟಿಸ್ ಇನ್ ಇಂಡಿಯಾ ಇಸ್ಯೂಜ್ ಆ್ಯಂಡ್ ಮೇಜರಮೆಂಟ್, ಹಿಮಾಲಯ ಪಬ್ಲಿಶಿಂಗ್ ಹೌಸ್, ಮುಂಬೈ, ೧೯೯೯, ಪು-೪.

೧೧. ಆರ್.ಕೆ. ಸಪರೊ, ಡೆವಲಪ್‌ಮೆಂಟ್ ಎಡ್ಮೀನಿಸ್ಟ್ರೇಶನ್, ಸ್ಟಲಿಂಗ್ ಪ್ರಕಾಶನ, ನವದೆಹಲಿ, ೧೯೯೬, ಪು. ೬-೮.

೧೨. ಠಾಕೂರ್ ಆ್ಯಂಡ್ ಸಿನ್ಹ, ಡಿಸ್ಟ್ರೀಕ್ಟ್ ಪ್ಲ್ಯಾನಿಂಗ್ ಆ್ಯಂಡ್ ಪಂಚಾಯತ್ ರಾಜ್, ಅನಮೋಲ ಪಬ್ಲಿಕೇಷನ್ಸ್ ಪ್ರೈ.ಲಿ., ನವದೆಹಲಿ, ೨೦೦೩.

೧೩. ಡಾ. ಎಂ. ಚಂದ್ರಪೂಜಾರಿ, ರಾಜಕೀಯ ಬಡತನ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೦.

೧೪. ಅಶೋಕ ಮುಖ್ಯೋಪಾಧ್ಯಾಯ, ಮುನ್ಸಿಪಲ್ ಪರ್ಸನಲ್ ಎಡ್ಮಿನಿಸ್ಟ್ರೇಶನ್, (ಅರ್ಬನ್ ಅಧ್ಯಯನ ಕೇಂದ್ರ), ಐಐಪಿಎ. ನವದೆಹಲಿ, ೧೯೮೫, ಪುಟ. ೧೦೪-೧೦೫.

೧೫. ಗುನ್ನರ್ ಮಿರಾಡಲ್, ಏಶಿಯನ್ ಡ್ರಾಮಃ ಯಾನ್ ಎನ್ಕ್ವಯರಿ ಇನ್ ಟು ದ ಪಾವರ್ಟಿ ಆಫ್ ನೇಶನ್ಸ್, ಹರ್ಮಾಂಡ್ಸವರ್ಥ, ಪೆಂಗ್ವಿನ್ ಪ್ರಸ್ತಾಕಲಾಯ, ೧೯೬೮, ಪುಟ. ೮೯೫-೯೦೦.

೧೬. ಕೆ.ಎಸ್. ಪಾರ್ಥಸಾರಥಿ, ಮತ್ತೊಂದು ಗಣರಾಜ್ಯ ದಿನ ಒಂದಿಷ್ಟು ಚಿಂತನೆಗಳು, ಹೊಸತು (ವಿಶೇಷ ಸಂಚಿಕೆ), ನವ ಕರ್ನಾಟಕ ಪ್ರಕಾಶ, ಬೆಂಗಳೂರು, ಪುಟ.೨೧೩-೨೨೨, ಜನವರಿ-೨೦೧೪, ಸಂಪುಟ-೧೫, ಸಂಚಿಕೆ-೬.

ಪ್ರಬಂಧದ ಮೊದಲು ಪ್ರಸ್ತಾವನೆಯಲ್ಲಿ ಈಗಾಗಲೇ ಆಗಿರುವ ಅಧ್ಯಯನಗಳನ್ನು ವಿಮರ್ಶಿಸಲಾಗಿದ್ದು (ಸಮಸ್ಯೀಕರಣ) ಅಧ್ಯಯನಕ್ಕೆ ಪೂರಕವಾಗಿ ಅಧ್ಯಯನದ ಪ್ರಶ್ನೆಗಳು, ಪ್ರಶ್ನೆಗಳಿಗೆ ಸಂಬಂಧಿಸಿದಂತೆ ಅಧ್ಯಯನದ ಉದ್ದೇಶಗಳನ್ನು ರಚಸಿಕೊಳ್ಳಲಾಗಿದೆ ಹಾಗೂ ಅಧ್ಯಯನದ ವಿಧಾನ ಮತ್ತು ಕೊನೆಯಾದಾಗಿ ಅಧ್ಯಯನ ಮಿತಿಯ ಮೂಲಕ ಮಹಾ ಪ್ರಬಂಧವನ್ನು ವಿಶ್ಲೇಷಿಸಲಾಗಿದೆ. ಪ್ರಸ್ತುತ ಅಧ್ಯಯನದ ಉದ್ದೇಶವು ಸಂಶೋಧನಾ ವಸ್ತು ವಿಷಯಕ್ಕೆ ಸಂಬಂಧಿಸಿದಂತೆ ಈಗಾಗಲೇ ಆಗಿರುವ ಅಧ್ಯಯನಗಳನ್ನು ವಿಮರ್ಶೆ ಮಾಡಲಾಗಿದ್ದು, ಇದೇ ಮಹಾಪ್ರಬಂಧದ ಪರಿಕಲ್ಪನಾತ್ಮಕ ಅಥವ ಸೈದ್ಧಾಂತಿಕ ನೆಲೆಯೂ ಆಗಿದೆ. ಸಾಹಿತ್ಯ ಪರಾಮರ್ಶೆಯು ಜಾಗತಿಕ, ರಾಷ್ಟ್ರೀಯ ಹಾಗೂ ಪ್ರಾದೇಶಿಕ ಅಥವಾ ಸ್ಥಳೀಯ ದೃಷ್ಟಿಕೋನದ ಅಧ್ಯಯನಗಳನ್ನು ಒಳಗೊಂಡಿದೆ. ಇದರೊಂದಿಗೆ ಅಧ್ಯಯನದ ವಸ್ತು ವಿಷಯಕ್ಕೆ ಸಂಬಂಧಿಸಿದಂತೆ ಅಧ್ಯಯನಗಳನ್ನು ನಗರೀಕರಣ ಸಿದ್ಧಾಂತದ ಮೂಲಕ ಮತ್ತು ನಗರ ಸ್ಥಳೀಯ ಸಂಸ್ಥೆಗಳಿಗೆ ಸಂಬಂಧಿಸಿದ ಚುನಾಯಿತ ಸದಸ್ಯರು ಮತ್ತು ನಗರ ಪ್ರದೇಶದ ಕುಟುಂಬಗಳ ಭಾಗವಹಿಸುವಿಕೆ, ಅರಿವು ಮತ್ತು ಅಭಿವೃದ್ಧಿ ಎಂಬ ಮೂರು ಪರಿಭಾಷೆಯ ಮೇಲೆ ನನ್ನ ಅಧ್ಯಯನವನ್ನು ನೋಡುತ್ತಿದ್ದೇನೆ. ಇದನ್ನು ಮಹಾ ಪ್ರಬಂಧದಲ್ಲಿ ವಿಸ್ತೃತವಾಗಿ ಚರ್ಚಿಸಲಾಗಿದೆ.

**ನಗರೀಕರಣ ಸಿದ್ಧಾಂತ**

೧೯ನೇ ಶತಮಾನದಲ್ಲಿ ಪಶ್ಚಿಮದಲ್ಲಿ ಉದ್ಭವವಾದ ನಗರ ಇವತ್ತಿಗೂ ಆಫ್ರಿಕಾ, ಏಷ್ಯಾ ಹಾಗೂ ಪ್ರಮುಖ ಲ್ಯಾಟಿನ್ ಅಮೇರಿಕಾ ನಗರಗಳನ್ನೊಳಗೊಂಡಿದೆ. ಕೇವಲ ಕಾರ್ಖಾನೆಗಳನ್ನು ಒಳಗೊಂಡಿರುವುದಕ್ಕೆ ಕೈಗಾರೀಕರಣವೆನ್ನುವುದಿಲ್ಲ. ಇನ್ನು ಹಲವು ನಗರಗಳು ಕಾರ್ಖಾನೆಗಳನ್ನೇ ಹೊಂದಿರದಿದ್ದರೂ ಆ ನಗರವು ಕೈಗಾರೀಕರಣದಿಂದಲೇ ಅಭಿವೃದ್ಧಿ ಹೊಂದಿದೆಯೆಂದು ತಿಳಿಯಲಾಗಿದೆ. ಕೈಗಾರೀಕರಣ ನಗರವು ಕೇವಲ ಕಾರ್ಖಾನೆಗಳನ್ನಷ್ಟೇ ಒಳಗೊಂಡಿರದೇ ಸಂಕೀರ್ಣವಾದತಂತಹ ಸಾಮಾಜಿಕ ಮನೋವೃತ್ತಿ, ಉದ್ದೇಶ, ಆದರ್ಶ ಹಾಗೂ ರಚನೆಗಳಿಂದ ಕೂಡಿದ ಪಾಶ್ಚಿಮಾತ್ಯ ನಾಗರೀಕತೆಯ ಲಕ್ಷಣಗಳನ್ನು ಮೈಗೂಡಿಸಿಕೊಂಡಿದೆ. ಪೂರ್ವಯೋಜನಾಧಿಕಾರಯುತದಂತೆ ಪ್ರಾಚೀನ

ನಗರಗಳ ಕಣ್ಮರೆ, ಮಧ್ಯಕಾಲೀನ ನಗರಗಳು, ಪ್ರಾಚೀನ ಅವಶೇಷಗಳುಳಿದ ನಗರಗಳನ್ನು ಸಮಕಾಲೀನ ನಗರಗಳ ಚರ್ಚೆಯಲ್ಲಿ ಹಾಗೂ ಬೆಳವಣಿಗೆಯಲ್ಲಿ ಬಳಸಿಕೊಳ್ಳಲಾಗಿದೆ. ಪೂರ್ವ ಕೈಗಾರೀಕೃತ ನಗರದ ಬೆಳವಣಿಗೆಯು ಐತಿಹಾಸಿಕ ನಗರದ ಬೆಳವಣಿಗೆಯನ್ನವಲಂಬಿಸಿದೆ. ಕೈಗಾರೀಕರಣವು ನಗರೀಕರಣದ ಅಲೆಯನ್ನು ಹುಟ್ಟುಹಾಕಿತು. ಇದು ಜೋರ್ಡಾನ್‌ನ ಹೇಳಿಕೆಯಿಂದ ಇಡೀ ಪ್ರಪಂಚದ ಖಂಡಗಳೂ ೫೦೦೦ ವರ್ಷಗಳ ನಂತರ ಪಶ್ಚಿಮದಡೆ ಸಾಗುತ್ತದೆ. ೧೮೦೦ರ ಮುಂಚೆಯೂ ನಗರಗಳು ಇದ್ದಿರುವುದನ್ನು ನಾವು ಕಾಣಬಹುದು. ಉದ್ದಿಮೆಗಳ ನಗರದ ಬೇರುಗಳನ್ನು ಪೂರ್ವ ಇತಿಹಾಸದಲ್ಲಿ ನೋಡಬಹುದು. ನಗರೀಕರಣ ಸಿದ್ಧಾಂತದ ಪ್ರಮುಖ ಉದ್ದೇಶವನ್ನು ಇಂದಿನ ನಗರದ ಇತಿಹಾಸವನ್ನು ಕೂಲಂಕುಶವಾಗಿ ಪರಿಶೀಲಿಸಿದಾಗ ತಿಳಿಯುತ್ತದೆ. ಕೈಗಾರೀಕರಣವಾದಂತೆ ನಗರದ ವಿನ್ಯಾಸವೂ ಬದಲಾಗುತ್ತಾ ಹೋಯಿತು. ಕೈಗಾರೀಕ ತಂತ್ರಜ್ಞಾನದ ಬೆಳವಣಿಗೆಯೂ ನಗರದ ಜನಸಂಖ್ಯೆಯ ಗಾತ್ರದಲ್ಲಿ ಹೆಚ್ಚಳವನ್ನುಂಟು ಮಾಡಿತು.[೧] ತಂತ್ರಜ್ಞಾನದಲ್ಲಿ ಬದಲಾವಣೆ, ಶಿಕ್ಷಣ ಹಾಗೂ ಆರೋಗ್ಯವು ಬಲವಾದ ಪ್ರಭಾವದಿಂದ ಹೊಸ ಸಮಾಜವನ್ನು ಕಟ್ಟುವುದರೊಂದಿಗೆ ಹೊಸ ರೂಪ ಕೊಟ್ಟು ಹೊಸ ಪರಿಸರವನ್ನು ಸೃಷ್ಟಿ ಮಾಡಿತು.

ಈ ಐತಿಹಾಸಿಕ ಪರಿಮಿತಿಯನ್ನು ನಿಸ್ಸಂದೇಹವಾಗಿ ಹಲವರು ಅಲ್ಲಗಳೆದಿರುವುದಲ್ಲದೇ ಹಾಗೂ ನಗರದ ಇತಿಹಾಸದ ಬೆಳವಣಿಗೆಗೆ ಪೂರಕ ಪ್ರತಿಕ್ರಿಯೆ ನೀಡಿದ್ದಾರೆ. ಇವರಲ್ಲಿ ಜೋರ್ಡಾನ್, ಚಿಲ್ಡೆ ಹಾಗೂ ಲೆವಿಸ್ ಮುನ್‌ಪೋರ್ಡ್ ಸೇರಿದ್ದಾರೆ. ಇವರ ಪ್ರಕಾರ ನಗರಗಳ ಪರಿಶೀಲನೆಯನ್ನು ಇಡೀ ಮಾನವನ ಇತಿಹಾಸದ ದೃಷ್ಟಿಕೋನದಿಂದ ನೋಡಲು ಬಯಸುತ್ತಾರೆ. ಅವರ ಪ್ರಕಾರ ನಗರವು ಮೊದಲಿನ ಸ್ಥಿತಿಯಿಂದ ಕಾಲಕ್ರಮೇಣದಲ್ಲಿ ಮಾರ್ಪಾಡಾಗುವುದು. ಈ ವಿಚಾರದ ಬಗ್ಗೆ ಎರಡೂ ರೀತಿಯ ಅಭಿಪ್ರಾಯವಿದೆ. ಹಾಗೂ ಎರಡೂ ವಿಚಾರಗಳೂ ವೈಜ್ಞಾನಿಕ ಸಿದ್ಧಾಂತವನ್ನೇ ಅನುಸರಿಸಿದೆ. ಎರಡು ನಗರಗಳ ಪ್ರಮುಖ ಭಿನ್ನತೆಗಳನ್ನು ಪೂರ್ವಚರಿತ್ರೆಯನ್ನಾಧರಿಸಿ ಮಹತ್ವವನ್ನು ನೀಡಿಲ್ಲ. ಚರಿತ್ರೆಯ ದೃಷ್ಟಿಕೋನವು ಬೆಳೆದಂತೆಲ್ಲ ನಗರದ ಸೈದ್ಧಾಂತಿಕ ವಿಶ್ಲೇಷಣೆಗಳು ಸಂಕುಚಿತಗೊಳ್ಳುತ್ತದೆ. ಇದು ಜನಸಂಖ್ಯೆಯನ್ನು ಪ್ರತಿ ನಗರದ ಜನಸಂಖ್ಯೆಯಿಂದ ವಿಂಗಡಿಸುತ್ತದೆ. ಅದೇ ರೀತಿಯಾಗಿ ಬಿಲ್ಡೆಯು ಒಂದು ನಗರದ ಗುಣ ಲಕ್ಷಣಗಳನ್ನು ಅಳೆಯಲು ವೃತ್ತಿ ಕೌಶಲ್ಯವನ್ನು ಪರಿಗಣಿಸುತ್ತಾನೆ. ನಗರದ ಉತ್ಸುಕತೆ ಒಂದು ಪ್ರಶ್ನೆಯಾದರೂ ಇದನ್ನು ಅಲ್ಲಗಳೆಯುವಂತಿಲ್ಲ. ಈ ವಿಚಾರವು ಪ್ರಸ್ತುತ ನಗರದ ಅಭಿಪ್ರಾಯಗಳಿಗೆ ಸರಿ ಹೊಂದುತ್ತವೆ. ಆದರೆ ಇಲ್ಲಿ ಅಧ್ಯಯನವು ಎಲ್ಲಾ ನಗರಗಳನ್ನೊಳಗೊಂಡಿರುತ್ತದೆ. ಜೊತೆಗೆ ನಶಿಸಿದ ಅಥವಾ ಬೆಳೆಯುತ್ತಿರುವ ಪ್ರದೇಶವನ್ನೊಳಗೊಂಡಿರುತ್ತದೆ. ಒಟ್ಟಾರೆ ಫಲಿತಾಂಶದಲ್ಲಿ ನಗರವು ತುಂಬಾ ವಿಸ್ತಾರವಾದದ್ದಾಗಿದ್ದು ಮತ್ತು ಸಾಮಾಜಿಕ ವ್ಯತ್ಯಾಸಗಳನ್ನು ಅವುಗಳ ಜನಸಂಖ್ಯೆಯಲ್ಲಿ ಕಾಣುತ್ತೇವೆ.

ಎರಡನೆಯ ಪ್ರತಿಪಾದನೆಯ ಪ್ರಕಾರ ನಗರಗಳ ಹುಟ್ಟಿನ ಚಿತ್ರಣವನ್ನು ಸಮಗ್ರ ನಗರೀಕರಣ ಸಿದ್ಧಾಂತದಲ್ಲಿ ಕಾಣುತ್ತೇವೆ. ಇದು ಇಂದಿನ ನಗರಗಳ ಸೂಕ್ಷ್ಮ ವಿಶ್ಲೇಷಣೆಯನ್ನು ಪಡೆಯುತ್ತದೆ. ಹಾಗೆ ಮುಂದೆ ಯಾವ ಸ್ಥಿತಿಯನ್ನು ತಲುಪುತ್ತವೆಂಬುದನ್ನು ತಿಳಿಸಲಾಗುತ್ತದೆ. ದುರಾದೃಷ್ಟವಶಾತ್ ಇಂದು ಪ್ರಸ್ತುತ ನಗರಗಳಲ್ಲಿ ಪುರಾತನ ನಗರಗಳಲ್ಲಿದ್ದ ವಸ್ತುಗಳನ್ನು ಹೋಲುವ ವಸ್ತುಗಳ ಹುಡುಕಾಟ ಮಾಡಬೇಕಾಗಿದೆ. ಅಥವಾ ನಗರದ ಗುಣಲಕ್ಷಣಗಳ ಬಗ್ಗೆ ನೇರವಾಗಿ ಗಮನಹರಿಸಬೇಕಾಗಿದೆ.

ಈ ಎರಡನ್ನೂ ಒಂದೇ ಸಮಯದಲ್ಲಿ ಮಾಡುವುದು ಕಷ್ಟಕರ. ಈ ಹಿನ್ನೆಲೆಯಲ್ಲಿ ನಗರದ ಸಮಾಜದ ಆಳವಾದ ಅಧ್ಯಯನದಿಂದ ಪ್ರಸ್ತುತ ನಗರಗಳ ಮಾಹಿತಿಯನ್ನು ತಿಳಿಯಲು ಸಾಧ್ಯ. ಒಮ್ಮೆ ಕೈಗಾರೀಕೃತ ನಗರದ ಸಾಮಾಜಿಕ ಭೌತಿಕತೆಯನ್ನು ಉತ್ತಮವಾಗಿ ಅರಿತುಕೊಂಡಾಗ ಮಾತ್ರ ಪುರಾತನ ಇತಿಹಾಸವನ್ನು ತಿಳಿಯಲು ಹಾಗೂ ಕೈಗಾರೀಕರಣ ನಗರ ಸಮಾಜದ ಮೂಲವನ್ನು ಅರಿಯಲು ಸಾಧ್ಯ.[೨] ಇಲ್ಲಿ ನನ್ನ ಉದ್ದೇಶ  ಕೈಗಾರೀಕೃತ(ಉದ್ದಿಮೆ) ನಗರದ ಹುಟ್ಟು ಸಂಪೂರ್ಣವಾಗಿ ಸ್ವತಂತ್ರವಾದದ್ದು ಅಂತೆಯೇ, ನಗರೀಕರಣದ ವಿಶ್ಲೇಷಣೆಯನ್ನು ನಗರ ಸಿದ್ಧಾಂತದೊಂದಿಗೆ ಸಮೀಕರಿಸಿ ಇಂದಿನ ನಗರ ಸ್ಥಳೀಯ ಸಂಸ್ಥೆಗಳನ್ನು ವಿಶ್ಲೇಷಣಾತ್ಮಕವಾಗಿ ಅಧ್ಯಯನ ಮಾಡುವುದಾಗಿದೆ.

ಈ ಹಿನ್ನೆಲೆಯಲ್ಲಿ ನಗರ ಸಿದ್ಧಾಂತವನ್ನು ನೋಡುತ್ತಾ ಹೋದಾಗ ಪಶ್ಚಿಮದಲ್ಲಿ ನಡೆದ ಕೈಗಾರಿಕಾ ನಗರ ಬೆಳವಣಿಗೆಯು ಹಾಗೂ ಇಂದು ಅಭಿವೃದ್ಧಿ ಹೊಂದದ ರಾಷ್ಟ್ರಗಳಲ್ಲಿ ನಡೆಯುತ್ತಿರುವ ಬೆಳವಣಿಗೆಯು ಒಂದೇ ವಿಧಾನವಾಗಿದೆ. ಇಲ್ಲಿ ಅವಧಿ ಮತ್ತು ಸ್ಥಳಗಳಲ್ಲಿ ವ್ಯತ್ಯಾಸವಿರಬಹುದು. ಈ ಆಧಾರವನ್ನು ಅನುಸರಿಸಿ ನಗರೀಕರಣದ ಸಿದ್ಧಾಂತವನ್ನು ತಯಾರಿಸಲಾಗಿದೆ. ಸಮಾಜಶಾಸ್ತ್ರಜ್ಞರಿಗೆ ಈ ಸಿದ್ಧಾಂತದ ಪ್ರಮುಖ ಅನುಕೂಲತೆಯೆಂದರೆ ಕೈಗಾರಿಕಾ ನಗರದಿಂದ ಉಂಟಾಗುವ ಹಲವಾರು ಸಾಮಾಜಿಕ ಬದಲಾವಣೆಗಳನ್ನು ತಿಳಿಯುವುದು ಇದರಿಂದ ಐತಿಹಾಸಿಕ ಹಾಗೂ ಸಾಂಸ್ಕೃತಿಕ ಬದಲಾವಣೆಗಳನ್ನು ಸುಲಭವಾಗಿ ತಿಳಿಯಬಹುದು. ಮೊಟ್ಟ ಮೊದಲ ಬಾರಿಗೆ ನಗರದ ಬಗ್ಗೆ ಅಧ್ಯಯನ ಮಾಡಬೇಕಾದರೆ ನಗರದ ಅಭಿವೃದ್ಧಿಗೆ ಕಾರಣವಾದ ಸಾಮಾಜಿಕ ಕಾರಣಗಳ ಬಗ್ಗೆ ತಿಳಿಯುವ ಅಗತ್ಯವಿದೆ. ಹಾಗೂ ಸಾಂಸ್ಕೃತಿಕ ಇತಿಹಾಸದಿಂದಾಗುವ ಪರಿಣಾಮಗಳ ಬಗ್ಗೆ ತಿಳಿಯುವುದು ನಂತರದ ವಿಷಯವಾಗಿದೆ. ಇಂದು ಮುಂದುವರೆದ ಪಶ್ಚಿಮದ ಕೈಗಾರಿಕಾ ನಗರವನ್ನು ಬೆಳೆಯುತ್ತಿರುವ ಏಷ್ಯಾ, ಆಫ್ರಿಕಾ ಮತ್ತು ಲ್ಯಾಟಿನ್ ಅಮೇರಿಕಾ ನಗರೀಕರಣದ ನಗರಕ್ಕೆ ಹೋಲಿಸಿದಾಗ ಇದನ್ನು ಪ್ರಾದೇಶಿಕ ಮಟ್ಟದಲ್ಲಿ ಪರಿಗಣಿಸದೇ ವಿಶ್ವ ಮಟ್ಟದಲ್ಲಿ ಪರಿಗಣಿಸಲಾಗುತ್ತಿದೆ. ಇಲ್ಲಿ ಅಭಿವೃದ್ಧಿ ಹೊಂದದ ರಾಷ್ಟ್ರಗಳ ಬೆಳವಣಿಗೆಯು ಯಾವ ಹಾದಿಯಲ್ಲಿ ಸಾಗುತ್ತಿದೆ ಎಂಬುದನ್ನು ತಿಳಿಯುವುದು ಮಾತ್ರವಲ್ಲ ಪಶ್ಚಿಮದ ನಗರಗಳು ಯಾವ ಹಾದಿಯಲ್ಲಿ ಬೆಳವಣಿಗೆಯಾಗುತ್ತಿದೆ ಎಂದು ತಿಳಿಯುವುದು ಮುಖ್ಯವಾಗಿದೆ. ಈ ಎಲ್ಲಾ ಪ್ರಮುಖ ಕಾರಣದಿಂದ ಈ ಸಿದ್ಧಾಂತವು ಅಧ್ಯಯನದ ದೃಷ್ಟಿಯಿಂದ ಅವಶ್ಯವಾಗಿದೆ.

ಮೊದಲನೆಯದಾಗಿ ಈ ಸಿದ್ಧಾಂತದ ಪ್ರಮುಖ ಗುರಿ ಹಂತ ಹಂತವಾಗಿ ನಗರ ಪ್ರದೇಶಗಳ ನಡುವಿನ ವ್ಯತ್ಯಾಸವನ್ನು ಅರಿಯುವುದು. ಇದರಲ್ಲಿ ನಾಲ್ಕು ಅಂಗಗಳನ್ನು ನಗರೀಕರಣ ಸಿದ್ದಾಂತ ಪ್ರಮುಖ ಅಂಶಗಳೆಂದು ಪರಿಗಣಿಸಲಾಗಿದೆ. ನಗರಗಳ ಬೆಳವಣಿಗೆ, ಕೈಗಾರೀಕರಣ, ಮಧ್ಯಮವರ್ಗದವರ ಅಧಿಕಾರ, ರಾಜಕೀಯ ಆದರ್ಶವನ್ನು ಸಾರಲು ರಾಷ್ಟ್ರೀಯ ಮನೋಭಾವ. ಈ ನಾಲ್ಕು ಅಂಶಗಳು ಕೈಗಾರಿಕಾ ನಗರದ ಉದ್ಬವಕ್ಕೆ ಪರಸ್ಪರ ಕಾರಣವಾಗಿವೆ. ಇಲ್ಲಿ ಅಧಿಕಾರ ವಿಭಜನೆಯ ಅವಶ್ಯಕತೆಯನ್ನು ಮನಗಣಲಾಗಿದ್ದು ಕೈಗಾರೀಕರಣವು ಕೇವಲ ಸಮಾಜಶಾಸ್ತ್ರಜ್ಞರ ಕಾರ್ಯವಲ್ಲ ಬದಲಾಗಿ ಆರ್ಥಿಕ ತಜ್ಞರು ಮತ್ತು ರಾಜಕೀಯ ತಜ್ಞರ ನಿರ್ವಹಣೆಯನ್ನು ಸಹ ಕಾಣಬಹುದಾಗಿದೆ. ಈ ಎಲ್ಲಾ ಸೂಕ್ಷ್ಮ ವಿಚಾರಗಳನ್ನು ಗಮನಿಸಿದಾಗ ತಿಳಿಯಬಹುದಾದ ಸಂಗತಿಯೆಂದರೆ ಹೆಚ್ಚಿನ ಕಾರ್ಯಗಳನ್ನು ನಿರ್ವಹಿಸುವ ಸಂದರ್ಭ ಬಂದಾಗ ಸಂಸ್ಥೆಗಳನ್ನು ವಿಕೇಂದ್ರೀಕರಣಗೊಳಿಸಿದಾಗ ವ್ಯವಸ್ಥಿತವಾದ

ಆಡಳಿತವನ್ನು ನೀಡಬಹುದಾಗಿದೆ.[೩] ಅಂದಹಾಗೆ, ಆರ್ಥಿಕ ತಜ್ಞರು ಕೈಗಾರೀಕರಣವನ್ನು ಬಂಡವಾಳದ ಶೇಖರಣೆ, ಕಾರ್ಮಿಕರ ನೇಮಕಾತಿ, ಉದ್ದಿಮೆದಾರತೆ ಮತ್ತು ತಾಂತ್ರಿಕ ಅಭಿವೃದ್ಧಿಯನ್ನು ಗಣನೆಗೆ ತೆಗೆದುಕೊಳ್ಳಬೇಕು ಹಾಗೆಯೇ ಸಮಾಜಶಾಸ್ತ್ರಜ್ಞರು ಕೈಗಾರಿಕಾ ಸಮಾಜದ ಸಾಮಾಜಿಕ ಸಂಬಂಧಗಳ ಬಗ್ಗೆ ಗಮನಹರಿಸಬೇಕಾಗಿದೆ ಎಂಬ ಅಂಶವನ್ನು ತಿಳಿಯಲಾಗಿದೆ.

**ನಗರದ ಬೆಳವಣಿಗೆ**

ಸಾಮಾಜಿಕ ಬದಲಾವಣೆಗಳ ಪರಿಕಲ್ಪನೆಯೇ ನಗರೀಕರಣ ಹಾಗೂ ಇದು ನಾಲ್ಕು ಅಂಶಗಳ ಒಂದು ವಿಧಾನವೂ ಹೌದು. ನಗರೀಕರಣವು ನಾಲ್ಕು ಅಂಶಗಳ ನಡುವಿನ ನಿರಂತರ ಪರಸ್ಪರ ಪರಿಣಾಮಗಳು ಹಾಗೂ ಇದರಿಂದ ಉಂಟಾಗುವ ರಾಷ್ಟ್ರೀಯ ಮನೋಭಾವನೆಯಿಂದ ನಗರ ಪ್ರದೇಶದ ಬೆಳವಣಿಗೆಗೆ ಸಹಕಾರಿಯಾಗಿದೆ. ನಗರೀಕರಣ ಎನ್ನುವ ಶಬ್ಧವನ್ನು ಬಳಸುವಾಗ ನಗರದ ಬೆಳವಣಿಗೆಯ ಪರಿಕಲ್ಪನೆಯನ್ನು ಅಧ್ಯಯನ ಮಾಡಬೇಕಾಗುತ್ತದೆ. ಈ ಬೆಳವಣಿಗೆಯು ಗ್ರಾಮೀಣ, ಕೃಷಿ ಸಮಾಜದಿಂದ ಕೈಗಾರೀಕ ನಗರವಾಗಿ ಮಾರ್ಪಾಡಾಗುವುದು. ೧೯೦೦ರಿಂದ ವಿಶ್ವವು ಜನಸಂಖ್ಯೆಯ ಸಾಂದ್ರತೆಯನ್ನು ಹೇರುವುದಲ್ಲದೇ ನಗರದಲ್ಲಿ ಜನಸಂಖ್ಯೆಯ ಹೆಚ್ಚಳವನ್ನು ಕಾಣುತ್ತಾ ಬರಲಾಗಿದೆ. ಪ್ರಪಂಚದ ನಗರಗಳು ಮಾತ್ರ ಅತೀ ವೇಗವಾಗಿ ಬೆಳೆಯುತ್ತಿರುವುದಲ್ಲದೇ ಅಭಿವೃದ್ಧಿ ಹೊಂದದ ರಾಷ್ಟ್ರಗಳ ನಗರಗಳೂ ತೀವ್ರಗತಿಯಲ್ಲಿ ಬೆಳೆಯುತ್ತಿರುವುದನ್ನು ನೋಡಲಾಗಿದೆ. ಉದಾಹರಣೆಗೆ ಕೊಲ್ಕತ್ತಾದ ಜನಸಂಖ್ಯೆಯು ೮,೪೮,೦೦೦ ದಿಂದ ೧೯೫೫ರ ಹೊತ್ತಿಗೆ ಮೂರು ದಶಲಕ್ಷಕ್ಕೆ ಹೆಚ್ಚಳವಾಯಿತು. ಬಾಂಬೈಯಲ್ಲಿ ೭,೭೬,೦೦೦ ಇದ್ದ ಜನಸಂಖ್ಯೆಯು ೧೯೫೫ರ ಹೊತ್ತಿಗೆ ೩.೫ ದಶಲಕ್ಷದಷ್ಟು ಏರಿಕೆಯಾಯಿತು. ಇದಲ್ಲದೇ ಇದು ದೇಶದ ಮುಖ್ಯ ಪಟ್ಟಣವಾಗಿಯೂ ಗುರುತಿಸಲ್ಪಟ್ಟಿತು. ನ್ಯಾನ್‌ಕಿಂಗ್‌ನಲ್ಲಿ ೧೯೦೦ರಲ್ಲಿ ಕೇವಲ ಜನಸಂಖ್ಯೆಯು ೨,೭೦,೦೦೦ ಇದ್ದದ್ದು ನಂತರ ಒಂದು ದಶಲಕ್ಷಕ್ಕೆ ಏರಿತು. ಬ್ಯೂನಸ್ ಐರಿಸ್ ೧೯೦೦ ರಲ್ಲಿ ೮,೨೧,೦೦೦ ಇದ್ದದ್ದು ನಂತರ ೩.೫ ದಶಲಕ್ಷಕ್ಕೆ ಏರಿಕೆಯನ್ನು ಕಂಡಿತ್ತು ಹಾಗೂ ಕೆರಿಯೋ ೫,೭೦,೦೦೦ ದಿಂದ ೨.೫ ದಶಲಕ್ಷಕ್ಕೆ ಹೆಚ್ಚಳವಾಯಿತು.ಈ ರೀತಿಯಾಗಿ ಪ್ರಮುಖ ಪಟ್ಟಣಗಳ ಜನಸಂಖ್ಯೆಯು ಹೆಚ್ಚುತ್ತಾ ಹೆಚ್ಚಿನ ಸ್ಥಳವನ್ನು ಆಕ್ರಮಿಸಿಕೊಂಡು ಹೋಗುವುದನ್ನು ಅಧ್ಯಯನಗಳಲ್ಲಿ ನೋಡಲಾಗಿದೆ. ಹಾಗೆಯೇ, ಟೋಕಿಯೋ–ಯಕೋಹಾಮ ನಗರಗಳ ಮಳಿಗೆಗಳು ೨ ದಶಲಕ್ಷದಿಂದ ೧೧ ದಶಲಕ್ಷಕ್ಕೆ ಏರಿಕೆಯಾಗಿ ನ್ಯೂಯಾರ್ಕ್‌ನ ಪ್ರಮುಖ ಪಟ್ಟಣಗಳು ೩ ದಶಲಕ್ಷದಿಂದ ೧೪ ದಶಲಕ್ಷ ಜನಸಂಖ್ಯೆಗೆ ಹೆಚ್ಚಳವನ್ನು ಮತ್ತು ಲಂಡನ್ ೫ ದಶಲಕ್ಷದಿಂದ ೧೧ ದಶಲಕ್ಷ ಜನಸಂಖ್ಯೆಗೆ ಏರಿಕೆಯನ್ನು ನೋಡಲಾಗಿದೆ. ಈ ವೈಪರೀತ್ಯದಿಂದ ನಗರದ ಬೆಳವಣಿಗೆ ಅತಿಯಾದ ಬದಲಾವಣೆಗೆ ಪೂರಕವಾದ್ದರಿಂದ ಇದನ್ನು ಅಧ್ಯಯನ ಮಾಡುವುದು ಕಷ್ಟಕರ ಕೆಲಸವಾಗಿ ಪರಿಣಮಿಸಿದೆ. ಅತಿಯಾದ ಜನಸಂಖ್ಯೆ ನಗರದೆಡೆಗೆ ಸಾಗುವಿಕೆಯು ಸಾಮಾಜಿಕ ಪರಿಣಾಮಗಳಿಗೆ ನಾಂದಿಹಾಡಿತು ಮತ್ತು ಇದು ಹೊಸ ಸಾಮಾಜಿಕ ಕ್ರಾಂತಿಯನ್ನು ಹುಟ್ಟಿಸಿರುವಲ್ಲಿ ಸಂಶಯವೇ ಇಲ್ಲ. ಈ ಬೆಳವಣೆಗೆಯಿಂದ ಮಾನವ ಸಮಾಜದಲ್ಲಿ ಹಲವಾರು ಬದಲಾವಣೆಗಳಾಗಿರುವುದನ್ನು ಕಾಣಬಹುದು.

ಪಾಶ್ಚಿಮಾತ್ಯ ದೇಶದಲ್ಲುಂಟಾದ ನಗರೀಕರಣದಿಂದ ಅನೇಕ ಪರಿಣಾಮಗಳನ್ನು ಎದುರಿಸಿರುವುದಲ್ಲದೇ ಅದನ್ನು ನಿರ್ವಹಿಸಲು ಅಸಾಧ್ಯವಾಯಿತು. ದಶಲಕ್ಷಕ್ಕೂ ಹೆಚ್ಚು ಜನತೆಗೆ ಈ

ನಗರೀಕರಣವು ಒಂದು ಹೊಸ ಪರಿಕಲ್ಪನೆಯಾಗಿ ಇದನ್ನು ಎದುರಿಸುವುದು ಒಂದು ಭಯಾನಕ ಸವಾಲಾಗಿ ಪರಿಣಮಿಸಿತು. ಪಶ್ಚಿಮ ರಾಷ್ಟ್ರಗಳಲ್ಲಿ ಉಂಟಾದ ಮಾರ್ಪಾಡುಗಳನ್ನು ಸ್ವಾಗತಿಸುವುದು ಹಾಗೂ ನಗರದ ಬಗ್ಗೆ ಸ್ಪಷ್ಟವಾದ ಲಕ್ಷಣಗಳನ್ನು ತಿಳಿಸುವುದು ಅಸಾಧ್ಯವಾಗಿ ಕಂಡುಬಂದಿತ್ತು. ಪಶ್ಚಿಮ ರಾಷ್ಟ್ರಗಳು ನಗರದ ಭೀತಿಯನ್ನು ಎದುರಿಸುವಂತಹ ನಗರಗಳ ಬದಲಾವಣೆಗೆ ಕಾರಣವಾದ ಜನಸಂಖ್ಯೆಯು ಇಂದಿಗಿಂತ ಅಂದು ಹೆಚ್ಚಾಗಿತ್ತು. ಇದನ್ನು ತುಲನಾತ್ಮಕವಾಗಿ ಅಧ್ಯಯನ ಮಾಡಿದಾಗ ಪಶ್ಚಿಮ ರಾಷ್ಟ್ರಗಳ ನಗರಗಳನ್ನು ಅಭಿವೃದ್ಧಿ ಹೊಂದದ ನಗರಗಳಿಗೆ ಹೋಲಿಸಿದಾಗ ನಿಧಾನಗತಿಯಿಂದ ಬೆಳೆದದ್ದು ಕಾಣಬಹುದು.

ಪಶ್ಚಿಮದಲ್ಲಿ ಹೊಸದಾಗಿ ಮಾರ್ಪಾಟಾದ ನಗರದ ರಚನೆಯು ಇತರ ನಗರಗಳ ಮೇಲೆ ಪ್ರಭುತ್ವ ಸಾಧಿಸುವುದರ ಜೊತೆಗೆ ಸಮಾಜವನ್ನು ಬದಲಾಯಿಸಲು ಇದೊಂದು ನಗರ ಕ್ರಾಂತಿಯೆಂದು ಹೇಳಬಹುದು. ಕೈಗಾರಿಕಾ ಪೂರ್ವ ನಗರಗಳು ಅಳತೆಯಲ್ಲಿ ಎಷ್ಟೇ ವಿಸ್ತಾರವಾಗಿದ್ದರೂ ಇತರ ದೇಶಗಳಿಂದ ಪ್ರತ್ಯೇಕತೆಯನ್ನು ಹೊಂದಿದ್ದವು. ಈ ನಗರಗಳು ಆಡಳಿತದ ಕೇಂದ್ರ, ಭೌತಿಕ, ಕಲೆಯ ಬೆಳವಣಿಗೆ ಹಾಗೂ ವಾಣಿಜ್ಯ ಕೇಂದ್ರಗಳಾಗಿದ್ದರೂ ಪ್ರಾಮುಖ್ಯತೆ ಹೊಂದಿರಲಿಲ್ಲ. ಅಲ್ಲದೆ ಕೈಗಾರಿಕಾ ಪೂರ್ವ ನಗರಗಳು ಯಾವುದೇ ಸಮಾಜಗಳನ್ನು ಮಾರ್ಪಾಡು ಮಾಡಿರಲಿಲ್ಲ. ಜನಸಂಖ್ಯೆಯ ಬಹುಭಾಗವು ಗ್ರಾಮೀಣ ಪ್ರದೇಶದಲ್ಲಿರುವುದಲ್ಲದೇ ಇಂದು ಜಗತ್ತನ್ನು ನಗರಗಳ ದೃಷ್ಟಿಕೋನದಿಂದ ನೋಡುತ್ತಿದ್ದಾರೇ ಹೊರತೂ ಗ್ರಾಮೀಣ ಪ್ರದೇಶದ ದೃಷ್ಟಿಕೋನದಿಂದ ನೋಡಲಾಗುತ್ತಿಲ್ಲ. ಕೈಗಾರಿಕಾ ನಗರಗಳ ಹುಟ್ಟಿನಿಂದ ಆರ್ಥಿಕ ಹಾಗೂ ರಾಜಕೀಯ ಕೇಂದ್ರಗಳು ನಗರಕ್ಕೆ ಸ್ಥಳಾಂತರಗೊಂಡಿವೆ. ನಗರಗಳನ್ನು ನೋಡುವ ದೃಷ್ಟಿಕೋನವು ಮೌಲ್ಯ ಮತ್ತು ಆಸಕ್ತಿಗಳನ್ನು ಸಂಪೂರ್ಣವಾಗಿ ಬದಲಾಯಿಸಿತು. ಮುಂದುವರಿದು, ಕೈಗಾರಿಕಾ ನಗರಗಳು ತಾಂತ್ರಿಕ ಅನುಕೂಲತೆಗಳು ಬದಲಾವಣೆಯನ್ನು ಬಿರುಸಾಗಿಯೇ ತಂದಿತು. ಈ ವಿಧಾನವು ಯಾವ ರೀತಿಯಾಗಿ ಆರಂಭವಾಯಿತೆಂದು ತಿಳಿಯುವುದು ಮುಖ್ಯವಲ್ಲ. ಇಂತಹ ಕ್ಲಿಷ್ಟ ಸಾಮಾಜಿಕ ಪರಿಕಲ್ಪನೆಯಲ್ಲಿ ಹಲವಾರು ಅಂಶಗಳು ಸೇರಿರುವುದನ್ನು ನೋಡಲಾಗಿದೆ. ಕಾರ್ಖಾನೆಗಳನ್ನು ಸ್ಥಾಪನೆ ಮಾಡಲು ಹೊಸ ನಗರಗಳ ಸ್ಥಳ ಹಾಗೂ ಈಗಾಗಲೇ ಸ್ಥಾಪನೆಯಾದ ನಗರಗಳ ಬೆಳವಣಿಗೆಯೂ ಅವಶ್ಯಕ. ಹೊಸ ನಗರಗಳ ಸೃಷ್ಟಿಯು ಆರ್ಥಿಕ ಬೇಡಿಕೆಗೆ ಅನುಗುಣವಾಗಿ ಸ್ಥಾಪನೆಯಾಗಿವೆ. ಒಂದು ಕಾರ್ಖಾನೆಯು ಹಲವಾರು ಕಾರ್ಮಿಕರ ಬಲವನ್ನು ಅವಲಂಬಿಸಿದೆ. ಇದರಿಂದ ಕಾರ್ಖಾನೆಗಳಿಗೆ ಅವಶ್ಯವಾದ ಕಾರ್ಮಿಕರ ನೈಪುಣ್ಯತೆ ಬೇಕಿದೆ. ಇದಕ್ಕೆ ವಿರೋಧವಾಗಿ ಪೂರ್ವಕೈಗಾರಿಕಾ ನಗರಗಳು ವ್ಯಾಪಾರಿಗಳ, ತತ್ವಜ್ಞಾನಿಗಳ, ಶ್ರೀಮಂತರ ಮನೆಯಾಗಿತ್ತು.[೬] ನಗರವನ್ನು ಬೆಳೆಸಲು ಯಾವುದೇ ರೀತಿಯ ಆರ್ಥಿಕ ಒತ್ತಡವಿರಲಿಲ್ಲ. ಕಾರ್ಖಾನೆಗಳ ಹುಟ್ಟಿನಿಂದ ನಗರವು ಆರ್ಥಿಕ ಕಾರಣಗಳಿಗೆ ಹೆಸರಾಯಿತು. ಇಲ್ಲಿರುವ ನಗರಗಳಿಗೆ ಜನಸಂಪನ್ಮೂಲದ ಅಗತ್ಯವು ಕಾಣಿಸಿತು. ಕೈಗಾರಿಕರಣಕ್ಕೆ ಮುನ್ನ ಪಶ್ಚಿಮ ರಾಷ್ಟ್ರಗಳಲ್ಲಿ ಹೆಸರುವಾಸಿಯಾದ ಕೆಲವು ನಗರಗಳು ಕೈಗಾರಿಕಾ ಸಮಾಜಗಳ ಬೇಡಿಕೆಗಳನ್ನು ಪೂರೈಸಲು ಹೊಸದಾಗಿ ಮಾರ್ಪಾಟಾಗ ಬೇಕಾಯಿತು.

ಒಮ್ಮೆ ಕೈಗಾರಿಕಾ ನಗರಗಳಿಗೆ ಬೇಕಾದಂಥ ಆರ್ಥಿಕ ಪರಿಸ್ಥಿತಿಗಳು ಸೃಷ್ಟಿಯಾದ ನಂತರ ಉಳಿದೆಲ್ಲಾ ಅಂಶಗಳು ತನ್ನಷ್ಟಕ್ಕೆ ತಾನೇ ರೂಪುಗೊಳ್ಳುಲು ಪ್ರಾರಂಭವಾಗುತ್ತದೆ. ಹೆಚ್ಚಿನ ಮಟ್ಟದ ಕೇಂದ್ರಿಕೃತ ಜನಸಂಖ್ಯೆಯು ಹಲವು ಸೇವೆಗಳಾದ ಆಹಾರ, ವಸತಿ, ಬಟ್ಟೆ, ಶೌಚಲಯ

ಮುಂತಾದವುಗಳನ್ನು ನಿರೀಕ್ಷಿಸುತ್ತದೆ. ಈ ಹಿನ್ನೆಲೆಯಲ್ಲಿ ೧೮೦೦ರಲ್ಲಿ ಸಂಯುಕ್ತ ರಾಷ್ಟ್ರ ಹಾಗೂ ಇಂಗ್ಲೆಂಡಿನ ಜನರ ಜೀವನಮಟ್ಟದ ಸ್ಥಿತಿಯು ಶೋಚನೀಯವಾಗಿತ್ತು. ಜನರು ತಮ್ಮ ಜೀವನ ಅತಿಯಾದ ಗುಂಪು ಪ್ರದೇಶಗಳಲ್ಲಿ ಸರಿಹೊಂದದ ಮತ್ತು ಅತಿಯಾದ ಬಾಡಿಗೆಯುಳ್ಳ ಮನೆಯಲ್ಲಿ ಜೀವನ ಸಾಗಿಸಬೇಕಾಯಿತು. ಕೆಲಸ ಮಾಡುವ ವಾತಾವರಣವು ಅಮಾನವೀಯವಾಗಿದ್ದು ಕೆಲಸದ ಅವಧಿಯೂ ಅತಿಯಾಗಿದ್ದದ್ದು ಅಲ್ಲದೇ ಮಕ್ಕಳು ಸಹ ಉದ್ಯೋಗದಲ್ಲಿ ತೊಡಗಿರುವುದನ್ನು ನೋಡಲಾಗಿದೆ. ಅಂತೆಯೇ ನಗರ ಜೀವನವು ಅತಂತ್ರವಾಗಿರುವುದಾಗಿತ್ತು ಇದರ ಪರಿಣಾಮವಾಗಿ ೧೮ನೇ ಶತಮಾನದ ಮದ್ಯ ಅವಧಿಯಲ್ಲಿ ಸಾವಿನ ಸಂಖ್ಯೆ ೧,೦೦೦ ಜನಸಂಖ್ಯೆಗೆ ೪೦ರಷ್ಟು ಕಂಡುಬಂದಿದೆ. ಇದು ೧೯ನೇ ಶತಮಾನದ ಆರಂಭದಲ್ಲಿ ೧,೦೦೦ಕ್ಕೆ ೨೫ರಷ್ಟು ಕುಸಿತವನ್ನು ಕಂಡಿತ್ತು. ಇಂತಹ ಸಂದರ್ಭದಲ್ಲಿ ಮಾನವನ ಉತ್ತಮ ಜೀವನಮಟ್ಟದ ದೃಷ್ಟಿಯಿಂದ ಅಗತ್ಯ ವಸ್ತುಗಳಾದ ಔಷಧಿಗಳ ಹಾಗೂ ಆರೋಗ್ಯ ಕೇಂದ್ರಗಳ ತಾಂತ್ರಿಕ ಬೆಳವಣಿಗೆಯ ಜೊತೆಗೆ ಜೀವಿಸುವ ಬಯಕೆಯೂ ಅಧಿಕವಾಯಿತು. ಇಂತಹ ಹಲವಾರು ಕಾರಣಗಳಿಂದ ಸಾಮಾನ್ಯವಾಗಿ ನಗರಗಳಲ್ಲಿ ಆರೋಗ್ಯ ಸುಧಾರಣೆಯ ಬಗ್ಗೆ ಯೋಚಿಸುವುದು ವ್ಯರ್ಥ ಸಾಧ್ಯವಾಗಿದೆ.

ಈ ಎಲ್ಲಾ ಸ್ಥಿತಿಗಳನ್ನು ಹೊರತುಪಡಿಸಿಯೂ ಕೈಗಾರಿಕಾ ನಗರವು ಅಳಿಯದೇ ಬೆಳೆಯಿತು. ನಗರಗಳಿಗೆ ಅತಿಯಾದ ವಲಸೆಯೂ ಸಾವಿನ ಸಂಖ್ಯೆಯನ್ನು ಹೆಚ್ಚಿಸಿತು. ಅಂದರೆ ಗ್ರಾಮೀಣ ಜನಸಂಖ್ಯೆಯನ್ನು ನಗರದೆಡೆ ಸೆಳೆದು ಭೂಮಿಯಿಂದಲೇ ಎಳೆಯಲ್ಪಟ್ಟಿತು. ಗ್ರಾಮೀಣ ಪ್ರದೇಶದ ಬಡತನ, ಬೆಳೆಗಳ ನಾಶದಿಂದ ಅನಿವಾರ್ಯವಾಗಿ ನಗರದೆಡೆ ವಲಸೆ ಹೋಗಬೇಕಾದ ಸಂದರ್ಭ ಕಂಡು ಬಂದಿದೆ. ಕೈಗಾರೀಕರಣ ನಗರಗಳ ಆರಂಭವು ಗ್ರಾಮೀಣ ಜನತೆಯನ್ನು ಅಮಾನವೀಯವಾಗಿ ನೋಡಿತು ಹಾಗೂ ಇಲ್ಲಿನ ಕೆಲವು ವೈಭೋಗ ಪೂರಿತ ಜೀವನವು ಗ್ರಾಮೀಣ ಜನರನ್ನು ಸೆಳೆಯಿತು. ಹಲವರಿಗೆ ನಗರದ ಪರಿಕಲ್ಪನೆ ಕೇವಲ ಬೆಳವಣಿಗೆ ಹಲವರಿಗೆ ಇದು ಒಂದು ಹೀನ ಪರಿಸ್ಥಿತಿಯಿಂದ ಇನ್ನೊಂದು ಶೋಚನೀಯ ಪರಿಸ್ಥಿತಿಯೆಡೆ ಬೆಳೆಯುವುದು. ಆದರೆ ಹೆಚ್ಚಿನ ಮಟ್ಟದ ಜನರಿಗೆ ಯಾವ ಪರ್ಯಾಯವಿಲ್ಲದೇ ನಗರದಲ್ಲೇ ಜೀವನ ನಡೆಸುವುದು ಅಲ್ಲಿಯ ಸ್ಥಿತಿ. ಇಂದು ಅಭಿವೃದ್ಧಿ ಹೊಂದದ ರಾಷ್ಟ್ರಗಳ ಗ್ರಾಮೀಣ ಜನರ ಸ್ಥಿತಿಯಾಗಿದೆ. ಒಂದು ಶತಮಾನದ ಹಿಂದೆ ಗ್ರಾಮೀಣ ಬಡಜನರು ಅನುಭವಿಸಿದ ಸ್ಥಿತಿಯನ್ನು ಇಂದು ಇಂಡೋನೇಷ್ಯಾ, ಕೋಲಂಬಿಯಾ ಮತ್ತು ಈಜಿಪ್ಟ್‌ನಲ್ಲಿ ಕಾಣಬಹುದು.

ಆನಂತರದ ದಿನಮಾನದಲ್ಲಿ ಪಶ್ಚಿಮದ ಕೈಗಾರಿಕಾ ನಗರವು ತನ್ನದೇ ಆದ ಶೈಲಿಯಲ್ಲಿ ಬೆಳೆಯಿತು. ವೈದ್ಯಕೀಯರ ಜ್ಞಾನದ ಹೆಚ್ಚಳದಿಂದ ಸಾವಿನ ಸಂಖ್ಯೆ ಕಡಿಮೆಯಾಯಿತು. ಇಂತಹ ಪಿಡುಗಗಳ ಬೆಳವಣಿಗೆಗೆ ಸಾಮಾಜಿಕ ತಪ್ಪು ಮಾರ್ಗದರ್ಶನ ಹಾಗೂ ಬೇಜವಾಬ್ದಾರಿಯುತ ಆರ್ಥಿಕ ಇಂಗಿತ. ಬಾಲಕಾರ್ಮಿಕರನ್ನು ಕೆಲಸಕ್ಕೆ ಸೇರಿಸಿಕೊಳ್ಳುವುದು ಕಾನೂನುಬಾಹಿರ ಎಂದು ಪರಿಗಣಿಸಲಾಯಿತು. ಮೈನ್ಸ್ ಮತ್ತು ಕಾರ್ಖಾನೆಗಳಲ್ಲಿ ರಕ್ಷಣೆಗಳನ್ನು ಒದಗಿಸಲಾಗುತ್ತಿತ್ತು. ಹಾಗೂ ಜನರ ಜೀವನಮಟ್ಟದಲ್ಲಿ ಸುಧಾರಣೆ ಕಂಡಿತು. ಕ್ರಮೇಣವಾಗಿ ಮನುಷ್ಯನು ಯಂತ್ರಗಳು ಮಾಡುವ ಕಾರ್ಯಗಳಿಗಿಂತ ಹೆಚ್ಚಿನ ಸಾಧನೆಯನ್ನು ಮಾಡಿದನು. ಕ್ರಮೇಣವಾಗಿ ಕಡ್ಡಾಯ ಶಿಕ್ಷಣದ ಮುಖಾಂತರ ಸಾಮಾಜಿಕ ನಿಯಮದನುಸಾರ ಸ್ವ-ಆಸಕ್ತಿಯನ್ನು ಹೆಚ್ಚಿಸಿಕೊಳ್ಳುವುದರ ಮುಖಾಂತರ ನಗರದ

ಜನಸಂಖ್ಯೆಯನ್ನು ಹೆಚ್ಚಿಸಲಾಯಿತು. ಇದರ ನಂತರ ಕೈಗಾರಿಕಾ ನಗರವು ನಗರೀಕರಣದಿಂದ ಉಂಟಾಗುವ ಅನುಕೂಲತೆಗಳ ಬಗ್ಗೆ ಗಮನಕೊಟ್ಟು, ಅನಾನುಕೂಲತೆಗಳನ್ನು ಕಡೆಗಣಿಸಲಾಯಿತು. ಉದಾಹರಣೆಗೆ ಜೀವನ ಶೈಲಿಯಲ್ಲಿ ಸುಧಾರಣೆ, ಕಲೆ ಮುಂತಾದವುಗಳ ಸುಧಾರಣೆ ಒಮ್ಮೆ ಈ ಅನುಕೂಲತೆಗಳೇ ಇದರ ಗುಣಲಕ್ಷಣಗಳಾದರೆ ನಗರದ ಹೊರಗೆ ಜೀವನ ಮಾಡುವವರಿಗೆ ನಗರಗಳು ಆಕರ್ಷಣಾ ಕೇಂದ್ರಗಳಾಗುತ್ತವೆ. ಇದರಿಂದ ನಗರಕ್ಕೆ ಸಾಗಿದ ಜನಜೀವನವು ಕ್ಲಿಷ್ಟಕರವಾಗುವುದಿಲ್ಲ.

ಸಾಮಾಜಿಕ ಬದಲಾವಣೆಯು ಜನರ ಸಂಪೂರ್ಣ ಭಾಗವಹಿಸುವಿಕೆಯಿಂದ ಸಾಧ್ಯ ಹಾಗೂ ಇದನ್ನು ಸಾಧಿಸಲು ಪ್ರತಿ ಸಾಮಾಜಿಕ ಸಂಸ್ಥೆಗಳ ಬದಲಾವಣೆಯಾಗಬೇಕು. ನಗರೀಕರಣಗೊಳ್ಳುವುದಕ್ಕೆ ನಡೆಸುವ ಪ್ರತಿ ಕಾರ್ಯಕ್ರಮವನ್ನು ಯಾವ ಸಂಸ್ಥೆಗಳು ಕಡೆಗಣಿಸಬಾರದು. ರಾಜಕೀಯ ಸ್ವರೂಪ ಮತ್ತು ಶೈಲಿಯಲ್ಲಿ ಮಾರ್ಪಾಡುಗಳು ಕಂಡುಬಂದವು, ಕೃಷಿಯಿಂದ ಕಾರ್ಖಾನೆಗಳಿಗೆ ಮುನ್ನುಗ್ಗಿದರು, ಕುಟುಂಬದ ಸದಸ್ಯರ ಸಂಖ್ಯೆ ಹಾಗೂ ಸಂಬಂಧಗಳು ಸೀಮಿತವಾದವು ಇವೆಲ್ಲವೂ ಕೈಗಾರಿಕಾ ನಗರ ಜೀವನದ ಸ್ಥಿತಿಗತಿಗಳನ್ನು ವ್ಯಕ್ತಪಡಿಸುತ್ತವೆ. ಶಿಕ್ಷಣವು ಕೇವಲ ಸಾಹುಕಾರರಿಗೆ ಮಾತ್ರ ಸೀಮಿತವಾಗಿರದೇ ಎಲ್ಲಾ ಜನತೆಗೂ ನಿಲುಕಿತು. ನಗರದ ಜನತೆಯನ್ನು ತಲುಪಲು ಧಾರ್ಮಿಕ ಸಂಸ್ಥೆಗಳ ಸ್ಥಾಪನೆಯಾಯಿತು. ಯೋಚನಾಲಹರಿಯು ದೈವತ್ವದಿಂದ ವಿಚಾರವಾದದ ಕಡೆ ತಿರುಗಿತು. ನಗರೀಕರಣವು ಬಲವಾದ ಸಾಮಾಜಿಕ ಕ್ರಾಂತಿಯನ್ನೇ ಉಂಟುಮಾಡಿತು. ಕೊನೆಗೆ ಇಡೀ ಸಮಾಜವನ್ನೇ ಮಾರ್ಪಾಟು ಮಾಡಿತು. ಅಭಿವೃದ್ಧಿ ಹೊಂದುತ್ತಿರುವ ರಾಷ್ಟ್ರಗಳಲ್ಲಿ ಇಂದು ಪಶ್ಚಿಮ ದೇಶಗಳಲ್ಲಿ ಅನುಸರಿಸುತ್ತಿದ್ದ ವಿಧಾನವನ್ನೇ ಅನುಸರಿಸಲಾಯಿತು. ಉದಾ:- ಸುಸಜ್ಜಿತವಲ್ಲದ ಮನೆ, ಹೆಚ್ಚಿನ ಸಾವುಗಳು ಮತ್ತು ಸಾಮಾಜಿಕ ಒಗ್ಗಟ್ಟಿನ ಕೊರತೆಯನ್ನು ಅಭಿವೃದ್ಧಿ ಹೊಂದುತ್ತಿರುವ ನಗರಗಳಲ್ಲಿ ಕಾಣಬಹುದು. ಈ ಅನಾನುಕೂಲತೆಗಳು ಅಜ್ಞಾನದಿಂದ ಉಂಟಾಗಿಲ್ಲ ಅಥವಾ ಅಭಿವೃದ್ಧಿಯ ವಿಧಾನದಲ್ಲಿ ಆದ ಅಮಾನವೀಯ ಘಟನೆಗಳಿಂದಲ್ಲ ಈ ಎಲ್ಲಾ ಅಡಚಣೆಗಳಿಗೆ ಕಾರಣ ಸಾಮಾಜಿಕ ಬದಲಾವಣೆ ಮತ್ತು ಇದನ್ನು ಯಾವುದೇ ತರ್ಕಬದ್ಧ ವಿಧಾನದಿಂದ ಆಧೀನ ಮಾಡಿಕೊಳ್ಳಲು ಅಸಾಧ್ಯ. ನಗರದ ತೀವ್ರಗತಿಯ ಬದಲಾವಣೆಗಳಿಂದ ಹಲವಾರು ಸಮಸ್ಯೆಗಳಾದ ಅಧಿಕ ಸಂಖ್ಯೆಯ ಸಾವುಗಳು, ಕೊಳಚೆಯ ಸಮಸ್ಯೆ, ಅತಿಕ್ಲಿಷ್ಟವಾದ ಕೊಳಚೆ ಪ್ರದೇಶಗಳಲ್ಲಿ ಜೀವನ, ಬಡತನ ರೇಖೆಗಿಂತ ಕೆಳಗಿನವರು ಹಳ್ಳಿಯ ಸಮಾಜ ಜೀವನದಿಂದ ನಗರ ಸಮಾಜ ಜೀವನಕ್ಕೆ ಬದಲಾಗುವುದು ಮುಂದುವರಿದು, ಸಂಯುಕ್ತ ರಾಷ್ಟ್ರಗಳ ವರದಿಯ ಪ್ರಕಾರ "ಕೈಗಾರೀಕರಣ ಮತ್ತು ನಗರೀಕರಣವು ಕೇವಲ ಕೈಗಾರೀಕರಣದ ಪರಿಣಾಮವಲ್ಲ ಇದು ಪೂರ್ವ ಕೈಗಾರೀಕರಣದ ಜೀವನ ಶೈಲಿಯನ್ನು ತಡೆಹಿಡಿಯುವುದಾಗಿದೆ. ಕಾರ್ಖಾನೆಗಳಲ್ಲಿ ಬಾಲಕಾರ್ಮಿಕರ ಇಂದಿನ ಪದ್ಧತಿಯ ಹಿಂದೆ ಹೊಲಗಳಲ್ಲಿ ನಡೆಯುತ್ತಿದ್ದ ಬಾಲಕರ ಶ್ರಮದ ಇನ್ನೊಂದು ರೂಪ, ನಗರದ ಕೊಳಚೆ ಪ್ರದೇಶಗಳ ಕಟ್ಟಡಗಳು ಗ್ರಾಮೀಣ ಪದ್ಧತಿಯ ಮನೆ ಕಟ್ಟುವಿಕೆ, ನೀರನ್ನು ಬಳಸುವ ವಿಧಾನಗಳಲ್ಲೂ ಹೋಲಿಕೆ ಕಾಣಬಹುದು. ಕೈಗಾರೀಕರಣದಿಂದ ಉಂಟಾದ ಪರಿಣಾಮಕಾರಿಯಾದ ಸಾಮಾಜಿಕ ಬದಲಾವಣೆಗೆ ಕಾರಣ ಸಾಮಾಜಿಕ ಬದಲಾವಣೆಗಳಲ್ಲಿ ಉಂಟಾಗುವ ತೊಂದರೆಗಳನ್ನು ಸರಿಯಾದ ರೀತಿಯಲ್ಲಿ ಎದುರಿಸದಿಲ್ಲದಿರುವುದು ಹಾಗೂ ಈ ತೊಂದರೆಗಳು ಉಂಟಾಗುವದಕ್ಕೆ ಪ್ರಮುಖ ಕಾರಣ ಆರ್ಥಿಕ ಹಾಗೂ ಸಾಮಾಜಿಕ ಸಂಸ್ಥೆಗಳಲ್ಲಿ ಹಲವಾರು ಬದಲಾವಣೆಗಳಾಗಿವೆ." ಎಲ್ಲಿ ಹೊಸ ಕೈಗಾರಿಕಾ

ನಗರಗಳು ಹುಟ್ಟಿಕೊಂಡವೋ ಅಲ್ಲಿರುವ ಪ್ರಸ್ತುತ ಸಾಮಾಜಿಕ ಸಂಸ್ಥೆಗಳು, ಸಾಮಾಜಿಕ ನಂಬಿಕೆಗಳು ಮತ್ತು ನಿಯಮಗಳು ಅಧಿಕಾರದಲ್ಲಿ ಬಲವಾದ ಮಾರ್ಪಾಡುಗಳಾಗಿದ್ದನ್ನು ಕಾಣಬಹುದು. ಹೊಸ ಕೈಗಾರಿಕಾ ನಗರಗಳಲ್ಲಿ ಪುನಃ ಉಂಟಾದ ಅದೇ ಕ್ಲಿಷ್ಟ ನಗರ ಸ್ಥಿತಿಗತಿಯನ್ನು ಅಂದಿನ ಪಶ್ಚಿಮದ ನಗರೀಕರಣದಲ್ಲಿ ಉಂಟಾದ ಸಮಸ್ಯೆಗಳ ಚಿತ್ರಣವನ್ನು ನೀಡುತ್ತದೆ. ಈ ಎರಡೂ ಅವಧಿಗಳ ನಡುವೆ ಆದ ವ್ಯತ್ಯಾಸಗಳನ್ನು ಹೊರತುಪಡಿಸಿ ಇವೆರಡರ ನಡುವಿನ ಹೋಲಿಕೆಗಳನ್ನು ಅಧ್ಯಯನ ದೃಷ್ಟಿಯಿಂದ ಗಣನೆಗೆ ತೆಗೆದುಕೊಳ್ಳಲಾಗಿದೆ. ಸಮಾಜದ ಬದಲಾವಣೆಯಲ್ಲಿ ನಡೆದ ಈ ವಿಧಾನದ ಮುಂದಿನ ಕೈಗಾರಿಕಾ ಹಂತದ ಪರಿಣಾಮವನ್ನು ತೋರುತ್ತದೆ. ಇಂದು ನಡೆಯುತ್ತಿರುವ ನಗರೀಕರಣದ ಲಕ್ಷಣವು ಶತಮಾನದ ಹಿಂದೆ ಪಶ್ಚಿಮದಲ್ಲಿ ಕೈಗಾರಿಕಾ ನಗರ ಸಮಾಜದಲ್ಲಿ ಉಂಟಾದ ಬದಲಾವಣೆಯ ಚಿತ್ರ ಕಾಣಲಾಗುತ್ತದೆ.

ನಗರೀಕರಣ ಸಿದ್ಧಾಂತದ ಎರಡನೆಯ ಅಂಶ ಕೈಗಾರೀಕರಣ ಮೊದಲನೆಯ ಅಂಶದಲ್ಲಿ ಇದ್ದ ಹಾಗೆ ಪಶ್ಚಿಮದಲ್ಲಾದ ಅಭಿವೃದ್ಧಿ ಮತ್ತು ಅಭಿವೃದ್ಧಿ ಹೊಂದುತ್ತಿರುವ ರಾಷ್ಟ್ರಗಳಲ್ಲಿ ಇಂದು ನಡೆಯುತ್ತಿರುವ ನಗರೀಕರಣದ ನಡುವಿನ ಹೋಲಿಕೆಯ ಹಾಗೆ ಇಲ್ಲಿ ಕೈಗಾರೀಕರಣದ ಬಗ್ಗೆ ತಿಳಿಸಲಾಗುತ್ತದೆ. ಅಧ್ಯಯನದ ಹಿತದೃಷ್ಟಿಯಿಂದ ಈ ಸಿದ್ಧಾಂತವು ಬಹುಮುಖ್ಯವಾಗಿದೆ. ಕಾರಣ ಇಲ್ಲಿ ನಗರಗಳ ಮಾದರಿಯು ಹಿಂದಿನ ನಗರಗಳ ಮಾದರಿಗಿಂತ ವಿಭಿನ್ನವಾಗಿದೆ. ಕೈಗಾರೀಕರಣವು ನಗರ ಅಭಿವೃದ್ಧಿಯ ಒಂದು ಸಾಮಾಜಿಕ ಬದಲಾವಣೆ, ಸ್ಪಷ್ಟವಾಗಿ ಹೇಳುವುದಾದರೆ ಕೃಷಿಯಿಂದ ಕೈಗಾರಿಕಗಳ ಉತ್ಪಾದನೆಯತ್ತ ಬದಲಾವಣೆ ಹಾಗೂ ವ್ಯವಸಾಯದಿಂದ ಕಾರ್ಖಾನೆಯತ್ತ ಬದಲಾವಣೆ ಹೊಂದುವುದು. ಈ ಆರ್ಥಿಕ ಮಾರ್ಪಾಟಿನಿಂದ ಆರ್ಥಿಕ ಅಧಿಕಾರದಲ್ಲಿ, ಬಂಡವಾಳ ಹೂಡಿಕೆಯಲ್ಲಿ, ಕೂಲಿ ಕಾರ್ಮಿಕರಲ್ಲಿ, ಸಾಲದ ವ್ಯವಸ್ಥೆಗಳಲ್ಲಿ ಹಾಗೂ ವಿಶಿಷ್ಟವಾದ ಬದಲಾವಣೆಗಳನ್ನು ಶಿಕ್ಷಣ, ಕುಟುಂಬ ವ್ಯವಸ್ಥೆ, ವರ್ಗಗಳ ನಿರ್ಮಾಣ, ರಾಜಕೀಯ ಸ್ವರೂಪಗಳು ಹಾಗೂ ಸಾಮಾಜಿಕ ಮೌಲ್ಯಗಳು ಹಾಗೂ ನಂಬಿಕೆಗಳಲ್ಲೂ ಬದಲಾವಣೆಗಳನ್ನು ಕಾಣಬಹುದು. ಆಹಾರ ಪದ್ಧತಿಯಲ್ಲಿ ಬದಲಾವಣೆಯಾಯಿತು. ಆರೋಗ್ಯ ಹಾಗೂ ಸ್ವಚ್ಛತೆಯ ಬಗ್ಗೆ ಹೆಚ್ಚಿನ ಆಸಕ್ತಿ ವಹಿಸಲಾಯಿತು. ಮನಸ್ಸಿನ ಭಾವನೆಗಳಲ್ಲಿ ಸೂಕ್ಷ್ಮ ಬದಲಾವಣೆಯನ್ನು ಕಾಣಲಾಯಿತು. ಹಾಗೂ ಜೀವನ ಶೈಲಿಯಲ್ಲಿ ಹೊಸ ಗುಣಮಟ್ಟವನ್ನು ಅಳವಡಿಸಿಕೊಳ್ಳಲಾಯಿತು. ಶಿಸ್ತು, ಕೆಲಸ, ಪ್ರೇರಣೆ ಹಾಗೂ ಆಸಕ್ತಿಗಳಲ್ಲಿ ಹೊಸತನವನ್ನು ಕಂಡುಕೊಳ್ಳಲಾಯಿತು. ಸಂಕ್ಷಿಪ್ತವಾಗಿ ಹೇಳುವುದಾದರೆ ಜೀವನ ಶೈಲಿಯಲ್ಲಿ ಹೊಸತನವನ್ನು ಕಂಡುಕೊಳ್ಳುವಂತೆ ಮಾಡಿತು. ಕೈಗಾರೀಕರಣವು ಕೆಳಗಿನ ಅಂಶಗಳನ್ನು ಅವಶ್ಯಕತೆಗಳನ್ನಾಗಿ ಮಾಡಿತು. ರಿಪೇರಿ ಮಾಡಿ ಅದನ್ನು ಉಪಯೋಗಿಸುವುದು, ಭವಿಷ್ಯದ ಬಗ್ಗೆ ಆಲೋಚಿಸುವುದು, ಮಕ್ಕಳಿಗೆ ವಿದ್ಯಾಭ್ಯಾಸ(ಶಿಕ್ಷಣ) ಹಾಗೂ ತರಬೇತಿಯನ್ನು ನೀಡುವುದು, ಹೊಸ ಚಟುವಟಿಕೆಗಳಲ್ಲಿ ತೊಡಗಿಸಿಕೊಳ್ಳಲು ತಯಾರಿ ನಡೆಸಿಕೊಳ್ಳುವುದು, ನೈಪುಣ್ಯತೆಯನ್ನು ಗಳಿಸಿಕೊಳ್ಳುವುದು, ಸಂಪನ್ಮೂಲಕ್ಕಾಗಿ ವ್ಯಕ್ತಿಗಳನ್ನು ಭೇಟಿಯಾಗುವುದು, ಅನುಭವಗಳನ್ನು ಅಭಿವೃದ್ಧಿಗೊಳಿಸಿಕೊಳ್ಳುವುದು, ಹೊಸತದ ಅನ್ವೇಷಣೆ ಮಾಡುವುದು, ಪುರಾತನ ಪದ್ಧತಿ ಹಾಗೂ ಪರಂಪರೆಗಳ ಬಗ್ಗೆ ಪ್ರಶ್ನಿಸುವುದು ಇಂತಹ ಹಲವು ಅಂಶಗಳಿಂದ ಕೈಗಾರೀಕರಣವು ಬದಲಾವಣೆಯ ವಿಧಾನಕ್ಕೆ ಅನ್ವಯಿಸುತ್ತದೆ. ಕೃಷಿ ಪದ್ಧತಿಯಿಂದ ಕೈಗಾರಿಕಾ ಪದ್ಧತಿಗೆ ಮಾರ್ಪಾಟಾಗುವ ಒಂದು ಸಮಾಜವು ಎದುರಿಸುವ ಪರಿಣಾಮಗಳನ್ನೊಳ

ಗೊಂಡಿರುತ್ತಿದೆ. ಹಾಗೆಯೇ ಚಿಕ್ಕ ಗ್ರಾಮೀಣ ಪ್ರದೇಶದಿಂದ ವಿಸ್ತಾರವಾದ ನಗರ ಪ್ರದೇಶಕ್ಕೆ ಬದಲಾಗುವಾಗ ಅಂದರೆ ಇಲ್ಲಿ ಏಕತೆಯಿಂದ ಅನೇಕತೆಗೆ ಬದಲಾಗುವಾಗ ಅನುಭವಿಸುವ ಸಮಸ್ಯೆಗಳ ಬಗ್ಗೆ ತಿಳಿಯಲಾಗುತ್ತದೆ. ಅಂದಹಾಗೆ ಬದಲಾವಣೆಯು ಅತ್ಯಂತ ತೀವ್ರಗತಿಯಲ್ಲಿ ಸಾಗಿರುವುದನ್ನು ಕಾಣಲಾಗಿದೆ.[6] ಇಲ್ಲಿ ವಿಷಯವು ತುಂಬಾ ಕ್ಲಿಷ್ಟವಾಗಿರುವುದರಿಂದ ಹಾಗೂ ಗುಣಲಕ್ಷಣಗಳು ಹಲವಾರು ಆಗಿರುವುದರಿಂದ ಸಮಾಜದ ಎಲ್ಲಾ ಭಾಗಗಳನ್ನು ಅಧ್ಯಯನ ಮಾಡುವುದು ಕಷ್ಟಕರ. ಕೈಗಾರೀಕರಣವನ್ನು ಆರ್ಥಿಕ ಬೆಳವಣಿಗೆಯ ಸ್ವರೂಪವಾಗಿ ಅಧ್ಯಯನ ಮಾಡಲಾಗಿದೆ. ಇಲ್ಲಿ ಅರ್ಥಶಾಸ್ತ್ರ, ಸಾಮಾಜಿಕ ಇತಿಹಾಸ, ಕಾರ್ಮಿಕರ ಶ್ರಮ ಮುಂತಾದವುಗಳು ಬದಲಾವಣೆಗೆ ಒಳಗಾದವು ಸಮಾಜ ವಿಜ್ಞಾನದ ಹಲವು ತಜ್ಞರು ಈ ವಿಷಯ ಬಗ್ಗೆ ಅಧ್ಯಯನಗಳನ್ನು ನಡೆಸಿದರು. ಈ ತುಲನಾತ್ಮಕ ಅಧ್ಯಯನ ಒಂದು ಸೀಮಿತ ವಿಸ್ತಾರವನ್ನು ಕಂಡುಕೊಳ್ಳಬೇಕಾಗಿದೆ. ನಗರ ಸಿದ್ಧಾಂತದ ಹಲವಾರು ಗುಣಲಕ್ಷಣಗಳಲ್ಲಿ ಕೈಗಾರೀಕರಣವೂ ಒಂದು.

ಇಂದು ಅಭಿವೃದ್ಧಿ ಹೊಂದುತ್ತಿರುವ ರಾಷ್ಟ್ರಗಳಲ್ಲಿ ಉಂಟಾಗುವ ಬೆಳವಣಿಗೆಯು ಅಂದಿನ ಪಶ್ಚಿಮ ದೇಶಗಳ ಅಭಿವೃದ್ಧಿಯನ್ನು ಹೋಲುತ್ತವೆ. ಇಲ್ಲಿ ಅವಧಿಯ ವ್ಯತ್ಯಾಸವು ಕೆಲವು ಪರಿಣಾಮ ಬೀರಿದೆ. ಉದಾಹರಣೆಗೆ ಮಕ್ಕಳ ಸಾವಿನ ಸಂಖ್ಯೆಯು ಪಶ್ಚಿಮದಲ್ಲಿ ಹೆಚ್ಚಿನ ಮಟ್ಟದಲ್ಲಿ ಕಂಡುಬಂದಿದೆ. ಇದು ಅಭಿವೃದ್ಧಿ ಹೊಂದದ ರಾಷ್ಟ್ರಗಳಲ್ಲಿ ಕಡಿಮೆ ಇರುವುದು ಕಂಡುಬಂದಿದೆ. ವೈದ್ಯಕೀಯ ತಾಂತ್ರಿಕತೆಯ ಬೆಳವಣಿಗೆಯನ್ನು ಅಭಿವೃದ್ಧಿ ಹೊಂದದ ರಾಷ್ಟ್ರಗಳಲ್ಲೂ ಕಾಣುತ್ತೇವೆ. ಇಂದು ಸಾಂಕ್ರಮಿಕ ರೋಗಗಳನ್ನು ತಡೆಗಟ್ಟಬಹುದು ಆದರೆ ಇಲ್ಲಿ ಸಾವಿನ ಸಂಖ್ಯೆಯು ಅಧಿಕವಾಗಿ ಹಸಿವೆಯಿಂದ ಆಗುತ್ತಿದೆಯೇ ಹೊರತು ರೋಗಗಳಿಂದ ಅಲ್ಲ. ಕಜ್‌ನೆಟ್ಸ್‌ನ ಪ್ರಕಾರ ಪ್ರಸ್ತುತ ರಾಷ್ಟ್ರೀಯ ವಾರ್ಷಿಕ ವರಮಾನವು ಅಭಿವೃದ್ಧಿ ಹೊಂದದ ರಾಷ್ಟ್ರಗಳಲ್ಲಿ ಅತಿಕಡಿಮೆಯಾಗಿದ್ದು ಇದು ಅಂದಿನ ಪಶ್ಚಿಮ ರಾಷ್ಟ್ರದ ಕೈಗಾರೀಕರಣದ ಮುಂಚೆಯೂ ಅಧಿಕ ರಾಷ್ಟ್ರೀಯ ವಾರ್ಷಿಕ ವರಮಾನವಿತ್ತು. ಕೆಲವು ಆಧಾರಗಳಿಂದ ತಿಳಿಯುವುದೇನೆಂದರೆ ಪಶ್ಚಿಮ ರಾಷ್ಟ್ರಗಳಲ್ಲಿ ಶಿಕ್ಷಣ ಹಾಗೂ ಶಾಲೆಗೆ ಸೇರುವವರ ಸಂಖ್ಯೆ ಅಧಿಕವಿತ್ತು ಇದು ಇಂದಿನ ಅಭಿವೃದ್ಧಿ ಹೊಂದದ ರಾಷ್ಟ್ರಗಳಿಗಿಂತ ಅಧಿಕವಾಗಿತ್ತು.

ಕೈಗಾರೀಕರಣದ ಪ್ರಮುಖ ಗುಣಲಕ್ಷಣವೆಂದರೆ ಸಾಮಾಜಿಕ ಬದಲಾವಣೆ ಹಾಗೂ ಈ ಬಲಾವಣೆಯಿಂದ ಸಾಮಾಜಿಕ ಪರಿಣಾಮಗಳುಂಟಾಗುತ್ತವೆ ಹಾಗೂ ಇದು ಪಶ್ಚಿಮ ದೇಶದಲ್ಲುಂಟಾದ ಬದಲಾವಣೆಯನ್ನು ಹೋಲುತ್ತದೆ. ಇಂದು ನಡೆಯುತ್ತಿರುವ ಕೈಗಾರಿಕಾ ಅಭಿವೃದ್ಧಿಯು ಸಮಾಜದಲ್ಲಿ ಅನೇಕ ಬದಲಾವಣೆಗಳನ್ನು ತಂದಿವೆ ಈ ಎಲ್ಲಾ ಬದಲಾವಣೆಗಳು ಪಶ್ಚಿಮದಲ್ಲಾದ ಬದಲಾವಣೆಯನ್ನು ಹೋಲುತ್ತವೆ. ಕಡೆಯದಾಗಿ ಫರ್ಥ್ ಹಾಗೂ ಅವನ ಸ್ನೇಹಿತರ ಪ್ರಕಾರ. ಕೈಗಾರೀಕರಣವನ್ನು ಪಾಶ್ಚಿಮಾತ್ಯ ರಾಷ್ಟ್ರಗಳು ಅಭಿವೃದ್ಧಿ ಹೊಂದದ ರಾಷ್ಟ್ರಗಳಲ್ಲಿ ಪ್ರಭಾವವನ್ನು ಬೀರಿ ಬದಲಾವಣೆಗಳನ್ನು ತಂದಿತು. ಇದರಿಂದ ತಾಂತ್ರಿಕತೆಯಲ್ಲಿ ಬದಲಾವಣೆ, ಆರ್ಥಿಕ ಹಾಗೂ ಸಮಾಜದಲ್ಲಿ ಬದಲಾವಣೆಯಾಯಿತು. ಇದು ಜೀವನದ ಸಾಮಾಜಿಕ ಕ್ಷೇತ್ರಗಳಲ್ಲಿ ಬದಲಾವಣೆಯನ್ನು ತಂದಿತು. "ಕೈಗಾರಿಕಾ ಕ್ರಾಂತಿಯ" ತಾಂತ್ರಿಕ ಬೆಳವಣಿಗೆಯು ಒಂದೇ ರೀತಿಯಾಗಿಲ್ಲದಿದ್ದರೂ ಇದರಿಂದ ಉಂಟಾದ ಸಾಮಾಜಿಕ ಪರಣಾಮಗಳೂ ಯಾವಾಗಲೂ ಒಂದೆ ರೀತಿಯಾಗಿವೆ.[7] ಇಲ್ಲಿ ಹೋಲಿಕೆಯಿಂದ ಉಂಟಾಗುವ ಪ್ರಮುಖ ಅಂಶ ಪಾಶ್ಚಿಮಾತ್ಯ ರಾಷ್ಟ್ರಗಳೇ ಅಭಿವೃದ್ಧಿ ಹೊಂದದ ರಾಷ್ಟ್ರಗಳಲ್ಲಿ

ನಗರೀಕರಣ ಹಾಗೂ ಕೈಗಾರೀಕರಣದ ಮುಖಾಂತರ ಬದಲಾವಣೆಗಳನ್ನು ತಂದಿತು. ಕೈಗಾರೀಕರಣದಿಂದ ಉಂಟಾಗುವ ಸಾಮಾಜಿಕ ಪರಿಣಾಮಗಳಿಗೆ ಹಲವಾರು ಪರ್ಯಾಯ ಪರಿಹಾರಗಳಿದ್ದರೂ ಅವುಗಳು ಇನ್ನೂ ಬೆಳಕಿಗೆ ಬಂದಿಲ್ಲ. ವಿವಿಧ ತಾಂತ್ರಿಕ ಅವಶ್ಯಕತೆಗಳ ಬೇಡಿಕೆ ಇರಬಹುದು ಹಾಗೂ ಆರ್ಥಿಕ ವಿಧಾನಗಳು ಬದಲಾಗಿರಬಹುದು ಆದರೂ ಪಶ್ಚಿಮದಲ್ಲುಂಟಾದ ಸಾಮಾಜಿಕ ಪರಿಣಾಮಗಳೇ ಇಲ್ಲೂ ಆಗಿರುವುದು. ಇಲ್ಲಿ ಮತ್ತೊಂದು ಪ್ರಮುಖವಾಗಿ ಗಮನಿಸಬೇಕಾದ ಅಂಶವೆಂದರೆ, ಕೈಗಾರೀಕರಣದ ತಾಂತ್ರಿಕ ಹಾಗೂ ಆರ್ಥಿಕ ಅಂಶಗಳನ್ನು ಮೊದಲು ಪರಿಗಣನೆಗೆ ತೆಗೆದುಕೊಳ್ಳಬೇಕಾಗುತ್ತದೆ. ನಂತರ ಸಾಮಾಜಿಕ ಪರಿಣಾಮಗಳನ್ನು ಗಮನಿಸಬೇಕಾಗುತ್ತದೆ. ಇಲ್ಲಿ ಘಟನೆಗಳನ್ನಾಧರಿಸಿ ಸತ್ಯ ಶೋಧನೆಯನ್ನು ಮಾಡಬೇಕಾಗುತ್ತದೆ. ಹಲವಾರು ಘಟನೆಗಳು ಒಂದೇ ಅವಧಿಯಲ್ಲಿ ನಡೆದಿರುವುದು ಕಂಡುಬಂದಿದೆ. ಇಲ್ಲಿ ಆದ್ಯತೆಗಳ ಅನುಗುಣವಾಗಿ ಘಟನೆಗಳಿಗೆ ಪ್ರಾಮುಖ್ಯತೆ ನೀಡುವ ಅವಶ್ಯಕತೆಯಿಲ್ಲ. ತಾಂತ್ರಿಕ ಬೆಳವಣಿಗೆಯ ಮುಖಾಂತರ ಸಮಾಜದ ಬದಲಾವಣೆಗಳನ್ನು ನಿರ್ಧರಿಸುವಂತಿಲ್ಲ. ಪ್ರತಿ ಘಟನೆಗಳೂ ಇಲ್ಲಿ ಪ್ರಾಮುಖ್ಯತೆಯನ್ನು ಹೊಂದಿವೆ. ಮಾನವೀಯ ಸಂಪನ್ಮೂಲಗಳ ಮುಖಾಂತರವೇ ತಾಂತ್ರಿಕ ಬದಲಾವಣೆ ಸಾಧ್ಯ ಎಂದು ನಗರೀಕರಣ ಸಿದ್ಧಾಂತ ಪ್ರತಿಪಾದಿಸುತ್ತದೆ.ಈ ಹಿನ್ನೆಲೆಯಲ್ಲಿ ಅಧ್ಯಯನ ಸಮೀಕ್ಷೆ ಮತ್ತು ವರದಿಗಳನ್ನು ವಿಶ್ಲೇಷಣೆಗೆ ಒಳಪಡಿಸಿ ನೋಡುವ ಪ್ರಯತ್ನವನ್ನು ಮಾಡಲಾಗಿದೆ.

ಲೇವಿಸ್ ಮರ್ಮ್‌ಪೋರ್ಡ್ (೧೯೬೩) ರವರು ಅರ್ಬನ್ ಲೋಕಲ್ ಗವರನ್ಮೆಂಟ್ ಆಂಡ್ ಅಡಮಿನಿಶ್ಟ್ರೇನ್ ಇನ್ ಇಂಡಿಯಾ ಎಂಬ ಗ್ರಂಥದಲ್ಲಿ ಅಮೆರಿಕದ ರಾಜಕೀಯ ಪ್ರಕ್ರೀಯೆಯಲ್ಲಿ ಭಾಗವಹಿಸುವಿಕೆಯ ವ್ಯಾಖಾನಗಳ ಪ್ರಕಾರ ಭಾಗವಹಿಸುವಿಕೆಯು ವ್ಯಕ್ತಿಯ ನಿರ್ದಿಷ್ಟ ಸ್ಥಾನದ ಕಾರ್ಯಚಟುವಟಿಕೆಯಾಗಿದ್ದು, ಅದು ರಾಜಕೀಯದೆಡೆಗೆ ಅವರ ಮನೋಭಾವನೆಯಾಗಿದೆ ಎಂದು ಸಹಮತ ವ್ಯಕ್ತಪಡಿಸುತ್ತಾರೆ.[೮] ಅಂದರೆ, ಅಮೇರಿಕಾದಲ್ಲಿ ಕಡಿಮೆ ಜನಸಂಖ್ಯೆ, ಆದಾಯ, ಉತ್ತಮ ಆರೋಗ್ಯದ ಸೌಲಭ್ಯಗಳೊಂದಿಗೆ ಅದರ ಸದುಪಯೋಗದ ಜ್ಞಾನ ಹೊಂದಿರುವುದು, ಹೆಚ್ಚಿನ ಸಂಖ್ಯೆಯಲ್ಲಿ ಶಿಕ್ಷಿತರು ರಾಜಕೀಯ ಆಸಕ್ತಿ ಮತ್ತು ಜನರು ರಾಜಕೀಯದೊಂದಿಗೆ ಇರುವ ಹೊಂದಾಣಿಕೆಯಂತಹ ಅಂಶಗಳು ನಮ್ಮ ದೇಶದಲ್ಲಿ ಇರದಿರುವುದರಿಂದ ಅಂತಹ ರಾಜಕೀಯ ಪರಿಸರಕ್ಕೆ ಹೊಂದಿಕೊಳ್ಳುವುದು ಕಷ್ಟಸಾಧ್ಯ.

ಮೀನಾಕ್ಷಿ ಸುಂದರಂ (೧೯೬೪) ರವರ ಡಿಸೆಂಟ್ರಲೈಜೇಶನ್ ಇನ್ ಡೆವಲಪಿಂಗ್ ಕಂಟ್ರೀಜ್ ಎಂಬ ಗ್ರಂಥದಲ್ಲಿ ಅಭಿವೃದ್ಧಿ ಹೊಂದುತ್ತಿರುವ ೩ ರಾಷ್ಟ್ರಗಳಾದ ನೈಜಿರಿಯಾ, ಚೈನಾ ಮತ್ತು ಭಾರತ ದೇಶಗಳ ವಿಕೇಂದ್ರೀಕೃತ ವ್ಯವಸ್ಥೆಯ ಮಾದರಿಯ ಅಧ್ಯಯನ ಒಳಗೊಂಡಿದೆ. ಇದರಲ್ಲಿ ಸ್ಥಳೀಯ ಸರ್ಕಾರವು ಜನ ಆಸೆ–ಆಕಾಂಕ್ಷೆಗಳನ್ನು, ಸ್ಥಳೀಯ ಬೇಡಿಕೆಗಳನ್ನು ಪರಿಣಾಮಕಾರಿಯಾಗಿ ಪರಿಹರಿಸುವಂತಹ ಸಾಧನವಾಗಬೇಕು ಎಂಬಂಥ ವಿಷಯವನ್ನು ಇಲ್ಲಿ ಚರ್ಚಿಸಲಾಗಿದೆ. ಆದರೆ ಈ ಅಧ್ಯಯನಗಳಲ್ಲಿ ಕಂಡುಬರುವ ಮುಖ್ಯ ಕೊರತೆ ಎಂದರೆ ಸ್ಥಳೀಯ ಜನರು ಅಭಿವೃದ್ಧಿಯಲ್ಲಿ ಪಾಲ್ಗೊಳ್ಳುವುದನ್ನು ವಿಶ್ಲೇಷಣೆ ಮಾಡದಿರುವುದು. ಅಭಿವೃದ್ಧಿಯಲ್ಲಿ ಪಾಲ್ಗೊಳ್ಳುವುದರಿಂದ ಜನರ ಸ್ಥಳೀಯ ಸರ್ಕಾರದ ಜ್ಞಾನ, ಸ್ಥಳೀಯ ವಸ್ತುಗಳ ಬಗ್ಗೆ ಹಾಗೂ ಸ್ಥಳೀಯ ವ್ಯವಸ್ಥೆಯ ಬಗ್ಗೆ ಅವರ ಗ್ರಹಿಕೆಯನ್ನು ತಿಳಿಸುತ್ತದೆ. ಸ್ಥಳೀಯ ಸಂಸ್ಥೆಗಳಲ್ಲಿ ಪಾಲ್ಗೊಳ್ಳುವುದನ್ನು ಸೀಮಿತ ಸೂಚಿಗಳ ಮೂಲಕ ವಿಶ್ಲೇಷಿಸುತ್ತದೆ. ಅವುಗಳೆಂದರೆ ಸ್ಥಳೀಯ ಮಾಹಿತಿ ಪಡೆಯುವುದು, ಮತ ನೀಡುವುದು ಮತ್ತು

ರಾಜಕೀಯ ಪ್ರಚಾರದಲ್ಲಿ ಭಾಗವಹಿಸುವುದು ಮುಂತಾದವುಗಳು ವ್ಯಕ್ತಿ ಮತ್ತು ಸಮುದಾಯ ಅಭಿವೃದ್ಧಿಯಲ್ಲಿ ರಾಜಕಾರಣ ಮುಖ್ಯಪಾತ್ರ ವಹಿಸುತ್ತದೆ. ಅಭಿವೃದ್ಧಿಯ ಪಾಲು ಪಡೆಯಲು ಪಾಲ್ಗೊಳ್ಳುವಿಕೆ ಅನಿವಾರ್ಯ ಎಂದು ಗ್ರಹಿಸಲಾಗಿದೆ.[೯] ರಾಜಕೀಯ ಭಾಗವಹಿಸುವಿಕೆ ಆರ್ಥಿಕ ಅವಶ್ಯಕತೆಗಳನ್ನು ಪಡೆಯುವ ಮಾಧ್ಯಮವಾಗಿ ಕಾರ್ಯ ನಿರ್ವಹಿಸುತ್ತದೆ ಎಂಬ ಗ್ರಹಿಕೆಯ ಹಿನ್ನೆಲೆಯಲ್ಲಿ ನಗರ ಮಟ್ಟದಲ್ಲಿ ಶ್ರೀಮಂತರು ಮತ್ತು ಮಧ್ಯಮ ವರ್ಗದವರು ರಾಜಕೀಯದಲ್ಲಿ ಭಾಗವಹಿಸಿ ಆರ್ಥಿಕ ಅವಕಾಶಗಳನ್ನು ಪಡೆಯಬಹುದು ಆದರೆ ಈ ನಗರೀಕರಣದಿಂದ ತಳವರ್ಗದ ಜನರಿಗೆ ಸರಿಯಾದ ಕನಿಷ್ಠ ಮೂಲಭೂತ ಸೌಲಭ್ಯಗಳ ಲಭ್ಯತೆಯಿಲ್ಲದೆ ನಿಕೃಷ್ಟ ಜೀವನವನ್ನು ಸಾಗಿಸುತ್ತಿರುವುದ್ದರಿಂದ ಇವರಿಗೆ ಯಾವ ಭಾಗವಹಿಸುವಿಕೆಯಾಗಲಿ ಅಥವಾ ಆರ್ಥಿಕ ಅವಕಾಶಗಳನ್ನು ಪಡೆದಿರುವುದರ ಪ್ರಶ್ನೆಯೇರಿರುವುದಿಲ್ಲ ಎಂದು ಅಭಿಪ್ರಾಯವನ್ನು ಪಡಲಾಗಿದೆ.

ಮೊಹಮದ್ ನಜರುಲ್ (೨೦೦೩) ರವರ ಡೀಸೆಂಟ್ರಲೈಜ಼್ಡ್ ಗವರ್ನೆನ್ಸ್ ಆ್ಯಂಡ್ ಪೀಪಲ್ಸ್ ಪಾರ್ಟಿಸಿಪೇಷನ್ ಎಂಬ ಗ್ರಂಥದಲ್ಲಿ ಪಶ್ಚಿಮ ಬಂಗಾಳದಲ್ಲಿ ನಿರ್ಲಕ್ಷಿತರು ಮತ್ತು ಕೆಳವರ್ಗದ ಜನ ಎಡಪಂಥೀಯ ಪಕ್ಷಗಳಿಗೆ ಖಾಯಂ ಮತದಾರರಾಗಿದ್ದಾರೆ. ಇವರು ಸಂಘಟಿತರಾಗಿ ಎಡಪಂಥೀಯ ಪಕ್ಷಗಳನ್ನು ಬೆಂಬಲಿಸುತ್ತಿದ್ದಾರೆ. ಹಾಗಾಗಿ ಎಡಪಂಥೀಯ ಸರ್ಕಾರಗಳು ಅಧಿಕಾರ ವಿಕೇಂದ್ರೀಕರಣ ಮತ್ತು ಭೂ ಸುಧಾರಣೆಯಂಥ ಜನಪರವಾದ ಕಾರ್ಯಕ್ರಮಗಳನ್ನು ರೂಪಿಸಿದೆ. ಇಂತಹ ಕಾರ್ಯಕ್ರಮಗಳಿಂದಾಗಿ ಜನರ ಆರ್ಥಿಕ ಮಟ್ಟದಲ್ಲಿ ಸುಧಾರಣೆಯಾಗಿ ಹಿಂಸೆಯ ಪ್ರಮಾಣ ಕಡಿಮೆಯಾಗಿದೆ. ಇಂತಹ ಪ್ರಯತ್ನಗಳಿಂದಾಗಿ ನಿರ್ಲಕ್ಷಿತ ಸಮುದಾಯಗಳಲ್ಲಿ ಆತ್ಮಗೌರವ ಹೆಚ್ಚಳವಾಗಿದೆ. ಆದರೂ ಇಲ್ಲಿ ನಗರ ಸ್ಥಳೀಯ ಸಂಸ್ಥೆಗಳು ಮತ್ತು ಅಭಿವೃದ್ಧಿ ಸಂಬಂಧವನ್ನು ಈ ಅಧ್ಯಯಗಳು ಸ್ಥೂಲವಾಗಿ ಗುರುತಿಸಿವೆ. ಇಂದಿನ ಅನನ್ಯತೆ ರಾಜಕಾರಣ ಮತ್ತು ಅಭಿವೃದ್ಧಿಯ ಮೇಲೆ ನಡೆಯುತ್ತಿರುವ ಚರ್ಚೆಗಳು ಈ ಬಗೆಯ ಸ್ಥೂಲಚಿತ್ರಣವನ್ನು ಗಂಭೀರವಾಗಿ ಪರಿಗಣಿಸುವುದಿಲ್ಲ. ನಿಖರವಾಗಿ ಗುರುತಿಸುವ ಪ್ರಯತ್ನ ಇಂದು ಅನಿವಾರ್ಯವಾಗಿದೆ. ಇಂತಹ ಕನಿಷ್ಠ ರಾಜಕೀಯ ಪಾಲ್ಗೊಳ್ಳುವಿಕೆ ಅವರ ಆರ್ಥಿಕ ಹಿಂದುಳಿಯುವಿಕೆಗೆ ಮುಖ್ಯ ಕಾರಣವಾಗುತ್ತದೆ.[೧೦] ಈ ಹಿನ್ನೆಲೆಯಲ್ಲಿ ನಗರ ಸ್ಥಳೀಯ ಮಟ್ಟದಲ್ಲಿ ಭಾಗವಹಿಸುವಂತೆ ಮತ್ತು ರಾಜಕೀಯ ಅಧಿಕಾರವು ಭಾರತದ ಪ್ರತಿಯೊಬ್ಬ ಪ್ರಜೆಯು ಅನುಭವಿಸಲು ಅನುಕೂಲವಾಗಲೆಂಬ ಉದ್ದೇಶದಿಂದ ಸ್ಥಳೀಯ ಸರ್ಕಾರದ ವ್ಯವಸ್ಥೆಯು ಆರ್ಥಿಕ ಮತ್ತು ಸಾಮಾಜಿಕ ಚಲನೆಯ ಮಾಧ್ಯಮವಾಗಿ ಮುಂದುವರಿಯಬೇಕಾದ ಅಗತ್ಯವಿದೆ ಎಂದು ಅಭಿಪ್ರಾಯ ಪಡಲಾಗಿದೆ.

ಬಾಂಬರಿ ಸಿ.ಪಿ. (೧೯೭೨) ರವರ ಅರ್ಬನ್ ಪ್ಲಾನಿಂಗ್ ಆ್ಯಂಡ್ ಲೋಕಲ್ ಅಥಾರಿಟೀಸ್ ಎಂಬ ಗ್ರಂಥದಲ್ಲಿ ಪಶ್ಚಿಮ ಬಂಗಾಳದ ಅಧ್ಯಯನದಿಂದ ಸ್ಥಳೀಯ ಸರ್ಕಾರಗಳ ಪಾಲ್ಗೊಳ್ಳುವಿಕೆ ಮತ್ತು ಅಭಿವೃದ್ಧಿಯ ನಡುವಿನ ಸಂಬಂಧವನ್ನು ಬೆಂಬಲಿಸಿದೆ. ಇವರ ಅಧ್ಯಯನ ತಿಳಿಸುವಂತೆ ರಾಜಕಾರಣದಲ್ಲಿ ಜನರ ಸಕ್ರಿಯ ಪಾಲ್ಗೊಳ್ಳುವಿಕೆ ಸರ್ಕಾರಗಳಿಗೆ ಜನಪರ ಯೋಜನೆಗಳನ್ನು ರೂಪಿಸುವಂತೆ ಪ್ರೇರೇಪಿಸಿದೆ. ಜನಪರ ಯೋಜನೆಗಳು ಹೆಚ್ಚಾದಂತೆ ರಾಜಕಾರಣದಲ್ಲಿ ಜನರ ಸಕ್ರಿಯ ಪಾಲ್ಗೊಳ್ಳುವಿಕೆ ಹೆಚ್ಚಾಗಿದೆ. ಸ್ಥಳೀಯ ಸರ್ಕಾರಗಳು ಮತ್ತು ಅಭಿವೃದ್ಧಿಯ ನಡುವಿನ ಸಂಬಂಧಗಳು ಪರಸ್ಪರ ಪೂರಕವಾಗಿರುವ ಸಂಗತಿಗಳು ಈ ಅಧ್ಯಯನಗಳಿಂದ ಸ್ಪಷ್ಟವಾಗುತ್ತದೆ.[೧೧]

ಅದೇ ರೀತಿಯಾಗಿ ಒಂದು ರಾಷ್ಟ್ರ, ರಾಜ್ಯ, ಜಿಲ್ಲೆ ಮತ್ತು ನಗರ ಪ್ರದೇಶ ಅಭಿವೃದ್ಧಿ ಹೊಂದಬೇಕಾದರೆ ಸ್ಥಳೀಯ ಜನರು ಆರ್ಥಿಕ ಯೋಜನೆಗಳ ಬಗ್ಗೆ ಅರಿವು ಮತ್ತು ಸಕ್ರಿಯವಾಗಿ ಭಾಗವಹಿಸುವಿಕೆಯಿಂದ ಜನಸಂಖ್ಯೆ ನಿಯಂತ್ರಣ, ಕೈಗಾರಿಕೆಗಳ ಸ್ಥಾಪನೆ, ವಸತಿ, ಶುದ್ಧ ಕುಡಿಯುವ ನೀರು, ಉತ್ತಮ ಮಾರುಕಟ್ಟೆ, ನಗರದಲ್ಲಿ ಒಳಚರಂಡಿ ವ್ಯವಸ್ಥೆ ಇತರೆ ಮೂಲಭೂತ ಸೌಲಭ್ಯಗಳನ್ನು ಪಡೆಯುವುದು ಸಾಧ್ಯವಾಗುತ್ತದೆ.

ಮಾಳವಿಯಾ (೧೯೯೧)ರವರು ಪಂಚಾಯತ್ ರಾಜ್: ಎ ಸ್ಟಡಿ ಆಫ್ ರೂರಲ್ ಲೋಕಲ್ ಗವರ್ನಮೆಂಟ್ ಎಂಬ ಗ್ರಂಥದಲ್ಲಿ ಸ್ಥಳೀಯ ರಾಜಕೀಯ ಭಾಗವಹಿಸುವಿಕೆಯನ್ನು ಮತದಾನದ ಹೊರತಾಗಿ ರಾಜಕೀಯ ಆಸಕ್ತಿಯನ್ನು ಅಳೆಯುವ ಮಾನದಂಡವನ್ನಾಗಿ ರೂಪಿಸುವತ್ತ ಗಮನಹರಿಸಿದ್ದಾರೆ. ಬದಲಾಗಿ ಭಾಗವಹಿಸುವುದು ಸರ್ಕಾರದ ನಿರ್ಣಯ ಮತ್ತು ವ್ಯವಸ್ಥಾಪನಾ ಪ್ರಕ್ರಿಯೆಯನ್ನು ಪ್ರಭಾವಗೊಳಿಸಲು ರೂಪಗೊಳ್ಳುವ ಚಟುವಟಿಕೆಗಳು. ಇವು ಸ್ವಲ್ಪಮಟ್ಟಿಗೆ ಸರ್ಕಾರದ ಮಿತಿಯಲ್ಲಿಯೇ ನಡೆಯುವ ಚಟುವಟಿಕೆಗಳಾಗಿವೆ. ಪ್ರಾರಂಭಿಕ ಹಂತದ ಈ ವ್ಯಾಖ್ಯಾನಗಳು ಭಾಗವಹಿಸುವುದನ್ನು ಸೀಮಿತ ನೆಲೆಯಲ್ಲಿ ಪರಿಭಾವಿಸುತ್ತವೆ. ಇವುಗಳು ನಾಗರಿಕರನ್ನು ಚುನಾವಣೆಯಲ್ಲಿ ಪಾಲ್ಗೊಳ್ಳುವಿಕೆ, ರಾಜಕೀಯ ಚರ್ಚೆ, ಸಂಘಟನೆ, ಪ್ರಚಾರ ಮತ್ತು ಸಭೆಗಳಿಗೆ ಭಾಗವಹಿಸುವ ಕ್ರಿಯೆಗಳಿಗೆ ಸೀಮಿತಗೊಳಿಸುತ್ತವೆ. ನಂತರದ ದಿನಗಳಲ್ಲಿ ಭಾಗವಹಿಸುವುದನ್ನು ಚುನಾವಣಾ ಪ್ರಕ್ರಿಯೆಯ ಮೂಲಕ ವ್ಯಕ್ತಿ ಗುಂಪುಗಳನ್ನು ಪ್ರಭಾವಗೊಳಿಸುವ ನಿಟ್ಟಿನಲ್ಲಿ ವ್ಯಾಪಕವಾಗಿ ವ್ಯಾಖ್ಯಾನಿಸಲಾಯಿತು.[೨] ಭಾಗವಹಿಸುವಿಕೆಯು ವಿಶೇಷವಾಗಿ ಸ್ಥಳೀಯ ಸಂಸ್ಥೆಗಳು ಜನರಿಗೆ ಅಭಿವೃದ್ಧಿಯ ಮಾಧ್ಯಮವಾಗಿದೆ. ಅವರಿಗೆ ನಿರ್ಣಾಯಕರ ಮುಂದೆ ಪ್ರಸ್ತಾಪಗಳನ್ನು ಮಂಡಿಸುವ, ಸ್ಥಾನಗಳನ್ನು ಕುರಿತು ಚರ್ಚಿಸುವ, ಸುಧಾರಣೆಗಳನ್ನು ಪ್ರಸ್ತಾಪಿಸುವ, ಸಹನಿರ್ಣಾಯಕರಾಗಿ ಆಡಳಿತಾತ್ಮಕ ವಿಷಯಗಳ ಮೇಲೆ ವಿವೇಚನಾಧಿಕಾರ ಚಲಾಯಿಸುವ ಸೂಕ್ತ ಕ್ಷೇತ್ರಗಳಲ್ಲಿ ತಮ್ಮ ಸಂಸ್ಥೆಗಳನ್ನು ಸ್ಥಾಪಿಸುವ ಮತ್ತು ನಿರ್ವಹಿಸುವ ಸಾಮರ್ಥ್ಯವನ್ನು ಭಾಗವಹಿಸುವಿಕೆಯು ದೃಢೀಕರಿಸಬೇಕು ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಲಾಗಿದೆ.

ಶೂಜ್‌ಮನ್ (೨೦೦೧) ರವರು ಯೂನಿವರ್ಸಲ್ ಡಿಕ್ಲರೇಷನ್ ಆಫ್ ಹ್ಯೂಮನ್ ರೈಟ್ಸ್ ಮತ್ತು ಇಂಟರ್‌ನ್ಯಾಷನಲ್ ಕಾನ್ವೆಂಟ್ ಆಫ್ ಸಿವಿಲ್ ಆ್ಯಂಡ್ ಪೊಲಿಟಿಕಲ್ ರೈಟ್ಸ್ ಸ್ಪಷ್ಟಪಡಿಸಿರುವಂತೆ "ಭಾಗವಹಿಸುವುದೆಂದರೆ ಸರ್ಕಾರದಲ್ಲಿ ಪಾಲ್ಗೊಳ್ಳುವುದು ಅಥವಾ ಸಾರ್ವಜನಿಕ ವ್ಯವಹಾರಗಳನ್ನು ರಕ್ಷಿಸುವುದಾಗಿದೆ. ವಿಶ್ವಸಂಸ್ಥೆಯ ಮಾನವ ಹಕ್ಕುಗಳ ಸಮಿತಿ ವಿಸ್ತೃತವಾಗಿ ವ್ಯಾಖ್ಯಾನಿಸಿರುವಂತೆ, ಭಾಗವಹಿಸುವಿಕೆಯನ್ನು ವಿಶಾಲವಾದ ನೆಲೆಯಲ್ಲಿ ಪರಿಭಾವಿಸುತ್ತವೆ. ಹಾಗೆಯೇ ಇತ್ತೀಚಿನ ಅಧ್ಯಯನಗಳಲ್ಲಿ ಭಾಗವಹಿಸುವಿಕೆಯ ಹೊಸ ಆಯಾಮವನ್ನು ಕೂಡ ನೀಡಲಾಗುತ್ತಿದೆ. ಮತದಾನೇತರ ಅಥವಾ ಅಧಿಕೃತ ವಿಧಾನಗಳ ಆಚೆ ನಡೆಯುವ ಚಟುವಟಿಕೆಗಳು ಅಥವಾ ದೊಡ್ಡ ಸಮಸ್ಯೆಗಳನ್ನು ಅಧಿಕಾರಿಗಳ ಭೇಟಿಯಿಂದ ಅಥವಾ ಆತ್ಮೀಯರು ಹಾಗೂ ಸಮುದಾಯದವರ ಸಹಾಯ ಪಡೆದು ಪರಿಹಾರ ಕಂಡುಕೊಳ್ಳುವುದಾಗಿದೆ.[೩] ಮೇಲಿನ ಅಧ್ಯಯನಗಳಲ್ಲಿರುವಂತೆ ಸ್ಥಳೀಯ ಸರ್ಕಾರಗಳ ಭಾಗವಹಿಸುವಿಕೆಗೆ ಹೊಸ ಆಯಾಮವನ್ನು ನೀಡಿವೆ ಭಾಗವಹಿಸುವಿಕೆಯು ವಿಶಾಲವಾದ ದೃಷ್ಟಿಕೋನದಿಂದ ಪರಿಭಾವಿಸಲಾಗುತ್ತಿದ್ದು ಅದು ಜೀವನದ ವಿವಿಧ ಆಯಾಮಗಳನ್ನು ಒಳಗೊಂಡಿದೆ. ಅದು ಪಕ್ಷಗಳ

ಮೂಲಕ ಸ್ಪರ್ಧಿಸುವ, ಮತ ಚಲಾಯಿಸುವ, ಕಾನೂನುಗಳನ್ನು ರೂಪಿಸುವ ಮತ್ತು ಒಂದು ಸಮುದಾಯವಾಗಿ ನಿರ್ದಿಷ್ಟ ವಿಷಯಗಳಲ್ಲಿ ವಿವೇಚನಾಧಿಕಾರ ಚಲಾಯಿಸುವ ಅಂಶಗಳನ್ನು ಅಂತರ್ಗತಗೊಳಿಸಿಕೊಳ್ಳುವ ಅಗತ್ಯವಿದೆ.

ರಾಜ್ ಕುಮಾರ್(೧೯೭೭) ರವರು ತಮ್ಮ ಪ್ರಾಬ್ಲಮ್ಸ್ ಆಫ್ ಪಂಚಾಯತ್ಸ್ ತಮ್ಮ ಗ್ರಂಥದಲ್ಲಿ ಪ್ರಜಾಸತ್ತಾತ್ಮಕ ಸ್ಥಳೀಯ ಮಟ್ಟದಲ್ಲಿ ಸಕ್ರಿಯವಾಗಿ ಪಾಲ್ಗೊಳ್ಳುವ ಮೂಲಕ ಮಾತ್ರ ಸ್ಥಳೀಯ ಜನರು ಅಭಿವೃದ್ಧಿ ಸಾಧಿಸಬಹುದೆಂದು ಗ್ರಹಿಸಲಾಗಿದೆ. ಹಾಗೆಯೇ ಸ್ಥಳೀಯ ಸಂಸ್ಥೆಗಳ ಅಭಿವೃದ್ಧಿಯನ್ನು ಕೈಗೊಳ್ಳುವಲ್ಲಿ ಸಮಸ್ಯೆಗಳನ್ನು ಮಂಡಿಸುತ್ತಾ ಮುಖ್ಯವಾದ ಮೂರು ಸಮಸ್ಯೆಗಳನ್ನು ಗುರುತಿಸಿದ್ದಾರೆ. ಅಂದರೆ ಪ್ರಾಮಾಣಿಕ ನಗರ ಸ್ಥಳೀಯ ಸಂಸ್ಥೆಗಳ ಚುನಾಯಿತ ಸದಸ್ಯರ ಮತ್ತು ಸಿಬ್ಬಂದಿ ನಡುವೆ ವೈಮನಸ್ಸು, ಹಣದ ಕೊರತೆ ಮತ್ತು ಸೌಲಭ್ಯಗಳ ಕೊರತೆಗಳ ಬಗ್ಗೆ ಚರ್ಚೆಯನ್ನು ಮಾಡಿದ್ದಾರೆ.[೧೪] ಈ ಮೇಲಿನ ಅಂಶಗಳ ಜೊತೆಗೆ ಜಾಗತೀಕರಣರದ ಪರಿಣಾಮವಾಗಿ ಸಾಮಾನ್ಯ ನಗರ ಜನರು ಗ್ರಾಮೀಣ ಮಟ್ಟದಲ್ಲಿರುವ ಸಮಸ್ಯೆಗಳನ್ನು ನಗರದಲ್ಲಿಯೂ ಸಹ ಎದರುಸುತ್ತಿರುವುದರ ಬಗ್ಗೆ ಅಭಿಪ್ರಾಯಗಳನ್ನು ವ್ಯಕ್ತಪಡಿಸಬೇಕಾಗಿತ್ತು ಎಂದು ಹೇಳಲಾಗಿದೆ.

ಡೇವಿಸ್ ಜೇಮ್ಸ್(೧೯೬೩) ರವರು ಹ್ಯೂಮನ್ ನೇಚರ್ ಇನ್ ಪಾಲಿಟಿಕ್ಸ್ ಎಂಬ ಗ್ರಂಥದಲ್ಲಿ ಅದರ ಲಕ್ಷಣಗಳಾದ ಆಳ್ವಿಕೆ, ಸಮಾನತೆ, ಜನತಾ ಪರಮಾಧಿಕಾರ ಮುಂತಾದವುಗಳಿಂದ ಭಾಗವಹಿಸುವಿಕೆಯನ್ನು ಬೇರ್ಪಡಿಸುವಂತಿಲ್ಲ. ಸಾಂಪ್ರದಾಯಿಕ ರಾಜ ಪ್ರಭುತ್ವಗಳಲ್ಲಿ ಸಹಭಾಗಿತ್ವ ಮತ್ತು ಅಧಿಕಾರ ಕೇವಲ ಉನ್ನತವರ್ಗಕ್ಕೆ ಮಾತ್ರ ಸೀಮಿತವಾಗಿತ್ತು. ಆದರೆ ಪ್ರಜಾಪ್ರಭುತ್ವಗಳು ಈ ವಿಶೇಷಾಧಿಕಾರಗಳನ್ನು ಹಕ್ಕುಗಳಾಗಿ ಪರಿವರ್ತಿಸಿ ಎಲ್ಲರಿಗೂ ಸಮಾನ ಅವಕಾಶಗಳನ್ನು ನೀಡಿದೆ. ಬದಲಾದ ಸನ್ನಿವೇಶದ ಹಿನ್ನೆಲೆಯಲ್ಲಿ ಸಮಾಜಶಾಸ್ತ್ರಜ್ಞರು ಭಾಗವಹಿಸುವಿಕೆಯ ಕುರಿತು ಹೆಚ್ಚು ಅಧ್ಯಯನಗಳನ್ನು ಕೈಗೊಳ್ಳುತ್ತಿದ್ದಾರೆ. ಹಾಗೆಯೇ ಅರಿಸ್ಟಾಟಲ್ ಅವರಿಂದ ಹಿಡಿದು ಹೆಚ್. ಜಾನ್‌ಡಿವೆಯ ವರೆಗೆ ಎಲ್ಲಾ ರಾಜಕೀಯ ಚಿಂತಕರು ಜನಾಪೇಕ್ಷಿತ ರಾಜಕೀಯ ಭಾಗವಹಿಸುವಿಕೆಯನ್ನು ಬೆಂಬಲಿಸಿ ಅಧ್ಯಯನದಲ್ಲಿ ದಾಖಲಿಸಿದ್ದಾರೆ. ಈ ಚಿಂತಕರು ಭಾಗಹಿಸುವಿಕೆಯನ್ನು ಕ್ರಿಯಾಶೀಲ ಶಕ್ತಿಯಾಗಿ, ನಿರಂಕುಶತೆ ವಿರುದ್ಧದ ರಕ್ಷಣೆಯಾಗಿ ಮತ್ತು ಸಾಮೂಹಿಕ ವಿವೇಚನೆಯ ಮಾಧ್ಯಮವಾಗಿ ಪರಿಭಾವಿಸಿದ್ದಾರೆ. ಭಾಗವಹಿಸುವಿಕೆಯ ಈ ಧೋರಣೆಗಳು ಬಹುಸಂಖ್ಯಾತರನ್ನು ರಾಜ್ಯದ ವಿಷಯದಲ್ಲಿ ತೊಡಗಿಸುತ್ತವೆ. ಬಹುಸಂಖ್ಯಾತರ ಪಾಲ್ಗೊಳ್ಳುವಿಕೆಯು ಒಂದೆಡೆ ಸ್ಥಿರತೆ ಮತ್ತು ಸುವ್ಯವಸ್ಥೆಯನ್ನು ತಂದುಕೊಟ್ಟರೆ ಮತ್ತೊಂದೆಡೆ ಪ್ರತಿಯೊಬ್ಬರಿಗೂ ತಮ್ಮ ಹಿತಾಸಕ್ತಿಯನ್ನು ಅಭಿವ್ಯಕ್ತಗೊಳಿಸುವ ಅವಕಾಶ ನೀಡಿ ಸರ್ವರ ಕಲ್ಯಾಣ ಸಾಧಿಸಲು ಅನುವು ಮಾಡಿಕೊಡುತ್ತದೆ. ಭಾಗವಹಿಸುವಿಕೆಯು ಮುಖ್ಯವಾಗಿ ಪ್ರಾತಿನಿಧಿಕ ಸರ್ಕಾರದಲ್ಲಿ ಒಟ್ಟಾರೆ ಸಮಾಜದ ಹಿತಾಸಕ್ತಿಗೆ ರಕ್ಷಣೆಯಾಗುತ್ತದೆ. ಇಂತಹ ಸರ್ಕಾರದಲ್ಲಿ ಹಿತಾಸಕ್ತಿಯ ಅಭಿವ್ಯಕ್ತಿ ಸ್ವಾತಂತ್ರ್ಯವು ಸಂವೇದಿ ಪ್ರಜ್ಞೆಯನ್ನು ಮೂಡಿಸಿ ಸಕ್ರಿಯ ರಾಜಕೀಯ ಸಹಭಾಗಿತ್ವವನ್ನು ಪ್ರೇರೇಪಿಸುತ್ತದೆ. ಆಳುವ ಮತ್ತು ಆಳಿಸಿಕೊಳ್ಳುವವರ ನಡುವಣ ಸಂಬಂಧವನ್ನು ವೃದ್ಧಿಸುತ್ತದೆ. ಒಟ್ಟಾರೆ ಇಂತಹ ಸನ್ನಿವೇಶವು ಉತ್ತಮ ಸಾಮಾಜಿಕ ಸ್ಥಿತಿಗೆ ಅಗತ್ಯವಾಗಿದೆ. ರಾಜಕೀಯ ವ್ಯವಸ್ಥೆಯಲ್ಲಿ ವ್ಯಕ್ತಿಯ ಪಾಲ್ಗೊಳ್ಳುವಿಕೆಯನ್ನು ರಾಜಕೀಯ ಸಂಸ್ಥೆಗಳ ಭಾಗವಹಿಸುವಿಕೆಯೆಂದು ಸರಳವಾಗಿ ಪರಿಭಾವಿಸಬಹುದು.[೧೫]

ಇಕ್ಬಾಲ್ ನಾರಾಯಣ (೧೯೬೮) ರವರು ಡೆಮಾಕ್ರಟಿಕ್ ಡಿಸೆಂಟ್ರಲೈಜೇಶನ್ಸ್ ದಿ ಇಂಡಿಯಾ ಇಮೇಜ್ ಆ್ಯಂಡ್ ದಿ ರಿಯಾಲಿಟಿ ಎಂಬ ಗ್ರಂಥದಲ್ಲಿ ವಿಕೇಂದ್ರೀಕರಣದ ಮಹತ್ವ ಹಾಗೂ ತಾಯಿ ಬೇರಿನಂತಿರುವ ನಗರ ಸ್ಥಳೀಯ ಸಂಸ್ಥೆಗಳ ಕಾರ್ಯವೈಖರಿಯು ಪ್ರಜಾಪ್ರಭುತ್ವ ವ್ಯವಸ್ಥೆಗೆ ಸಹಾಯಕಾರಿಯಾಗಿರುವುದು ಕಂಡುಬಂದರೂ ಸೇವೆಗಳು ಸುರಕ್ಷಿತ ಜೀವನ, ವಿದ್ಯುತ್ ದೀಪದ ಸೌಕರ್ಯ, ಶೌಚಾಲಯಗಳ ನಿರ್ಮಾಣ, ಮನೆ ನಿರ್ಮಾಣ ಮತ್ತು ಉದ್ಯೋಗ ಇಂತಹ ಸಮಸ್ಯೆಗಳಿಗೆ ಪರಿಹಾರ ಮುಂತಾದವುಗಳನ್ನು ಪಡೆಯುವುದು ಕನಿಷ್ಠ ಮಟ್ಟದ ಅಭಿವೃದ್ಧಿಯಾಗಿದೆ.[೧೬] ಈ ಎರಡೂ ವಾದಗಳಲ್ಲಿ ಕಂಡುಬರುವಂತೆ ಇತರೆ ಅಭಿವೃದ್ಧಿಯಷ್ಟೇ ನಿರ್ದಿಷ್ಟ ಅಭಿವೃದ್ಧಿಯು ಸ್ಥಳೀಯ ಸಂಸ್ಥೆಗಳ ಸಮಸ್ಯೆಗಳಿಗೆ ಪೂರಕ ಪರಿಹಾರದ ಅಗತ್ಯಗಳಾಗುತ್ತವೆ. ಶೌಚಾಲಯ, ರಸ್ತೆ ರಿಪೇರಿ, ಚರಂಡಿ ವ್ಯವಸ್ಥೆಯಂತಹ ಸಮಸ್ಯೆಗಳಿಗೆ ಪರಿಹಾರ ನೀಡಬೇಕಾದದ್ದು ಎಲ್ಲಾ ಸರ್ಕಾರಗಳ ಪ್ರಾಥಮಿಕ ಕರ್ತವ್ಯವಾಗುತ್ತದೆ. ವೈಜ್ಞಾನಿಕ ಗರಿಷ್ಠವಾದಂತಹ ಸಮಸ್ಯೆಗಳಿಗೆ ಪರಿಹಾರವನ್ನು ನೀಡುವುದರಲ್ಲಿ ಭಾಗವಹಿಸುವುದನ್ನು ನಿರ್ಲಕ್ಷಿಸುವಂತಿಲ್ಲ. ಅಂದರೆ ನೀರು, ಚರಂಡಿ ವ್ಯವಸ್ಥೆ ಮತ್ತು ಬೀದಿ ದೀಪಗಳು ಮೂಲಕ ಅಭಿವೃದ್ಧಿಯನ್ನು ಮಾಪನ ಮಾಡುವುದು ಸ್ವಲ್ಪಮಟ್ಟಿಗೆ ಕಷ್ಟಸಾಧ್ಯ ಇವುಗಳು ಅಭಿವೃದ್ಧಿ ಪ್ರಕ್ರಿಯೆಗೆ ಪ್ರಾಥಮಿಕ ಹಂತಗಳಾಗುತ್ತವೆ. ಈ ಹಿನ್ನೆಲೆಯಲ್ಲಿ ಸ್ಥಳೀಯ ಜನರು ಪಡೆದ ಮೇಲಿನ ಅನುಕೂಲಗಳನ್ನು ಸಮುದಾಯ ಪಡೆದ ಕನಿಷ್ಠ ಮಟ್ಟದ ಅಭಿವೃದ್ಧಿ ಎಂದು ಪರಿಭಾವಿಸಿಕೊಳ್ಳಲಾಗಿದೆ. ಇವುಗಳಿಗಿಂತ ಭಿನ್ನವಾದ ಅನುಕೂಲಗಳನ್ನು ಕೂಡ ಸ್ಥಳೀಯರು ಪಡೆದುಕೊಂಡಿದ್ದು ಅವುಗಳನ್ನು ಎರಡನೇ ಗುಂಪಿನ ಸಹಾಯಗಳೆಂದು ವಿಂಗಡಿಸಲಾಗಿದೆ. ಅವುಗಳಲ್ಲಿ ಮುಖ್ಯವಾದವುಗಳೆಂದರೆ ಶಿಕ್ಷಣದ ಸೌಲಭ್ಯಗಳು, ಆರೋಗ್ಯಕ್ಕೆ ಸಂಬಂಧಿಸಿದ ಅನುಕೂಲಗಳು ಮತ್ತು ನೈರ್ಮಲ್ಯೀಕರಣದ ಅಗತ್ಯತೆಗಳು ಮುಂತಾದ ಅನುಕೂಲಗಳನ್ನು ಪಡೆದುಕೊಂಡಿದ್ದಾರೆ. ಕನಿಷ್ಠ ಅಭಿವೃದ್ಧಿಯ ಸಂಗತಿಗಳಿಗೆ ಹೋಲಿಸಿದರೆ ಈ ಅನುಕೂಲಗಳು ವ್ಯಕ್ತಿಗತ ಅಭಿವೃದ್ಧಿಯಲ್ಲಿ ಮುಖ್ಯ ಪಾತ್ರ ವಹಿಸುತ್ತವೆ. ನೀರು, ವಿದ್ಯುತ್ ಮತ್ತು ರಸ್ತೆಗಳು ವ್ಯಕ್ತಿ ಮತ್ತು ಕುಟುಂಬಗಳಿಗೆ ನೆಮ್ಮದಿಯುತ ಜೀವನ ನೀಡುವಲ್ಲಿ ಮುಖ್ಯಪಾತ್ರವಹಿಸುತ್ತವೆ ಎಂದು ಗ್ರಹಿಸಲಾಗಿದೆ.

ಇಲ್ತಿಜಾ ಮತ್ತು ಎಚ್. ಖಾನ್ (೧೯೭೫) ರವರು ದಿ ಪಾಲಿಟಿಕ್ಸ್ ಆಫ್ ಡೆವಲಪ್‌ಮೆಂಟ್ ಎಂಬ ಗ್ರಂಥದಲ್ಲಿ ಸರ್ಕಾರಗಳು ಸಮುದಾಯಗಳ ಸ್ಥಳೀಯ ರಾಜಕೀಯ, ಸಾಮಾಜಿಕ, ಆರ್ಥಿಕ ಅಭಿವೃದ್ಧಿಗಾಗಿ ಸರ್ಕಾರ ರೂಪಿಸಿರುವ ನೀತಿಗಳನ್ನು ಪ್ರಭಾವಿಸಲು ಸ್ಥಳೀಯ ಸಂಸ್ಥೆಗಳು ಎದುರಿಸುತ್ತಿರುವ ಸಮಸ್ಯೆಗಳನ್ನು ಪ್ರಸ್ತಾಪಿಸಿದ್ದಾರೆ. ಸೃಜನಶೀಲವಾದ ಮತ್ತು ಆರೋಗ್ಯಕರವಾದ ಬದುಕನ್ನು ರೂಪಿಸಿಕೊಳ್ಳುವಲ್ಲಿ ಶಾಲೆಗಳು ಮತ್ತು ಆಸ್ಪತ್ರೆಗಳು ಪ್ರಮುಖ ಪಾತ್ರ ವಹಿಸುತ್ತವೆ. ಈ ಸೌಕರ್ಯಗಳಿಲ್ಲದೆ ವ್ಯಕ್ತಿಗತ ಅಭಿವೃದ್ಧಿ ಸಾಧ್ಯವಾಗುವುದಿಲ್ಲ. ಈ ಹಿನ್ನೆಲೆಯಲ್ಲಿ ಜನ ಪ್ರತಿನಿಧಿಗಳು ಮತ್ತು ಜನರು ಸ್ಥಳೀಯ ಸರ್ಕಾರಗಳಲ್ಲಿ ಭಾಗವಹಿಸುವುದರ ಮೂಲಕ ಪಡೆದ ಈ ಸಾಮೂದಾಯಿಕ ಅನುಕೂಲಗಳನ್ನು ಮಧ್ಯಮ ಮಟ್ಟದ ಅಭಿವೃದ್ಧಿ ಎಂದು ಪರಿಭಾವಿಸಿಕೊಳ್ಳಲಾಗಿದೆ. ಮೊದಲನೆಯ ಗುಂಪಿನ ಸಹಾಯಗಳಿಗೆ ಹೋಲಿಸಿದರೆ ಇವು ವ್ಯಕ್ತಿಗತ ಅಭಿವೃದ್ಧಿ ಸಾಧನೆಗೆ ಪೂರಕವಾದ ಅನುಕೂಲಗಳಾಗಿವೆ. ಸುರಕ್ಷಿತವಾದ ಮನೆ ನಿರ್ಮಾಣ ವ್ಯಕ್ತಿಗೆ ಮಾನಸಿಕ ಭದ್ರತೆಯನ್ನು ನೀಡುತ್ತದೆ. ಉತ್ತಮ ಶಿಕ್ಷಣ ಅವನ ಅರಿವನ್ನು ವಿಸ್ತರಿಸುತ್ತದೆ ಮತ್ತು ಯಾವುದಾದರೂ ವೃತ್ತಿಯಲ್ಲಿ ಪರಿಣತಿಯನ್ನು ಪಡೆಯಲು ಸಹಾಯಕಾರಿಯಾಗುತ್ತದೆ.

ಉದ್ಯೋಗವು ಕುಟುಂಬದ ಆದಾಯವನ್ನು ಹೆಚ್ಚಿಸುವಲ್ಲಿ ಪ್ರಮುಖ ಪಾತ್ರ ವಹಿಸುತ್ತದೆ. ಈ ಗುಂಪಿನ ಅನುಕೂಲಗಳನ್ನು ಮಧ್ಯಮಮಟ್ಟದ ಅಭಿವೃದ್ಧಿ ಎಂದು ಪರಿಭಾವಿಸಿಕೊಳ್ಳಲಾಗಿದೆ. ಮೂರನೇ ಗುಂಪಿನ ಅನುಕೂಲಗಳೆಂದರೆ ನಗರ ಸ್ಥಳೀಯ ಸಂಸ್ಥೆಗಳಲ್ಲಿ ಭಾಗವಹಿಸುವುದರ ಮೂಲಕ ಪಕ್ಷಗಳಲ್ಲಿ ಸದಸ್ಯತ್ವ ಮತ್ತು ರಾಜಕೀಯ ಸಂಸ್ಥೆಗಳಲ್ಲಿ ಸದಸ್ಯತ್ವವನ್ನು ಪಡೆದುಕೊಂಡಿದ್ದಾರೆ. ಮೊದಲನೆಯ ಮತ್ತು ಎರಡನೇ ಗುಂಪಿನ ಅನುಕೂಲಗಳಿಗೆ ಹೋಲಿಸಿದರೆ ಮೂರನೇ ಗುಂಪಿನ ಸಹಾಯಗಳು ರಾಜಕೀಯ ಪ್ರಕ್ರಿಯೆಯ ಹಿನ್ನೆಲೆಯಲ್ಲಿ ಇವುಗಳು ಅತ್ಯುತ್ತಮ ಅನುಕೂಲಗಳೆಂದು ಗ್ರಹಿಸಬಹುದು. ಸ್ಥಳೀಯ ಸರ್ಕಾರಗಳ ಸ್ವರೂಪದ ಅನುಕೂಲಗಳನ್ನು ಮೂರನೇ ಗುಂಪಿನ ಸಹಾಯಗಳೆಂದು ವಿಂಗಡಿಸಲಾಗಿದೆ. ಈ ಗುಂಪಿನಲ್ಲಿ ಕೇವಲ ಒಂದೇ ಒಂದು ಸಾಮುದಾಯಿಕ ಸಹಾಯ ಕಂಡುಬರುತ್ತದೆ. ಸ್ಥಳೀಯರ ಸಾಮಾಜಿಕ–ಆರ್ಥಿಕ ಮತ್ತು ರಾಜಕೀಯದ ಸಮಸ್ಯೆಗಳನ್ನು ಚುನಾಯಿತ ಪ್ರತಿನಿಧಿಗಳು ಸಾಮಾನ್ಯ ಸಭೆಯಲ್ಲಿ ಚರ್ಚಿಸಿ ತೀರ್ಮಾನ ತೆಗೆದುಕೊಳ್ಳುತ್ತಾರೆ. ನಗರದ ಪ್ರಮುಖ ಸಮಸ್ಯೆಗಳಾದ ಘನ ತ್ಯಾಜ್ಯಗಳ ವಿಲೇವಾರಿ, ಸಮರ್ಪಕ ಕುಡಿಯುವ ನೀರಿನ ಪೂರೈಕೆ, ನೈರ್ಮಲ್ಯೀಕರಣದ ಮುನಿಸಿಪಾಲಿಟಿ ಕಾರ್ಮಿಕರ ಸಮಸ್ಯೆ ಇವೇ ಮುಂತಾದ ಸಂಗತಿಗಳನ್ನು ನಗರದ ಅಭಿವೃದ್ಧಿಗಾಗಿ ವಿವಿಧ ಸಭೆ ಮತ್ತು ಸ್ಥಾಯಿ ಸಮಿತಿಗಳಲ್ಲಿ ನಗರ ಸ್ಥಳೀಯ ಜನರ ಪರವಾಗಿ ವಿವಿಧ ಸಮಸ್ಯೆಗಳನ್ನು ಸಮರ್ಥವಾಗಿ ಸರ್ಕಾರದ ಮುಂದೆ ಮಂಡಿಸಿದ್ದಾರೆ.[೧೭] ಈ ಹಿನ್ನೆಲೆಯಲ್ಲಿ ಸ್ಥಳೀಯ ಮಟ್ಟದ ಸಮಸ್ಯೆಗಳನ್ನು ಶಾಸನಸಭೆಯಲ್ಲಿ ಪ್ರಸ್ತಾಪಿಸಿದ ಸಂಗತಿಯನ್ನು ನಗರ ಸ್ಥಳೀಯ ಮಟ್ಟದ ಜನರು ಪಡೆದ ಗರಿಷ್ಠ ಮಟ್ಟದ ಸಾಮುದಾಯಿಕ ಅಭಿವೃದ್ಧಿ ಎಂದು ಈ ಅಧ್ಯಯನದಲ್ಲಿ ಪರಿಭಾವಿಸಿಕೊಳ್ಳಲಾಗಿದೆ. ಹೀಗೆ ನಗರ ಸ್ಥಳೀಯ ಸರ್ಕಾರಗಳ ಭಾಗವಹಿಸುವುದರೊಂದಿಗೆ ಅಭಿವೃದ್ಧಿಯ ಸಂಬಂಧವನ್ನು ಕಂಡುಕೊಳ್ಳಲು ಅಭಿವೃದ್ಧಿಯ ಸ್ವರೂಪಗಳನ್ನು ಆಧರಿಸಿ ಕನಿಷ್ಠಮಟ್ಟದ ಅಭಿವೃದ್ಧಿ, ಮಧ್ಯಮಮಟ್ಟದ ಅಭಿವೃದ್ಧಿ ಹಾಗೂ ಗರಿಷ್ಠಮಟ್ಟದ ಅಭಿವೃದ್ಧಿ ಎಂಬ ಸೂಚಿಗಳನ್ನು ಅಧ್ಯಯನಕ್ಕಾಗಿ ರೂಪಿಸಿಕೊಳ್ಳಲಾಗಿದೆ.

ಈ ಮಾದರಿಯ ಅಭಿವೃದ್ಧಿಯನ್ನು ಅಮರ್ತ್ಯ ಸೇನ್ (೨೦೦೮) ರವರು ಸ್ವಾತಂತ್ರ್ಯದೊಂದಿಗೆ ಸಮೀಕರಿಸುತ್ತಾರೆ. ಅವರ ಪ್ರಕಾರ ಸ್ವಾತಂತ್ರ್ಯಯೆಂದರೆ ಶಿಕ್ಷಣ, ಆರೋಗ್ಯ ಮತ್ತು ವರಮಾನ ಇವು ವ್ಯಕ್ತಿಯ ಧಾರಣ ಸಾಮಾರ್ಥ್ಯವನ್ನು ವೃದ್ಧಿಸುತ್ತವೆ. ಎಂಬ ತೀರ್ಮಾನವನ್ನು ನೀಡಿದ್ದಾರೆ.[೧೮] ಕೇವಲ ಶಿಕ್ಷಣ, ಆರೋಗ್ಯ ಮತ್ತು ವರಮಾನದ ಮೇಲೆ ಸ್ವಾತಂತ್ರ್ಯ ಮತ್ತು ಧಾರಣ ಸಾಮಾರ್ಥ್ಯಗಳು ಲಭ್ಯವಾಗುವುದಿಲ್ಲ ಯಾಕೆಂದರೆ, ಭಾರತದಂತಹ ದೇಶಗಳಲ್ಲಿ ಶಿಕ್ಷಣ ಮತ್ತು ವರಮಾನದ ಮೇಲೆ ಸಾಮಾಜಿಕ ಮತ್ತು ಧಾರ್ಮಿಕ ಅಂಶಗಳು ಇವುಗಳ ಮೇಲೆ ಪರಿಧಿಯನ್ನು ಎಳೆಯುತ್ತವೆ. ಹೀಗಾಗಿ, ಅಮರ್ತ್ಯ ಸೇನ್‌ರ ಅಭಿಪ್ರಾಯವನ್ನು ಭಾರತೀಯ ಸಂದರ್ಭಕ್ಕೆ ಅಷ್ಟೊಂದು ಸೂಕ್ತವಲ್ಲ ಎಂದು ಹೇಳಬಹುದು.

ಅದೇ ರೀತಿಯಾಗಿ ಮೆಹಬುಲ್ ಹಕ್ (೨೦೦೮) ಅವರ ಪ್ರಕಾರ ಕುಟುಂಬ ಅನುಭವಿಸುವ ಸಾಮಾಜಿಕ, ಆರ್ಥಿಕ, ರಾಜಕೀಯ ಹಾಗೂ ಸಾಂಸ್ಕೃತಿಕ ಸ್ವಾತಂತ್ರ್ಯವನ್ನು ಆಧರಿಸಿ ಅಭಿವೃದ್ಧಿಯನ್ನು ಮಾಪನ ಮಾಡಬೇಕೆಂದು ಪ್ರತಿಪಾದಿಸಿದ್ದಾರೆ.[೧೯] ಅಭಿವೃದ್ಧಿಯ ಧ್ಯೇಯವೆಂದರೆ ಜನರು ಸುದೀರ್ಘವಾದ, ಆರೋಗ್ಯಕರವಾದ ಮತ್ತು ಸೃಜನಶೀಲವಾದ ಬದುಕನ್ನು ನಡೆಸಲು ಸಾಧ್ಯವಾಗುವಂಥ ವಾತಾವರಣವನ್ನು ಕಲ್ಪಿಸುವ ಅತ್ಯಗತ್ಯವಿದೆ ಎಂದು ಹೇಳಲಾಗಿದೆ. ಇದು ಭಾರತೀಯ ಸಂದರ್ಭಕ್ಕೆ ಸೂಕ್ತವಾದದ್ದು ಎಂದು ಹೇಳಬಹುದು.

ಸತೀಶ್ ಎಸ್. ಗವಾತಿ(೨೦೦೦) ರವರ ದಿ ಇಂಪ್ಯಾಕ್ಟ್ ಎಕಾನಮಿಕ್ ಡೆವಲಪ್‌ಮೆಂಟ್ ಆನ್ ಪೊಲಿಟಿಕಲ್ ಪಾರ್ಟಿಸಿಪೇಶನ್ ಎಂಬ ಗ್ರಂಥದಲ್ಲಿ ರಾಜಕೀಯದಲ್ಲಿ ಭಾಗವಹಿಸುವಿಕೆ ಗಣ್ಯರ ಪಾತ್ರ ಹಾಗೂ ಸಾಮಾಜಿಕ ಸಂಸ್ಥೆಗಳ ಕೆಲಸ ಕಾರ್ಯಗಳು ಮತ್ತು ಆರ್ಥಿಕ, ಸಾಮಾಜಿಕ ಅಧ್ಯಯನಗಳ ಮೇಲೆ ಬೆಳಕು ಚೆಲ್ಲುತ್ತದೆ. ಅದೇ ರೀತಿಯಾಗಿ ಹೆರಾಲ್ಡ್ ಜಿಂಕ್ ಅವರು ಭಾರತದ ಅಭಿವೃದ್ಧಿ ರಾಜಕೀಯದಲ್ಲಿ ಕಂಡುಕೊಂಡಿರುವಂತೆ ಸಾರ್ವಜನಿಕ ನೀತಿಗಳು ಮತ್ತು ಯೋಜನೆಗಳ ಮೂಲಕ ಸ್ಥಳೀಯ ಸರ್ಕಾರಗಳ ಅಭಿವೃದ್ಧಿ ಸಾಧ್ಯವಾಗುತ್ತದೆ ಎಂದು ಅಭಿಪ್ರಾಯ ಪಟ್ಟಿದ್ದಾರೆ.[೨೦] ಹೀಗಾಗಿ ಮೇಲಿನ ಅಧ್ಯಯನಗಳು ನಗರ ಸ್ಥಳೀಯ ಸಂಸ್ಥೆಗಳ ಮತ್ತು ಅಭಿವೃದ್ಧಿಯ ನಡುವಿನ ಸಂಬಂಧವನ್ನು ಗುರುತಿಸುತ್ತವೆ.

ಇಕ್ಬಾಲ್ ನಾರಾಯಣ ಮತ್ತು ಪಿ.ಸಿ. ಮಾಥೂರ್ (೧೯೯೪)ರವರು ಪಾಲಿಟಿಕ್ಸ್ ಇನ್ ಚೇಂಜಿಂಗ್ ಇಂಡಿಯಾ ಎಂಬ ಗ್ರಂಥದಲ್ಲಿ ಭಾರತದ ಪಕ್ಷಪದ್ಧತಿಯಲ್ಲಿ ರಾಜಕೀಯ, ಆರ್ಥಿಕ, ಸಾಮಾಜಿಕ ಅಭಿವೃದ್ಧಿ ಹಾಗೂ ಸ್ಥಳೀಯ ಸರ್ಕಾರಗಳಲ್ಲಿ ರಾಜಕೀಯ ಮಾಹಿತಿ ಪಡೆಯುವುದು, ಮೊದಲ ಮತ್ತು ಕನಿಷ್ಠ ಹಂತವಾಗಿದ್ದು, ರಾಜಕೀಯ ಅಧಿಕಾರ ಪಡೆಯುವುದರ ಗರಿಷ್ಠ ಹಂತದ ಭಾಗವಹಿಸುವಿಕೆಯಿಂದ ಅಭಿವೃದ್ಧಿ ಸಾಧ್ಯವಾಗುತ್ತದೆ.[೨೧] ರಾಜ್ಯ ಸರ್ಕಾರ ಮತ್ತು ಸ್ಥಳೀಯ ಸರ್ಕಾರಗಳಲ್ಲಿ ರಾಜಕೀಯ ಬದಲಾವಣೆಯಿಂದ ಏರುಮುಖ ಕ್ರಮದಲ್ಲಿ ರಾಜಕೀಯ ಮಾಹಿತಿ ಪಡೆಯುವುದು, ಮತದಾನ, ರಾಜಕೀಯದಲ್ಲಿ ಸಾಮಾನ್ಯ ಆಸಕ್ತಿ, ಇತರರ ಮತದಾನವನ್ನು ನಿರ್ದೇಶಿಸುವುದು, ಈ ಹಂತಗಳನ್ನು ಕನಿಷ್ಠ ಹಂತದ ಪಾಲ್ಗೊಳ್ಳುವಿಕೆ ಎಂದು ಪರಿಭಾವಿಸಿಕೊಳ್ಳಲಾಗಿದೆ. ಪಕ್ಷ ಮತ್ತು ಅಭ್ಯರ್ಥಿಗೆ ದೇಣಿಗೆ ನೀಡುವುದು, ಸ್ಥಳೀಯ ಸಂಸ್ಥೆಗಳ ಸಭೆಗಳಲ್ಲಿ ಭಾಗವಹಿಸುವುದು, ರಾಜಕಾರಣಿಯ ಭೇಟಿ ಮತ್ತು ಸಾರ್ವಜನಿಕ ಅಧಿಕಾರಿಯ ಭೇಟಿ ಈ ಹಂತದ ಪಾಲ್ಗೊಳ್ಳುವಿಕೆಯನ್ನು ಮಧ್ಯಮ ಹಂತದ ಪಾಲ್ಗೊಳ್ಳುವಿಕೆ ಎಂದು ಪರಿಗಣಿಸಲಾಗಿದೆ. ಅದೇ ಪ್ರಕಾರ ನಿರ್ದಿಷ್ಟ ಪಕ್ಷಕ್ಕೆ ಪ್ರಚಾರ ಮಾಡುವುದು ರಾಜಕೀಯ ಸಂಘಟನೆಯಲ್ಲಿ ಸದಸ್ಯತ್ವ, ರಾಜಕೀಯ ಅಧಿಕಾರಕ್ಕಾಗಿ ಸ್ಪರ್ಧಿಸುವುದು ಮತ್ತು ರಾಜಕೀಯ ಅಧಿಕಾರ ಪಡೆಯುವುದು ಈ ಹಂತಗಳ ಭಾಗವಹಿಸುವಿಕೆಯನ್ನು ಗರಿಷ್ಠ ಹಂತದ ಭಾಗವಹಿಸುವಿಕೆ ಎಂದು ಅಧ್ಯಯನದಲ್ಲಿ ಪರಿಭಾವಿಸಿಕೊಳ್ಳಲಾಗಿದೆ.

ಬೆನ್ನಲ್ ಎಂ.ಕೆ. (೧೯೭೧) ಇವರು ಇಂಟರ್‌ನ್ಯಾಶನಲ್ ಡಿಸ್‌ಪ್ಯಾರಿಟಸ್ ಇನ್ ಕನ್ಸಮ್‌ಶನ್ ಲೆವಲ್ಸ್ ಎಂಬ ಗ್ರಂಥದಲ್ಲಿ ಕಂಡುಕೊಂಡಂತೆ ಒಂದು ಪ್ರದೇಶ ಅಭಿವೃದ್ಧಿಯನ್ನು ಕಾಣಬೇಕಾದರೆ ಅದು ಮಿತವಾದ ಜನಸಂಖ್ಯೆ, ಕುಟುಂಬ ಕಲ್ಯಾಣ ಯೋಜನೆಗಳ ಸಂಪತ್ತು, ಕೈಗಾರಿಕೆಗಳ ಬೆಳವಣಿಗೆ, ಉದ್ಯೋಗ ಮುಂತಾದ ಎಲ್ಲಾ ಅಂಶಗಳ ಒಳಗೊಳ್ಳುವುದೇ ಅಭಿವೃದ್ಧಿ.[೨೨] ಈ ಹಿನ್ನೆಲೆಯಲ್ಲಿ ಹಿಂದುಳಿದ ಪ್ರದೇಶವು ಬೆಳವಣಿಗೆ ಕಾಣಬೇಕಾದರೆ ಅದು ಎಲ್ಲಾ ವಲಯಗಳ ಮೇಲೆ ಯೋಜನೆಗಳನ್ನು ಹಾಕಿಕೊಳ್ಳಬೇಕು. ಆಗ ಆ ಪ್ರದೇಶವು ಅಭಿವೃದ್ಧಿಯನ್ನು ಎದುರು ನೋಡುತ್ತದೆ. ಹಿಂದುಳಿದ ಮತ್ತು ಮುಂದುವರಿದ ಅಂಶಗಳನ್ನು ತಮ್ಮ ಅಧ್ಯಯನದಲ್ಲಿ ಭಾಗವಹಿಸುವಿಕೆ ಮತ್ತು ಬೆಳವಣಿಗೆಯ ಬಗ್ಗೆ ಪ್ರಸ್ತಾಪಿಸಿದ್ದಾರೆ.

ಹೇಮಲತಾ ರಾವ್ (೧೯೮೪) ಅವರ ಅರ್ಬನ್ ಪ್ಲಾನಿಂಗ್ ಆ್ಯಂಡ್ ಲೋಕಲ್ ಅಥಾರಿಟೀಸ್ ಎಂಬ ಗ್ರಂಥದಲ್ಲಿ ನಗರ ಪ್ರದೇಶಗಳ ಅಭಿವೃದ್ಧಿಯಲ್ಲಿ ಸ್ಥಳೀಯ ರಾಜಕೀಯದ ಪಾತ್ರ ಕುರಿತು

ವಿವರಿಸುವುದನ್ನು ಕಂಡುಕೊಂಡಿದ್ದಾರೆ. ಅಂದರೆ ಒಂದೆಡೆ ಅಧ್ಯಯನಗಳು ಸ್ಥಳೀಯ ಜನರು ಹಿಂದುಳಿಯುವಿಕೆ, ಅವರು ಸಾಧಿಸಿಕೊಳ್ಳಬೇಕಾದ ಅಭಿವೃದ್ಧಿ ಸಂಗತಿಗಳ ಬಗ್ಗೆ ಒತ್ತು ನೀಡುವುದು ಕಂಡುಬಂದರೆ, ಮತ್ತೊಂದೆಡೆ ನಗರ ಸ್ಥಳೀಯ ಜನರು ಪಡೆಯುತ್ತಿರುವ ಅಭಿವೃದ್ಧಿ ಸಂಗತಿಗಳೇ ಬೇರೆಯಾಗಿರುವುದು ಕಂಡುಬರುತ್ತದೆ. ಅವರು ಸಾಧಿಸಿಕೊಳ್ಳಬೇಕಾದ ಅಭಿವೃದ್ಧಿಗೂ ಅವರ ಇಂದಿನ ಅಭಿವೃದ್ಧಿಯ ಆದ್ಯತೆಗೂ ಯಾವುದೇ ಹೊಂದಾಣಿಕೆ ಕಂಡುಬರುವುದಿಲ್ಲ. ಸ್ಥಳೀಯ ಜನರಿಗೆ ಸರ್ಕಾರ ಕೊಡಮಾಡುವ ಯೋಜನೆಗಳನ್ನು ಪಡೆದು ಅಭಿವೃದ್ಧಿ ಸಾಧಿಸಿಕೊಳ್ಳಬೇಕಾದರೆ ಯಾವ ಅಭಿವೃದ್ಧಿ, ಏಕೆ ಮತ್ತು ಹೇಗೆ ಎನ್ನುವುದರ ಸ್ಪಷ್ಟ ತಿಳುವಳಿಕೆ ಅಗತ್ಯವಾಗುತ್ತದೆ.[೨೩]

ರೋಸ್ಟೋ ಡಬ್ಲ್ಯು.ಡಬ್ಲ್ಯು.(೧೯೭೧) ಅವರು ದ ಸ್ಟೇಜಸ್ ಆಫ್ ಎಕನಾಮಿಕ ಗ್ರೋಥ್ ಎಂಬ ಗ್ರಂಥದಲ್ಲಿ ಸಿದ್ಧಾಂತಗಳು ಅಭಿವೃದ್ಧಿಯನ್ನು ಹಲವಾರು ರೀತಿಯಲ್ಲಿ ವ್ಯಾಖ್ಯಾನಿಸುತ್ತವೆ ಮತ್ತು ಮಾಪನ ಮಾಡುತ್ತವೆ. ಇಂದು ಹೆಚ್ಚು ಚಾಲ್ತಿಯಲ್ಲಿರುವ ಅಭಿವೃದ್ಧಿಯ ವ್ಯಾಖ್ಯಾನವೆಂದರೆ ಮಾನವ ಮುಖ ಅಭಿವೃದ್ಧಿ, ಇದರಲ್ಲಿ ಅಭಿವೃದ್ಧಿಯು ಕೇವಲ ಸೀಮಿತ ಪ್ರದೇಶಕ್ಕೆ ಮೀಸಲಾಗಿರದೇ ಬದಲಾಗಿ ವ್ಯಕ್ತಿಯ ಪರಿವರ್ತನೆಗೆ ಮಹತ್ವ ನೀಡಲಾಗುತ್ತದೆ. ಉತ್ತಮ ಆರೋಗ್ಯ, ಶಿಕ್ಷಣ ಮತ್ತು ಉದ್ಯೋಗದಿಂದ ವ್ಯಕ್ತಿಯೊಬ್ಬನ ಬದುಕುವ ಸಾಧ್ಯತೆ ಸಕಾರಾತ್ಮಕವಾಗಿ ಬದಲಾಗಬಹುದೆನ್ನುವ ಗ್ರಹಿಕೆ ಇಲ್ಲಿದೆ.[೨೪] ಅದೇ ರಿತಿಯಾಗಿ ವ್ಯಕ್ತಿಯ ಪರಿವರ್ತನೆಗೆ ಅಗತ್ಯವಾದ ಅಭಿವೃದ್ಧಿ ಸಂಗತಿಗಳನ್ನು ಸ್ಥಳೀಯ ಸಂಸ್ಥೆ ಪ್ರತಿನಿಧಿಗಳು ಸ್ಥಳೀಯ ಮಟ್ಟದಲ್ಲಿ ಭಾಗವಹಿಸುವುದರ ಮೂಲಕ ಅಭಿವೃದ್ಧಿಯ ಮುಖ್ಯ ವಹಿನಿಗೆ ಬರಬಹುದೆಂದು ವಿವರಿಸುತ್ತಾ ಗ್ರಾಮೀಣ ಪ್ರದೇಶದಿಂದ ಜಿಲ್ಲಾ ಮಟ್ಟದವರಿಗೆ ಅಭಿವೃದ್ಧಿ ಕಾರ್ಯಕ್ರಮಗಳು ತಲುಪುವಿಕೆಯನ್ನು ವಿಶ್ಲೇಷಿಸುತ್ತಾ ಕುಡಿಯುವ ನೀರು, ಬೀದಿ ದೀಪ, ಚರಂಡಿ ವ್ಯವಸ್ಥೆ ಮತ್ತು ನೈರ್ಮಲೀಕರಣ ಮುಂತಾದವುಗಳು ಅಭಿವೃದ್ಧಿಯ ಪ್ರಮುಖ ಪಾತ್ರ ವಹಿಸುತ್ತವೆಯೆಂದು ಅಭಿಪ್ರಾಯ ಪಡಲಾಗಿದೆ.

ಬೇಡಿನ್ ಹೆನ್ರಿ (೧೯೭೧) ಅವರು ದ ಸ್ಟೇಜಸ್ ಆಫ್ ಎಕನಾಮಿಕ್ ಗ್ರೋಥ್ ಎಂಬ ಗ್ರಂಥದಲ್ಲಿ ಹೇಳುವಂತೆ ಭಾರತದಲ್ಲಿ ನಗರಗಳ ಅಭಿವೃದ್ಧಿಯ ಜೊತೆಗೆ ಆರ್ಥಿಕ ಅಂಶವಾದ ಆದಾಯವನ್ನು ಹೆಚ್ಚಿಸುವುದಷ್ಟೇ ಅಭಿವೃದ್ಧಿಯ ಉದ್ದೇಶವಲ್ಲ ಅದು ಜನರ ಆಯ್ಕೆಯ ಅವಕಾಶವನ್ನು ಹೆಚ್ಚಿಸಬೇಕು ಮತ್ತು ಆ ಆಯ್ಕೆಗಳೆಂದರೆ ಸಾಮಾಜಿಕ ಅಂಶಗಳಾದ ಉತ್ತಮ ಶಿಕ್ಷಣ, ಉತ್ತಮ ಆರೋಗ್ಯ, ರಾಜಕೀಯ ಸ್ವಾತಂತ್ರ್ಯ, ಸಾಂಸ್ಕೃತಿಕ ಮನ್ನಣೆ, ವ್ಯಕ್ತಿಗತ ಸುರಕ್ಷೆ, ಸಮುದಾಯಗಳಲ್ಲಿ ಭಾಗವಹಿಸುವಿಕೆ, ಮಾನವ ಸುಖಮಯ ಜೀವನಕ್ಕೆ ಬೇಕಾದ ಇತರೆ ಅಂಶಗಳು ಒಳಗೊಂಡಿರುತ್ತವೆ ಎಂಬ ಅಂಶದ ಬಗ್ಗೆ ಸಾರ್ವತ್ರಿಕ ಸಮ್ಮತವಿದೆ. ಇಲ್ಲಿ ಅಭಿವೃದ್ಧಿ ಇಡೀ ಸಮಾಜವನ್ನು ವರ್ತಿಸಬೇಕೇ ಹೊರತು ಕೇವಲ ಅರ್ಥವ್ಯವಸ್ಥೆಗೆ ಸೀಮಿತವಾಗಬಾರದು ಹಾಗೂ ಜನರು ಇದರ ಕೇಂದ್ರವಾಗಬೇಕು.[೨೫] ಭಾರತದಲ್ಲಿ ನಗರಗಳ ಅಭಿವೃದ್ಧಿ ಅಂಶಗಳ ಜೊತೆಗೆ ಸಮಾಜೋ-ಆರ್ಥಿಕ ಮತ್ತು ರಾಜಕೀಯ ಸ್ಥಾನಮಾನಗಳು ಕಾಲ್ಪನಿಕ ಮತ್ತು ವಾಸ್ತವಿಕ ಗ್ರಹಿಕೆಗಳ ಭಿನ್ನತೆಗಳೂ ಕೂಡ ರಾಜಕಾರಣವನ್ನು ಪ್ರಭಾವಿಸುತ್ತವೆ.

ಚವ್ಹಾಣ ಆಯ್. ಎಸ್. (೧೯೫೧) ಇವರು ಸ್ಟಡಿ ಆಫ್ ಪೊಲಿಟಿಕಲ್ ಪ್ರೋಸೆಸ್ ಇನ್ ಎ ಸ್ಮಾಲ್ ಟೌನ್ ಎಂಬ ಗ್ರಂಥದಲ್ಲಿ ನಗರಮಟ್ಟದಲ್ಲಿನ ಅಭಿವೃದ್ಧಿಯನ್ನು ರಾಜಕೀಯದಲ್ಲಿ

ಸಂಘಟಿತ ಪಾಲ್ಗೊಳ್ಳುವಿಕೆ ಮತ್ತು ಜನರ ಸಮಸ್ಯೆಗಳನ್ನು ಪರಿಹರಿಸಲು ಇಂದು ಸರ್ಕಾರಗಳ ಮೇಲೆ ಹೋರಾಟಗಳ ಮೂಲಕ ಒತ್ತಡ ಹೆಚ್ಚಿಸಲಾಗುತ್ತದೆ. ಜನರೂಪಿತ ಚಳವಳಿಗಳು ಅಧಿಕಾರ ರಾಜಕಾರಣವನ್ನು ಉದಾರವಾದಗೊಳಿಸುವ ಮೂಲಕ ರಾಜಕೀಯ ಬೆಳವಣಿಗೆ ಮತ್ತು ಸಾಮಾಜಿಕ ಮೌಲ್ಯಗಳ ಹೆಚ್ಚಿಸುವಿಕೆಯ ಮೂಲಕ ಅಭಿವೃದ್ಧಿಯನ್ನು ಸಾಧಿಸಬಹುದು ಎಂದು ಅಭಿಪ್ರಾಯ ಪಟ್ಟಿದ್ದಾರೆ.[೨೬]

ಕೊಪ್ಪರ ಎಚ್. ಡಿ. (೧೯೭೮) ಅವರು ಅರ್ಬನ್ ಡೆವಲಪ್‌ಮೆಂಟ್ ಎಂಬ ಗ್ರಂಥದಲ್ಲಿ ಭಾರತದಲ್ಲಿರುವ ಮುನಿಸಿಪಲ್ ಸರ್ಕಾರಗಳ ಆಡಳಿತ ವ್ಯವಸ್ಥೆಯಲ್ಲಿ ಸ್ಥಳೀಯ ಸಂಸ್ಥೆಗಳಲ್ಲಿ ವಿಶ್ವಾಸ ಗಳಿಸುವ ಮತ್ತು ಉಳಿಸಿಕೊಳ್ಳುವ ಕಾರ್ಯನಿರ್ವಹಣೆಯಿಂದ ಹಾಗೂ ಜನರ ಮೂಲಭೂತ ಸೌಕರ್ಯಗಳ ಅಸಮಾನ ಹಂಚಿಕೆಗಳು ಸ್ಥಳೀಯ ಹಿಂದುಳಿಕೆಗೆ ಮುಖ್ಯ ಕಾರಣದಿಂದ ನ್ಯಾಯಪರತೆ ನಿರ್ವಹಣೆಯಿಂದ ಅಭಿವೃದ್ಧಿಯನ್ನು ಕಾಣಬಹುದಾಗಿದೆ. ಸ್ಥಳೀಯ ಪ್ರತಿನಿಧಿಗಳ ಅರಿವು, ಜ್ಞಾನ ಮತ್ತು ರಾಜಕೀಯ ಮಾಹಿತಿಯನ್ನು ಪಡೆಯುವಿಕೆ ಮುಂತಾದ ಸೀಮಿತ ಸೂಚಿಗಳ ಮೂಲಕ ಸ್ಥಳೀಯ ಸಂಸ್ಥೆಗಳ ಅರಿವನ್ನು ಗ್ರಹಿಸಲು ಪ್ರಯತ್ನಿಸಲಾಗಿದೆ. ಹಾಗೆಯೇ ಸ್ಥಳೀಯ ಸಂಸ್ಥೆಗಳ ಮಹಿಳೆಯರ ನಿಲುವು, ವಿವಿಧ ಪಕ್ಷಗಳ ಪ್ರಣಾಳಿಕೆಗಳ ಬಗ್ಗೆ ಅರಿವು ಮುಂತಾದ ಅಂಶಗಳ ಬಗ್ಗೆ ವಿಶ್ಲೇಷಿಸಲಾಗಿದೆ.[೨೭] ಇವು ವ್ಯಕ್ತಿಯ ಬೆಳವಣಿಗೆಯಲ್ಲಿ ಮತ್ತು ಸಂಸ್ಥೆಗಳ ಅಭಿವೃದ್ಧಿಯಲ್ಲಿ ಪ್ರಮುಖ ಪಾತ್ರವಹಿಸುತ್ತವೆ. ಅರಿವು ಜ್ಞಾನದ ಕೊರತೆಯಿಂದ ಯೋಜನೆ ಮತ್ತು ಕಾರ್ಯಕ್ರಮಗಳು ವಿಫಲವಾಗುತ್ತಿರುವುದನ್ನು ಕಾಣಬಹುದು ಇದನ್ನು ಆಡಳಿತ ಪರಿಭಾಷೆಯಲ್ಲಿ ಕೌಶಲ್ಯ ಅಥವಾ ನೈಪುಣ್ಯತೆಯೆಂದು ಕರೆಯಲಾಗಿದೆ. ಆಡಳಿತದ ಎಲ್ಲಾ ಹಂತಗಳಲ್ಲಿ ಇದನ್ನು ಅಳವಡಿಸಿಕೊಂಡಿದ್ದೆ ಆದರೆ ನಗರ ಸ್ಥಳೀಯ ಸಂಸ್ಥೆಗಳ ಕಾನೂನುಗಳನ್ನು ಪದೇ ಪದೇ ರೂಪಿಸುವ ಅಗತ್ಯವಿರುವುದಿಲ್ಲ.

ರಾಬರ್ಟ್ ಇ ಆಗಾರ್ (೧೯೮೭)ರವರು ಪೊಲಿಟಿಕಲ್ ಸಿನಿಸಿಸಂ, ಮೆಷರ್‌ಮೆಂಟ್ ಆ್ಯಂಡ್ ಮೀನಿಂಗ್ ಎಂಬ ಗ್ರಂಥದಲ್ಲಿ ಪ್ರಕಾರ ಸ್ಥಳೀಯ ಸಂಸ್ಥೆಗಳ ರಾಜಕೀಯ ಅರಿವು ಮನೋಗ್ರಾಹ್ಯ ಮನೋಭಾವಗಳು, ಮೌಲ್ಯಮಾಪನ ಮನೋಭಾವಗಳು ಮತ್ತು ಮನೋವಿರೋಧಿ ಅಥವಾ ಅಭಿವ್ಯಕ್ತತೆ ಮನೋಭಾವಗಳು ಎಂಬ ಮೂರು ಮನೋಭಾವನೆಗಳ ಪರೀಕ್ಷೆಯನ್ನು ಒಳಗೊಂಡಿದೆ. ಮನೋಗ್ರಾಹ್ಯ ಭಾವನೆಗಳು ರಾಜಕೀಯ ವ್ಯವಸ್ಥೆ, ರಾಜಕೀಯ ವಸ್ತುಗಳು, ಸಂರಚನೆ, ರಾಜಕೀಯ ಪ್ರಕ್ರಿಯೆ ಮತ್ತು ರಾಜಕೀಯ ವ್ಯಕ್ತಿಗಳ ಬಗ್ಗೆ ವ್ಯಕ್ತಿಗೆ ಇರುವ ಜ್ಞಾನ ಮತ್ತು ನಿಖರತೆಯನ್ನು ಒಳಗೊಳ್ಳುತ್ತವೆ. ಮೌಲ್ಯಮಾಪನ ಮನೋಭಾವನೆಗಳು ರಾಜಕೀಯ ಸಂಗತಿಗಳ ಬಗ್ಗೆ ವ್ಯಕ್ತಿಯ ತೀರ್ಮಾನ ಮತ್ತು ಮೌಲ್ಯಗಳನ್ನು ಅನ್ವಯಿಸುವ ಅಂಶಗಳನ್ನು ಒಳಗೊಂಡಿದೆ. ಮೂರನೆಯದಾಗಿ ಮನೋವಿರೋಧಿ ಅಥವಾ ಅಭಿವ್ಯಕ್ತತೆ ಮನೋಭಾವನೆಗಳು ರಾಜಕೀಯ ವಸ್ತುಗಳ ಬಗ್ಗೆ ಆಪ್ತತೆ ಅಥವಾ ತಿರಸ್ಕಾರದ ಸಂಗತಿಗಳನ್ನು ಒಳಗೊಂಡಿವೆ. ಇದು ವ್ಯಕ್ತಿಯು ರಾಜಕೀಯ ವ್ಯವಸ್ತೆಯನ್ನು ಮೌಲ್ಯ, ಮಾಹಿತಿ ಮತ್ತು ಭಾವನೆಗಳ ಮೂಲಕ ತೀರ್ಮಾನಿಸುವುದಾಗಿದೆ. ಈ ಮೂರು ಸಂಗತಿಗಳ ಸಮಗ್ರ ವಿಶ್ಲೇಷಣೆ ಮಾತ್ರ ವ್ಯಕ್ತಿ ಮತ್ತು ಸ್ಥಳೀಯ ಸಂಸ್ಥೆಗಳ ಅಭ್ಯರ್ಥಿಗಳ ಸಮಗ್ರ ರಾಜಕೀಯ ಅರಿವಿನ ಚಿತ್ರಣ ಸಿಗುತ್ತದೆ. ಸಮಾಜದಲ್ಲಿರುವ ಸಮಸ್ಯೆಗಳನ್ನು ಗುರುತಿಸುವ ಪ್ರಜ್ಞೆಯು, ವ್ಯಕ್ತಿಗೆ ತನ್ನ ಅಭಿವೃದ್ಧಿ ಸ್ಥಿತಿಗಳ ಬಗ್ಗೆ ಅರಿವು ಮೂಡಿಸುತ್ತದೆ. ಗ್ರಾಮ, ನಗರ, ದೇಶ ಮತ್ತು ಸಮುದಾಯಗಳು ಎದುರಿಸುವ ಸಮಸ್ಯೆಗಳ ಗುರುತಿಸುವಿಕೆಯು ವ್ಯಕ್ತಿಗೆ ವ್ಯವಸ್ಥೆಯಲ್ಲಿರುವ ಕೊರತೆಗಳ ಬಗ್ಗೆ ವಾಸ್ತವಿಕ ಪ್ರಜ್ಞೆಯನ್ನು

ಕೂಡ ನಮೂದಿಸುತ್ತದೆ.[೨೮] ಅವರ ಪ್ರಕಾರ ವ್ಯಕ್ತಿ ಮತ್ತು ಸಂಸ್ಥೆಗಳ ಬೆಳವಣಿಗೆಯಲ್ಲಿ ಮನೋಭಾವ, ಮನೋವಿರೋಧೀ ಮತ್ತು ಮನೋಗ್ರಾಹ್ಯ (ದೃಷ್ಟಿಕೋನಗಳು) ಭಾವನೆಗಳು ವ್ಯಕ್ತಿ ಮತ್ತು ಸಂಸ್ಥೆಗಳಲ್ಲಿ ಮುಖ್ಯ ಪಾತ್ರವಹಿಸುತ್ತವೆ ಎಂಬುದನ್ನು ವಿಶ್ಲೇಷಿಸಿದ್ದಾರೆ.

ಲಿಪ್‌ಸೆಟ್ (೧೯೫೦) ರವರು ಶಿಕ್ಷಣ ಮತ್ತು ಆರ್ಥಿಕ ಸಂಗತಿಗಳು ರಾಜಕೀಯ ಅರಿವು ರೂಪಿಸಿಕೊಳ್ಳುವಲ್ಲಿ ಮುಖ್ಯಪಾತ್ರ ವಹಿಸುತ್ತವೆ ಎಂದು ಗ್ರಹಿಸಲಾಗಿದೆ. ಶಿಕ್ಷಣ ರಾಜಕೀಯ ವರ್ತನೆಯನ್ನು ಪ್ರಭಾವಿಸುವ ಮುಖ್ಯ ಸಾಮಾಜಿಕ ಸೂಚಿಯಾಗಿದೆ ಮತ್ತು ರಾಜಕೀಯ ವ್ಯವಸ್ಥೆಯ ಬಗ್ಗೆ ಅರಿವು ಮೂಡಿಸುವ ಮುಖ್ಯ ಸಾಧನವಾಗಿದೆ. ರಾಜಕೀಯ ವ್ಯವಸ್ಥೆ ತನ್ನ ಅಸ್ತಿತ್ವಕ್ಕಾಗಿ ವ್ಯಕ್ತಿಗೆ ರಾಜಕೀಯ ಜ್ಞಾನ, ಮೌಲ್ಯ ಮತ್ತು ನಿರ್ದಿಷ್ಟ ಮನೋಭಾವನೆಗಳನ್ನು ರೂಪಿಸುವಲ್ಲಿ ಯಶಸ್ಸು ಸಾಧನವಾಗಿದೆ. ಶಿಕ್ಷಣವು ಮಾನವನ ಹೊರನೋಟವನ್ನು ವಿಸ್ತರಿಸಿ ಅವನನ್ನು ಅಸಹಿಷ್ಣುತೆ, ತೀವ್ರವಾದ ಮತ್ತು ಏಕತಾವಾದಗಳ ಸೆಳೆತಗಳಿಂದ ತಡೆಯುತ್ತದೆ. ಅಲ್ಲದೇ, ಉತ್ತಮ ರಾಜಕೀಯ ಗ್ರಹಿಕೆ ಮತ್ತು ಶಿಕ್ಷಣದ ನಡುವೆ ಸಕಾರಾತ್ಮಕ ಸಂಬಂಧವಿರುವುದನ್ನು ಗ್ರಹಿಸಲಾಗಿದೆ. ಈ ವಾದಗಳನ್ನು ಆಧರಿಸಿ ವಿವಿಧ ಪ್ರದೇಶಗಳಲ್ಲಿ ಸ್ಥಳೀಯ ಸಂಸ್ಥೆಗಳ ಅಧ್ಯಯನಗಳನ್ನು ಕೈಗೊಳ್ಳಲಾಗಿದೆ. ಅಂದರೆ ಶಿಕ್ಷಣದ ಮಟ್ಟ ಅಧಿಕವಾದಂತೆ ರಾಜಕೀಯ ಅರಿವಿನ ಮಟ್ಟ ಉತ್ತಮವಾಗುತ್ತದೆ. ಅದೇ ರೀತಿಯಾಗಿ ಸುಶೀಲ್ ಜೈನ್ ಹೇಳುವಂತೆ ಅನಕ್ಷರತೆ ಕನಿಷ್ಠ ರಾಜಕೀಯ ಅರಿವಿಗೆ ಕಾರಣವಾಗುತ್ತದೆ ಎಂಬ ಅಂಶವನ್ನು ಕಂಡುಕೊಂಡಿದೆ. ಅವರ ಅಧ್ಯಯನ ಹೇಳುವಂತೆ ಅನಕ್ಷರಸ್ಥರು ಕೇವಲ ರಾಜಕೀಯೇತರ ಆದರ್ಶಗಳೊಂದಿಗೆ ಮಾತ್ರ ಗುರುತಿಸಿಕೊಳ್ಳುತ್ತಾರೆ. ಶಿಕ್ಷಣದ ಮಟ್ಟ ಅಧಿಕವಾದಂತೆ ರಾಜಕೀಯ ಸುದ್ದಿಗಳಿಗೆ ಹೆಚ್ಚು ಮಹತ್ವ ನೀಡುತ್ತಾರೆ. ಇಂದು ಮೆನನ್‌ರ ಕೇರಳ ಅಧ್ಯಯನವೂ ಕೂಡ ರಾಜಕೀಯ ಅರಿವು ಮತ್ತು ಶಿಕ್ಷಣದ ನಡುವೆ ಇರುವ ಸಕಾರಾತ್ಮಕ ಸಂಬಂಧವನ್ನು ಬೆಂಬಲಿಸುತ್ತದೆ. ಅವರ ಅಧ್ಯಯನದಲ್ಲಿ ಕಂಡುಬಂದಂತೆ ಶಿಕ್ಷಣದ ಮಟ್ಟ ಅಧಿಕವಾದಂತೆ ಮತದಾನದ ಅರಿವು ಹೆಚ್ಚಾಗಿದೆ. ಉತ್ತಮ ಅರಿವು ಉಳ್ಳವರು ಸ್ವಯಂ ನಿರ್ಧಾರದ ಮೂಲಕ ಮತ ಚಲಾಯಿಸಿದ್ದಾರೆ. ಆದರೆ ಅನಕ್ಷರಸ್ಥ ಮಹಿಳೆಯರು ಪುರುಷ ಅಥವಾ ಸಂಬಂಧಗಳ ಪ್ರಭಾವದಿಂದ ಮತ ಚಲಾಯಿಸಿದ್ದಾರೆ. ಅಧ್ಯಯನ ಕಂಡುಕೊಂಡಂತೆ ಶಿಕ್ಷಣದ ಮಟ್ಟ ಅಧಿಕವಾದಂತೆ ಮತದಾರರು ಅಭ್ಯರ್ಥಿಗಳ ಚಾರಿತ್ರ್ಯ ಮತ್ತು ಗುಣಗಳನ್ನು ಆಧರಿಸಿ ಮತ ಚಲಾಯಿಸುತ್ತಾರೆ. ಅನಕ್ಷರಸ್ಥ ಮತದಾರರು ಸಾಮಾಜಿಕ ಮತ್ತು ಸಾಂಸ್ಕೃತಿಕ ಅಂಶಗಳನ್ನು ಪರಿಗಣಿಸಿ ಮತ ಚಲಾಯಿಸುತ್ತಾರೆ. ವಯಸ್ಸು, ವಾಸಸ್ಥಳ ಮುಂತಾದ ಸಂಗತಿಗಳಿಗಿಂತ ಶಿಕ್ಷಣ ಮಹಿಳೆಯರ ರಾಜಕೀಯ ಅರಿವು ಹೆಚ್ಚಿಸುವಲ್ಲಿ ಪ್ರಮುಖ ಪಾತ್ರ ವಹಿಸುತ್ತದೆ ಎಂದು ವಿಶ್ಲೇಷಿಸಿದ್ದಾರೆ.[೨೯]

ಅನಿಲ್‌ಭಟ್ (೧೯೭೮) ಅವರ ಕ್ಯಾಸ್ಟ್, ಕ್ಲಾಸ್ ಆ್ಯಂಡ್ ಪೊಲಿಟಿಕ್ಸ್ ಯಾನ್ ಎಂಪಿರಿಕಲ್ ಪ್ರೊಫೈಲ್ ಆಫ್ ಸ್ಟ್ರ್ಯಾಟಿಫಿಕೇಷನ್ ಇನ್ ಇಂಡಿಯಾ ತಮ್ಮ ಗ್ರಂಥದಲ್ಲಿ ಜಾತಿಯ ಅಂಶಗಳಿಗಿಂತ ಸಾಮಾಜಿಕ ಅಂಶಗಳು ರಾಜಕೀಯ ಅರಿವು ಮೂಡಿಸುವಲ್ಲಿ ಮುಖ್ಯ ಪಾತ್ರ ವಹಿಸುವುದನ್ನು ಗುರುತಿಸಿದೆ. ಶಿಕ್ಷಣದಂತೆಯೇ ಆರ್ಥಿಕ ಸ್ಥಿತಿಗಳು ಕೂಡ ರಾಜಕೀಯ ಅರಿವನ್ನು ಮೂಡಿಸುವಲ್ಲಿ ಪ್ರಮುಖ ಪಾತ್ರ ವಹಿಸುತ್ತವೆ ಎಂದು ವಿವರಿಸಿದ್ದಾರೆ.[೩೦] ಅವರ ಪ್ರಕಾರ ರಾಜಕೀಯ ಅರಿವು ಮೂಡಿಸುವಲ್ಲಿ ಕೇವಲ ಆರ್ಥಿಕ, ಸಾಮಾಜಿಕ ಮತ್ತು ರಾಜಕೀಯ ಮಾತ್ರವಲ್ಲ ಭಾರತದ

ಸಂದರ್ಭದಲ್ಲಿ ಧಾರ್ಮಿಕ ಮತ್ತು ಸಾಂಸ್ಕೃತಿಕ ಅಂಶಗಳು ಕೂಡ ಅಷ್ಟೇ ಪ್ರಭಾವ ಬೀರುತ್ತವೆ. ಯಾಕೆಂದರೆ ಭಾರತದ ಸಮಾಜ ಏಣಿ–ಶ್ರೇಣಿಗಳ ಮೇಲೆ ರಚನೆಯಾಗಿದೆ. ಹಾಗಾಗಿ, ಆಯಾ ಸಂದರ್ಭದಲ್ಲಿ ಆಯಾ ಅಂಶಗಳು ಆಯಾ ವಲಯಗಳ ಮೇಲೆ ಪ್ರಭಾವ ಬೀರುತ್ತವೆ. ಹೀಗಾಗಿ ನಗರ ಸ್ಥಳೀಯ ಸಂಸ್ಥೆಗಳ ಜನರು ಭಾಗವಹಿಸುವಿಕೆಯಲ್ಲಿ ಅನೇಕ ಆಯಾಮಗಳು ಪರಿಣಾಮ ಬೀರುತ್ತವೆ. ಅಲ್ಲದೇ, ಅಭಿವೃದ್ಧಿಯ ಮೇಲೆ ಸಹ ಅನೇಕ ಅಂಶಗಳು ಪ್ರಭಾವ ಬೀರುತ್ತವೆ ಎಂಬುದನ್ನು ಈ ಅಧ್ಯಯನಗಳು ಸಾಧರಪಡಿಸುತ್ತವೆ. ಅಭಿವೃದ್ಧಿ ಎಂಬುದು ಒಂದು ಪ್ರದೇಶದಲ್ಲಿ ಸಂಭವಿಸುವಂತಹದಲ್ಲಾ ಒಂದೇ ಭಾರೀ ಸಂಭವಿಸುವಂಹದಲ್ಲಾ ಅದು ನಿರಂತರ ಪ್ರಕ್ರೀಯೆಯಾಗಿರುತ್ತದೆ. ಈ ನಿರಂತರ ಪ್ರಕ್ರೀಯೆಯಲ್ಲಿ ಸ್ಥಳೀಯ ಸಂಸ್ಥೆಗಳು ಮತ್ತು ಭಾಗವಹಿಸುವಿಕೆ ಮಹತ್ವದ ಸಾಧನಗಳೆಂದು ಪರಿಭಾವಿಸಿಕೊಳ್ಳಲಾಗಿದೆ. ಈ ಹಿನ್ನೆಲೆಯಲ್ಲಿ ಅಭಿವೃದ್ಧಿಗೂ ಮತ್ತು ಜನರ ಭಾಗವಹಿಸುವಿಕೆಗೂ ನೇರವಾದ ಸಂಬಂಧವಿದೆ ಎಂದು ಹೇಳಬಹುದು.

ಕುಮಾರ ಎನ್. ಕೆ. ಮಿಟ್ಟಲ್ (೨೦೦೨) ರವರು ಎಕಾನಾಮಿಕ್ ಡೆವಲಪ್‌ಮೆಂಟ್ ಆ್ಯಂಡ್ ಪ್ಲ್ಯಾನಿಂಗ್ ಎಂಬ ಪುಸ್ತಕದಲ್ಲಿ ಒಂದು ರಾಷ್ಟ್ರ, ರಾಜ್ಯ, ಜಿಲ್ಲೆ, ನಗರ ಪ್ರದೇಶ ಅಭಿವೃದ್ಧಿ ಹೊಂದಬೇಕಾದರೆ ಅದು ಆರ್ಥಿಕ ಯೋಜನೆಗಳನ್ನು ಎಷ್ಟರ ಮಟ್ಟಿಗೆ ಕಾರ್ಯರೂಪಕ್ಕೆ ತರಬೇಕು ಹಾಗೂ ಅಭಿವೃದ್ಧಿ ಹಂತ ಹೊಂದಬೇಕಾದರೆ, ಜನಸಂಖ್ಯೆ ನಿಯಂತ್ರಣ ಕೈಗಾರಿಕೆಗಳ ಸ್ಥಾಪನೆ, ವಸತಿ, ಶುದ್ಧ ಕುಡಿಯುವ ನೀರು, (ಭಾರತದಲ್ಲಿ ೧ ಲೀಟರ್ ಶುದ್ಧಿಕರಣ ನೀರಿಗೆ ಖರ್ಚು ೨೫, ಅದೇ ಸಿಡ್ನಿಯಲ್ಲಿ ೧ ಟನ್ ಶುದ್ಧೀಕರಣ ನೀರಿಗೆ ೮೪ರೂ ಖರ್ಚು, ಒಬ್ಬ ಮನುಷ್ಯನಿಗೆ ಪ್ರತಿ ದಿವಸ ೭ ಗ್ಯಾಲನ್ ನೀರು ಬೇಕು ೧ ಗ್ಯಾಲನ್ ೧.೯ಲೀ) ಉತ್ತಮ ಮಾರುಕಟ್ಟೆ, ನಗರದಲ್ಲಿ ಒಳಚರಂಡಿ ವ್ಯವಸ್ಥೆ ಹೀಗೆ ಮುಂತಾದ ಅಂಶಗಳನ್ನು ಹೊಂದಿರಬೇಕು ಎಂಬ ಮಾಹಿತಿಯನ್ನು ನೀಡುತ್ತದೆ.[೩೧] ಆದರೆ ಪರಿಸ್ಥಿತಿ ಹಾಗಿಲ್ಲ ಕೈಗಾರೀಕರಣದಿಂದ ನೀರಿನ ಕಲುಷಿತ, ಪರಿಸರ ನಾಶ, ಕೃಷಿ ಸಮಸ್ಯೆ ಮೊದಲಾದವು ಪುನಃ ನಗರೀಕರಣಕ್ಕೆ ಸಮಸ್ಯೆಗಳಾಗುತ್ತವೆ. ಈ ಹಿನ್ನೆಲೆಯಲ್ಲಿ ಮೇಲಿನ ಸಮಸ್ಯೆಗಳಿಗೆ ಪರಿಹಾರವನ್ನು ಕಂಡುಕೊಳ್ಳದೆ ಇದ್ದಲ್ಲಿ ಮತ್ತೊಂದು ಸಮಸ್ಯೆಗೆ ಎಡೆಮಾಡಿಕೊಡುತ್ತದೆ. ಇದೇ ಮುಂದುವರಿಯುತ್ತಿರುವ ನಗರೀಕರಣದ ವ್ಯವಸ್ಥೆಯಾಗಿದೆ ಎಂದು ಹೇಳಬಹುದು.

ಮೈಕಲ್ ಎ ಕರ್‍ರಿ(೧೯೭೫)ರವರು ದ ಚಾಲೆಂಜ್ ಆಫ್ ಅರ್ಬನ್ ಎಕನಾಮಿಕ್ ಡೆವಲಪ್‌ಮೆಂಟ್ ಎಂಬ ಗ್ರಂಥದಲ್ಲಿ ನಗರ ಪ್ರದೇಶಗಳಲ್ಲಿ ಆರ್ಥಿಕ ಅಭಿವೃದ್ಧಿಯನ್ನು ಸಾಧಿಸಲು ಒಂದು ಸಾವಾಲಾಗಿ ಸ್ವೀಕರಿಸಿ ಆ ಪ್ರದೇಶದಲ್ಲಿ ಕೈಗಾರಿಕೆಗಳ ಸ್ಥಾಪನೆ, ನಿರುದ್ಯೋಗ ಸಮಸ್ಯೆಯ ನಿವಾರಣೆ, ಜನಸಂಖ್ಯೆ ನಿಯಂತ್ರಣ ಉತ್ತಮ ಸಾರಿಗೆ ಸಂಪರ್ಕ, ವೈದ್ಯಕೀಯ ಸೌಲಭ್ಯ ಇಂತಹ ಮೊದಲಾದ ಕಾರ್ಯಗಳನ್ನು ನೆರವೇರಿಸುವ ಪರಿಯನ್ನು ಚರ್ಚಿಸುತ್ತಾ ಮೇಲಿನ ಅಂಶಗಳಿಗೆ ಪರಿಹಾರ ಕಂಡುಕೊಳ್ಳಲು ನಗರೀಕರಣವು ಸಹ ಸಹಾಯಕವಾಗುತ್ತದೆ ಎಂದು ಅಭಿಪ್ರಾಯ ಪಟ್ಟಿದ್ದಾರೆ.[೩೨] ಆದರೆ ನಗರೀಕರಣವು ಇದೇ ಸಮಸ್ಯೆಗಳನ್ನು ಹುಟ್ಟು ಹಾಕುತ್ತಿರುವುದು ದುರಂತದ ಸಂಗತಿ.

ಭಾರತ ಸರ್ಕಾರದ (೨೦೦೭) ದ ಮಿಲೆನಿಯಮ್ ಡೆವಲಪೆಮೆಂಟ್ ಗೋಲ್ ಎಂಬ ವರದಿಯಲ್ಲಿ ವಿಶ್ವಸಂಸ್ಥೆಯ ಅಭಿವೃದ್ಧಿ ಕಾರ್ಯಕ್ರಮದ ಮಿಲೇನಿಯಂ ಡೆವಲಪ್‌ಮೆಂಟ್ ಗೋಲ್ಸ್ ಕಾರ್ಯಕ್ರಮಕ್ಕೆ ಸಹಿ ಮಾಡಿರುವ ದೇಶಗಳು ೨೦೧೫ಕ್ಕೆ ಅರ್ಧದಷ್ಟು ನಗರ ಜನಸಂಖ್ಯೆಗೆ ಸುಧಾರಿತ

ನೈರ್ಮಲ್ಯ ಸೌಲಭ್ಯ ದೊರಕಿಸಬೇಕು ಹಾಗೂ ೨೦೨೫ರ ವೇಳೆಗೆ ಶೇ.೧೦.ರಷ್ಟು ಸೌಲಭ್ಯ ದೊರಕಿಸಬೇಕು ಎಂಬ ಗುರಿ ಹೊಂದಿದೆ. ಸುಮಾರು ೨೦೩೦ರ ವೇಳೆಗೆ ಭಾರತದ ಅರ್ಧದಷ್ಟು ಜನಸಂಖ್ಯೆ ನಗರ ಪ್ರದೇಶಗಳಲ್ಲಿ ವಾಸಿಸುತ್ತಿರುತ್ತದೆ ಎಂದು ಊಹಿಸಲಾಗಿದೆ. ಈ ವೇಗದಲ್ಲಿ ನಗರೀಕರಣ ಆಗುತ್ತಿರುವುದು ಹಲವಾರು ಸಮಸ್ಯೆಗಳ ಸೃಷ್ಟಿಗೆ ಕಾರಣವಾಗಿದೆ. ಮುಖ್ಯವಾಗಿ ಕುಡಿಯವ ನೀರು ಸರಬರಾಜು, ತ್ಯಾಜ್ಯ ವಿಲೇವಾರಿ, ನಗರ ಪಟ್ಟಣಗಳಿಂದ ಸೃಷ್ಟಿಯಾಗುವ ತ್ಯಾಜ್ಯ, ಬಯಲು ಪ್ರದೇಶದ ಕೊರತೆ, ವಾಯು ಹಾಗೂ ಸಾರ್ವಜನಿಕ ಸಾರಿಗೆ ಹೀಗೆ ಹತ್ತು ಹಲವು ಸಮಸ್ಯೆಗಳು ಈ ಎಲ್ಲಾ ಸಮಸ್ಯೆಗಳ ಮೂಲವೆಂದರೆ ಪೂರ್ವಯೋಜಿತವಲ್ಲದ ನಗರಗಳ ಬೆಳವಣಿಗೆ. ಭೂಮಿ, ನೀರು ಮುಂತಾದ ಸಂಪನ್ಮೂಲಗಳ ಅತಿಯಾದ ಬಳಕೆಯಾಗಿದೆ ಯಾವ ಸಮಸ್ಯೆ ಹಾಗೂ ಸವಾಲುಗಳಿಗೆ ಪ್ರಾಮುಖ್ಯತೆ ಕೊಡಬೇಕು ಎಂಬುದಕ್ಕೆ ಹಲವು ಬಾರಿ ಒಮ್ಮತಕ್ಕೆ ಬರಲು ಸಾಧ್ಯವಾಗುತ್ತಿಲ್ಲ. ಆದ್ದರಿಂದ ನಗರ ಯೋಜನೆಗಳನ್ನು ತಯಾರಿಸುವರು ಈ ಸಮಸ್ಯೆಗಳ ಬಗ್ಗೆ ನಿಗಾವಹಿಸುವಂತೆ ಹಾಗೂ ಬಹಳ ಗಂಭೀರವಾಗಿರುವ ನಗರಗಳ ಪರಿಸರ ಸವಾಲುಗಳನ್ನು ಅರ್ಥಮಾಡಿಕೊಳ್ಳುವುದು ಅತ್ಯಾವಶ್ಯಕವಾಗಿದೆ.[೩೩] ಎಂಬ ಅಭಿಪ್ರಾಯವನ್ನು ನೀಡಿದೆ.

ವಿ. ನಾಥ್ (೨೦೧೧)ರವರು ತಮ್ಮ ಅರ್ಬನೈಜೇಶನ್ ಇನ್ ಇಂಡಿಯಾ ರಿವೀವ್ ಅಂಡ್ ಪ್ರೊಸ್ಪೆಕ್ಟ್ಸ್ ಎಂಬ ಲೇಖನದಲ್ಲಿ ನೀತಿ ರಚನೆಕಾರರಿಗೆ ಮತ್ತು ಅಭಿವೃದ್ದಿ ಯೋಜಿತರಿಗೆ ತೀವ್ರಗತಿಯಲ್ಲಿ ಬೆಳೆಯುತ್ತಿರುವ ನಗರಗಳ ನಿರ್ವಹಣೆಗೆ ಸಂಬಂಧಪಟ್ಟಂತೆಯೇ ಕಾರ್ಯತಂತ್ರಗಳನ್ನು ರೂಪಿಸಲು ಮಹತ್ತರವಾದಂತಹ ಸವಾಲಾಗಿದೆ. ನಗರ ನಿರ್ವಹಣೆಯಲ್ಲಿ ಅಭಿವೃದ್ಧಿ ಕಾರ್ಯತಂತ್ರಗಳು ಸಫಲವಾಗಿದೆಯೇ? ಎಂಬಂತಹ ಪ್ರಶ್ನೆಗಳನ್ನು ಇಡುತ್ತಾ ನಗರಗಳು ಹೇಗೆ ನಿರ್ಮಾಣಗೊಳ್ಳುತ್ತವೆ. ಎಂದು ಹೇಳುತ್ತಾ ಆದಾಯದ ಹೆಚ್ಚಳದ ಪರ್ಯಾಯವಾಗಿ ಲಾಭದಾಯಕ ಉದ್ಯೋಗಗಳ ಬೇಡಿಕೆಗಳನ್ನು ಪೂರೈಸಿಕೊಳ್ಳಲು ಗ್ರಾಮೀಣ ಪ್ರದೇಶದಿಂದ ನಗರ ಪ್ರದೇಶಕ್ಕೆ ವಲಸೆ ಮತ್ತು ತೀವ್ರಗತಿಯಲ್ಲಿ ಬೆಳೆಯುತ್ತಿರುವ ನಗರದ ಜನಸಂಖ್ಯೆಗೆ ಒಪ್ಪಿಗೆಯಾಗುವ ಆರ್ಥಿಕ ಮತ್ತು ಸಾಮಾಜಿಕ ಮೌಲ್ಯಗಳ ಅವಶ್ಯಕ ಸೇವೆಗಳನ್ನು ಒದಗಿಸುವ ಕೇಂದ್ರವಾಗಿ ನಗರಗಳ ನಿರ್ಮಾಣ ಮತ್ತು ವೇಗದ ಗತಿಯಲ್ಲಿ ಬೆಳೆಯುತ್ತಿರುವ ದೊಡ್ಡ ಹಳ್ಳಿಗಳು ಅವು ಸಣ್ಣ ಮತ್ತು ಮಧ್ಯಮ ಪಟ್ಟಣಗಳಾಗಿ ರೂಪಗೊಂಡು ನಗರಗಳ ಗಡಿ ವಿಸ್ತಾರಗೊಂಡ ಪರಿಣಾಮ ಸುತ್ತ ಮುತ್ತಲಿನ ಗ್ರಾಮಗಳು ಪಟ್ಟಣಗಳಾಗಿ ಅಭಿವೃದ್ಧಿಯಾಗಿವೆ. ಅಲ್ಲದೆ, ನಗರದ ಬೆಳವಣಿಗೆಯು ರಾಷ್ಟ್ರೀಯ, ಪ್ರಾದೇಶಿಕ ಮತ್ತು ಅರ್ಥಿಕ ಬೆಳವಣಿಗೆಯಲ್ಲಿ ತನ್ನ ಕೊಡುಗೆಯನ್ನು ನೀಡುತ್ತದೆ. ವಿಶೇಷವಾಗಿ ಬಹುಪಕ್ಷೀಯ, ನಗರ ಮತ್ತು ಗ್ರಾಮಗಳ ನಡುವೆ ಇರುವ ಸ್ವಾಯತ್ತ ಬೆಳವಣಿಗೆ ಹಲವಾರು ನಿರ್ದೇಶನಗಳಲ್ಲಿ ಕಾರ್ಯತಂತ್ರಗಳಲ್ಲಿ ಬಂಡವಾಳದ ಹೂಡಿಕೆಗೆ ಮತ್ತು ಅವುಗಳ ಬಳಕೆಯಿಂದ ಅಭಿವೃದ್ಧಿಯನ್ನು ಸಾಧಿಸುತ್ತಿವೆ ಎಂದು ಲೇಖಕರು ಅಭಿಪ್ರಾಯಪಡುತ್ತಾರೆ. ಮುಂದುವರಿದು ೪ ಮಹಾನಗರಗಳಾದ ಬಾಂಬೆ, ಮದ್ರಾಸ್, ಕಲ್ಕತ್ತಾ ಮತ್ತು ಡೆಲ್ಲಿಗಳ ೧೯೮೦–೨೦೦೦ ವರ್ಷಗಳಲ್ಲಿ ಅಂದರೆ ೨೦ ವರ್ಷಗಳಲ್ಲಿ ಈ ಮಹಾನಗರಗಳ ೨–೩ ಪಟ್ಟು ಜನಸಂಖ್ಯೆ ಹೆಚ್ಚಾಯಿತು ಎಂದು ಹೇಳುತ್ತಾ ಈ ಒಂದು ಜನಸಂಖ್ಯೆ ಹೆಚ್ಚಳದಿಂದ ಹಲವಾರು ಸಮಸ್ಯೆಗಳು ಉದ್ಭವಿಸಿದವು. ಈ ಸಮಸ್ಯೆಗಳಲ್ಲಿ ಆರೋಗ್ಯ, ಶಿಕ್ಷಣ, ಸಾರಿಗೆ, ನೈರ್ಮಲ್ಲೀಕರಣ, ನೀರು, ವಿದ್ಯುತ್, ಆಹಾರ ವಿತರಣೆ, ವಾಯುಮಾಲಿನ್ಯ, ವಸತಿ ಮತ್ತು ಸೌಹಾರ್ದತೆ. ಮೇಲಿನ

ಅಂಶವನ್ನು ಗಮನಿಸಿದಾಗ ಇಂತಹ ಸಮಸ್ಯೆಗಳ ನಿಯಂತ್ರಣಕ್ಕಾಗಿ ಸರ್ಕಾರವು ಗ್ರಾಮೀಣ ಪ್ರದೇಶದಿಂದ ನಗರಕ್ಕೆ ವಲಸೆ ಬರುವವರನ್ನು ತಡೆಗಟ್ಟಲು ಯೋಜನೆಗಳನ್ನು ಗ್ರಾಮೀಣ ಮಟ್ಟದಲ್ಲಿಯೇ ಹಾಕಿಕೊಳ್ಳುವುದರ ಮೂಲಕ ವಿಕೇಂದ್ರೀಕರಣ ವ್ಯವಸ್ಥೆಯಲ್ಲಿ ಅಭಿವೃದ್ಧಿಯನ್ನು ಪರಿಭಾವಿಸಬಹುದಾಗಿದೆ.[೩೪] ಎಂದು ಹೇಳಬಹುದಾಗಿದೆ.

ಪಿ.ಸಿ. ಮಾಥೂರ್ (೧೯೯೯) ರವರು ಫಿನನ್ಸ್ ಆಂಡ್ ಅಡಿಮಿನಿಸ್ಟ್ರೇಶನ್ ಕಂಡಕ್ಟ್ ಎಂಬ ಲೇಖನದಲ್ಲಿ ನಗರ ಪ್ರದೇಶದ ಸ್ಥಳೀಯ ಸಂಸ್ಥೆಗಳು ಒಂದು ವಿಶಿಷ್ಟ ಬಗೆಯ ಪರಿಸ್ಥಿತಿ ಎದುರಿಸುತ್ತಿವೆ. ಒಂದೆಡೆ ಹೆಚ್ಚುತ್ತಿರುವ ನಗರೀಕರಣದಿಂದ ಲಭ್ಯವಿರುವ ಸೇವೆಗಳ ಮೇಲೆ ಅಧಿಕ ಬೇಡಿಕೆಯಿದ್ದರೆ ಮತ್ತೊಂದೆಡೆ ಸದರೀ ಸೇವೆಗಳನ್ನು ಸಮರ್ಪಕವಾಗಿ ನೀಡಲು ಅಗತ್ಯವಿರುವ ಆದಾಯವಿಲ್ಲದೆ ಸೊರಗುತ್ತಿವೆ. ನಗರ ಸ್ಥಳೀಯ ಸಂಸ್ಥೆಗಳಲ್ಲಿ ಇರುವಂತಹ ಅಸಮರ್ಪಕ ಆಡಳಿತ, ನಿರ್ವಹಣಾ ಕೊರತೆ, ಅಸಮರ್ಪಕ ಯೋಜನಾ ನಿರ್ವಹಣೆ, ಕಾಲಮಿತಿಯಲ್ಲಿ ಕಂದಾಯ ಪರಿಷ್ಕರಣೆ ಇಲ್ಲದಿರುವಿಕೆ, ಅಸಮರ್ಪಕ ಮಾಹಿತಿ ಕಲೆ ಹಾಕುವುದು ಹಾಗೂ ದಾಖಲಿಸುವಿಕೆ ಹೀಗೆ ಇನ್ನಿತರ ದೋಷಗಳಿಂದ ನಗರ ಸಂಸ್ಥೆಗಳು ಬಳಲುತ್ತಿವೆ. ಭಾರತದ ಹಲವಾರು ನಗರ ಸ್ಥಳೀಯ ಸಂಸ್ಥೆಗಳು ಪ್ರಮುಖವಾಗಿ ಅತಿ ಚಿಕ್ಕ ಹಾಗೂ ಮಧ್ಯಮ ಗಾತ್ರದ ಸಂಸ್ಥೆಗಳಲ್ಲಿ ಅಗತ್ಯಕ್ಕೆ ತಕ್ಕ ಸಿಬ್ಬಂದಿಗಳಿಲ್ಲ, ಸಿಬ್ಬಂದಿ ಕಾರ್ಯತಖ್ತೆ ಸ್ಪಷ್ಟವಿಲ್ಲ ಹಾಗೂ ಹೆಚ್ಚಿನ ವಿಷಯಗಳಲ್ಲಿ ಚೂರುಪಾರಗಿದೆ. ಸಿಬ್ಬಂದಿ ಹೆಚ್ಚುತ್ತಿರುವ ನಗರದ ಬೇಡಿಕೆಗಳಿಗೆ ಸ್ಪಂದಿಸಲು ಅತೀ ಕಡಿಮೆ ಸಾಮಾರ್ಥ್ಯ ಹಾಗೂ ಪ್ರೇರಣೆ ಹೊಂದದೆಯಿರುವುದು, ಈಗಾಗಲೇ ಕಡಿಮೆಯಿರುವ ಸಂಪತ್ತು, ನಿರ್ವಹಣೆ ಸರಿಯಿಲ್ಲದಿರುವುದು ಹೀಗೆ ಆಡಳಿತವೇ ಹಲವು ಸಮಸ್ಯೆಗಳನ್ನು ಎದರಿಸುತ್ತಿದ್ದು ಅದರಲ್ಲಿ ವಾರ್ಡಿನ ಜನರು ಹೇಗೆ ತಾನೇ ಅಭಿವೃಧ್ಧಿಯಲ್ಲಿ ಭಾಗವಹಿಸುತ್ತಾರೆ. ಇದರ ನೇರ ಪರಿಣಾಮವು ನಗರ ಪ್ರದೇಶದ ಜನರ ಜೀವನವನ್ನು ದುಃಸ್ಥಿತಿಗೆ ಇಳಿಸುತ್ತಿದೆ[೩೫] ಎಂಬ ಅಂಶವನ್ನು ಹೇಳಿರುತ್ತಾರೆ. ೭೪ನೆಯಾ ಸಂವಿಧಾನಿಕ ತಿದ್ದುಪಡಿಯಿಂದ ನಗರ ಸ್ಥಳೀಯ ಸಂಸ್ಥೆಗಳ ಚುನಾವಣೆಗಳಲ್ಲಿ ಮೇಲ್ವಾರ್ಗ ಮತ್ತು ದುಡ್ಡು ಇದ್ದಂತಹವರು ಗೆದ್ದು ಬಂದು ತಮಗೆ ಬೇಕಾದ ರೀತಿಯಲ್ಲಿ ಆಡಳಿತವನ್ನು ನಡೆಸಿಕೊಂಡು ಹೊಗುವಂತಹದ್ದು ಮತ್ತು ಮೀಸಲಾತಿ ದೃಷ್ಟಿಯಿಂದ ಮಹಿಳೆಯರ ಸ್ಥಾನದಲ್ಲಿ ತಮ್ಮ ಗಂಡಂದಿರ ಹಸ್ತಕ್ಷೇಪದಿಂದ ಅವರೂ ಸಹ ಹೆಚ್ಚಿನ ರೀತಿಯಾಗಿ ಆಡಳಿತದಲ್ಲಿ ಹಸ್ತಕ್ಷೇಪ ಮಾಡದೇ ಇರುವುದನ್ನು ಗಮನಿಸಿದಾಗ ಪ್ರಮುಖ ಕೊರತೆಯಿರುವುದರಿಂದ ಕಂಡು ಬರುತ್ತದೆ ಮಹಿಳೆಯರಿಗಾಗಲಿ ರಾಜಕೀಯದ ಬಗ್ಗೆ ಅರಿವು ಇಲ್ಲದಿರುವುದು ಆಥವಾ ಗಂಡಂದಿರು ಹೆಣ್ಣು ಮಕ್ಕಳಿಗೆ ರಾಜಕೀಯ ಪ್ರೋತ್ಸಾಹ ನೀಡದೆಯಿರುವುದರಿಂದ ನಗರ ಪ್ರದೇಶದ ಸ್ಥಿತಿಯು ಹೇಗೆ ಅಭಿವೃದ್ಧಿಯನ್ನು ಕಂಡಿತ್ತು ಎಂದು ತಿಳಿಯಲಾಗಿದೆ.

ಅಮಿತಾಬ್ ಕಾಂತ್ (೨೦೧೨) ರವರು ತಮ್ಮ ಎ ಟೇಲ್ ಆಫ್ ಇಂಡಿಯಾ ಸಿಟ್ಸಿ ಎಂಬ ಲೇಖನದಲ್ಲಿ ಪ್ರಪಂಚದಲ್ಲಿಯೇ ಭಾರತವು ನಗರ ಆಂದೋಲನವನ್ನು ನಡೆಸುತ್ತಿದೆ ಭಾರತದಲ್ಲಿ ಬೆಳೆಯುತ್ತಿರುವ ಜನಸಂಖ್ಯೆಯಲ್ಲಿ ನಗರಗಳಿಗೆ ಬರುವ ವಲಸೆ ಪ್ರಮಾಣ ೫೦೦ ಹೊಸ ನಗರಗಳನ್ನು ನಿರ್ಮಿಸಲಾಗಿದೆ. ಹಾಗಾಗಿ ಅಲ್ಲಿಯ ಜನರ ಜೀವನಕ್ಕೆ ಗುಣಾತ್ಮಕ ಜೀವನವನ್ನು ಒದಗಿಸಿ ಕೊಡಬೇಕಾಗುತ್ತದೆ. ನಗರಗಳ ಬೆಳವಣಿಗೆ ಹೊಸ ಮತ್ತು ಕ್ರಿಯಾತ್ಮಕವಾಗಿರುವಂತಹಗಳ ಕೇಂದ್ರ ಬಿಂದು. ಹಾಗೆಯೇ ಭಾರತದ ಒಟ್ಟು ನಿವ್ವಳ ಮೊತ್ತವನ್ನು ನೋಡಿದಾಗ ನ್ಯೂಯಾರ್ಕ್ ಮತ್ತು

ಟೋಕಿಯೋ ದೇಶಗಳಿಗೆ ಸಮನಾಗಿ ಇರುವುದನ್ನು ಕಾಣುತ್ತೇವೆ. ವಿಶ್ವದ ೧೦೦ ನಗರಗಳ ಪಟ್ಟಿಯಲ್ಲಿ ಭಾರತದ ಒಂದೂ ನಗರ ಸ್ಥಾನಮಾನವನ್ನು ಹೊಂದಿಲ್ಲ ಏಕೆ? ಭಾರತದಲ್ಲಿ ಅತಿ ಹೆಚ್ಚು ಕೃಷಿಗಾಗಿಯೇ ೫೮% ಆದರೆ ಒಟ್ಟು ನಿವ್ವಳ ಮೊತ್ತಕ್ಕೆ ೧೪.೨% ನೀಡಲಾಗುತ್ತದೆ ಅಂದರೆ ಪ್ರಪಂಚದಲ್ಲಿ ಯಾವ ದೇಶವು ಬಹಳ ಕಾಲದಿಂದಲೂ ಅಭಿವೃದ್ದಿ ಹೊಂದಿರುವುದು ಕೃಷಿ ವಲಯವೇ ಬೆಂಬಲವಾಗಿ ನಿಂತಿದ್ದರೂ ಗ್ರಾಮೀಣ ಭಾಗದಲ್ಲಿ ಗುಣಮಟ್ಟದ ಜೀವನ ಸಿಗದೆಯಿರುವುದರಿಂದ ಗ್ರಾಮೀಣ ಜನರು ಗ್ರಾಮವನ್ನು ಒಂದು ಅನಿಷ್ಟ ಎಂದು ಪರಿಗಣಿಸಿ ನಗರ ಮತ್ತು ಪಟ್ಟಣಕ್ಕೆ ವಲಸೆ ಹೋಗುವುದನ್ನು ನೋಡಲಾಗಿದೆ. ನಗರೀಕರಣದ ಅನ್ವಯದಂತೆ ಜನರಿಗೆ ವೈಜ್ಞಾನಿಕ ಮಾಹಿತಿಯ ಕೊರತೆಯಿಂದ ಯಾವ ಯಶಸ್ವಿಯನ್ನು ಕಾಣಲು ಸಾಧ್ಯವಿಲ್ಲದೆ ನಗರ ಪ್ರದೇಶಗಳಲ್ಲಿಯೂ ಸಹ ಅವರ ಜೀವನ ಶೋಚನೀಯ ಸ್ಥಿತಿಯಲ್ಲಿರುವುದಾಗಿದೆ ಎಂದು ಲೇಖಕರು ಅಭಿಪ್ರಾಯಪಟ್ಟಿದ್ದಾರೆ. ಹಾಗಾಗಿ, ಅವರಿಗೆ ಸಾಮಾಜಿಕ ಅಂಚಿನಲ್ಲಿರುವವರಿಗೆ ಅವಶ್ಯಕತೆಗಳನ್ನು ಸಮನಾಗಿ ಪೂರೈಸಿದಾಗ ಮಾತ್ರ ಅಭಿವೃದ್ಧಿಯಲ್ಲಿ ಯಶಸ್ವಿಯಾಗಲು ಸಾಧ್ಯವಾಗುತ್ತದೆ[೩೬] ಎಂದು ಹೇಳಬಹುದಾಗಿದೆ.

ರೋಲಿ ಅರಣ್ಯ, ಚೇತನ್ ವೈದ್ಯ (೨೦೧೫) ರವರು ಫ್ಯೂಚರ್ ಆಫ್ ಅರ್ಬನ್ : ಪ್ಲಾನಡ್ ಎಜುಕೇಷನ್ ಎಂಬ ಲೇಖನದಲ್ಲಿ ನಗರ ಯೋಜನೆಯ ಬಗ್ಗೆ ಪ್ರಸ್ತಾಪಿಸುತ್ತಾ ೨೦೧೧ರ ಜನಗಣತಿಯನ್ವಯ ೭,೦೦೦ ಪಟ್ಟಣಗಳು, ೬೨೬ ಜಿಲ್ಲೆಗಳು ಹಾಗೂ ೬೦೦ ಸಾವಿರ ಹಳ್ಳಿಗಳಿವೆ. ಒಂದು ವೇಳೆ ೭೪ನೇ ಸಾಂವಿಧಾನಿಕ ತಿದ್ದುಪಡಿ ಕಾಯ್ದೆಯನ್ನು ಪೂರ್ಣರೂಪದಲ್ಲಿ ಅನುಷ್ಠಾನಗೊಳಿಸಲು ಸಾರ್ವಜನಿಕ-ಖಾಸಗಿ ಸಹಭಾಗಿತ್ವ ಮತ್ತು ನಗರ ಯೋಜನೆ ಹಾಗೂ ಅಭಿವೃದ್ಧಿಯಲ್ಲಿ ಖಾಸಗಿಯವರು ಸಕ್ರೀಯ ಪಾಲ್ಗೋಳ್ಳುವಿಕೆ ಇವುಗಳಿಂದಾಗಿ ಸರ್ಕಾರದ ಮೇಲಿನ ಸ್ತರಗಳಿಗೆ ಹೆಚ್ಚುವರಿಯಾಗಿ ಪ್ರತಿ ನಗರ ಸ್ಥಳೀಯ ಸಂಸ್ಥೆಗಳಲ್ಲಿ ಯೋಜಕರು ಬೇಕಾಗುತ್ತಾರೆ. ಪ್ರಸ್ತುತ, ರಾಜ್ಯ ಯೋಜನಾ ಇಲಾಖೆಗಳು ಮತ್ತು ರಾಷ್ಟ್ರ ಯೋಜನಾ ಸಂಸ್ಥೆಗಳು ಕೂಡ ಆರ್ಹತೆಯುಳ್ಳ ಯೋಜನಾ ವೃತ್ತಿಪರರ ಕೊರತೆಯನ್ನು ಅನುಭವಿಸುತ್ತಿವೆ. ಬದಲಾಗಿ ಪ್ರತಿ ೧,೦೦,೦೦೦ ನಗರವಾಸಿಗಳಿಗೆ ಕೇವಲ ೧.೩೨ ಯೋಜಕರು ಇದ್ದಾರೆ. (ಯುಎನ್ ಹ್ಯಾಬಿಟಾಟ್, ೨೦೧೩). ಮುಂದುವರಿದು ಯುನೈಟೆಡ್ ಕಿಂಗ್ಡಮ್‌ನಂತಹ ಅಭಿವೃದ್ಧಿಶೀಲ ದೇಶಗಳು ಪ್ರತಿ ೧,೦೦,೦೦೦ ಜನಸಂಖ್ಯೆಗೆ ೩೭.೬೩ ಯೋಜಕರನ್ನು ಹೊಂದಿದೆ. (ಐಬಿಡ್, ೨೦೧೩). ಈ ವರದಿಗಳನ್ನು ಗಮನಿಸಿದಾಗ ದೇಶದ ಸಾಂಸ್ಥಿಕ ವ್ಯವಸ್ಥೆಯಲ್ಲಿ ವಿವಿಧ ಹಂತಗಳಲ್ಲಿ ಯೋಜಕರ ಬೃಹತ್ ಕೊರತೆಯಿರುವುದು ಅಧ್ಯಯಗಳು ದೃಢಪಡಿಸುತ್ತವೆ. ಹಾಗಾಗಿ ನಮ್ಮ ನಗರಗಳಲ್ಲಿರುವ ಅನೌಪಚಾರಿಕ ಮತ್ತು ಅಸಮಾನತೆಯ ಪ್ರಮಾಣದ ಹಿನ್ನೆಲೆಯಲ್ಲಿ, ಮಾರುಕಟ್ಟೆಯ ಹಾಗೂ ನಾಗರಿಕ ಸಮಾಜದ ಸಕ್ರೀಯ ಪಾಲ್ಗೋಳ್ಳುವಿಕೆಯೊಂದಿಗೆ ಅಭಿವೃದ್ಧಿಯನ್ನು ನೋಡುವ ಅಗತ್ಯವಿದೆ ಎನ್ನಬಹುದಾಗಿದೆ.[೩೭]

ಆರ್.ಬಿ. ಭಗತ್ (೨೦೧೪) ರವರು ತಮ್ಮ ಎ ರೀವಿವ್ ಆಫ್ ಅರ್ಬನ್ ಪಾಲಿಸಿ ಆಂಡ್ ಪ್ರೊಗ್ರಾಮ್ ಎಂಬ ಗ್ರಂಥದಲ್ಲಿ ನಗರ ಅಭಿವೃದ್ಧಿ ಎನ್ನುವುದು ರಾಜ್ಯಗಳಿಗೆ ಸಂಬಂಧಿಸಿದ ವಿಷಯ. ಆದರೆ ಸಮಗ್ರ ನಗರಾಭಿವೃದ್ಧಿ ಯೋಜನೆಗಳಿಂದ ಹೆಚ್ಚಿನ ಕೆಲಸ ಕಾರ್ಯಗಳು ಆಗಿರುವುದಿಲ್ಲ. ವಾಸ್ತವವಾಗಿ ನಗರ ಪ್ರದೇಶಗಳಲ್ಲಿನ ನಾಗರಿಕರ ಒತ್ತಡ ಹೆಚ್ಚಿನ ಮಟ್ಟದಲ್ಲಿದ್ದು. ವಿದ್ಯುತ್, ಶುದ್ಧ

ಕುಡಿಯುವ ನೀರು, ನೈರ್ಮಲ್ಯ, ಪೊರೈಕೆಯಂತಹ ಸಮಸ್ಯೆಗಳು, ರಸ್ತೆ ಒತ್ತಡ, ಸಂಚಾರ ದಟ್ಟಣೆ, ವಾಯು ಮತ್ತು ಜಲ ಮಾಲಿನ್ಯ, ಘನತ್ಯಾಜ್ಯ ನಿರ್ವಹಣೆ ಹಾಗೂ ಕಾನೂನು ವ್ಯವಸ್ಥೆ ಮುಂತಾದವುಗಳನ್ನು ನಗರ ಆಡಳಿತವು ಒಳಗೊಳ್ಳುತ್ತದೆ. ಈ ಹೊಣೆಗಾರಿಕೆಯನ್ನು ನಿರ್ವಹಿಸಬೇಕಾದ ನಗರ ಸ್ಥಳೀಯ ಸಂಸ್ಥೆಗಳಿಗೆ ರಾಜ್ಯ ಸರ್ಕಾರಗಳ ಬೆಂಬಲದೊಂದಿಗೆ ನಗರ ಸ್ಥಳೀಯ ಸಂಸ್ಥೆಗಳಿಗೆ ಕರ್ತವ್ಯ ಸ್ಪಷ್ಟತೆ, ಹಣಕಾಸು ವ್ಯವಸ್ಥೆ ಮತ್ತು ಆಡಳಿತ ಸ್ವಾಯತ್ತೆಯನ್ನು ಒದಗಿಸುವುದರ ಜೊತೆಗೆ ಇವುಗಳ ಆಡಳಿತ ವ್ಯವಸ್ಥೆ ಮತ್ತು ನಿರ್ವಹಣಾ ಸಾಮಾರ್ಥ್ಯವನ್ನೂ ಹೆಚ್ಚಿಸುವುದು ಅಗತ್ಯವಾಗಿದೆ. ಬದಲಾಗಿ ದೇಶದ ಬಹಳಷ್ಟು ನಗರಗಳಿಗೆ ಪರಿಣಾಮಕಾರಿಯಾದ ಯೋಜನೆಗಳು ಇಲ್ಲವಾಗಿದೆ. ಬಡವರ ವಸತಿ ಸಮಸ್ಯೆಗೆ ಆದ್ಯತೆಯನ್ನು ನೀಡದಿರುವುದು ಹಾಗೆಯೇ, ಜಗತ್ತಿನ ಅನೇಕ ಮಹಾನಗರಗಳು ಮೇಯರ್ ನೇತೃತ್ವದಲ್ಲಿ ಚುನಾಯಿತ ಸದಸ್ಯರ ಬೆಂಬಲದೊಂದಿಗೆ ನಗರದ ಎಲ್ಲಾ ಸಮಸ್ಯೆಗಳನ್ನು ನಿರ್ವಹಿಸುತ್ತಿವೆ. ಅಂದರೆ ನಗರಾಡಳಿತವನ್ನು ಯಶಸ್ವಿಯಾಗಿ ನಿರ್ವಹಿಸುತ್ತಿರುವುದಕ್ಕೆ ಅವರಿಗೆ ಸಂಪನ್ಮೂಲದ ಮತ್ತು ರಾಜಕೀಯ ಅಧಿಕಾರವು ಕಾರಣವಾಗಿದೆ. ಇಂಥ ಪರಿಸ್ಥಿತಿ ಇಲ್ಲದ ಇಲ್ಲಿ ಮೂಲ ಅಗತ್ಯಗಳಾದ ನೀರು ಪೊರೈಕೆ, ನೈರ್ಮಲ್ಯ, ಶಿಕ್ಷಣ, ಆರೋಗ್ಯ ಸೇವೆ  ಮತ್ತು ವಸತಿ ಸಮಸ್ಯೆಗಳಿಗೆ ತುತ್ತಾಗಿರುವುದನ್ನು ಲೇಖಕರು ಗುರುತಿಸಲಾಗಿದೆ. ಮುಂದುವರಿದು, ನಗರಗಳು ಮಾನವ ಸಂಪನ್ಮೂಲ ಕೇಂದ್ರಗಳಾಗುವ ಜವಾಬ್ದಾರಿಯನ್ನು ಇಟ್ಟುಕೊಳ್ಳಬೇಕೆ ಹೊರತು ಅವು ಕೆಲವೇ ಕೆಲವರಲ್ಲಿ ಕೇಂದ್ರೀಕರಣಗೊಳ್ಳಬಾರದು. ಅಂದಹಾಗ ಮಾತ್ರ ೭೪ನೆಯಾ ತಿದ್ದುಪಡಿ ಆಶಯವೇ ಪ್ರಜಾಸತ್ತಾತ್ಮಕ ರೀತಿಯಲ್ಲಿ ಸ್ಥಳೀಯ ನಗರಾಡಳಿತ ಸಂಸ್ಥೆಗಳ ಬಲವರ್ಧನೆಯಾಗುತ್ತದೆ ಎಂದು ಹೇಳಲಾಗುತ್ತದೆ.[೩೮]

ಅಮಿತಾಬ್ ಕುಂದು, ಲೊಪಮುದ್ರಾ ರಾಯ್ ಮತ್ತು ಸರಸ್ವತಿ (೨೦೧೨) ಇವರು ತಮ್ಮ ಮೈಗ್ರೇಶನ್ ಆಂಡ್ ಎಕ್ಸ್‌ಕ್ಲೂಶನರಿ ಅರ್ಬನೈಜೇಶನ್ ಇನ್ ಇಂಡಿಯಾ ಎಂಬ ಲೇಖನದಲ್ಲಿ ಸ್ವಾತಂತ್ರ್ಯ ಬಂದಂದಿನಿಂದ ತಮ್ಮದೇ ಆದ ಸೂರನ್ನು ಹೊಂದುವ ಕನಸು ಕಾಣುತ್ತಿರುವ ಬಡವರು ಮತ್ತು ವಸತಿಹೀನರಿಗೆ ನಗರ ಜನಸಂಖ್ಯೆಯಲ್ಲಿ ಶೇ.೧೮ ರಿಂದ ಶೇ.೮೦ರಷ್ಟು ಪಾಲು ಹೊಂದಿರುವ ಕೊಳಚೆ ನಿವಾಸಿಗಳು ನಗರ ಪ್ರದೇಶದ ಶೇ. ೩ ರಿಂದ ಶೇ. ೪ರಷ್ಟು ಪ್ರದೇಶ ಮಾತ್ರ ಹೊಂದಿದ್ದು, ಆದರೆ ಹೆಚ್ಚಿನ ಕೊಳಚೆ ಪ್ರದೇಶಗಳು ನಗರದ ಕೇಂದ್ರ ಭಾಗದಲ್ಲಿದ್ದು, ಅಲ್ಲಿ ಭೂಮಿಯ ಬೆಲೆ ಅತ್ಯಂತ ದುಬಾರಿಯಗಿದ್ದು, ಈ ಭೂ ಪ್ರದೇಶವನ್ನು ಪಡೆಯಲು ಬಲಯುತ ಶಕ್ತಿಗಳು ಹೆಚ್ಚಿನ ಮಟ್ಟದಲ್ಲಿರುತ್ತಾರೆ. ಆದ್ದರಿಂದ, ಉಚಿತ ಭೂ ಲಭ್ಯತೆ ಮತ್ತು ಸ್ವಾಧೀನ ಸಾಮಾರ್ಥ್ಯ ಅವೈಜ್ಞಾನಿಕತೆಯಿಂದ ಕೂಡಿರುವುದಲ್ಲದೆ ಕೊಳಚೆ ಪ್ರದೇಶಗಳಲ್ಲಿ ಭೂ ಮತ್ತು ಗೃಹ ಹಕ್ಕು ಪಡೆಯುವ ಅರ್ಹ ವ್ಯಕ್ತಿ ಯಾರೆಂದು ಹೇಗೆ ನಿರ್ಧರಿಸಲು ಸಾಧ್ಯ ಎಂಬ ಪ್ರಶ್ನೆಗಳನ್ನಿಡುತ್ತಾ ದೊಡ್ಡ ನಗರಗಳಿಗಿಂತ ಸಣ್ಣ ಮತ್ತು ಮಧ್ಯಮ ನಗರಗಳಲ್ಲಿ ಅತ್ಯಂತ ಗಂಭೀರವಾದ ಮೂಲ ಸೌಕರ್ಯಗಳ ಕೊರತೆ ಇದ್ದು ಮತ್ತು ಯಾವುದೇ ರೀತಿಯಾ ಮೂಲ ಅನುಕೂಲತೆಗಳನ್ನು ಹೊಂದಿಲ್ಲದೇ ಜನಸಂಖ್ಯೆಯ ಶೇಕಡಮಾನದಲ್ಲಿ ದಾಖಲೆಯ ಏರಿಕೆಯಾಗಿರುವುದರ ಇಂತಹ ಹಲವಾರು ಸಮಸ್ಯೆಗಳನ್ನು ಗುರುತಿಸಿದ್ದಾರೆ. ಹಾಗೆಯೇ, ರಾಷ್ಟ್ರೀಯ ಮತ್ತು ನಗರ ಮಟ್ಟದ ಯೋಜನಕಾರರ ನಡುವೆ ಅತ್ಯಂತ ಗಂಭೀರ ಸಂಪರ್ಕದ ಕೊರತೆ, ಕೊಳಚೆ ನಿವಾಸಿಗಳು ಇನ್ನಾವುದೋ ಉದ್ದೇಶದಿಂದ ನಗರದಿಂದ ಹೊರಗೆ ಪುನರ್ ವಸತಿ ಸೌಲಭ್ಯ ಪಡೆಯಲು ಇಷ್ಟ ಪಡೆಯಿರುವುದು, ಭೂ ಲಭ್ಯತೆಯ ಕೊರತೆ ಮತ್ತು ಸ್ವಾಧೀನಕ್ಕೆ

ವಶಪಡಿಸಿಕೊಳ್ಳುವ ಕ್ರಿಯೆಯಲ್ಲಿ ಭಿನ್ನಭಿಪ್ರಾಯಗಳಿರುವುದು ವಸತಿ ಕಾರ್ಯಕ್ರಮಗಳು ಅನುಷ್ಠಾನದಲ್ಲಿ ವಿಫಲಗೊಂಡಿರುವುದಕ್ಕೆ ಲೇಖಕರು ಕಾರಣಗಳನ್ನು ಕೊಡುತ್ತಾರೆ. ಒಟ್ಟಾರೆಯಾಗಿ ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ವಸತಿ ನಿರ್ಮಾಣಕ್ಕೆ ಬೇಕಾಗುವ ಭೂಮಿಯನ್ನು ಸ್ವಾಧೀನತೆಗೆ ನಿರ್ದಿಷ್ಟ ಮತ್ತು ಸ್ಪಷ್ಟ ಮಾರ್ಗದರ್ಶಿ ಸೂತ್ರಗಳನ್ನು ರಚಿಸದ ಹೊರತು ವಸತಿ ಸಮಸ್ಯೆಗಳನ್ನು ಬಗೆಹರಿಸಲಾಗದು ಇಂತಹ ಸಮಸ್ಯೆಯನ್ನು ಬಗೆಹರಿಸದೆ ನಗರ ಜನರ ಜೀವನ ದುಸ್ಥಿತಿಯಲ್ಲಿ ಮುಂದುವರಿಯುತ್ತದೆ ಎಂದು ತಿಳಿಯಲಾಗಿದೆ.[೩೯]

ಟಿ. ಆರ್. ರಘುನಂದನ್ (೨೦೧೩) ರವರು ಹೇಗಿರಬೇಕು ಮುಂದಿನ ದಾರಿ ಎಂಬ ಲೇಖನದಲ್ಲಿ ನಗರ ಸ್ಥಳೀಯ ಸಂಸ್ಥೆಗಳ ಆಡಳಿತದ ಬಗ್ಗೆ ಹೇಳುತ್ತಾ ಕರ್ನಾಟಕ ಇಂದು ದೇಶದಲ್ಲೆ ಅತಿ ವೇಗವಾಗಿ ಬೆಳೆಯುತ್ತಿರುವ ರಾಜ್ಯವೆನಿಸಿದೆ. ಒಂದು ವೇಳೆ ಈಗಿನ ಪರಿಸ್ಥಿತಿಯೇ ಮುಂದುವರಿದರೆ ಇನ್ನೊಂದು ದಶಕದಲ್ಲಿ ಕರ್ನಾಟಕದ ಶೇಕಡಾ ೫೦ಕ್ಕಿಂತ ಹೆಚ್ಚು ಪ್ರದೇಶ ನಗರೀಕರಣಗೊಳ್ಳಲಿರುವ ರಾಜ್ಯ ಎನಿಸಿಕೊಳ್ಳಲಾಗಿದೆ. ೨೦೨೧ರ ವೇಳೆಗೆ ರಾಜ್ಯದ ನಗರ ಪ್ರದೇಶದ ಜನಸಂಖ್ಯೆಯಲ್ಲಿ ಶೇ. ೭೬ರಷ್ಟು ಜನರು ಬೆಂಗಳೂರು, ಕೋಲಾರ, ಮೈಸೂರು, ಮಂಗಳೂರು, ಉಡುಪಿ ಮತ್ತು ಕಾರವಾರದಂತಹ ಪ್ರಮುಖ ನಗರಗಳಿಗೆ ವಲಸೆ ಹೋಗಲಿದ್ದಾರೆ. ವಿಶೇಷವೆಂದರೆ ರಾಜ್ಯದ ಇತರೆ ನಗರಗಳು ಇದೇ ಪ್ರಮಾಣದಲ್ಲಿ ವೃದ್ಧಿಯಾಗುವುದಿಲ್ಲ. ಈ ಅಂದಾಜನ್ನು ಮಹಾರಾಷ್ಟ್ರ ಮತ್ತು ತಮಿಳುನಾಡು ರಾಜ್ಯಗಳ ಜೊತೆ ಹೋಲಿಕೆ ಮಾಡಿ ನೋಡಿದಾಗ ಇಂತಹ ವ್ಯತ್ಯಾಸ ಕಾಣುವುದಿಲ್ಲ. ಯಾಕೆಂದರೆ ಅಲ್ಲಿ ಎರಡು ಮತ್ತು ಮೂರನೇ ಸ್ತರದ ನಗರಗಳ ಅಭಿವೃದ್ಧಿ ಪ್ರಗತಿಯಲ್ಲಿದೆ. ಹೀಗಾಗಿ ಕರ್ನಾಟಕದಲ್ಲಿ ಅಂತಹ ಬೆಳವಣಿಗೆಯನ್ನು ಕಾಣದೆಯಿರುವುದನ್ನು ನೋಡುತ್ತೇವೆ. ಹಾಗಾಗಿ ಇದು ಅನೇಕ ಗಂಭೀರ ಸಮಸ್ಯೆಗಳಿಗೆ ಕಾರಣವಾಗಿದೆ. ಈ ರೀತಿಯಾದ ನಗರೀಕರಣದ ಪ್ರಭಾವದಿಂದ ಆಡಳಿತ, ಅಭಿವೃದ್ಧಿ ಮತ್ತು ಪ್ರಮುಖವಾಗಿ ಘನತ್ಯಾಜ್ಯ ನಿರ್ವಹಣೆ ಹಾಗೂ ನೀರು ಸರಬುರಾಜು ವ್ಯವಸ್ಥೆಯಲ್ಲಿ ಗುಣಾತ್ಮಕ ಕೊರತೆಯನ್ನು ಅನುಭವಿಸುತ್ತಿವೆ ಎಂದು ಲೇಖಕರು ಅಭಿಪ್ರಾಯ ಪಡುತ್ತಾರೆ.[೪೦] ಈ ನಿಟ್ಟಿನಲ್ಲಿ ನೋಡಿದಾಗ ನಗರ ಪ್ರದೇಶಗಳ ಸ್ಥಳೀಯ ಆಡಳಿತದಲ್ಲಿ ಸಾರ್ವಜನಿಕ ಪ್ರಾತಿನಿಧ್ಯ ತುಂಬಾ ದುರ್ಬಲಯೆನಿಸುತ್ತಿದೆ. ಆದ್ದರಿಂದ ನಗರ ಪ್ರದೇಶಗಳಲ್ಲಿ ಉತ್ತಮ ಆಡಳಿತ ನೀಡುವ ದೃಷ್ಟಿಯಿಂದ ಆಡಳಿತದಲ್ಲಿ ಜನರ ಪ್ರಾತಿನಿಧ್ಯವನ್ನು ಇನ್ನಷ್ಟು ಶಕ್ತಿಶಾಲಿಗೊಳಿಸುವ ಅವಶ್ಯಕತೆಯಿದೆ ಎಂದು ಹೇಳಲಾಗುತ್ತದೆ.

ಎಸ್.ಆರ್. ಮಹೇಶ್ವರಿ (೨೦೧೩) ತಮ್ಮ ಲೋಕಲ್ ಗೌರ್ನಮೆಂಟ್ ಇನ್ ಇಂಡಿಯಾ ಎಂಬ ಗ್ರಂಥದಲ್ಲಿ ಎಪ್ಪತ್ತನಾಲ್ಕನೆಯಾ ತಿದ್ದುಪಡಿಗೆ ಮೊದಲು ಕರ್ನಾಟಕ ಪೌರಸಭೆಗಳ ಕಾಯ್ದೆ ೧೯೬೪ ಮತ್ತು ಕರ್ನಾಟಕ ಪೌರಸಭೆಗಳ ಕಾಯ್ದೆ ೧೯೭೬ರಲ್ಲಿರುವ ನ್ಯೂನ್ಯತೆಗಳನ್ನು ಹೇಳುತ್ತಾ ನಗರ ಸ್ಥಳೀಯ ಸಂಸ್ಥೆಗಳ ವ್ಯವಸ್ಥೆಯು ಎಷ್ಟು ಪರಿಣಾಮಕಾರಿಯಾಗಿ ಇರಬೇಕಾಗಿತ್ತೋ ಅಷ್ಟು ಇರಲಿಲ್ಲ, ಅದರ ಅಧಿಕಾರಗಳು ಪರಿಮಿತವಾಗಿದ್ದವು, ರಾಜ್ಯ ಸರ್ಕಾರವು ನಗರ ಸ್ಥಳೀಯ ಸಂಸ್ಥೆಗಳನ್ನು ವಿನಾಕಾರಣ ವಿಸರ್ಜನೆ ಮಾಡಬಹುದಾಗಿತ್ತು, ಯಾವುದೇ ಹಕ್ಕುಗಳಿಲ್ಲದೆ, ಅಧಿಕಾರಗಳಿಲ್ಲದೆ ಸರ್ಕಾರದ ಕೆಲವೇ ಮಂದಿಯ ಹಂಗಿನಲ್ಲಿದ್ದವು ಹಾಗೂ ಯಾವುದೇ ಸಂಪನ್ಮೂಲಗಳಿಲ್ಲದೆ ಸೊರಗಿದ್ದವು ಅಲ್ಲದೇ, ಸ್ಥಳೀಯ ಸಂಸ್ಥೆಗಳು ರಾಜ್ಯ ಸರ್ಕಾರದ ಅಧೀನದಲ್ಲಿದ್ದವು. ಈ ಸಂಸ್ಥೆಗಳಿಗೆ

ಚುನಾವಣೆಗಳು ನಿರ್ದಿಷ್ಟವಾಗಿ ನಡೆಯುತ್ತಿರಲಿಲ್ಲ. ಸಂಸ್ಥೆಗಳಲ್ಲಿ ಉತ್ತರದಾಯಿತ್ವವು ಒಂದು ಒಪ್ಪಿತ ಲಕ್ಷಣವಾಗಿರಲಿಲ್ಲ ಇಂತಹ ಹಲವು ಸಮಸ್ಯೆಗಳ ಪರಿಣಾಮವಾಗಿ ೧೯೯೩ರ ಕಾಯ್ದೆಯು ಅವಶ್ಯಕವಾಗಿ ಬೇಕಾಯಿತು[೪೧] ಎಂದು ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾರೆ.

ಈ ಮೇಲಿನ ಚರ್ಚಿಸಲಾದ ನಗರೀಕರಣ ಸಿದ್ಧಾಂತ ಮತ್ತು ಅಧ್ಯಯನ ಸಮೀಕ್ಷೆಗಳನ್ನು ಗಮನಿಸಿದಾಗ ನಗರೀಕರಣ ಸಮಸ್ಯೆಗಳು ಮತ್ತು ಸವಾಲುಗಳನ್ನು ಸ್ಪಷ್ಟವಾಗಿ ಗುರುತಿಸಬಹುದು. ಒಂದು ನಗರೀಕರಣ ಸಿದ್ಧಾಂತವು ಬಹುದೊಡ್ಡ ಸಮಾಜಿಕ ಬದಲಾವಣೆಯನ್ನು ನೀಡಿದೆ. ಇದರ ಜೊತೆಗೆ ಅಭಿವೃದ್ಧಿ ಹೊಂದಿದ ಸಮಾಜಗಳು ಮತ್ತು ಅಭಿವೃದ್ಧಿ ಹೊಂದದ ಸಮಾಜಗಳ ಪರಿಕಲ್ಪನೆಗಳನ್ನು ನೀಡಿದೆ. ಅದೇ ರೀತಿಯಾಗಿ ಅಜ್ಞಾನ ಮತ್ತು ದ್ವೇಷಗಳಿಗೆ ಎಡೆಮಾಡಿಕೊಟ್ಟಿದೆ ಎಂಬ ಅಂಶಗಳನ್ನು ನಗರೀಕರಣ ಸಿದ್ಧಾಂತವು ಪ್ರತಿಪಾದಿಸುತ್ತದೆ. ಇದರ ಜೊತೆಗೆ ಶಿಕ್ಷಣ, ಆರೋಗ್ಯ ಸಮಾಜವನ್ನು ಕಟ್ಟುವ ಹೊಸ ರೂಪವನ್ನು ನೀಡಿದೆ ಮತ್ತು ಹೊಸ ಪರಿಸರವನ್ನು ಸೃಷ್ಟಿ ಮಾಡಿತು ಎಂಬದನ್ನು ಸಹ ಪ್ರತಿಪಾದಿಸುತ್ತದೆ. ಮೇಲಿನ ವಾದವನ್ನು ಒಪ್ಪಬಹುದು ಆದರೆ ಅಷ್ಟೇ ಸಂಕೀರ್ಣ ಸಮಸ್ಯೆಗಳನ್ನು ತಂದು ಒಡ್ಡಿದೆ. ಯಾಕಂದರೆ ಯಾವ ಉದ್ದೇಶದಿಂದ ನಗರವನ್ನು ಅಭಿವೃದ್ಧಿ ಕಾರ್ಯಕ್ರಮಗಳನ್ನು ರೂಪಿಸಲಾಯಿತೋ ಆ ಕಾರ್ಯಕ್ರಮಗಳ ಉದ್ದೇಶ ಈಡೇರಲಿಲ್ಲ ನಗರೀಕರಣದ ಸಮಸ್ಯೆಗಳನ್ನು ಪರಿಹರಿಸುವಲ್ಲಿ ಅನೇಕ ಸುಧಾರಣಾ ಅಭಿವೃದ್ಧಿ ಮಾದರಿಗಳನ್ನು ರೂಪಿಸಲಾಯಿತು. ಹಂತ ಹಂತವಾಗಿ ನಗರೀಕರಣ ಪ್ರಕ್ರಿಯೆ ಬಲವಾಗಿ ನಡೆಯಿತು. ಆದರೆ ಆಡಳಿತ ಯಂತ್ರ ಅದಕ್ಕೆ ಸಮರ್ಪಕವಾಗಿ ಕಾರ್ಯರೂಪ ತರುವಲ್ಲಿ ಎಡವಿರುವುದನ್ನು ಕಾಣಬಹುದಾಗಿದೆ. ಅದೇ ರೀತಿಯಾಗಿ ಹಲವಾರು ಅಧ್ಯಯನಗಳು, ವರದಿಗಳು ಇದೇ ಚಿತ್ರಣವನ್ನು ನೀಡಿವೆ. ಈ ಹಿನ್ನೆಲೆಯಲ್ಲಿ ನಗರೀಕರಣ ಪ್ರಕ್ರಿಯೆಯನ್ನು ಮತ್ತು ನಗರ ಅಭಿವೃದ್ಧಿಯನ್ನು ಸೈದ್ಧಾಂತಿಕವಾಗಿ ವಿಶ್ಲೇಷಿಸಿದಾಗ ಹಲವಾರು ಕೊರತೆಗಳು ಸಹ ಎದ್ದು ಕಾಣುತ್ತವೆ. ಆ ಕೊರತೆಗಳಲ್ಲಿ ತುಂಬುವಾಗ ನಡೆದ ಅಧ್ಯಯನಗಳಲ್ಲಿ ಇದು ಸಹ ಒಂದು ಪ್ರಯತ್ನವಾಗಿದೆ. ಈ ಹಿನ್ನೆಲೆಯಲ್ಲಿ ನಗರ ಸ್ಥಳೀಯ ಸಂಸ್ಥೆಗಳು ಮತ್ತು ಅಭಿವೃದ್ಧಿಯನ್ನು ಪರಿಭಾವಿಸಿಕೊಳ್ಳಲಾಗಿದೆ.

ಅಭಿವೃದ್ದಿ ಎಂಬ ಪರಿಕಲ್ಪನೆಗೆ ಕುರಿತು ಇದುವರೆಗೆ ಆಗಿರುವ ಅಧ್ಯಯನಗಳಿಂದ ನೋಡಿದಾಗ ಪ್ರಸ್ತುತ ಜನರ ಜೀವನ ಮಟ್ಟವನ್ನು ಸುಧಾರಿಸುವಂತಹದ್ದನ್ನು ಕಾಣಬಹುದಾಗಿದೆ. ಇಂತಹ ಮಾದರಿಯನ್ನು ನೋಡಬೇಕಾದರೆ ಅಭಿವೃದ್ಧಿಗೆ ಇರುವ ಹಿನ್ನೆಲೆಯನ್ನು ನೋಡಿದಾಗ ನಮಗೆ ೧೮ನೇ ಶತಮಾನದ ಕೊನೆಯಲ್ಲಿ ಕೈಕಾರೀಕರಣದಿಂದ ಹಲವಾರು ಏರುಪೇರು ಆಗಿರುವುದನ್ನು ಕಾಣಬಹುದಾಗಿದೆ. ಈ ನಿಟ್ಟಿನಲ್ಲಿ ಬಂಡವಾಳಶಾಹಿ ವ್ಯವಸ್ಥೆಯನ್ನು ಎದುರು ನೋಡಲಾಗುತ್ತದೆ. ಇಂತಹ ಬೆಳವಣಿಗೆಯಿಂದ ಗ್ರಾಮೀಣ ಪ್ರದೇಶದಲ್ಲಿ ವಾಸಿಸುವಂತಹ ಜನರು ಮುಖ್ಯವಾಗಿ ಬಂಡವಾಳ, ಉದ್ಯೋಗ, ಶಿಕ್ಷಣ ಮತ್ತು ಉತ್ತಮ ಜೀವನವನ್ನು ನಡೆಸಲು ನಗರವು ಉತ್ತಮವಾದ ಪ್ರದೇಶ ಇಂತಹ ಹಲವು ದೃಷ್ಟಿಕೋನಗಳನ್ನು ಇಟ್ಟುಕೊಂಡು ನಗರ ಪ್ರದೇಶಗಳಿಗೆ ವಲಸೆಯಾಗಿರುವುದು ಅನೇಕ ಅಧ್ಯಯನಗಳಿಂದ ತಿಳಿದು ಬಂದಿದೆ. ಮುಂದುವರಿದು, ೨೦ನೇ ಶತಮಾನದಲ್ಲಿ ಎರಡು ಮಹಾಯುದ್ಧಗಳ ಪರಿಣಾಮವಾಗಿ ಅಭಿವೃದ್ಧಿಯ ಬಗ್ಗೆ ಹಲವಾರು ಚರ್ಚೆಗಳ ಫಲವಾಗಿ ಸಾಮಾಜಿಕ, ಆರ್ಥಿಕ, ಸಾಂಕೃತಿಕ ಮತ್ತು ರಾಜಕೀಯ ವಿದ್ಯಮಾನದಲ್ಲಿ ಅಭಿವೃದ್ಧಿ ಪರಿಕಲ್ಪನೆಯ ಬಗ್ಗೆ ಹೆಚ್ಚಿನ

ಅಧ್ಯಯನಗಳಿಗೆ ಆದ್ಯತೆ ನೀಡುತ್ತಾ ಬರಲಾಯಿತು. ಹೀಗೆ ಅಭಿವೃದ್ಧಿ ಪರಿಕಲ್ಪನೆಯನ್ನು ಮಾನವೀಯ ನೆಲೆಯಲ್ಲಿ ಪರಿಭಾವಿಸಿಕೊಂಡು. ಮಹಾಯುದ್ಧಗಳ ನಂತರದ ಕಾಲಘಟ್ಟದಲ್ಲಿ ಅಭಿವೃದ್ಧಿಯ ಪದವು ಅಭಿವೃದ್ಧಿಯ ಪರ್ಯಾಯವು ಮತ್ತು ಸುಧಾರಿತ ಪ್ರಸ್ತಾವನೆಗಳಿಗೆ ಅವಕಾಶ ನೀಡುವಂತಾಗುತ್ತದೆ. ಆದರೆ ಸಾಂಸ್ಥಿಕ ಮತ್ತು ಸಾಮಾಜಿಕ ಸಂಬಂಧಗಳ ಬದಲಾವಣೆಗೆ ಅವಶ್ಯಕವಾದ ರಾಜಕೀಯ, ಆರ್ಥಿಕ ಮತ್ತು ಸಾಂಸ್ಕೃತಿಕ ಕ್ಷೇತ್ರದ ಸತ್ಯ ಸೃಷ್ಟಿಸುವಂತಹ ಆಯಾಮಗಳನ್ನು ಹೇಗೆ ಹೊಸ ರೂಪವನ್ನು ತಾಳಿತೆಂದು ಅಧ್ಯಯನಕಾರರು ತಿಳಿಸಿರುವುದನ್ನು ಅಧ್ಯಯನಗಳಿಂದ ಗ್ರಹಿಸಲಾಗಿದೆ. ಈ ನಿಟ್ಟಿನಲ್ಲಿ ನಗರ ಸ್ಥಳೀಯ ಜನರ ಆಶೋತ್ತರಗಳಿಗೆ ಅನುಗುಣವಾಗಿ ಕರ್ನಾಟಕ ಪೌರ ನಿಗಮಗಳ ಅಧಿನಿಯಮ-೧೯೬೪ ಮತ್ತು ೧೯೭೬ರ ಕಾಯ್ದೆಗಳು ರೂಪಿತಗೊಂಡತಹವುಗಳು ಆದರೆ ಇವುಗಳು ಜನರ ಸಮಸ್ಯೆಗಳಿಗೆ ಸರಿಯಾಗಿ ಸ್ಪಂದಿಸದೆ ರಾಜ್ಯ ಸರ್ಕಾರದ ನಿಯಂತ್ರಣದಲ್ಲಿದ್ದುಕೊಂಡು ಆಡಳಿತವನ್ನು ನಡೆಸುತ್ತಿದ್ದವು. ಇಂತಹ ಸಮಸ್ಯೆಯನ್ನು ಮನಗಂಡು ೧೯೯೩ರಲ್ಲಿ ಸಂವಿಧಾನಕ್ಕೆ ೭೪ನೆಯಾ ತಿದ್ದುಪಡಿ ಕಾಯ್ದೆಯನ್ನು ಜಾರಿಗೊಳಿಸಲಾಯಿತು. ಈ ಕಾಯ್ದೆಯ ಅನ್ವಯವಾಗಿ ನಗರ ಸ್ಥಳೀಯ ಸಂಸ್ಥೆಗಳು ಎಂದರೆ ಮಹಾನಗರ ಪಾಲಿಕೆ, ನಗರಸಭೆ, ಪುರಸಭೆ ಮತ್ತು ಪಟ್ಟಣ ಪಂಚಾಯಿತಿಗಳಾಗಿದ್ದು. ಇದಕ್ಕೆ ಪೂರಕವಾಗಿ ನಗರಸಭೆಯು ೫೦ಸಾವಿರದಿಂದ ೩ಲಕ್ಷದವರೆಗೆ ಮತ್ತು ಪಟ್ಟಣ ಪಂಚಾಯಿತಿಯನ್ನು ೧೦ಸಾವಿರದಿಂದ ೨೦ ಸಾವಿರದವರೆಗಿನ ಜನಸಂಖ್ಯೆಯನ್ನು ಹೊಂದಿ, ಶೇ. ೭೫ಕ್ಕಿಂತ ಹೆಚ್ಚು ಕೃಷಿಯೇತರ ಚಟುವಟಿಕೆಯಲ್ಲಿ ತೊಡಗಿಕೊಂಡು ಅಲ್ಲದೇ, ಪ್ರತಿ ಚದರ ಕಿಲೋಮೀಟರ್‌ಗೆ ಕನಿಷ್ಠ ೪೦೦ ಮಂದಿ ವಾಸಿಸುವಂತಿರುವುದರ ಆಧಾರದ ಮೇಲೆ ನಗರ ಸ್ಥಳೀಯ ಸಂಸ್ಥೆಗಳನ್ನು ಪರಿಭಾವಿಸಿಕೊಳ್ಳಲಾಗಿದೆ. ಅಲ್ಲದೇ, ಇವು ಉತ್ತಮ ಪ್ರಜಾಪ್ರಭುತ್ವದ ಅಡಿಗಲ್ಲಿನಂತೆ ಕಾರ್ಯನಿರ್ವಹಿಸುತ್ತವೆ. ಈ ಹಿನ್ನೆಲೆಯಲ್ಲಿ ಅಭಿವೃದ್ಧಿ ಪರಿಕಲ್ಪನೆಯನ್ನು ಸ್ಥಳೀಯ ಸಂಸ್ಥೆಗಳ ಮೂಲಕ ನೋಡಲಾಗುತ್ತದೆ. ಒಟ್ಟಾರೆ ಹಲವು ಅಧ್ಯಯನಗಳ ಆಧಾರದ ಹಿನ್ನೆಲೆಯಲ್ಲಿ ಅಭಿವೃದ್ಧಿಯೆಂದರೆ, ಸಮೂಹ ಜೀವನ ಗುಣಮಟ್ಟ ಸುಧಾರಣೆ, ಕನಿಷ್ಠ ಬೇಡಿಕೆ ತೃಪ್ತಿಯಾಗಬೇಕು, ಪರಿಸರ, ಸಾಮಾಜಿಕ, ಆರ್ಥಿಕವಾಗಿ, ಸಹಜವಾಗಿರಬೇಕು ಹಾಗೂ ಸಹಜ ಪ್ರಮಾಣದ ನಿಯಂತ್ರಣ ಪ್ರಕ್ರಿಯೆ ಸಾಮಾಜಿಕ ಶಕ್ತಿ, ನ್ಯಾಯ ಪಡೆಯುವುದರ ಮೇಲೆ ಅಭಿವೃದ್ಧಿಯ ವ್ಯಾಖ್ಯೆಯನ್ನು ನೋಡುತ್ತೇವೆ. ಇದರ ಭಾಗವಾಗಿ ಭಾರತದ ಅಭಿವೃದ್ಧಿಯನ್ನು ಮತ್ತೊಂದು ದೇಶಕ್ಕೆ ಹೋಲಿಸಿಕೊಂಡ ಅಲ್ಲಿರುವಂತಹ ವಿವಿಧ ಅಭಿವೃದ್ಧಿ ದೃಷ್ಟಿಕೋನಗಳನ್ನು ಇಲ್ಲಿ ಅಳವಡಿಸಿಕೊಳ್ಳುತ್ತಾ ಜನರ ಜೀವನಮಟ್ಟವನ್ನು ಸುಧಾರಿಸುವುದರೊಂದಿಗೆ ಅಭಿವೃದ್ಧಿಯನ್ನು ಇಲ್ಲಿಯ ಸಂದರ್ಭಕ್ಕೆ ಪರಿಭಾವಿಸಿಕೊಳ್ಳಲಾಗಿದೆ.

**ಕೊನೆ ಟಿಪ್ಪಣಿಗಳು**

೧. ಲೆವಿಸ್ ಮಮ್‌ಪೋರ್ಡ್, ಅರ್ಬನ್ ಪ್ರೊಸಸ್ (ದ ಸ್ಕೋಪ್ ಆಫ್ ಅರ್ಬನ್ ಥೇಯರಿ), ರಾವತ್ ಪಬ್ಲಿಕೇಶನ್, ಜೈಪುರ್.

೨. ಡಬ್ಲ್ಯೂ ಬಿ. ಮನ್ರೋಜ ಆ್ಯಂಡ್ ಅರಿಸ್ಟೋಮೂರ್ಲೆ, ದ ಗೌರ್‍ನಮೆಂಟ್ ಆಫ್ ಯುರೋಪ್, ೧೯೫೦, ೧೯೫೦ ಪು.೨೭೨

೩. ಎ.ಕೆ.ಲಾಲ್, ಅರ್ಬನ್ ಪ್ಲ್ಯಾನಿಂಗ್: ಎಮರ್ಜಿಂಗ್ ಇಸಿವ್ಯಸ್, ನಗರಲೋಕ (ಅರ್ಬನ್ ಅಫೇರ್ಸ್ ಕ್ವಾರ್ಟಲಿ) ವ್ಯಾಲೂಂ–XXXI, ೧ ಜನೇವರಿ – ಮಾರ್ಚ್, ೧೯೯೯, ಪು.೩೨–೩೪

೪. ಪ್ರದೀಪ ಸಚದೇವ, ಅರ್ಬನ್ ಲೋಕಲ್ ಗೌರ್‍ನಮೆಂಟ್ ಆ್ಯಂಡ್ ಎಡ್ಮಿನಿಸ್ಟ್ರೆಶನಂ ಇನ್ ಇಂಡಿಯಾ, ನ್ಯೂಡೆಲ್ಲಿ, ಕೀತಾಬ ಮಹಲ್, ೧೯೯೩, ಪ್ರ ೨೩೭

೫. ರಿಪೋರ್ಟ್ ಆಫ್ ದಿ ನ್ಯಾಶನಲ್ ಕಮಿಶನ್ ಆನ್ ಅರ್ಬನೈಜೇಸನ್, ನ್ಯೂಡೆಲ್ಲಿ, ಮಿನಿಸ್ಟರಿ ಆಫ್ ಅರ್ಬನ್ ಡೆವಲಪ್‌ಮೆಂಟ್, ಗೌರ್‍ನಮೆಂಟ್ ಆಫ್ ಇಂಡಿಯಾ, ೧೯೮೮, ಪು.೨

೬. ಆರ್.ಕೆ. ಭಾರದ್ವಾಜ್, ಪ್ರಾಬ್ಲಮ್ಸ್ ಆಫ್ ಆರ್ಬನ್ ಡೆವಲ್ಪಮೆಂಟ್ ಇನ್ ಇಂಡಿಯಾ, ಡೆಲ್ಲಿ, ಕಾನ್ಸೆಪ್ಟ್ ಪಬ್ಲಿಕೇಶನ್, ೧೯೭೮, ಪು. ೬೬೨

೭. ಜಾನ್ ಎಸ್. ಸೌಲ್, ದೆವಲಪ್‌ಮೆಂಟ್ ಆಫಟರ್ ಗ್ಲೊಬಲೈಜೇಶನ್ (ಥಿಯಾರಿ ಅಂಡ್ ಪ್ರಾಕ್ಟಿಸ್), ಜೆಡ್ ಬುಕ್ ಲಿಮಿಟೆಡ್, ನ್ಯೂಡೆಲ್ಲಿ, ೨೦೦೬.

೮. ಲೇವಿಸ್ ಮಮ್‌ಪೋರ್ಡ್, ಅರ್ಬನ್ ಲೋಕಲ್ ಗವರನ್ಮೆಂಟ್ ಆಂಡ್ ಅಡಮಿನಿಶ್ಟ್ರೇನ್ ಇನ್ ಇಂಡಿಯಾ, ಕಿತಾಬ್ ಮಹಲ್, ೧೯೯೩, ನ್ಯೂಡೆಲ್ಲಿ, ಪು.೨೪೧–೨೬೧.

೯. ಮೀನಾಕ್ಷಿ ಸುಂದರಂ, ಎಸ್. ಎಸ್., ಡೀಸೆಂಟ್ರಲೈಜೇಶನ್ ಇನ್ ಡೆವಲಪಿಂಗ್ ಕಂಟ್ರೀಸ್, ಕಾನ್ಸೆಪ್ಟ್ ಪಬ್ಲಿಶಿಂಗ್ ಕಂಪನಿ, ಡೆಲ್ಲಿ, ೧೯೯೪. ಪು.೪೫.

೧೦. ಮೊಹಮ್ಮದ್ ನಜರುಲ್ ಆ್ಯಂಡ್ ಸಂಗೀತ, ಡೀಸೆಂಟ್ರಲೈಜ್ಡ್ ಗವರ್ನೆನ್ಸ್ ಆ್ಯಂಡ್ ಪೀಪಲ್ಸ್ ಪಾರ್ಟಿಸಿಪೇಷನ್ ಲೆಸೆನ್ಸ್ ಪ್ರಂ ವೆಸ್ಟ ಬೆಂಗಾಲ್, ಬೆಂಗಳೂರು: ಇನ್‌ಸ್ಟಿಟ್ಯೂಟ್ ಫಾರ್ ಸೋಶಿಯಲ್ ಆ್ಯಂಡ್ ಎಕನಾಮಿಕ್ ಛೇಂಜ್, ೨೦೦೩, ವರ್ಕಿಂಗ್ ಪೇಪರ್, ೧೩೧, ಪು.೧–೨೦.

೧೧. ಬಾಂಬರಿ ಸಿ.ಪಿ. ಅರ್ಬನ್ ಪ್ಲಾನಿಂಗ್ ಆ್ಯಂಡ್ ಲೋಕಲ್ ಅಥಾರೀಟಿಸ್, ಇಂಡಿಯನ್ ಜರ್ನಲ್ ಆಫ್ ಪಬ್ಲಿಕ್ ಅಡ್ಮಿನಿಸ್ಟ್ರೇಶನ್, ವ್ಯಾಲೂಂ ನಂ.೧೮, ೧೯೭೨.

೧೨. ಮಾಳವಿಯಾ, ಪಂಚಾಯತ್ ರಾಜ್: ಎ ಸ್ಟಡಿ ಆಫ್ ರೂರಲ್ ಲೋಕಲ್ ಗವರ್ನಮೆಂಟ್, ಲಾಂಗ್‌ಮ್ಯಾನ್, ಗುರುಪಾದ ದೇಸಾಯಿ ವಸಂತ, ಪಂಚಾಯತ್ ರಾಜ್ ಪವರ್ ಟು ದಿ ಪೀಪಲ್, ಹಿಮಾಲಯ ಪಬ್ಲಿಶಿಂಗ್ ಹೌಸ್, ನ್ಯೂಡೆಲ್ಲಿ, ೧೯೯೧.

೧೩. ಶೂಜ್‌ಮನ್, ಯಶ್ ಫೈ ರಿಪೋರ್ಟ್, ಪಬ್ಲಿಕ್ ಪಾರ್ಟಿಸಿಪೇಷನ್ ಆ್ಯಂಡ್ ಮೈನಾರಿಟೀಸ್, ಲಂಡನ್, ಮೈನಾರಿಟಿ ಗ್ರೂಪ್ ಇಂಟರ್‌ನ್ಯಾಷನಲ್, ಏಪ್ರಿಲ್ ೨೦೦೧, ಪು.೧೦–೧೧.

೧೪ ರಾಜ್‌ಕುಮಾರ್, ಪ್ರಾಬ್ಲಮ್ಸ್ ಆಫ್ ಪಂಚಾಯತ್ಸ್, ಕುರುಕ್ಷೇತ್ರ, ವ್ಯಾಲೂಮ್–೨೫, ನಂ.೧೮, ಜೂನ್–೧೬, ೧೯೭೭.

೧೫. ಡೇವಿಸ್ ಜೇಮ್ಸ್, ಹ್ಯೂಮನ್ ನೇಚರ್ ಇನ್ ಪಾಲಿಟಿಕ್ಸ್, ನ್ಯೂಯಾರ್ಕ್; ವೈಲಿ, ೧೯೬೩, ಅಧ್ಯಾಯ ೧ ಮತ್ತು ೨, ಪು. ೪–೫.

೧೬. ಇಕ್ಬಾಲ್ ನಾರಾಯಣ್, ಡೆಮಾಕ್ರಟಿಕ್ ಡಿಸೆಂಟ್ರಲೈಜೇಶನ್ಸ್ ದಿ ಇಂಡಿಯಾ ಇಮೇಜ್ ಆ್ಯಂಡ್ ದಿ ರಿಯಾಲಿಟಿ, ಇಂಡಿಯನ್ ಜರ್ನಲ್ ಆಫ್ ಪಬ್ಲಿಕ್ ಅಡ್ಮಿನಿಸ್ಟ್ರೇಶನ್, ವ್ಯಾಲ್ಯೂಂ ನಂ.೩೭, ೧೯೬೮.

೧೭. ಇಲ್ತಿಜಾ ಎಚ್. ಖಾನ್., ದಿ ಪಾಲಿಟಿಕ್ಸ್ ಆಫ್ ಡೆವಲಪ್‌ಮೆಂಟ್, ಇಂಡಿಯನ್ ಜರ್ನಲ್ ಆಫ್ ಪಾಲಿಟಿಕ್ಸ್, ವ್ಯಾಲ್ಯೂಂ ನಂ–೯, ೧೯೭೫.

೧೮. ಅಮರ್ತ್ಯ ಸೇನ್, ಡೆವಲಂಪ್‌ಮೆಂಟ್ ಯಾಸ್ ಪ್ರೀಡಂ, ನ್ಯೂಡೆಲ್ಲಿ: ಆಕ್ಸ್‌ಫರ್ಡ್ ಯೂನಿವರ್ಸಿಟಿ ಪ್ರೆಸ್, ೨೦೦೦, ಉಲ್ಲೇಖ: ಚಂದ್ರ ಪೂಜಾರಿ ಎಂ., ಸಂಶೋಧನಾ ಜವಾಬ್ದಾರಿ, ವಿದ್ಯಾರಣ್ಯ: ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೮, ಪು. ೫೫.

೧೯. ಮೆಹಬೂಬ್ ಉಲ್‌ಹಕ್, ಪೂರ್ವೋಕ್ತ, ಪು. ೧೩.

೨೦. ಡಾ. ಸತೀಶ ಎಸ್. ಗವಾತಿಯವರ, ದಿ ಇಂಪ್ಯಾಕ್ಟ್ ಎಕಾನಮಿಕ್ ಡೆವಲಪ್‌ಮೆಂಟ್ ಆನ್ ಪೊಲಿಟಿಕಲ್ ಪಾರ್ಟಿಸಿಪೇಶನ್ ಎ. ಮೈಕ್ರೋಸ್ಟಡಿ, ಹಿಮಾಲಯ ಪಬ್ಲಿಶಿಂಗ್ ಹೌಸ್, ನ್ಯೂಡೆಲ್ಲಿ, ೨೦೦೦.

೨೧. ಇಕ್ಬಾಲ್ ನಾರಾಯಣ ಮತ್ತು ಪಿ.ಸಿ.ಮಾಥೂರ್ ಅವರ, ಪಾಲಿಟಿಕ್ಸ್ ಇನ್ ಚೇಂಜಿಂಗ್ ಇಂಡಿಯಾ, ರಾವತ್ ಪ್ರಕಾಶನ, ಜೈಪುರ, ೧೯೯೪.

೨೨. ಬೆನ್ನಲ್ ಎಂ.ಕೆ., ಇಂಟರ್‌ನ್ಯಾಶನಲ್ ಡಿಸ್‌ಪ್ಯಾರಿಟಸ್ ಇನ್ ಕನ್ಸಮ್‌ಸನ್ ಲೆವಲ್ಸ್ ಅಮೆರಿಕನ್ ಎಕನಾಮಿಕ್ ಗ್ರೋಥ್, ರಿಪೋರ್ಟ್, ಸೆಪ್ಟೆಂಬರ್ ೧೯೫೧.

೨೩. ಹೇಮಲತಾ ರಾವ್, ರೀಜನಲ್ ಡಿಸ್‌ಪ್ಯಾರಿಟಿಸ್ ಆ್ಯಂಡ್ ಡೆವಲಪ್‌ಮೆಂಟ್ ಇನ್ ಇಂಡಿಯಾ, ಆಶೀಕ್ ಪಬ್ಲಿಶಿಂಗ್ ಹೌಸ್, ನವದೆಹಲಿ, ೧೯೮೪.

೨೪. ರೋಸ್ಟೋ ಡಬ್ಲ್ಯು ಡಬ್ಲ್ಯು, ದ ಸ್ಟೇಜಸ್ ಆಫ್ ಎಕನಾಮಿಕ ಗ್ರೋಥ್, ಕೇಂಬ್ರಿಡ್ಜ್ ಯೂನಿವರ್ಸಿಟಿ ಪ್ರೆಸ್, ಸಿಕಾರಡೆಲ್, ೧೯೭೧.

೨೫. ಬೆಡಿನ್ ಹೆನ್ರಿ, ದ ಸ್ಟೇಜಸ್ ಆಫ್ ಎಕನಾಮಿಕ್ ಗ್ರೋಥ್, ಕೆಂಬ್ರಿಡ್ಜ್ ಯೂನಿವರ್ಸಿಟಿ ಪ್ರೆಸ್, ಸಿಕಾರಡೆ, ೧೯೭೧.

೨೬. ಚವ್ಹಾಣ್ ಆಯ್. ಎಸ್., ಸ್ಟಡಿ ಆಫ್ ಪೊಲಿಟಿಕಲ್ ಪ್ರೋಸೆಸ್ ಇನ್ ಎ ಸ್ಮಾಲ್ ಟೌನ್, ಇಂಡಿಯನ್ ಜರ್ನಲ್, ವ್ಯಾಲ್ಯುಂ. ನಂ. ೩೧೪, ೧೯೫೧.

೨೭. ಕೊಪ್ಪರ್. ಹೆಚ್. ಡಿ., ಅರ್ಬನ್ ಡೆವಲಪ್‌ಮೆಂಟ್, ಪೊಲಿಟಿಕಲ್ ಜರ್ನಲ್ ಆಫ್ ಇಂಡಿಯನ್ ನ್ಯಾಶನಲ್, ವಾಲ್ಯೂಂ ನಂ.೨೦, ೧೯೭೮.

೨೮. ರಾಬರ್ಟ್ ಇ. ಆಗರ್., "ಪೊಲಿಟಿಕಲ್ ಸಿನಿಸಿಸಂ, ಮೆಷರ್‌ಮೆಂಟ್ ಆ್ಯಂಡ್ ಮೀನಿಂಗ್, ಜರ್ನಲ್ ಆಫ್ ಪೊಲಿಟಿಕ್ಸ್, ಸಂ.೨೩, ಸಂಖ್ಯೆ. ೧೬, ಪು.೪೭೭–೫೬೬.

೨೯. ಸಿಮೋರ್ ಮಾರ್ಟಿನ್ಸ್ ಲಿಪ್‌ಸೆಟ್ ಆ್ಯಂಡ್ ಲೊವೆಂಥಾಲ್(ಸಂ), ಕಲ್ಚರಲ್ ಆ್ಯಂಡ್ ಸೋಶಿಯಲ್ ಕ್ಯಾರೆಕ್ಟರ್, ಉಲ್ಲೇಖ ಸುಶೀಲ್ ಜೈನ್, ಮುಸ್ಲಿಂ ಆ್ಯಂಡ್ ಮಾಡರ್ನೈಜೇಷನ್; ಎ ಸ್ಟಡಿ ಆಫ್ ದೇರ್ ವೇಜಿಂಗೇ ರೋಲ್, ಸ್ಟ್ರಕ್ಚರ್ ಆ್ಯಂಡ್ ನಾರ್ಮ್ ಇನ್ ಆನ್ ಅರ್ಬನ್ ಸೆಟ್ಟಿಂಗ್; ಜೈಪುರ, ರಾವತ್ ಪಬ್ಲಿಕೇಷನ್, ೧೯೫೬, ಪು.೧೯೦.

೩೦. ಅನಿಲ್‌ಭಟ್, ಕ್ಯಾಸ್ಟ್, ಕ್ಲಾಸ್ ಆ್ಯಂಡ್ ಪೊಲಿಟಿಕ್ಸ್ ಎನ್ ಎಂಪಿರಿಕಲ್ ಪ್ರೊಫೈಲ್ ಆಫ್ ಸ್ಟ್ರಾಟಿಫಿಕೇಷನ್ ಇನ್ ಇಂಡಿಯಾ, ಇನ್ ವಿರೇಂದ್ರ ಗ್ರೋವರ್(ಸಂ) ಪು. ೪೦೩–೪೭೪.
೩೧. ಕುಮಾರ ಎನ್.ಕೆ. ಮಿಟ್ಟಲ್ ಎಕಾನಾಮಿಕ್ ಡೆವಲಪ್‌ಮೆಂಟ್ ಆ್ಯಂಡ್ ಪ್ಲಾನ್ನಿಂಗ್, ಆನಮೋಲ ಪಬ್ಲಿಕೇಶನ್ ಪ್ರೈವೇಟ್.ಲಿ, ನವದೆಹಲಿ, ೨೦೦೨
೩೨. ಮೈಕಲ್ ಎ ಕರ್ರ್ರಿಸ ದ ಚಾಲೆಂಜ್ ಆಫ್ ಅರ್ಬನ್ ಎಕನಾಮಿಕ್ ಡೆವಲಪ್‌ಮೆಂಟ್, ಲಕ್ಸಿಂಗ್ ಟನ್ ಬುಕ್ ಕಂಪನಿ, ಟೋಕೀಂಚೋ ಲಂಡನ್, ೧೯೭೫.
೩೩. ಭಾರತ ಸರ್ಕಾರ, ದ ಮಿಲೆನಿಯಮ್ ಡೆವಲಪ್ಮೆಂಟ್ ಗೋಲ್ಸ್ ವರದಿ ೨೦೦೭, ಡಿಪಾರ್ಟ್‌ಮೆಂಟ್ ಆಫ್ ಮಿನಿಸ್ಟ್ರಿ ಸ್ಟ್ಯಾಟಿಸ್ಟಿಕ್, ಪು.೬–೧೪.
೩೪. ವಿ. ನಾಥ್, ಅರ್ಬನೈಜೇಶನ್ ಇನ್ ಇಂಡಿಯಾ ರಿವೀವ್ ಆಂಡ್ ಪ್ರೊಸ್ಪಕ್ಟ್ಸ್, ಇಪಿಡಬ್ಲ್ಯೂ ಸಂಚಿಕೆ–೨೧, ಸಂಖ್ಯೆ–೮, ಪು.೩೩೯–೩೫೨.
೩೫. ಪಿ.ಸಿ.ಮಾಥೂರ್, ಫಿನನ್ಸ್ ಆಂಡ್ ಅಡ್‌ಮಿನಿಸ್ಟ್ರೇಶನ್ ಕಂಡಕ್ಟ್, ಎಐಯುಎ, ಜನವರಿ–೧೯೯೯.
೩೬. ಅಮಿತಾಬ್ ಕುಂದು, ಎ ಟೇಲ್ ಆಫ್ ಇಂಡಿಯಾ ಸಿಟ್ಸಿ, ದಿ ಹಿಂದೂ, ನ್ಯೂದೆಲ್ಲಿ, ೨೦೧೨,ಪು.೭.
೩೭. ರೋಲಿ ಅರಣ್ಯ, ಚೇತನ್ ವೈದ್ಯ, ಪ್ಯೂಚರ್ ಆಫ್ ಅರ್ಬನ್ : ಪ್ಲಾನಡ್ ಎಜುಕೇಷನ್, ಯೋಜನಾ (ವಿಶೇಷ ಸಂಚಿಕೆ), ಜನವರಿ–೨೦೧೫, ಸಂ–೬, ಸಂ–೩೦, ನ್ಯೂದೆಲ್ಲಿ, ಪು.೨೨–೨೭.
೩೮. ಆರ್.ಬಿ. ಭಗತ್, ಎ ರೀವಿವ್ ಆಫ್ ಅರ್ಬನ್ ಪಾಲಿಸಿ ಆಂಡ್ ಪ್ರೊಗ್ರಾಮ್, ಯೋಜನಾ, ಸೆಪ್ಟಂಬರ್–೨೦೧೪, ಸಂ–೨, ಸಂ–೩೦, ಬೆಂಗಳೂರು, ಪು.೫–೯.
೩೯. ಅಮಿತಾಬ್ ಕುಂದು, ಲೊಪಮುದ್ರಾ ರಾಯ್ ಮತ್ತು ಸರಸ್ವತಿ, ಮೈಗ್ರೆಶನ್ ಆಂಡ್ ಎಕ್ಸ್‌ಕ್ಲೂಶನರಿ ಅರ್ಬನೈಜೇಶನ್ ಇನ್ ಇಂಡಿಯಾ, ಇಪಿಡಬ್ಲೂ, ಜೂನ್ ೭. ೨೦೧೨, ವ್ಯಾಲ್ಯೂಂ XLVII, ನಂ. ೨೬ ಮತ್ತು ೨೭, ಪು.೨೧೯–೨೨೭.
೪೦. ಟಿ.ಆರ್. ರಘುನಂದನ್, ಹೇಗಿರ ಬೇಕು ಮುಂದಿನ ದಾರಿ(ಅಂತರಾಳ–ವಿಶೇಷ), ಪ್ರಜಾವಾಣಿ, ೧೬ ಮಾರ್ಚ್ ೨೦೧೩, ಪು.೬.
೪೧. ಎಸ್.ಆರ್. ಮಹೇಶ್ವರಿ, ಲೋಕಲ್ ಗೌರ್ನಮೆಂಟ್ ಇನ್ ಇಂಡಿಯಾ, ಪ್ರಕಾಶನ ಲಕ್ಷ್ಮಿ ನರೈನ್ ಅಗರ್ವಾಲ್, ಆಗ್ರಾ, ೨೦೧೨–೧೩, ಪು.೨೧೭.೨೪೪

**ಪೀಠಿಕೆ**

ಪ್ರಬಂಧದ ಒಂದನೆಯಾ ಅಧ್ಯಯನದಲ್ಲಿ ಈಗಾಗಲೇ ಆಗಿರುವ ಅಧ್ಯಯನಗಳನ್ನು ಜಾಗತಿಕ, ರಾಷ್ಟ್ರ ಮತ್ತು ರಾಜ್ಯದ ನೆಲೆಯಲ್ಲಿ ವಿಮರ್ಶೆ ಮಾಡಲಾಗಿದೆ. ನಗರ ಸ್ಥಳೀಯ ಸಂಸ್ಥೆಗಳ ಬೆಳವಣಿಗೆಯನ್ನು ಗುರುತಿಸು ಉದ್ದೇಶವನ್ನಿಟ್ಟುಕೊಂಡಿರುವ ಪ್ರಸ್ತುತ ಅಧ್ಯಯನವನ್ನು ಎರಡು ಭಾಗಗಳಾಗಿ ವಿಂಗಡಿಸಿಕೊಳ್ಳಲಾಗಿದೆ. ಮೊದಲ ಭಾಗದಲ್ಲಿ ಭಾರತದಲ್ಲಿ, ಕರ್ನಾಟಕದಲ್ಲಿ ನಗರ ಸ್ಥಳೀಯ ಸಂಸ್ಥೆಗಳು ಬೆಳೆದುಬಂದ ಹಾದಿಯನ್ನು ಚರ್ಚೆಗೆ ಒಳಪಡಿಸಲಾಗಿದೆ. ಅದರಂತೆ ಎರಡನೆಯಾ ಭಾಗದಲ್ಲಿ ೭೪ನೆಯಾ ತಿದ್ದುಪಡಿಯಾದ ನಂತರ ಪ್ರಸ್ತುತ ನಗರ ಸ್ಥಳೀಯ ಸಂಸ್ಥೆಗಳನ್ನು ಚರ್ಚೆ ಮಾಡಲಾಗಿದೆ. ಅಂದಹಾಗೆ ಪ್ರಸ್ತುತ ಅಧ್ಯಯನವು ನಗರ ಸ್ಥಳೀಯ ಸಂಸ್ಥೆಗಳು ವಿಕಾಸವನ್ನು ತಿಳಿಸುತ್ತದೆ.

ಸ್ಥಳೀಯ ಸ್ವಯಮಾಡಳಿತವು ಒಂದು ವ್ಯವಸ್ಥೆಯಾಗಿ ಭಾರತದಲ್ಲಿ ದೀರ್ಘಕಾಲದಿಂದ ಅಸ್ತಿತ್ವದಲ್ಲಿದೆ. ಅದರ ಹಂತಗಳಲ್ಲಿ ಬದಲಾವಣೆಯನ್ನು ಕಾಣಬಹುದು, ಆದರೆ, ಅದರ ಪ್ರೇರಣೆಯು ಸದಾ ನಮ್ಮ ಸಮಾಜೋ-ಸಾಂಸ್ಕೃತಿಕ ಗುಣವಿಶೇಷದ ಒಂದು ಭಾಗವಾಗಿ ಉಳಿದಿದೆ. ಮಧ್ಯಯುಗೀನ ಕಾಲದಲ್ಲಿ ಅದು ಗ್ರಾಮಸಭಾ ಎಂದು ಮತ್ತೆದೇ ಕೊತ್ವಾಲ-ನಗರ ರಕ್ಷಕ ಎಂಬ ರೂಪದಲ್ಲಿತ್ತು. ಅದು ತನ್ನ ಕೆಲಸ ಕಾರ್ಯಗಳನ್ನು ಸ್ವಯಮಾಡಳಿತಗಳ ಮೂಲಕ ನಿರ್ವಹಿಸಲು ಸಮರ್ಥವಾಗಿತ್ತು. ಬ್ರಿಟೀಷರ ಆಳ್ವಿಕೆಯ ಅವಧಿಯಲ್ಲಿ, ಈ ಸಂಸ್ಥೆಯು ಬ್ರಿಟೀಷ್ ಸರ್ಕಾರದ ಹಿತಾಸಕ್ತಿಗಳನ್ನು ಬಿಂಬಿಸಲು ಉದ್ದಿಷ್ಟವಾದ ಆಯ್ದ ಆಡಳಿತವರ್ಗದವರ ಸಾಧನವಾಯಿತು. ಸ್ವಾತಂತ್ರ್ಯ ನಂತರ, ಸ್ಥಳೀಯ ಸ್ವಯಾಮಾಡಳಿತ ವ್ಯವಸ್ಥೆಯು ೧೯೬೪ಳ ಮತ್ತು ೧೯೭೬ನೆಯಾ ಪೌರನಿಗಮಗಳ ಕಾಯ್ದೆಯು ಪ್ರಸ್ತುತ ರೂಪವನ್ನು ತಳೆಯಿತು. ಸ್ಥಳೀಯ ಸ್ವಯಮಾಡಳಿತವು ಈ ಹೊಸ ರೂಪದಲ್ಲಿ ಹುಟ್ಟಿದ ಈ ಪ್ರೇರಣೆಯು ಬಹಳ ಕಾಲ ನಿಯಮಿತ ಆಡಳಿತ ನಡೆಯದೆ ನಾನಾ ಹಂತಗಳಲ್ಲಿ ಪರಸ್ಪರ ಸಂಘರ್ಷಿಸುವ ಹಿನ್ನೆಲೆಯಲ್ಲಿ ಈ ಪರಿಕಲ್ಪನೆ ಮತ್ತು ಅದರ ಆಚರಣೆಯನ್ನು ನಿಸ್ತೇಜಗೊಳಿಸಿದವು. ಬದಲಾಗಿ, ದಶಕಗಳ ಕಾಲದ ಚರ್ಚೆಯ ಆನಂತರ ಸರ್ಕಾರವು ನೇಮಿಸಿದ ಸಮಿತಿಗಳ ಶಿಫಾರಸ್ಸಿನ

ಪರಿಣಾಮವಾಗಿ ಗ್ರಾಮೀಣ ಪ್ರದೇಶಗಳಲ್ಲಿ ೭೩ನೆಯಾ ತಿದ್ದುಪಡಿಯನ್ನು ಜಾರಿಗೆ ತಂದು ಅದರ ಪರಿಣಾಮವೇ ಸಂವಿಧಾನದ ೭೪ನೆಯಾ ತಿದ್ದುಪಡಿ ಕಾಯ್ದೆ–೧೯೯೩. ರಾಷ್ಟ್ರದಲ್ಲಿ ನಗರ ಸ್ಥಳೀಯ ಸಂಸ್ಥೆಗಳಿಗೆ ಕಾಯಕಲ್ಪ ನೀಡಲು ಅನುವು ಮಾಡಿಕೊಟ್ಟಿತ್ತು. ಈ ಹಿನ್ನೆಲೆಯಲ್ಲಿ ದ್ವಿ–ಸರ್ಕಾರ ಇದ್ದಂತಹ ಕೇಂದ್ರೀಕೃತ ಆಡಳಿತಕ್ಕೆ ಪೂರಕವಾಗಿ ಸ್ಥಳೀಯರ ಹಿತಾಸಕ್ತಿಯನ್ನು ಮನಗಂಡು ಅಧಿಕಾರದ ಕೇಂದ್ರೀಕೃತ ಪರಿಕಲ್ಪನೆಯನ್ನು ತ್ಯಜಿಸಿ ವಿಕೇಂದ್ರೀಕರಣ ಎಂಬ ಪರಿಕಲ್ಪನೆಯನ್ನು ರಚಿಸಲಾಗಿದೆ. ಹೀಗೆ ಪ್ರಜಾಸತ್ತಾತ್ಮಕ ವಿಕೇಂದ್ರೀಕರಣ ರಾಜ್ಯವು ಮೂಲಭೂತ ಸಾಮಾಜಿಕ ಸೇವೆಗಳನ್ನು ಒದಗಿಸುವ ಒಂದು ಪ್ರಮುಖ ಸಾಧನವಾಗಿದೆಯೆಂದು ಗುರುತಿಸಬೇಕಾದರೆ, ಪ್ರಬಲ ವಿಕೇಂದ್ರೀಕರಣದಲ್ಲಿ ರಾಜ್ಯದ ಸೇವೆಗಳನ್ನು ಹೆಚ್ಚು ಜವಾಬ್ದಾರಿಯುಳ್ಳದ್ದಾಗಿ ಮಾಡಲು ಪ್ರಮುಖ ಕಾರ್ಯತಂತ್ರ ವ್ಯವಸ್ಥೆಗೆ ಪ್ರಸ್ತಾಪಿಸಲಾಗಿದೆ. ಒಳ್ಳೆಯ ಆಡಳಿತವು ಬೆಳವಣಿಗೆಗೆ ನಿರ್ಣಾಯಕವಾಗಿದೆಯೆಂದು ಸಂಶೋಧನೆಗಳು ತಿಳಿಸುತ್ತವೆ. ಬಡವರು ಬಹಳಷ್ಟು ಸಾರ್ವಜನಿಕ ಸೇವೆಗಳ ಮೇಲೆ ಅವಲಂಬಿತವಾಗಿರುವುದರಿಂದ ಅವರ ಮೇಲೆ ಆಡಳಿತ ಪ್ರಭಾವ ಬೀರುತ್ತವೆಯೆಂದು ಮನಗಾಣಲಾಗಿದೆ. ಅದುದರಿಂದ ಒಳ್ಳೆಯ ಆಡಳಿತವು ಬೆಳವಣಿಗೆ, ಮಾನವ ಅಭಿವೃದ್ಧಿ ಮತ್ತು ಬಡತನ ಕಡಿಮೆ ಮಾಡುವ ಪ್ರಯತ್ನಗಳನ್ನು ತ್ವರಿತಗೊಳಿಸುತ್ತದೆ. ಹಾಗೆಯೇ ಮೇಲೆ ಹೇಳಲಾದ ಎಲ್ಲಾ ಮಾರ್ಪಾಡುಗಳು ಪರಿಣಾಮಕಾರಿ ಕಾರ್ಯಾಚರಣೆಯಿಂದ ರಾಜ್ಯದ ಸಮಾಜದ ಎಲ್ಲಾ ವರ್ಗಗಳು ಸಂಪೂರ್ಣವಾಗಿ ಭಾಗವಹಿಸುವ ಮೂಲಕ ಆಡಳಿತದ ಸ್ವರೂಪದಲ್ಲಿ ಸುಧಾರಣೆ ತರುವ ಅಗತ್ಯವಿದೆ. ಸರ್ಕಾರದ ನೀತಿ ಮತ್ತು ಕಾರ್ಯಕ್ರಮಗಳನ್ನು ತಿಳಿಸಲು ಹಾಗೂ ಜನರ ಅಭಿಪ್ರಾಯಗಳನ್ನು ಪಡೆಯಲು ಅದನ್ನು ಉಪಯೋಗಿಸಿಕೊಳ್ಳುವ ಮೂಲಕ ಸಾಕಷ್ಟು ವ್ಯವಸ್ಥೆ ಇರುವುದನ್ನು ಅದು ಬಯಸುತ್ತದೆ. ಇಂದಿಗೂ ಬಹಳಷ್ಟು ಅಸಮಾನತೆಗಳು ಉಳಿದಿರುವ ಕರ್ನಾಟಕದಂತಹ ರಾಜ್ಯದ ಸಮಾಜದಲ್ಲಿ ಅಭಿವೃದ್ಧಿ ಕಾರ್ಯಗಳನ್ನು ರೂಪಿಸುವಲ್ಲಿ ಹಾಗೂ ಅನುಷ್ಠಾನಗೊಳಿಸುವಲ್ಲಿ ಜನರ, ವಿಶೇಷವಾಗಿ ಬಡವರನ್ನು ಮತ್ತು ಕಡುಬಡವರನ್ನು ತೊಡಗಿಸಿಕೊಳ್ಳುವುದು ಬಹಳ ಮುಖ್ಯವಾಗಿದೆ. ಈ ಜನರ ಹಾಗೂ ನಾಗರಿಕ ಸಮಾಜದ ಹೆಚ್ಚಿನ ಭಾಗವಹಿಸುವಿಕೆಯು ಸರ್ಕಾರದ ಸಂಸ್ಥೆಗಳು ಹೆಚ್ಚು ಹೊಣೆಗಾರಿಕೆಯಿಂದ ನಡೆದುಕೊಳ್ಳುವಂತೆ ಮಾಡುತ್ತವೆ ಮತ್ತು ಅವುಗಳ ಕಾರ್ಯನಿರ್ವಹಣೆಯು ಹೆಚ್ಚು ಪಾರದರ್ಶಕವಾಗಿರುತ್ತದೆ. ಅಂತೆಯೇ, ಈ ಅಧ್ಯಯನದಲ್ಲಿ ಭಾರತ ಮತ್ತು ಕರ್ನಾಟಕದಲ್ಲಿ ನಡೆದ ವಿಕೇಂದ್ರೀಕರಣ ಪ್ರಕ್ರಿಯೆಯ ವಿವಿಧ ಹಂತಗಳು ಮತ್ತು ಈ ಸುಧಾರಣೆಗಳು ಅಭಿವೃದ್ಧಿಯನ್ನು ತಳಮಟ್ಟಕ್ಕೆ ಒಯ್ಯಲು ಮಾಡಿರುವ ಪ್ರಯತ್ನದ ಪರಿಚಯವಿದೆ. ಭಾರತದಲ್ಲಿ ನಗರ ಸ್ಥಳೀಯ ಸಂಸ್ಥೆಗಳ ಬೆಳವಣಿಗೆಯ ವಿವಿಧ ಹಂತಗಳನ್ನು ನೋಡುವುದು ಪ್ರಸ್ತುತ ಅಧ್ಯಯನದ ಉದ್ದೇಶವಾಗಿದೆ.

### ೨.೧. ಭಾರತದಲ್ಲಿ ನಗರ ಸ್ಥಳೀಯ ಸಂಸ್ಥೆಗಳ ಬೆಳವಣಿಗೆ

ನಗರ ಸ್ಥಳೀಯ ಸರಕಾರವು ಭಾರತ ಇತಿಹಾಸದಲ್ಲಿ ಬಹಳ ಆಳವಾಗಿ ಬೇರುಬಿಟ್ಟಿದೆ. ನಗರ ಸ್ಥಳೀಯ ಸರಕಾರದ ವಿಕಾಸವು ಇತಿಹಾಸಪೂರ್ವ ಕಾಲದಿಂದ ಹಿಡಿದು ಇಂದಿನವರೆಗೂ ಚದುರಂಗದಾಟದಂತಿದೆ. ಆದರೆ ಅದು ತುಂಬಾ ಇತಿಹಾಸ ಹೊಂದಿದೆ. ನಗರ ಸ್ಥಳೀಯ ಸರಕಾರದ ಕಲ್ಪನೆ ವಿದೇಶಿಯರದಲ್ಲ ಎಂದು ಭಾರತದ ಪ್ರತಿಭಾವಂತ ಜನತೆಗೆ ಪುರಾತನ ಶಾಸನಗಳಿಂದ ತಿಳಿದು ಬರುತ್ತದೆ. ಗ್ರಾಮ ಸರಕಾರ ಎಂದು ಹಿಂದೆ ಕರೆಯಲಾಗುತ್ತಿದ್ದ ಅವು

ಪುರಾತನ ಸಂಸ್ಥೆಗಳಾಗಿದ್ದವು. ಅವುಗಳನ್ನು ಸಣ್ಣ ಗಣರಾಜ್ಯವೆಂದು ಕರೆಯುತ್ತಿದ್ದರು. ವೇದಕಾಲದಲ್ಲಿಯೂ ಸಹ 'ಸಭಾ' ಗ್ರಾಮಸಭೆಗಳು ಅಸ್ತಿತ್ವದಲ್ಲಿದ್ದವು. ಅದೇ ಸಮಯದಲ್ಲಿ ಗ್ರಾಮಸಭೆ ಮತ್ತು ಗ್ರಾಮಸಮಾಜ ಸಂಸ್ಥೆಗಳು ಸ್ಥಾಪಿಸಲ್ಪಟ್ಟಿದ್ದವು. ಅವು ಗ್ರಾಮಗಳ ಆಡಳಿತ ನಿರ್ವಹಿಸುವ ಹೊಣೆಗಾರಿಕೆಯನ್ನು ಹೊಂದಿರುತ್ತಿದ್ದವು. ಈ ಪದ್ಧತಿಯು ಪ್ರದೇಶ ಸಂಸ್ಥೆಗಳ ಮುಖೇನ ಮುಸಲ್ಮಾನರ/ಮೊಗಲರ ಆಳ್ವಿಕೆಯ ಅವಧಿಯಲ್ಲಿಯೂ ಜಾರಿಯಲ್ಲಿತ್ತು. ನಗರಾಡಳಿತದ ಹೊಣೆಗಾರಿಕೆ ಕೇವಲ 'ಕೊತ್ವಾಲ'ನ ಸುಪರ್ದಿಯಲ್ಲಿತ್ತು. 'ಕೊತ್ವಾಲ'ನನ್ನು ಈ ಮೊದಲು 'ನಗರ ರಕ್ಷಕ' ಎಂದು ಕರೆಯುತ್ತಿದ್ದರು. ನಗರ ಸ್ಥಳೀಯ ಸರಕಾರವು ಹಲವಾರು ಹಂತಗಳು ಮತ್ತು ಮಜಲುಗಳ ಮುಖೇನ ವಿಕಾಸ ಹೊಂದಿದೆ. ಅದನ್ನು ವಿಸ್ತಾರವಾಗಿ ಈ ಕೆಳಗಿನಂತೆ ಕಾಲಾನುಕ್ರಮವಾಗಿ ಎರಡು ಅವಧಿಗಳ ಮೂಲಕ ಗುರುತಿಸಲಾಗಿದೆ.

ಅ. ಬ್ರಿಟಿಷ್ ಆಳ್ವಿಕೆಯಡಿಯಲ್ಲಿ(೧೯೪೭ರವರೆಗೆ)

ಬ. ಸ್ವಾತಂತ್ರ್ಯಾನಂತರ ಕಾಲದಲ್ಲಿ(೧೯೪೭ರ ನಂತರ)



### ಅ. ಬ್ರಿಟಿಷ್ ಆಳ್ವಿಕೆಯಡಿಯಲ್ಲಿ(೧೯೪೭ರವರೆಗೆ)

ಪೌರಾಡಳಿತದ ಮೊದಲ ಪುರಸಭೆಯನ್ನು ಮದ್ರಾಸಿನಲ್ಲಿ ೧೬೬೭ರಲ್ಲಿ ಸ್ಥಾಪಿಸುವ ಮೂಲಕ ಆರಂಭಿಸಲಾಯಿತು. ಮದ್ರಾಸಿನ ಈ ಪೌರಸಭೆಯು ಶಾಸನಾಧಿಕಾರ ಕಾಯ್ದೆಯಡಿಯಲ್ಲಿ ಎರಡನೇ ಜೇಮ್ಸ್ ಎಂಬ ಬ್ರಿಟೀಷ್ ದೊರೆತನದಲ್ಲಿ ಸ್ಥಾಪಿತವಾಯಿತು. ಪ್ರದೇಶಾಡಳಿತದ ಆರ್ಥಿಕ ಹೊರೆಯನ್ನು ಪ್ರದೇಶ ನಗರ ಸಮಿತಿಗೆ ವರ್ಗಾಯಿಸುವ ಉದ್ದೇಶದಿಂದ ಮದ್ರಾಸ್ ಪೌರಸಭೆಯು ಸ್ಥಾಪನೆಯಾಯಿತು. ಆಧಿಪತ್ಯ ನಗರಗಳಾದ ಮದ್ರಾಸು ಮತ್ತು ಕಲ್ಕತ್ತಾದಲ್ಲಿ ೧೭೨೬ರಲ್ಲಿ ರಾಯಲ್ ಚೌರ್ಲರ್ ನಗರಾಧ್ಯಕ್ಷರ ನ್ಯಾಯಾಲಯವನ್ನು ಸ್ಥಾಪಿಸಿದನು. ಪುರಸಭೆ ಸಂಸ್ಥೆಗಳನ್ನು ವಿಸ್ತರಿಸುವ ಸಲುವಾಗಿ ಬಂಗಾಳಿ ನಾಗರಿಕ ಕಾಯ್ದೆಯನ್ನು ೧೮೪೨ರಲ್ಲಿ ಅಂಗೀಕರಿಸಲಾಯಿತು. ಆದರೆ ಇದಕ್ಕೂ ಮುಂಚೆ ೧೭೯೩ರಲ್ಲಿ ಗರ್ವನರ್ ಜನರಲ್‌ರು ಈಸ್ಟ್ ಇಂಡಿಯಾ ಕಂಪನಿ ಮತ್ತು ಬ್ರಿಟಿಷ್ ವಾಸಿಗರ ಹೆಸರನ್ನು ಸಿಬ್ಬಂದಿ ವರ್ಗದಲ್ಲಿ ಸೇರಿಸಿದನು. ಅವರನ್ನು ಶಾಂತಿಯ ನ್ಯಾಯಾಧೀಶರು ಅಥವಾ ಜನಪ್ರಿಯವಾಗಿ ಶಾಂತಿಯ ನ್ಯಾಯಾಧೀಶರೆಂದು ಕರೆದನು. ಅವರಿಗೆ ಬೀದಿ ಗುಡಿಸುವವರನ್ನು, ರಸ್ತೆ ದುರಸ್ತಿ ಮತ್ತು ಸ್ವಚ್ಛಗೊಳಿಸುವ ನಿಮಿತ್ತ ನಿಯೋಜಿಸಲು ಅಧಿಕಾರವನ್ನು ನೀಡಲಾಗಿತ್ತು. ಇನ್ನೊಂದು ಮಹತ್ವದ ಮೈಲುಗಲ್ಲೆಂದರೆ ಅಂದು ಅಂಗೀಕರಿಸಿದ ಈ ಕಾಯ್ದೆಯು ೧೮೫೦ರಲ್ಲಿ ಸಂಪೂರ್ಣ ಭಾರತಕ್ಕೆ ಅನ್ವಯಿಸಲಾಯಿತು. ಪ್ರಾಂತೀಯ ಸರಕಾರಗಳಿಗೆ ಸಾರ್ವಜನಿಕ ಆರೋಗ್ಯ ಮತ್ತು ಅನುಕೂಲತೆ ಮತ್ತು ಒಳ್ಳೆಯ ಸೌಕರ್ಯವನ್ನು ಒದಗಿಸುವ ಸಲುವಾಗಿ ಸ್ಥಳೀಯ ಸಮಿತಿಗಳ ನಿವಾಸಿಗಳ ಮನವಿಗಳನ್ನು ಗಮನಿಸಲು ಅನುಮತಿ ನೀಡಲಾಯಿತು. ಹಾಗಿದ್ದರೂ ಬ್ರಿಟಿಷರು ಸ್ವ-ಸರಕಾರ ಅಂಗಗಳನ್ನು ಕಾಯ್ದೆಯಡಿಯಲ್ಲಿ ಜಾರಿಗೊಳಿಸುವ ಬದಲಾಗಿ ತಾವೇ ಸ್ವತಃ ಸೇವೆ ಮಾಡಲು ಪ್ರಾಥಮಿಕವಾಗಿ ಉತ್ಸುಕರಾಗಿದ್ದರು. ಸಾಂಕ್ರಾಮಿಕ ರೋಗಗಳಿಂದ ಉಂಟಾದ ಅನಾರೋಗ್ಯ ಸ್ಥಿತಿಯನ್ನು ತಕ್ಷಣವೇ ಸುಧಾರಿಸುವ ಸಲುವಾಗಿ ೧೮೬೩ರಲ್ಲಿ ರಾಯಲ್ ಸೈನ್ಸ್ ಸ್ವಾಸ್ಥ್ಯ ಪರಿಪಾಲನೆ ನಿಯೋಗವು ಶಿಫಾರಸ್ಸು ಮಾಡಿತು. ಭಾರತ ಸರಕಾರವು ಹಲವಾರು ಪುರಸಭೆ ಕಾಯ್ದೆಗಳನ್ನು ಅಂಗೀಕರಿಸಿತು. ಈ ಕಾಯ್ದೆಗಳು ರಾಜ್ಯಪಾಲರಿಗೆ ಯಾವುದೇ ಪ್ರದೇಶದಲ್ಲಿ ಪೌರಸಭೆ ರಚಿಸಲು

ಆದೇಶ ಹೊರಡಿಸುವ ಹಕ್ಕನ್ನು ಒಳಗೊಂಡಂತೆ ಹಲವಾರು ಸವಲತ್ತುಗಳನ್ನು ಕೊಟ್ಟಿತ್ತು. ಆ ಸಮಯದಲ್ಲಿ ಪ್ರದೇಶ ಸಂಸ್ಥೆಗಳು ಬ್ರಿಟೀಷರ ಪ್ರಭಾವದಲ್ಲಿ ಇದ್ದವು. ಭಾರತೀಯರು ಬ್ರಿಟೀಷರ ಕಾರ್ಯಗಳಲ್ಲಿ ಭಾಗವಹಿಸಿ ನಷ್ಟ ಹೊಂದಲು ಇಚ್ಚಿಸದೆ ತಟಸ್ಥರಾಗಿದ್ದರು.

**೧೮೭೦ರ ಲಾರ್ಡ್ ಮೆಯೋ ಮಸೂದೆ**

೧೮೭೦ರ ಲಾರ್ಡ್ ಮೆಯೋ ಮಸೂದೆಯು ಪ್ರದೇಶ ಸ್ವ-ಸರಕಾರದ ನಿಜವಾದ ಅಭಿವೃದ್ಧಿಗೆ ಕಾರಣವಾಯಿತು. ಭಾರತೀಯರ ಸಂಘವನ್ನು ಹೆಚ್ಚಾಗಿ ಆಡಳಿತದಲ್ಲಿ ತೊಡಗಿಸಿಕೊಳ್ಳುವ ಉಪಾಯವು ಪುರಸಭೆ ಸ್ವ-ಸರಕಾರವು ಹೆಚ್ಚಿನ ಮಟ್ಟದಲ್ಲಿ ಕಾರ್ಯಚಟುವಟಿಕೆಗಳನ್ನು ಕೈಗೊಳ್ಳಲು ಸಹಾಯಕವಾಯಿತು. ಹೆಚ್ಚಿನ ಸಂಖ್ಯೆಯಲ್ಲಿ ಪುರಸಭೆಗಳು ಅಸ್ತಿತ್ವಕ್ಕೆ ಬಂದವು. ದೇಶದ ನಾನಾ ಭಾಗಗಳಲ್ಲಿ ಹೆಚ್ಚಿನ ಮಟ್ಟದಲ್ಲಿ ಅಭಿವೃದ್ಧಿಯಾಗುತ್ತಿದ್ದರೂ ಪ್ರದೇಶದ ಸ್ಥಿತಿಗತಿಗಳನ್ನು ಪರಿಶೀಲಿಸುವ ಅವಶ್ಯಕತೆ ಇತ್ತು. ಪುರಸಭೆ ಸರಕಾರವು ಪ್ರಭುತ್ವ ಪರಿಷ್ಕರ ಪ್ರಭಾವವನ್ನು ಅವಲಂಬಿಸಿತ್ತು. ಅದು ಸಾಧ್ಯವಾದ ಮಟ್ಟಿಗೆ ಯಾವುದೇ ಕಾರ್ಯಗಳನ್ನು ತನ್ನ ಹತೋಟಿಯಲ್ಲಿ ತೆಗೆದುಕೊಳ್ಳಬಹುದಾಗಿತ್ತು.

**೧೮೮೨ರ ಲಾರ್ಡ್ ರಿಪ್ಪನ್ ಮಸೂದೆ**

೧೮ ಮೇ ೧೮೮೨ರಂದು ಒಂದು ಪ್ರಸಿದ್ಧ ಐತಿಹಾಸಿಕ ಮಸೂದೆ ಜಾರಿಗೆ ಬಂದಿತು. ಈ ಮಸೂದೆಯನ್ನು ಪ್ರದೇಶ ಸರಕಾರದ ಅಭಿವೃದ್ಧಿಯ ದಿಶೆಯಲ್ಲಿ ಒಂದು ಮಹತ್ವದ ಘಟ್ಟ ಅಥವಾ ಮೈಲಿಗಲ್ಲು ಎಂದು ಕರೆಯಬಹುದು. ಈ ಮಸೂದೆಯು 'ಮ್ಯಾಗ್ನಕಾರ್ಟ'[೧] ಎಂದು ಪ್ರಸಿದ್ಧಿಯಾಯಿತು. ಲಾರ್ಡ್ ರಿಪ್ಪನ್‌ನನ್ನು ಉಚಿತವಾಗಿಯೇ ಭಾರತದ ಪ್ರದೇಶ ಸ್ವ ಸರಕಾರದ 'ಪಿತಾಮಹ' ಎಂದು ಕರೆಯುತ್ತಾರೆ. ಲಾರ್ಡ್ ರಿಪ್ಪನ್‌ರಿಗೆ ಪ್ರದೇಶ ಸ್ವ-ಸರಕಾರ ಸಂಸ್ಥೆಗಳನ್ನು ಪ್ರೋತ್ಸಾಹಿಸಬೇಕೆಂಬ ಶ್ರೇಷ್ಠ ಹಂಬಲವಿತ್ತು. ಈ ಮಸೂದೆಯು ಕೆಳಕಂಡ ಗುರಿಗಳನ್ನು ಹೊಂದಿತ್ತು.

೧. ಪ್ರದೇಶ ಸ್ವ-ಸರಕಾರಿ ಸಂಸ್ಥೆಗಳ ನಡುವೆ ಸಂಪರ್ಕ ಸ್ಥಾಪಿಸುವುದು.

೨. ನೌಕರ ಮತ್ತು ಇತರ ಸಿಬ್ಬಂದಿಯ ಸಂಖ್ಯೆಯನ್ನು ಒಟ್ಟು ೧/೩ಕ್ಕಿಂತ ಹೆಚ್ಚಾಗದಂತೆ ನೋಡಿಕೊಳ್ಳುವುದು.

೩. ಒಳಗಿನಿಂದ ಅಲ್ಲದೇ ಹೊರಗಿನಿಂದ ನಿಯಂತ್ರಣ ಹೊಂದುವುದು.

೪. ಭಾರಿ ಮಟ್ಟದ ಆರ್ಥಿಕ ಸ್ವಾವಲಂಬನೆ ನೀಡುವುದು ಮತ್ತು

೫. ಪ್ರದೇಶ ಸಂಸ್ಥೆಗಳನ್ನು ಸ್ಥಾಪಿಸಲು ಚುನಾವಣೆಯನ್ನು ಅನುಸರಿಸುವುದು.[೨]

ಹಲವಾರು ಪ್ರಾದೇಶಿಕ ಸರಕಾರಗಳು ಲಾರ್ಡ್ ರಿಪ್ಪನ್‌ನ ಮತ್ತು ಪುರಸಭೆಯ ಕಾಯ್ದೆಯ ಎಲ್ಲಾ ಶಿಫಾರಸ್ಸುಗಳನ್ನು, ಸುಧಾರಣೆಗಳನ್ನು ಮನದಟ್ಟು ಮಾಡಿಕೊಳ್ಳಲು ಮತ್ತು ಪರಿಣಾಮಗಳನ್ನು ಅರಿಯುವ ಸಲುವಾಗಿ ಅಂಗೀಕರಿಸಲಾಯಿತು. ಮೊದಮೊದಲು, ಲಾರ್ಡ್ ರಿಪ್ಪನ್‌ನ ಮಸೂದೆಯೂ ಮಹತ್ವದ ಯಶಸ್ಸನ್ನು ಕಂಡುಕೊಂಡಿತು. ಆದರೆ ನಂತರದ ಸಮಯದಲ್ಲಿ ಅದು ಪ್ರಗತಿ ಹೊಂದಲು ಸಾಧ್ಯವಾಗಲಿಲ್ಲ. ಈ ರೀತಿಯಾಗಲು ಹಲವಾರು ಕಾರಣಗಳಿರಬಹುದು. ಅದಕ್ಕೆ ಅತಿ ಮುಖ್ಯ ಕಾರಣವೆಂದರೆ ಚುನಾಯಿತ ಪ್ರದೇಶವು ಒಟ್ಟು ಜನಸಂಖ್ಯೆಯಲ್ಲಿ ಕೇವಲ ೨%ರಷ್ಟು ಜನಸಂಖ್ಯೆಯನ್ನು ಹೊಂದಿತ್ತು. ಈ ೧೮೮೨ರ ಮಸೂದೆಯು ಮುಂದೆ ಯಶಸ್ಸು ಕಾಣಲಿಲ್ಲ. ಆದ್ದರಿಂದ ಚಾರ್ಲ್ಸ್ ಹಾಬ್‌ಹೌಸ್‌ರ ಅಧ್ಯಕ್ಷತೆಯಲ್ಲಿ ಪ್ರದೇಶ ಸ್ವಸರಕಾರದ ಉಳಿದ ವಿಷಯಗಳಿಗೆ ಸಂಬಂಧಿಸಿದಂತೆ

ಗುರಿಗಳನ್ನು ಸಫಲಗೊಳಿಸಲು ೧೯೦೭ರಲ್ಲಿ ರಾಯಲ್ ನಿಯೋಗವನ್ನು ನೇಮಿಸಿತು. ಈ ನಿಯೋಗವು ೧೯೦೯ರಲ್ಲಿ ತನ್ನ ವರದಿಯನ್ನು ಸಲ್ಲಿಸಿ ಕೆಳಕಂಡ ಕ್ರಮಗಳನ್ನು ತೆಗೆದುಕೊಳ್ಳಬೇಕೆಂದು ಶಿಫಾರಸ್ಸು ಮಾಡಿತು.

೧. ಎಲ್ಲಾ ಪುರಸಭೆಯ ವಿಂಗಡನೆಯನ್ನು ಜನಸಂಖ್ಯೆಯ ಆಧಾರದ ಮೇಲೆ ಮಾಡಬೇಕು.

೨. ಕಾಯ್ದೆಯ ಇತಿಮಿತಿಯೊಳಗೆ ತೆರಿಗೆ ಸಂಬಂಧಿಸಿದಂತೆ ಎಲ್ಲಾ ಅಧಿಕಾರವನ್ನು ಪುರಸಭೆಗಳಿಗೆ ನೀಡಬೇಕು. ಪುರಸಭೆಯು ತನ್ನ ಆಯವ್ಯಯದ ಮೇಲೆ ಹತೋಟಿ ಹೊಂದಿರಬೇಕು ಮತ್ತು ಕನಿಷ್ಠ ಬಾಕಿಯನ್ನು ಕಾಯ್ದುಕೊಳ್ಳಬೇಕು.

೩. ಪುರಸಭೆಯು ತನ್ನ ಅಧ್ಯಕ್ಷರನ್ನು ತಾವೇ ಆರಿಸಿಕೊಳ್ಳಬೇಕು ಮತ್ತು ಆಯ್ಕೆಯಾದ ವ್ಯಕ್ತಿಯು ಪ್ರದೇಶ ಸಂಸ್ಥೆಯಲ್ಲಿ ಸ್ಪಷ್ಟ ಬಹುಮತ ಹೊಂದಿರಬೇಕು.

೪. ಬೃಹತ್ ಪುರಸಭೆಗಳಿಗೆ ಯೋಗ್ಯತೆಗೆ ಅನುಗುಣವಾಗಿ ವಿದ್ಯಾರ್ಹತೆಗೆ ಅನುಗುಣವಾಗಿ ಕಾರ್ಯನಿರ್ವಾಹಕ ಅಧಿಕಾರಿ ಮತ್ತು ಆರೋಗ್ಯ ಅಧಿಕಾರಿಯನ್ನು ನೇಮಕ ಮಾಡಿಕೊಳ್ಳಲು ಅಧಿಕಾರವನ್ನು ನೀಡಬೇಕು.

ಭಾರತ ಸರಕಾರವು ೨೮ ಏಪ್ರಿಲ್ ೧೯೧೫ರ ಮಸೂದೆಯನ್ನು ಮಂಡಿಸಿ ಈ ಶಿಫಾರಸ್ಸುಗಳನ್ನು ನಿಧಾನವಾಗಿ ಜಾರಿಗೊಳಿಸಲು ಸೂಚಿಸಿತು. ಅದು ಪ್ರದೇಶ ಸಂಸ್ಥೆಗಳ ಸುಧಾರಣೆಯ ಸಲುವಾಗಿ ಅದರ ವಿನ್ಯಾಸ ಹಾಗೂ ಕಾರ್ಯ ವಿನಿಯೋಗ ಆಧಾರವಾಗಿಟ್ಟುಕೊಂಡು ವಿಸ್ತಾರವಾದ ರೇಖಾಚಿತ್ರವನ್ನು ಸೂಚಿಸಿತು. ಆದಾಗ್ಯೂ ಪ್ರಾದೇಶಿಕ ಸರಕಾರವೊಂದೇ ಪ್ರಾದೇಶಿಕ ಸಂಸ್ಥೆಗಳ ಪ್ರಕಟಣೆಗೆ ಮತ್ತು ಅಭಿವೃದ್ಧಿಗೆ ಅವಶ್ಯವಿರುವ ಜ್ಞಾನವನ್ನು ಹೊಂದಿದ್ದರಿಂದ ಭಾರತ ಸರಕಾರವು ಪ್ರಾದೇಶಿಕ ಸರಕಾರದ ಅಭಿಪ್ರಾಯಗಳಿಗೆ ಒತ್ತು ನೀಡಲು ಸಾಧ್ಯವಾಗಲಿಲ್ಲ. ಭಾರತ ಸರಕಾರವು ೧೬ ಮೇ ೧೯೧೮ರಂದು ಒಂದು ವಿಸ್ತಾರವಾದ ಮಸೂದೆಯನ್ನು ಹೊರತಂದಿತು. ಈ ಮಸೂದೆಯು ಪ್ರದೇಶ ಸಂಸ್ಥೆಗಳ ಮೇಲೆ ಪೂರ್ಣ ಅಧಿಕಾರವನ್ನು ಸ್ಥಾಪಿಸುವಂತಹ ಮೂಲ ತತ್ವಗಳನ್ನು ತನ್ನೊಳಗೆ ಹೊಂದಿತ್ತು.[೩] ಈ ನಡುವೆ ೧೯೧೯ರ ಭಾರತ ಸರಕಾರ ಕಾಯ್ದೆ ಜಾರಿ ಮಾಡಿತು. ಮತ್ತು ಪ್ರದೇಶ ಸರಕಾರದ ವಿಷಯವನ್ನು ಆಯಾ ಪ್ರದೇಶಗಳಿಗೆ ವರ್ಗಾಯಿಸಿತು. ಆ ಪ್ರದೇಶಗಳನ್ನು ಚುನಾಯಿತ ಮಂತ್ರಿಗಳ ನಿಯೋಗದಲ್ಲಿ ಇಡಲಾಯಿತು. ೧೯೧೯ರ ಕಾಯ್ದೆಯಲ್ಲಿ, ಸ್ಥಳೀಯ ಸಂಸ್ಥೆಗಳ ಆಯವ್ಯಯ ರಚಿಸುವುದು ಮತ್ತು ಕಾರ್ಯಾಂಗ ಅಧಿಕಾರವನ್ನು ಚುನಾಯಿತ ಸದಸ್ಯರಿಗೆ ವರ್ಗಾಯಿಸಿದ್ದರಿಂದ ಬಹಳಷ್ಟು ನಿರ್ಬಂಧಗಳಿಂದ ಮುಕ್ತ ಹೊಂದಿದರು. ಈ ಪ್ರಬುದ್ಧ ವ್ಯವಸ್ಥೆಯಡಿಯಲ್ಲಿ ೧೯೧೯ರ ಭಾರತೀಯ ಕಾಯ್ದೆಯನ್ನು ಸರಕಾರವು ಜಾರಿ ಮಾಡಿತು ಸ್ಥಳೀಯ ಸರಕಾರವು ವರ್ಗಾಯಿಸಲ್ಪಟ್ಟ ವಿಷಯವಾಯಿತು. ಕೇವಲ ಸ್ಥಳೀಯ ಸಂಸ್ಥೆಗಳಿಗೆ ತೆರಿಗೆಯನ್ನು ವಿಧಿಸಲು ಯಾದಿ ಮಾಡಿತು. ಸ್ಥಳೀಯ ಸರಕಾರದ ಇತಿಹಾಸದಲ್ಲಿ ಇದೇ ಮೊದಲು ಮತ್ತು ಕೊನೆಯದಾದ ಘಟನೆ. ಈ ಕಾಯ್ದೆಯಡಿಯಲ್ಲಿ ಸ್ಥಳೀಯ ಸಂಸ್ಥೆಗಳಿಗೆ ಹಂಚಿಕೆಯಾದ ಸಂಪನ್ಮೂಲಗಳು ತೀರ ಕಡಿಮೆಯಾಗಿತ್ತು. ಈ ಹಂಚಿಕೆಯು ಸ್ಥಳೀಯ ಸಂಸ್ಥೆಗಳಿಗೆ ಅತಿ ಮುಖ್ಯವಾದ ಆರ್ಥಿಕ ಸ್ವಾತಂತ್ರ್ಯವನ್ನು ತಂದುಕೊಟ್ಟಿತು. ೧೯೩೫ರ ಭಾರತ ಸರಕಾರದ ಕಾಯ್ದೆಯಡಿಯಲ್ಲಿ, ೧೯೩೭ರಲ್ಲಿ ಪ್ರಾದೇಶಿಕ ಸ್ವಾಯತ್ತತೆಯು ಜಾರಿಗೊಂಡಿತು. ತದನಂತರ ಪ್ರದೇಶ ಸರಕಾರವು ಕೇವಲ ಪ್ರಾಯೋಗಿಕವಾಗಿರದೇ ಇಡೀ ದೇಶದ ಸ್ಥಳೀಯ ಸರಕಾರದ

ಮೂಲಭೂತ ಭಾಗವಾಯಿತು. ಸ್ಥಳೀಯ ಸರಕಾರವು ಹೊಸತನ ಮತ್ತು ಸ್ಥಿರತೆಯನ್ನು ಹೊಂದುವಲ್ಲಿ ಯಶಸ್ಸು ಹೊಂದಿದ್ದರೂ ಅದರ ಕಷ್ಟಗಳಿಗೆ ಕಾರಣವಾದ ಸ್ಪಷ್ಟ ದೂರು ಮತ್ತು ಗಂಭೀರ ಲೋಪಗಳು ಮತ್ತು ಅವಶ್ಯಕತೆಗಳನ್ನು ಗುರತಿಸಲಾಗದೆ ಮತ್ತು ಪರೀಕ್ಷಿಸಲಾಗದೆ ಹೋದವು. ಸ್ಥಳೀಯ ವ್ಯವಹಾರವನ್ನು ಸೂಕ್ತವಾಗಿ ನೆರವೇರಿಸುವಲ್ಲಿ ಸಹಾಯಕವಾಗಲು ಈ ಅವಧಿಯಲ್ಲಿ ಆಯಾ ಪ್ರದೇಶಗಳು ಪ್ರದೇಶ ಸರಕಾರ ಸಂಸ್ಥೆಗಳ ಕಾರ್ಯಚಟುವಟಿಕೆಗಳನ್ನು ಪರಿಶೀಲಿಸಿ ಸೂಕ್ತ ಸಂಸ್ಥೆಯನ್ನಾಗಿ ಮಾಡಲು ಪ್ರಯತ್ನಿಸಿತು. ಹೀಗಿದ್ದ ಈ ಅವಧಿಯಲ್ಲಿ ಸ್ಥಳೀಯ ಸರಕಾರದ ವಿಷಯದಲ್ಲಿ ಹೆಚ್ಚಿನ ಅಭಿವೃದ್ಧಿ ಹೊಂದಲು ಸಾಧ್ಯವಾಗಲಿಲ್ಲ. ಈ ಅವಧಿಯಲ್ಲಿ ಎಷ್ಟೇ ಅಭಿವೃದ್ಧಿ ಹೊಂದಿದ್ದರೂ ಅವು ಅತಿ ನಿರ್ಲಕ್ಷಿತ ಪ್ರಮಾಣದಲ್ಲಿ ಇದ್ದವು.

**ಬ. ಸ್ವಾತಂತ್ರ್ಯಾನಂತರದ ನಗರ ಸ್ಥಳೀಯ ಸಂಸ್ಥೆಗಳ ಬೆಳವಣಿಗೆ**

೧೯೪೭ರಲ್ಲಿ ಭಾರತ ಸ್ವಾತಂತ್ರ್ಯ ಹೊಂದಿದ ನಂತರ ಕೇಂದ್ರದಲ್ಲಿ, ಸ್ಥಳೀಯ ಸಂಸ್ಥೆಗಳಲ್ಲಿ ಸ್ವ-ಸರಕಾರವು ಸ್ಥಾಪಿತವಾಯಿತು. ೧೯೪೮ರಲ್ಲಿ ಪ್ರದೇಶ ಸ್ವ-ಸರಕಾರಗಳ ಮಂತ್ರಿಗಳು ಸಿಮ್ಲಾದಲ್ಲಿ ನೂತನ ಸ್ಥಳೀಯ ಸರಕಾರಿ ಸಂಸ್ಥೆಗಳನ್ನು ಸ್ಥಾಪಿಸುವ ವಿಷಯವಾಗಿ ಚರ್ಚಿಸಲು ಒಟ್ಟುಗೂಡಿದರು. ೨೬ ಜನವರಿ ೧೯೫೦ರಂದು ಭಾರತ ಪ್ರಜಾಪ್ರಭುತ್ವವು ಜಾರಿಗೆ ಬಂದಿದ್ದು ಸ್ಥಳೀಯ ಸಂಸ್ಥೆಗಳಿಗೆ ಆಶಾದಾಯಕವಾಯಿತು. ರಾಜ್ಯ ನಿರ್ದೇಶನ ತತ್ವಗಳ ಅಡಿಯಲ್ಲಿ ಸಂವಿಧಾನದ ೪೦ನೇ ಕಲಂನಲ್ಲಿ ಗ್ರಾಮ ಪಂಚಾಯಿತಿಗಳಿಗೆ ಮುಂದೆ ಪ್ರದೇಶ ಸ್ಥಳೀಯ ಘಟಕವಾಗಿ ಬದುಕಲು ಸಮರ್ಪಕ ಅಧಿಕಾರ ಕೊಡಲಾಯಿತು. ನಗರ ಸ್ಥಳೀಯ ಸಂಸ್ಥೆಗಳ ಬಗ್ಗೆ ಅಲ್ಲಿ ನಿಶ್ಚಯ ಪ್ರಸ್ತಾಪ ಆಜ್ಞೆ ಕಂಡುಬರುವುದಿಲ್ಲ. ನಗರ ಸ್ಥಳೀಯ ಸರಕಾರದ ಪ್ರಸ್ತಾವವನ್ನು ಕೇವಲ ದಾಖಲೆಗಳಲ್ಲಿ ಕಾಣಬಹುದು. ಅಂದರೆ ೭ನೇ ಯಾದಿ(ರಾಜ್ಯ ಪಟ್ಟಿ)ಯ ೨ನೇ ಪಟ್ಟಿಯ ೫ನೇ ದಾಖಲೆ ಮತ್ತು ೩ನೇ ಪಟ್ಟಿಯ ಒಟ್ಟು ಪಟ್ಟಿಯ ೭ನೇ ಯಾದಿಯ ೨೦ನೇ ದಾಖಲೆ. ಸ್ಥಳೀಯ ಸರಕಾರ ಅಥವಾ ಗ್ರಾಮಾಡಳಿತದ ಸಲುವಾಗಿ ಪುರಸಭೆಗಳ, ಅಭಿವೃದ್ಧಿ ಪ್ರತಿಷ್ಠಾನಗಳ, ಜಿಲ್ಲಾ ಸಮಿತಿಯ, ಗಣಿಗಾರಿಕೆ ಠರಾವಣೆ ಅಧಿಕಾರ ಮತ್ತು ಇತರ ಪ್ರದೇಶ ಅಧಿಕಾರಗಳ ಸಾಂವಿಧಾನಿಕ ಅಧಿಕಾರವನ್ನು ದಾಖಲೆ ೫ ತಿಳಿಯಪಡಿಸುತ್ತದೆ. ಒಟ್ಟು ಪಟ್ಟಿಯ ೨೦ನೇ ದಾಖಲೆಯು "ಆರ್ಥಿಕ ಮತ್ತು ಸಾಮಾಜಿಕ" ರಚನಾ ಕ್ರಮವನ್ನು ತಿಳಿಸುತ್ತದೆ. ಇವೆರಡು ದಾಖಲೆಗಳ ಗಡಿಯೊಳಗೆ ನಗರ ರಚನಾಕ್ರಮವು ಬರುತ್ತದೆ.[೪] ಮೊದಮೊದಲು ನಗರ ಸ್ಥಳೀಯ ಸಂಸ್ಥೆಗಳ ಬಗ್ಗೆ ಯಾವುದೇ ನಿಶ್ಚಯವಾದ ದೃಷ್ಟಿಕೋನದ ಅಭಿವ್ಯಕ್ತಿಯನ್ನು ಯೋಜನಾ ಸಮಿತಿಯು ಮಾಡಿರಲಿಲ್ಲ. ಅದನ್ನು ೩ನೇ ಮತ್ತು ೪ನೇ ಪಂಚವಾರ್ಷಿಕ ಯೋಜನೆಯಲ್ಲಿ ಅದನ್ನು ಸಂಕ್ಷಿಪ್ತವಾಗಿ ವಿವರಿಸಲಾಗಿತ್ತು. ಅದನ್ನು ಹೀಗೆ ಅವಲೋಕಿಸಲಾಗಿತ್ತು. ಪ್ರದೇಶ ಮಟ್ಟದಲ್ಲಿ ಪುರಸಭೆ ಆಡಳಿತವೊಂದೇ ನಗರಾಭಿವೃದ್ಧಿಗೆ ಸಂಬಂಧಿಸಿದಂತೆ ವಸತಿಸೌಕರ್ಯ ಮತ್ತು ಜೀವನ ಕ್ರಮಗಳ ಸುಧಾರಣೆಯಂತಹ ವಿಷಯಗಳಲ್ಲಿ ಸೂಕ್ತ ಸೇವೆ ಕಲ್ಪಿಸಬಹುದು ಎಂದು ತಿಳಿಸಲಾಗಿತ್ತು. ಆದರೆ ಪುರಸಭೆ ಆಡಳಿತವು ಈ ಎಲ್ಲಾ ಕಾರ್ಯಗಳನ್ನು ಕೈಗೊಳ್ಳಲು ಶಕ್ತವಾಗಿರುವುದಿಲ್ಲ.[೫] ನಗರ ಪ್ರದೇಶ ಸರಕಾರದ ಅಭಿವೃದ್ಧಿಯ ದೃಷ್ಟಿಯಿಂದ, ಹಲವಾರು ಸಮಿತಿ ನಿಯೋಗವನ್ನು ಪ್ರದೇಶ ಸರಕಾರದ ಕಾರ್ಯಚಟುವಟಿಕೆಗಳನ್ನು ವಿಚಾರಿಸಲು ಮತ್ತು ಸೂಕ್ತ ಸೂಚನೆಗಳನ್ನು ನೀಡಲು ನಿಯೋಜಿಸಲಾಯಿತು. ಅವುಗಳಲ್ಲಿ ಕೆಲವು ಹೀಗಿವೆ. ಪ್ರದೇಶ ಆರ್ಥಿಕ ವಿಚಾರಣಾ

ಸಮಿತಿ(೧೯೪೯–೧೯೫೧), ತೆರಿಗೆ ವಿಚಾರಣಾ ನಿಯೋಗ(೧೯೫೩–೧೯೫೪), ಪುರಸಭೆ ಅಥವಾ ಸ್ಥಳೀಯ ಆಡಳಿತ ನೌಕರರ ತರಬೇತಿ ಸಮಿತಿ(೧೯೬೩), ಗ್ರಾಮೀಣ–ನಗರ ಸಂಬಂಧಿ ಸಮಿತಿ(೧೯೬೩–೧೯೬೬), ನಗರ ಸ್ಥಳೀಯ ಸಂಸ್ಥೆಗಳ ಆರ್ಥಿಕ ಸಂಪನ್ಮೂಲ ವಿಸ್ತರಿಸುವ ಸಲುವಾಗಿ ಮಂತ್ರಿಮಂಡಳ(೧೯೬೩) ಮತ್ತು ಪುರಸಭೆಯ ನೌಕರರ ಸೇವಾ ಸ್ಥಿತಿಗತಿ ಅರಿಯುವ ಸಮಿತಿ(೧೯೬೫–೧೯೬೮) ಅಲ್ಲದೇ, ರಾಜ್ಯ ಸರಕಾರವೂ ಕೂಡ ನಗರ ಸ್ಥಳೀಯ ಸಂಸ್ಥೆಗಳಿಗೆ ಸಂಬಂಧಿಸಿದಂತೆ ಸಮಸ್ಯೆಗಳನ್ನು, ಆಡಳಿತ ತಿದ್ದುಪಡಿಯನ್ನು ತರುವ ನಿಟ್ಟಿನಲ್ಲಿ ಅಧ್ಯಯನ ನಡೆಸಲು ಹಲವಾರು ಸಮಿತಿ ಮತ್ತು ನಿಯೋಗಗಳನ್ನು ನಿಯೋಜಿಸುತ್ತಾ ಬಂದಿದೆ. ಸ್ಥಳೀಯ ಸರಕಾರಕ್ಕೆ ಸಂಬಂಧಿಸಿದ ಎಲ್ಲಾ ವಿಷಯಗಳನ್ನು ಮತ್ತು ಮಗ್ಗಲುಗಳನ್ನು ಮಾನ್ಯ ಮಾಡಿ ಶಿಫಾರಸ್ಸು ಮಾಡುವ ಸಲುವಾಗಿ ಗ್ರಾಮ ಸ್ಥಳೀಯ ಸರಕಾರದ ಕೇಂದ್ರೀಯ ಮಂತ್ರಿಮಂಡಳದ ಸಭೆಯನ್ನು ೧೯೪೮ರಲ್ಲಿ ಕರೆಯಲಾಗಿತ್ತು. ಈ ಸಭೆಯು ಕೇಂದ್ರ ಆರೋಗ್ಯ ಮಂತ್ರಿಗಳ ಅಧ್ಯಕ್ಷತೆಯಲ್ಲಿ ೧೯೫೪ರಲ್ಲಿ ನಡೆಯಿತು. ಭಾರತ ಸರಕಾರವು ಪ್ರದೇಶ ಸರಕಾರದ ನಗರಾಧ್ಯಕ್ಷರ ಮತ್ತು ಜಿಲ್ಲಾಧಿಕಾರಿಗಳ, ವಸತಿಖಾತೆ ಮಂತ್ರಿಗಳ, ರಾಜ್ಯಮಂತ್ರಿಗಳ ಮುಂತಾದವರ ಸರ್ವಭಾರತ ವಿಚಾರ ಸಂಕಿರಣಗಳಂತಹ ಸಭೆಗಳನ್ನು ಏರ್ಪಾಡು ಮಾಡುತ್ತದೆ. ನಗರಾಭಿವೃದ್ಧಿ ಮಂತ್ರಿಮಂಡಲ ೧೯೮೫ರಲ್ಲಿ ಪ್ರಾರಂಭವಾಯಿತು. ಇದು ಮೊದಲು ಕೇಂದ್ರ ಆರೋಗ್ಯ ಮಂತ್ರಿಮಂಡಲದಲ್ಲಿಯ ಭಾಗವಾಗಿತ್ತು. ಭಾರತ ಸ್ವಾತಂತ್ರ್ಯ ಹೊಂದಿದ ಬಳಿಕ ನಗರ ಸ್ಥಳೀಯ ಸಂಸ್ಥೆಗಳ ವಿಕಸನಕ್ಕೆ ಇದೊಂದು ಮೈಲಿಗಲ್ಲು ಎನ್ನಬಹುದು. ಕೇಂದ್ರ ಸರಕಾರದ ಕಟ್ಟಡಗಳನ್ನು ನಿರ್ಮಿಸುವುದು ಹಾಗೂ ನಿರ್ವಹಿಸುವುದು ಮತ್ತು ಕೇಂದ್ರ ಸರಕಾರಿ ಜಾಗ ಮತ್ತು ಆಸ್ತಿಯ ನಿರ್ವಹಣೆಯಂತಹ ಕಾರ್ಯದ ಜೊತೆಗೆ ನಗರ ಸ್ಥಳೀಯ ಸಂಸ್ಥೆಗಳಿಗೆ ಉದಾತ್ತ ನೀತಿ ಸೃಷ್ಟಿಸುವ ಕಾರ್ಯಕ್ರಮಗಳು ಮತ್ತು ವಸತಿ, ನಗರಾಭಿವೃದ್ಧಿ, ನಗರ ನೀರು ಸರಬರಾಜು, ನಗರ ಬಡತನ ನಿರ್ಮೂಲನೆ ಮತ್ತು ಸಾರಿಗೆಗೆ ಸಂಬಂಧಿಸಿದ ಕಾರ್ಯಕ್ರಮಗಳನ್ನು ನೋಡಿಕೊಳ್ಳುವ ಮಹತ್ತರ ಜವಾಬ್ದಾರಿಯನ್ನು ನೀಡಿತ್ತು. ನಗರೀಕರಣ ರಾಷ್ಟ್ರೀಯ ಆಯೋಗವನ್ನು ೧೯೮೮ರಲ್ಲಿ ರಚಿಸಲಾಯಿತು. ಈ ಸಮಿತಿಯು

ನಗರ ಸ್ಥಳೀಯ ಸಂಸ್ಥೆಗಳನ್ನು ಮತ್ತಷ್ಟು ಬಲಗೊಳಿಸುವ ದೃಷ್ಟಿಯಿಂದ ಏಳನೇ ಪಂಚವಾರ್ಷಿಕ ಯೋಜನೆಯ ಸಮಯದಲ್ಲಿ ನಗರೀಕರಣ ಕುರಿತ ರಾಷ್ಟ್ರೀಯ ಆಯೋಗವು ೧೯೮೮ರಲ್ಲಿ ತನ್ನ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿತು. ಅದರ ಶಿಫಾರಸ್ಸುಗಳನ್ನು ಅಳವಡಿಸಿಕೊಂಡ ೬೫ನೇ ಸಂವಿಧಾನ ತಿದ್ದುಪಡಿ ವಿಧೇಯಕವನ್ನು ೧೯೮೯ರಲ್ಲಿ ಸಂಸತ್ತಿನಲ್ಲಿ ನಗರಪಾಲಿಕೆ ಬಿಲ್ಲ್‌ನ್ನು ಮಂಡಿಸಲಾಯಿತು. ಇದು ನಗರಾಭಿವೃದ್ಧಿ ಪ್ರಕ್ರಿಯೆಯ ನಾಲ್ಕು ಹಂತಗಳಲ್ಲಿನ ಸಂಸ್ಥೆಗಳಿಗೆ ಸಾಂವಿಧಾನಿಕ ಮಾನ್ಯತೆಯನ್ನು ನೀಡುವುದಕ್ಕೆ ಸಂಬಂಧಿಸಿದ್ದಾಗಿತ್ತು. ಮೇಲಿನ ಹಂತದಲ್ಲಿ ಕೇಂದ್ರ, ಕೆಳಹಂತದಲ್ಲಿ ಸಂಬಂಧಿಸಿದ ನಗರಾಡಳಿತ, ಮಧ್ಯದಲ್ಲಿ ರಾಜ್ಯಮಟ್ಟದ ಸಂಸ್ಥೆಗಳು ಈ ವ್ಯಾಪ್ತಿಗೆ ಬರುತ್ತಿದ್ದವು. ಈ ಪ್ರಯತ್ನ ರಾಜ್ಯಗಳ ಸ್ವಾಯತ್ತ ಅಧಿಕಾರದಲ್ಲಿ ಹಸ್ತಪಕ್ಷೇಪ ಮಾಡಲಿದೆ ಎಂಬ ಶಂಕೆಯ ಮೇಲೆ ವಿಧೇಯಕ ರಾಜ್ಯಸಭೆಯಲ್ಲಿ ಅಂಗೀಕಾರವಾಗಲಿಲ್ಲ. ಇದೇ ವಿಧೇಯಕವನ್ನು ಇನ್ನಷ್ಟು ಪರಿಷ್ಕರಿಸಿ ಗ್ರಾಮ ಪಂಚಾಯಿತಿಗಳ ಸಬಲೀಕರಣಗೊಳಿಸುವ ಹಿನ್ನೆಲೆಯಾಗಿ ಈಗಿನ ಕೇಂದ್ರೀಕೃತ ವ್ಯವಸ್ಥೆಯಲ್ಲಿ ಸ್ಥಳೀಯ ಸಂಸ್ಥೆಗಳು ಪರಿಣಾಮಕಾರಿಯಾಗಿ ತಮ್ಮ ಕರ್ತವ್ಯ ನಿರ್ವಹಿಸಲು ಆಗದಿರುವುದರಿಂದ, ಅವುಗಳ

ಆಡಳಿತವನ್ನು ವಿಕೇಂದ್ರೀಕೃತಗೊಳಿಸಿ, ಜನರ ಸಹಭಾಗಿತ್ವದೊಡನೆ ಕಾರ್ಯದಕ್ಷತೆಯನ್ನು ಹೆಚ್ಚಿಸಬೇಕು. ಈ ಸಿದ್ಧಾಂತವನ್ನು ಗ್ರಾಮೀಣ ಸ್ಥಳೀಯ ಸಂಸ್ಥೆಗಳಾದ ಪಂಚಾಯಿತಿಗಳ ಮಟ್ಟಿಗೆ ಅನ್ವಯಮಾಡಿ ಇಡೀ ದೇಶದಲ್ಲಿ ಮೊದಲ ಬಾರಿ ಅಧಿಕಾರ ವಿಕೇಂದ್ರೀಕರಣವನ್ನು ೧೯೮೭ರಲ್ಲಿ ಜಾರಿಗೊಳಿಸಿದ ಕೀರ್ತಿ ಕರ್ನಾಟಕ ಮತ್ತು ಅಂದಿನ ಮುಖ್ಯಮಂತ್ರಿ ರಾಮಕೃಷ್ಣ ಹೆಗಡೆಯವರಿಗೆ ಸಲ್ಲುತ್ತದೆ. ಅಂದಿನ ಪ್ರಧಾನಿ ರಾಜೀವ್ ಗಾಂಧಿ ಇನ್ನೂ ಒಂದು ಹಜ್ಜೆ ಮುಂದೆ ಹೋಗಿ ಕರ್ನಾಟಕದ ಪ್ರಯೋಗದಲ್ಲಿದ್ದ ಕೆಲವು ದೌರ್ಬಲ್ಯಗಳನ್ನು ಸರಿ ಮಾಡಿದ್ದಲ್ಲದೇ ಈ ಪ್ರಯೋಗವನ್ನು ನಗರ ಸ್ಥಳೀಯ ಸಂಸ್ಥೆಗಳಿಗೂ ಅನ್ವಯಿಸುವ ಕ್ರಮ ತೆಗೆದುಕೊಂಡರು. ಅವರ ಅವಿರತ ಪ್ರಯತ್ನಗಳಿಂದಾಗಿಯೇ ಸಂವಿಧಾನದ ೭೪ನೇ ಸಂವಿಧಾನ ತಿದ್ದುಪಡಿಗಳ ಮೂಲಕ ೧೯೯೨ರಲ್ಲಿ ಮತ್ತೆ ಮಂಡಿಸಿದಾಗ ಅದು ಸಂಸತ್ತಿನ ಎರಡೂ ಸದನಗಳಲ್ಲಿ ಅಂಗೀಕಾರವಾಗಿ ೧೯೯೩ರಿಂದ ಕಾನೂನಾಗಿ ಸಂವಿಧಾನದಲ್ಲಿ ಸ್ಥಾನಮಾನ ದೊರೆತದ್ದು ಎಂದು ತಿಳಿಯಲಾಗಿದೆ. ಈ ತಿದ್ದುಪಡಿಯಿಂದ ನಗರ ಸ್ಥಳೀಯ ಸಂಸ್ಥೆಗಳು ಸಂವಿಧಾನಾತ್ಮಕ ಮನ್ನಣೆಯನ್ನು ಪಡೆದವು. ಅಧಿಕಾರವನ್ನು ಸಂವಿಧಾನದ ತಿದ್ದುಪಡಿಗೆ ಅನುಗುಣವಾಗಿ ವಿಕೇಂದ್ರೀಕರಣಗೊಳಿಸಲು ನಾಲ್ಕು ಹಂತದ ಸ್ಥಳೀಯ ಸಂಸ್ಥೆಗಳನ್ನು ಮತ್ತಷ್ಟು ಹೊಣೆಗಾರಿಕೆಗಳೊಂದಿಗೆ ಕಾರ್ಯ ನಿರ್ವಹಿಸುವಂತೆ ಮಾಡಲಾಯಿತು. ಅಭಿವೃದ್ಧಿಗೆ ಸಂಬಂಧಿಸಿದಂತೆ ೧೮ ವಿಷಯಗಳಿಗೆ ಹಣಕಾಸು ಕಾರ್ಯಗಳು ಮತ್ತು ಅಧಿಕಾರಗಳನ್ನು ಒದಗಿಸಲಾಗಿದೆ.[೬] ಈ ಕಾಯ್ದೆಯ ಇತರ ವಿಷಯಗಳೊಂದಿಗೆ ಎಲ್ಲಾ ರಾಜ್ಯಗಳಲ್ಲಿ ಸಮಾನ ಸ್ವರೂಪದ ನಗರ ಸ್ಥಳೀಯ ಸರ್ಕಾರದ ಆಡಳಿತ ವ್ಯವಸ್ಥೆಯನ್ನು ಸ್ಥಾಪಿಸಬೇಕೆಂದು ಕಡ್ಡಾಯಗೊಳಿಸಲಾಯಿತು. ಇದರಿಂದ ನಗರ ಸ್ಥಳೀಯ ಸಂಸ್ಥೆಗಳಿಗೆ ಹೊಸ ರೂಪ ಒದಗಿತು. ಜನತೆಗೆ ಅಧಿಕಾರ ಎಂಬ ಪರಿಕಲ್ಪನೆಯನ್ನು ಕಾರ್ಯಚರಣೆಗೆ ತರಲು ಅಗತ್ಯವಿರುವ ಕಾನೂನಿನ ಚೌಕಟ್ಟು ಅದಕ್ಕೆ ಬಂತು. ಈ ಕಾಯ್ದೆಯಲ್ಲಿ ಆಯಾಯ ರಾಜ್ಯ ಸರ್ಕಾರಗಳು ಹೆಚ್ಚಿನ ಅಧಿಕಾರಗಳನ್ನು ಇಟ್ಟುಕೊಂಡವು. ಸ್ಥಳೀಯ ಸಂಸ್ಥೆಗಳ ನಿಯಂತ್ರಣ, ನಿರ್ವಹಣೆ ಮತ್ತು ಅವುಗಳ ವಿಸರ್ಜನೆ, ಮುಂತಾದ ಅಧಿಕಾರಿಗಳು ರಾಜ್ಯ ಸರ್ಕಾರಗಳ ಹಿಡಿತದಲ್ಲಿದ್ದವು.[೭] ನಗರ ಜನತೆಯ ಅವರ ಆಶೋತ್ತರಗಳಿಗೆ ಅನುಗುಣವಾಗಿ ಸ್ಥಳೀಯ ಸಂಸ್ಥೆಗಳನ್ನು ಸ್ಥಾಪಿಸಲಾಯಿತು. ಸರಕಾರವು ಯೋಜಿಸಿಕೊಂಡ ಯೋಜನೆಗಳನ್ನು ತಳಮಟ್ಟದವರೆಗೂ ಅನುಷ್ಠಾನಗೊಳಿಸುವುದು ಈ ಸಂಸ್ಥೆಗಳ ಮುಖ್ಯ ಉದ್ದೇಶವಾಗಿತ್ತು. ವಿಕೇಂದ್ರೀಕರಣವು ಪರಿಣಾಮಕಾರಿಯಾಗಿ ಆಚರಣೆಗೆ ಬರಲು ಮತ್ತು ಸ್ಥಳೀಯ ಸಂಸ್ಥೆಗಳು ಸ್ವಯಂ ಆಡಳಿತ ಸಂಸ್ಥೆಗಳಾಗಿ ರೂಪುಗೊಳ್ಳಲು ಅಗತ್ಯವಾದ ಸಂಗತಿಯೆಂದರೆ ಜನರ ಸಶಕ್ತೀಕರಣ ಎನ್ನಲಾಗಿದೆ. ಅತ್ಯಂತ ವ್ಯವಸ್ಥಿತವಾಗಿ ಹಲವಾರು ಶತಮಾನಗಳಿಂದ ಶೋಷಣೆಗೆ ಒಳಗಾದ ದುರ್ಬಲ ವರ್ಗಗಳಿಗೆ, ಮಹಿಳೆಯರಿಗೆ ಈ ಕಾಯ್ದೆಯಲ್ಲಿ ಪ್ರಾತಿನಿಧ್ಯವನ್ನು ಒದಗಿಸಲಾಯಿತು.[೮] ಹೀಗೆ ೧೯೯೩ರ ಸಂವಿಧಾನ ತಿದ್ದುಪಡಿಯ ಅನ್ವಯ ರಾಷ್ಟ್ರಾದ್ಯಂತ ನಾಲ್ಕು ಹಂತದ ನಗರ ಸ್ಥಳೀಯ ಸಂಸ್ಥೆಗಳ ವ್ಯವಸ್ಥೆಯನ್ನು ಜಾರಿಗೆ ತರಲಾಯಿತು.

೧. ಮಹಾನಗರ ಪಾಲಿಕೆ(ಜನಸಂಖ್ಯೆ ೩,೦೦,೦೦೦ಕ್ಕಿಂತ ಮೇಲ್ಪಟ್ಟು)
೨. ನಗರಸಭೆ(ಜನಸಂಖ್ಯೆ ೫೦,೦೦೦ರಿಂದ ೩,೦೦,೦೦೦)
೩. ಪುರಸಭೆ (೨೦,೦೦೦-೫೦,೦೦೦)
೪. ಪಟ್ಟಣ ಪಂಚಾಯಿತಿ(ಜನಸಂಖ್ಯೆ ೧೦,೦೦೦ರಿಂದ ೨೦,೦೦೦)

೧೯೯೨ರಲ್ಲಿ ಸಾಂವಿಧಾನಿಕ ಕಾಯ್ದೆ(೭೪ನೇ ತಿದ್ದುಪಡಿ) ಜಾರಿಗೆ ಬಂದಿತು. ಇದು ನಗರಮಟ್ಟದಲ್ಲಿ ಜನರಿಗೆ ಅಧಿಕಾರವನ್ನು ಹಸ್ತಾಂತರಗೊಳಿಸಿದ ಮೊಟ್ಟಮೊದಲ ಗಂಭೀರ ಹೆಜ್ಜೆ ಎನ್ನಬಹುದು. ಈ ಕಾಯ್ದೆಯು ಹೊಸ ಭಾಗವನ್ನು ಪರಿಚಯಿಸಿದೆ. ಅದೆಂದರೆ ಭಾಗ–೯ಎ. ಈ ಭಾಗವು ನಗರ ಸ್ಥಳೀಯ ಸಂಸ್ಥೆಗಳ ನಿರ್ಮಾಣ ಮತ್ತು ರಚನೆ, ಆಸನಗಳ ಕಾಯ್ದಿರಿಸುವಿಕೆ, ಪಾಲಿಕೆಯ ಚುನಾವಣೆಗಳು, ಸ್ಥಳೀಯ ಸರ್ಕಾರಗಳ ಅಧಿಕಾರ ಮತ್ತು ಕಾರ್ಯಚಟುವಟಿಕೆಗಳು, ಮಹಾನಗರ ಮತ್ತು ಜಿಲ್ಲಾಮಟ್ಟದಲ್ಲಿನ ಹಣಕಾಸು ಮತ್ತು ಯೋಜನೆ ಹಾಗೂ ಇತರೆ ವಿಷಯಗಳ ಬಗ್ಗೆ ನಿಗಾ ವಹಿಸುತ್ತವೆ. ಈ ಕಾಯ್ದೆಯು ಆಯಾಯ ಭಾಗದ ಸಮಿತಿಯನ್ನು ನಿರ್ಮಿಸಲು ಅನುವು ಮಾಡಿಕೊಟ್ಟಿದೆ. ಆಯಾ ಭಾಗದ ಚುನಾಯಿತ ಪ್ರತಿನಿಧಿಯು ನಾಗರಿಕರಿಗೆ ಎಟುಕುವ ದೂರದಲ್ಲಿ ಇರುತ್ತಾನೆ. ಆದ್ದರಿಂದ ಮತದಾರ ಮತ್ತು ಚುನಾಯಿತ ಜನಪ್ರತಿನಿಧಿಗಳ ನಡುವೆ ದೂರ ಕಡಿಮೆಗೊಂಡಿದೆ. ಚುನಾಯಿತ ನಗರ ಸ್ಥಳೀಯ ಸಂಸ್ಥೆಗಳಿಗೆ ಯೋಜನೆಯನ್ನು ಪರಿಷ್ಕರಿಸುವ ಹಾದಿಯಲ್ಲಿ ಹೊಸಪಾತ್ರವನ್ನು ಈ ಸಂವಿಧಾನ ತಿದ್ದುಪಡಿ ಕಾಯ್ದೆ ನೀಡುತ್ತದೆ. ಸಂವಿಧಾನದ ಹೊಸ ಯಾದಿ(೧೨ನೇ ಭಾಗ) ಕೂಡ ಜಾರಿಗೊಳಿಸಲಾಯಿತು. ನಗರ ಸ್ಥಳೀಯ ಸಂಸ್ಥೆಗಳ ಯೋಜನೆಗಳು, ಭೂನಿಯಂತ್ರಣ, ಕಟ್ಟಡಗಳ ನಿರ್ಮಾಣ ಹಾಗೂ ಆರ್ಥಿಕ ಮತ್ತು ಸಾಮಾಜಿಕ ಅಭಿವೃದ್ಧಿಯ ಯೋಜನೆಗಳು ಈ ತಿದ್ದುಪಡಿಯ ಮುಖ್ಯಾಂಶಗಳು ಸಂವಿಧಾನದ ೭೪ನೇ ತಿದ್ದುಪಡಿಯು ಸ್ವಾತಂತ್ರ್ಯಾನಂತರ ನಗರ ಸ್ಥಳೀಯ ಸರಕಾರದ ಬೆಳವಣಿಗೆಯನ್ನು ಸ್ಪಷ್ಟೀಕರಿಸುತ್ತದೆ.[೯] ಇದು ಕೇಂದ್ರ ಮತ್ತು ರಾಜ್ಯ ಸರಕಾರಗಳ ಮೇಲೆ ಜಡತ್ವದ ಗುಣಲಕ್ಷಣವನ್ನು ಹೊಂದಿರುತ್ತದೆ. ನಗರ ಸ್ಥಳೀಯ ಸರಕಾರದ ಮಹತ್ವವನ್ನು ತಿಳಿಯುವಲ್ಲಿ ಮತ್ತು ಗುರುತಿಸುವಲ್ಲಿ ಹಾಗೂ ಜನರಿಗೆ ತಮ್ಮ ಯೋಜನೆಗಳನ್ನು ತಾನೇ ಮಾಡಿಕೊಳ್ಳಲು ಜನರಿಗೆ ನೀಡಿದ ಅಧಿಕಾರವನ್ನು ಹಾಗೂ ತೀರ್ಮಾನ ತೆಗೆದುಕೊಳ್ಳುವ ಚರ್ಚೆಯಲ್ಲಿ ಭಾಗವಹಿಸುವಂತಹ ವಿರಳ ಮತ್ತು ತುಂಡು–ತುಂಡಾದ ಪ್ರಯತ್ನಗಳನ್ನು ಮಾಡುತ್ತದೆ. ಇದೇ ರೀತಿ ಸ್ಥಳೀಯ ಸರಕಾರವು ಸಹಬಾಳ್ವೆಯ ಕಲೆ, ಪ್ರೀತಿ, ಸಹಾನುಭೂತಿ, ಸಂಧಾನ ಮತ್ತು ಇತರೆ ಸಾಮಾಜಿಕ ಮೌಲ್ಯಗಳನ್ನು ಜನರಿಗೆ ತಿಳಿಸುತ್ತದೆ. ಈ ದಿಶೆಯಲ್ಲಿ ಲಾಸ್ಕಿಯು ಹೀಗೆ ಹೇಳುತ್ತಾನೆ. ಪ್ರಾಯಶಃ ಸ್ಥಳೀಯ ಸರಕಾರವು ಸರಕಾರದ ಬೇರೆ ಭಾಗಕ್ಕಿಂತ ಹೆಚ್ಚಾಗಿ ಜನರಿಗೆ ಜ್ಞಾನ ನೀಡುತ್ತದೆ. ಅದಕ್ಕೆ ಸ್ವತಂತ್ರವಾಗಿ ನಾಗರಿಕರನ್ನು ಸ್ವಾವಲಂಬಿ, ಸ್ವಾಭಿಮಾನಿ ಮತ್ತು ನಾಯಕತ್ವ ಗುಣಗಳನ್ನು ತರುವಲ್ಲಿ ಶ್ರಮಿಸುತ್ತದೆ. ದೇಶದ ಪ್ರಜಾಪ್ರಭುತ್ವ ಯಶಸ್ಸು ಹೊಂದಬೇಕಾದರೆ ನಾಗರಿಕರಲ್ಲಿ ಸ್ವಾಭಿಮಾನ, ಸ್ವ–ಅವಲಂಬನೆ ಮತ್ತು ನಾಯಕತ್ವ ಗುಣಗಳನ್ನು ಬೆಳೆಸುವುದು ಅನಿವಾರ್ಯ. ಭಾರತದ ಪ್ರಮುಖ ನಾಯಕರು ತಮ್ಮ ರಾಜಕೀಯ ಬದುಕನ್ನು ಸ್ಥಳೀಯ ಸಂಸ್ಥೆಗಳ ಮೂಲಕವೇ ಶುರುಮಾಡಿದರು. ಆದ್ದರಿಂದ ಲಾರ್ಡ್ ಬ್ರೈಸ್ ಸೂಕ್ತವಾಗಿ "ನಗರ ಸ್ಥಳೀಯ ಸರಕಾರದ ಅನುಕರಣೆಯೇ ಪ್ರಜಾಪ್ರಭುತ್ವದ ಉತ್ತಮ ಶಾಲೆ ಹಾಗೂ ಪ್ರದೇಶ ಸರಕಾರದ ಅನುಕರಣೆಯಿಂದಲೇ ಅದರ ಯಶಸ್ಸಿನ ಭರವಸೆ" ಎಂದು ಹೇಳಿದ್ದರು. ಸ್ಥಳೀಯ ಸರಕಾರದ ಮೂಲಕವೇ ನಾಗರಿಕರು ಸ್ವತಂತ್ರ ಕಾರ್ಯಗಳನ್ನು ನಿರ್ವಹಿಸುವುದನ್ನು ರೂಢಿಸಿಕೊಳ್ಳುತ್ತಾರೆ. ಹಾಗೂ ರಾಜ್ಯಕ್ಕೆ ಸಂಬಂಧಿಸಿದಂತೆ ನಾಗರಿಕನ ಕರ್ತವ್ಯವೇನು ಮತ್ತು ಅದನ್ನು ಹೇಗೆ ನಿರ್ವಹಿಸಬೇಕು ಎಂಬುದನ್ನು ಕಲಿಯುತ್ತಾನೆ.[೧೦] ಸಮುದಾಯ ಯೋಜನೆಗಳು ಮತ್ತು ರಾಷ್ಟ್ರೀಯ ವಿಸ್ತಾರ ಸೇವೆಯಂತಹ ವಿಷಯಗಳ ಅಧ್ಯಯನ ತಂಡಗಳ ಅಭಿಪ್ರಾಯದಂತೆ "ಎಲ್ಲಿಯವರೆಗೆ

ನಾವು ಪ್ರದೇಶ ಹಿತಾಸಕ್ತಿ, ಉಸ್ತುವಾರಿ ಮತ್ತು ಪ್ರದೇಶದ ನಾಗರಿಕ ಬೇಡಿಕೆಗೆ ಸಂಬಂಧಿಸಿಂದತೆ ವೆಚ್ಚವನ್ನು ತೀರ್ಮಾನಿಸಿ ಅದಕ್ಕೆ ಸೂಕ್ತ ಹಣಕಾಸಿನ ಪರಿಹಾರವನ್ನು ನೀಡಲು ಪ್ರಜಾಪ್ರಭುತ್ವ ಸಂಸ್ಥೆ ಮತ್ತು ಪ್ರತಿನಿಧಿಯನ್ನು ಆಯ್ಕೆ ಮಾಡುವುದಿಲ್ಲವೋ ಅಲ್ಲಿಯವರೆಗೂ ನಾವು ಪ್ರದೇಶ ಆಸಕ್ತಿ ಮತ್ತು ಅಭಿವೃದ್ಧಿಯನ್ನು ಹೊಂದುವ ವಿಷಯದಲ್ಲಿ ನಾಗರಿಕರನ್ನು ಎಚ್ಚರಿಸಲು ಸಾಧ್ಯವಿಲ್ಲ.[೧೧] ಏಕೆಂದರೆ ದೇಶದಲ್ಲಿ ಕೇವಲ ಸರಕಾರವೊಂದೇ ತನ್ನ ಅಧಿಕಾರದಿಂದ ದಕ್ಷವಾಗಿ ಮತ್ತು ಎಲ್ಲಾ ನಾಗರಿಕರ ಸಂತೃಪ್ತಿಗಾಗಿ ಶ್ರಮಿಸಲು ಸಾಧ್ಯವಿಲ್ಲ. ಪ್ರಜಾಪ್ರಭುತ್ವದ ಗುಣಗಳಾದ ಅಧಿಕಾರ ಮತ್ತು ನಿಯೋಗವನ್ನು ಕೇಂದ್ರೀಕರಿಸದೆ ಅದನ್ನು ಎಲ್ಲಾ ಸರಕಾರಿ ಮಟ್ಟಗಳಿಗೆ ವಿಂಗಡಿಸಬೇಕು. ಅಲ್ಲದೇ, ಸರಕಾರದ ನೀತಿ-ನಿರೂಪಣೆಗಳು ಜನತೆಯ ಆಶೋತ್ತರಗಳಿಗೆ ತಕ್ಕಂತೆ ಸ್ಪಂದಿಸುವಂತಿರಬೇಕು. ಜನತೆಯ ಅಭಿವೃದ್ಧಿ ಪ್ರಕ್ರಿಯೆಯಲ್ಲಿ ನೀತಿ ನಿರೂಪಣೆಯಲ್ಲಿ ಸಕ್ರಿಯವಾಗಿ ಪಾಲ್ಗೊಳ್ಳಬೇಕು. ಜನತೆಯ ಮನೆಬಾಗಿಲಿಗೆ ಆಡಳಿತವು ಮತ್ತು ಅಧಿಕಾರವು ವಿಕೇಂದ್ರೀಕರಣಗೊಳ್ಳಬೇಕು. ಅಭಿವೃದ್ಧಿಯು ಜನತೆಯಿಂದ ಜನರಿಗೋಸ್ಕರ ಜನರಿಂದ ತಯಾರಾಗಬೇಕು ಎಂದು ಸಬಲೀಕರಣ ಅಂಶವು ಪ್ರತಿಪಾದಿಸುತ್ತದೆ ಎಂದು ಹೇಳಿದ್ದಾರೆ.[೧೨] ಅಂದರೆ ಅಭಿವೃದ್ಧಿಯ ಕೇಂದ್ರಬಿಂದು ಜನತೆಯೇ ಆಗಬೇಕು. ಭಾರತದಲ್ಲಿ ಪ್ರಚಲಿತವಿರುವ ಅತಿ ನಗರಮಟ್ಟದ ಯೋಜನೆಯ ವಿಧಾನವನ್ನು ಗಮನಿಸಿದರೆ, ಅಭಿವೃದ್ಧಿ ಯೋಜನೆಯ ಪ್ರಕ್ರಿಯೆಯಲ್ಲಿ ಜನರು ಆಡಳಿತಗಾರರ ಮತ್ತು ರಾಜಕೀಯ ನಿರ್ಣಾಯಕರ ಭಾಗವಹಿಸುವಿಕೆ ಇಲ್ಲದೇ ಇರುವುದರಿಂದ ವಿಕೇಂದ್ರೀಕೃತ ಯೋಜನೆಗಳು ಯಶಸ್ಸನ್ನು ಕಾಣಲಿಲ್ಲ.[೧೩] ಹಾಗಾಗಿ ವಿಕೇಂದ್ರೀಕೃತ ಯೋಜನೆ ಮತ್ತು ಸ್ಥಳೀಯಮಟ್ಟದ ಅಭಿವೃದ್ಧಿ ಕಾರ್ಯಗಳಲ್ಲಿ ಜನರು ಹೆಚ್ಚಾಗಿ ಪಾಲ್ಗೊಳ್ಳುವಂತೆ ಮಾಡುವ ಉದ್ದೇಶದಿಂದ ಸಂವಿಧಾನ ೭೪ನೇ ತಿದ್ದುಪಡಿ ತಂದು ನಾಲ್ಕು ಹಂತದ ಚುನಾಯಿತ ಸಂಸ್ಥೆಗಳನ್ನು ಸ್ಥಾಪಿಸಲಾಗಿದೆ. ರಾಷ್ಟ್ರಮಟ್ಟದ ಈ ತಿದ್ದುಪಡಿ ಅನ್ವಯ ೧೯೯೩ರಲ್ಲಿ ಕರ್ನಾಟಕ ನಗರಪಾಲಿಕೆ ಕಾಯ್ದೆಯನ್ನು ಜಾರಿಗೆ ತರಲಾಯಿತು. ಹೀಗೆ ರಾಷ್ಟ್ರಮಟ್ಟದಲ್ಲಿ ನಡೆದ ಹಲವಾರು ಪ್ರಯತ್ನಗಳನ್ನು ಕರ್ನಾಟಕ ರಾಜ್ಯ ಯಾವ ರೀತಿ ಅಳವಡಿಸಿಕೊಂಡಿದೆ ಮತ್ತು ರಾಜ್ಯದಲ್ಲಿ ವಿಕೇಂದ್ರೀಕರಣದ ಸುಧಾರಣೆ ಹೇಗೆ ನಡೆದಿದೆ ಎಂಬ ಸಂಗತಿಗಳನ್ನು ವಿವರಿಸಲಾಗಿದೆ.

## ೨.೨. ಕರ್ನಾಟಕದ ನಗರ ಸ್ಥಳೀಯ ಸಂಸ್ಥೆಗಳು

ಕರ್ನಾಟಕ ರಾಜ್ಯದ ನಗರ ಸ್ಥಳೀಯ ಸರಕಾರವು ದೇಶದ ಸ್ಥಳೀಯ ಸರಕಾರಕ್ಕಿಂತ ಭಿನ್ನವಾಗೇನಿಲ್ಲ. ಅದು ಪ್ರತ್ಯೇಕ ಸ್ಥಳೀಯ ಅನುದಾನ(ಲೋಕಲ್ ಫಂಡ್)ದ ಶುರುವಾತಿನಿಂದಲೇ ೧೮೬೨ರಲ್ಲಿ ಅಸ್ತಿತ್ವಕ್ಕೆ ಬಂದಿತು. ನೂತನ ಕರ್ನಾಟಕಕ್ಕೆ ಮತ್ತು ರಾಜ್ಯ ನಿರ್ಮಾಣಕ್ಕೆ ಸಂಬಂಧಿಸಿದಂತೆ ಪ್ರತ್ಯೇಕ ರಾಜಕೀಯ-ಆಡಳಿತ ರಾಷ್ಟ್ರ, ಸಂಘದಡಿ ನಗರ ಸ್ಥಳೀಯ ಸರಕಾರದ ಬೆಳವಣಿಗೆ ಮತ್ತು ಅಭಿವೃದ್ಧಿಯ ಬಗ್ಗೆ ವಿಚಾರ ಮಾಡುವುದು ಅತಿ ಅವಶ್ಯವಾಗಿದೆ. ಪ್ರಸ್ತುತ ಕರ್ನಾಟಕ ರಾಜ್ಯವು ಪ್ರಾಂತೀಯ ಭಾಷೆಯ ಆಧಾರದ ಮೇಲೆ ೧೯೫೬ರಲ್ಲಿ ಅಸ್ತಿತ್ವಕ್ಕೆ ಬಂತು. ೧೯೫೩ರಲ್ಲಿ ಭಾರತ ಸರಕಾರದ ರಾಜ್ಯಗಳ ಪುನರ್ ಸಂಘಟನೆ ಮಸೂದೆಯಲ್ಲಿ ಇದನ್ನು ಶಿಫಾರಸ್ಸು ಮಾಡಿತ್ತು. ಕರ್ನಾಟಕವನ್ನು ಬಾಂಬೆ ಕರ್ನಾಟಕ, ಹೈದರಾಬಾದ್ ಕರ್ನಾಟಕ ಮತ್ತು ಮದ್ರಾಸ್ ಕರ್ನಾಟಕ ಎಂದು ಕರೆಯಲಾಗುತ್ತಿತ್ತು. ಬೆಳಗಾವಿ, ಬಿಜಾಪುರ, ಧಾರವಾಡ ಮತ್ತು ಉತ್ತರ ಕನ್ನಡ(ಕಾರವಾರ) ಬಾಂಬೇ ಕರ್ನಾಟಕವೆಂದು, ರಾಯಚೂರು, ಗುಲ್ಬರ್ಗಾ ಮತ್ತು ಬೀದರನ್ನು ಹೈದರಾಬಾದ್

ಕರ್ನಾಟಕವೆಂದು, ಬಳ್ಳಾರಿ ಮತ್ತು ದಕ್ಷಿಣ ಕನ್ನಡ(ಮಂಗಳೂರು) ಕಾಸರಗೋಡು ಹೊರತುಪಡಿಸಿ ಮದ್ರಾಸ್ ಕರ್ನಾಟಕವೆಂದು ಕರೆಯುತ್ತಿದ್ದರು. ಮದ್ರಾಸ್ ಕರ್ನಾಟಕಕ್ಕೆ ಹಿಂದೆ ಮುಖ್ಯ ಆಯುಕ್ತರ ವಶದಲ್ಲಿದ್ದ ಕೊಡಗು(ಕೂರ್ಗ್) ಕೂಡ ಒಳಪಟ್ಟಿತ್ತು. ೧೯೭೩ ನವೆಂಬರ್ ೧ರಂದು ಕರ್ನಾಟಕವೆಂದು ನಾಮಕರಣವಾಯಿತು. ೧೯೯೧ರ ಜನಗಣತಿಯ ಪ್ರಕಾರ ಕರ್ನಾಟಕ ರಾಜ್ಯದ ವಿಸ್ತೀರ್ಣ ೧,೯೨,೨೦೪ ಚ.ಕಿ.ಮೀ. ಹಾಗೂ ರಾಜ್ಯದ ಒಟ್ಟು ಜನಸಂಖ್ಯೆಯು ೪,೪೯,೭೭,೨೦೧ ಇತ್ತು. ಸಂಯುಕ್ತ ಶೈಲಿ ಭಾರತ ಸರಕಾರದ ಮತ್ತು ಕರ್ನಾಟಕ ರಾಜ್ಯವು ಸ್ಥಳೀಯ ಸರಕಾರಿ ಸಂಸ್ಥೆಗಳಿಂದ ವಿಕೇಂದ್ರೀಕೃತ ಸೆಂಟ್ರಲೈಸ್ಡ್ ಆಡಳಿತವನ್ನು ಪೂರೈಸುತ್ತದೆ. ಕರ್ನಾಟಕವು ೩೦ ಜಿಲ್ಲೆಗಳಾಗಿ ಮತ್ತು ೧೭೬ ತಾಲೂಕಗಳಾಗಿ ವಿಂಗಡಿಸಲಾಗಿದೆ. ಕರ್ನಾಟಕ ಹಾಗೂ ಭಾರತ ದೇಶದಲ್ಲಿನ ನಗರ ಸ್ಥಳೀಯ ಸಂಸ್ಥೆಗಳನ್ನು ಹೀಗೆ ವಿಸ್ತಾರವಾಗಿ ಮಹಾನಗರ ಪಾಲಿಕೆ, ನಗರಸಭೆ, ಲಷ್ಕರು ಸಮಿತಿ ಮತ್ತು ನಿಗದಿತ ಪ್ರದೇಶ ಸಮಿತಿ ಎಂದು ವಿಂಗಡಿಸಲಾಯಿತು. ಕರ್ನಾಟಕ ಪುರಸಭೆ ಕಾಯ್ದೆ ೧೯೭೬ರ ಪ್ರಕಾರ ಮಹಾನಗರ ಪಾಲಿಕೆಗಳನ್ನು ರಾಜ್ಯದಲ್ಲಿ ಸ್ಥಾಪಿಸಲಾಯಿತು. ನಗರಸಭೆಗಳು, ಲಷ್ಕರು ಸಂಸ್ಥೆ ಮತ್ತು ನಿಗದಿತ ಪ್ರದೇಶ ಸಮಿತಿಯನ್ನು ಕರ್ನಾಟಕ ಪುರಸಭೆ ಕಾಯ್ದೆ-೧೯೬೪ರ ಪ್ರಕಾರ ಸ್ಥಾಪಿಸಲಾಯಿತು. ಲಷ್ಕರು ಸಂಸ್ಥೆ ಸೈನ್ಯದ ಆಳ್ವಿಕೆ ಇರುವ ಪ್ರದೇಶಗಳಲ್ಲಿ ಸ್ಥಾಪಿಸಲಾಯಿತು. ಅವುಗಳಲ್ಲಿ ಸಾಮಾನ್ಯವಾಗಿ ಬ್ರಿಗೇಡಿಯರ್ ಹುದ್ದೆಯ ಸೈನ್ಯದ ಅಧಿಕಾರಿಗಳು ಆಡಳಿತವನ್ನು ನಡೆಸುತ್ತಾರೆ. ಪುರಸಭೆಯೆಂದು ಪರಿಗಣಿಸಲಾಗದ ಸರಕಾರವು ನಿಗದಿತ ಪ್ರದೇಶ ಸಮಿತಿಯನ್ನು ನಿಯುಕ್ತ ಮಾಡಿ ಮೂಲಭೂತ ಸೌಕರ್ಯಗಳನ್ನು ಒದಗಿಸುತ್ತದೆ. ಪ್ರಸ್ತುತ ಕರ್ನಾಟಕದಲ್ಲಿ ೧೫೧ ನಗರಸಭೆಗಳು, ೭ ಮಹಾನಗರ ಪಾಲಿಕೆಗಳು, ೧೨ ನಿಗದಿತ ಪ್ರದೇಶ ಸಮಿತಿಗಳು ಮತ್ತು ೩ ಲಷ್ಕರ್ ಸಂಸ್ಥೆಗಳು ಅಸ್ತಿತ್ವದಲ್ಲಿ ಇವೆ. ಪುರಸಭೆಗಳು ಪ್ರಾರಂಭದಲ್ಲಿ ಆಯಾ ತಾಲೂಕಿನ ತಹಸೀಲ್ದಾರರ ಅಧ್ಯಕ್ಷತೆಯಲ್ಲಿ ನೇಮಿಸಿದ ಸಂಸ್ಥೆಗಳಾಗಿದ್ದವು. ಪಾಲಿಕೆಗಳು ಮತ್ತು ನಗರ ಸಭೆಗಳು ಚುನಾಯಿತ ಸಂಸ್ಥೆಗಳು. ಪಾಲಿಕೆಯು ನಗರಾಧ್ಯಕ್ಷ, ಉಪ-ನಗರಾಧ್ಯಕ್ಷ ಮತ್ತು ಮಂತ್ರಿಮಂಡಲವನ್ನು ಒಳಗೊಂಡಿರುತ್ತದೆ. ಇವರು ನೌಕರ ಸಿಬ್ಬಂದಿ ಆಗಿರುವುದಿಲ್ಲ. ಆಯುಕ್ತರು ಆಡಳಿತದ ಮುಖಂಡರಾಗಿದ್ದು ಕಛೇರಿ ಸಿಬ್ಬಂದಿ ಅವರನ್ನು ಅವಲಂಬಿಸುತ್ತಾರೆ. ಅದೇ ರೀತಿ ಪುರಸಭೆಯು ಅಧ್ಯಕ್ಷರು ಮತ್ತು ಉಪಾಧ್ಯಕ್ಷರನ್ನು ಮತ್ತು ಮಂತ್ರಿಮಂಡಲವನ್ನು ಒಳಗೊಂಡಿರುತ್ತದೆ. ಇವರು ನೌಕರರಾಗಿರುವುದಿಲ್ಲ. ಮುಖ್ಯಾಧಿಕಾರಿ ಆಡಳಿತವನ್ನು ನಡೆಸುತ್ತಾರೆ. ಅವರಿಗೆ ಕಛೇರಿ ಸಿಬ್ಬಂದಿ ಸಹಕರಿಸುತ್ತದೆ. ಪುರಸಭೆ ಮತ್ತು ಪಾಲಿಕೆಯಲ್ಲಿ ನೇಮಕವಾದ ಅಭ್ಯರ್ಥಿಗಳು ಪ್ರೌಢ ಮತದಾರರಿಂದ ಚುನಾಯಿತರಾಗಿರುತ್ತಾರೆ. ಪಾಲಿಕೆಯ ಮತ್ತು ಪುರಸಭೆಯ ಕಾರ್ಯಾವಧಿ ೫ ವರ್ಷ. ಆದರೆ ಅವರ ಕಾರ್ಯಾವಧಿಯನ್ನು ಸರಕಾರದ ಆದೇಶದ ಮೇರೆಗೆ ವಿಸ್ತರಿಸಬಹುದಾಗದೆ. ತುರ್ತುಪರಿಸ್ಥಿತಿಯಲ್ಲಿ ಮತ್ತು ನಂತರ ಬಹುತೇಕ ಕರ್ನಾಟಕದ ಎಲ್ಲಾ ಪಾಲಿಕೆಗಳನ್ನು ಮತ್ತು ಪುರಸಭೆಗಳನ್ನು ಸರಕಾರ ತನ್ನ ವಶಕ್ಕೆ ತೆಗೆದುಕೊಂಡಿತ್ತು. ನಗರ ಸ್ಥಳೀಯ ಸಂಸ್ಥೆಗಳಿಗೆ ಸರಿಯಾದ ರೀತಿಯಲ್ಲಿ ಚುನಾವಣೆಗಳು ನಡೆಯುತ್ತಿರಲಿಲ್ಲ, ಸಂಪನ್ಮೂಲ ಕೆಲವರ ಕೈಯಲ್ಲಿ ಕೇಂದ್ರೀಕೃತಗೊಂಡಿತ್ತು, ಸರಕಾರದ ಆದೇಶದ ಮೇರೆಗೆ ಅಮಾನತ್ತಿನಲ್ಲಿಡಬಹುದು ಅಥವಾ ತೆಗೆದು ಹಾಕಬಹುದಾಗಿದೆ.[೧೪] ಅಲ್ಲದೇ, ಹಿಂದೆ ಹೇಗೊ ಸ್ಥಳೀಯ ಸಂಸ್ಥೆಗಳು ಸ್ಥಳೀಯ ಆಡಳಿತವನ್ನು ಮಾಡುತ್ತಾ ನಗರದ ಜನರ ಬಗ್ಗೆ ಅಲ್ಪ ಸ್ವಲ್ಪ ನಗರದ ಜನತೆಯ ಆಶೋತ್ತರಗಳನ್ನು ಈಡೇರಿಸುತ್ತಿತ್ತು,

ಆದರೆ, ೧೯೯೦ರ ನಂತರ ಜಾಗತೀಕರಣ, ಉದಾರೀಕರಣ ಮತ್ತು ಖಾಸಗೀಕರಣದಿಂದ ಸರ್ಕಾರದ ಪ್ರಾಬಲ್ಯ ಕಡಿಮೆಯಾಗಿ ಖಾಸಗೀಯವರ ಪ್ರಾಬಲ್ಯ ಹೆಚ್ಚಿದ್ದರಿಂದ ನಗರ ಸ್ಥಳೀಯ ಆಡಳಿತವು ಹೆಚ್ಚಿನಲ್ಲಿ ಪ್ರಬಲಿರಿಗೆ ಲಾಭವಾಯಿತೆ ವಿನಃ ಬಡವರಿಗೆ, ಸಾಮಾನ್ಯ ಜನರು ಮಾರುಕಟ್ಟೆ ಆಧಾರಿತ ಸರ್ಕಾರದಿಂದ ಜನರು ಅದರಲ್ಲಿ ಹೆಚ್ಚಾಗಿ ಭಾಗವಹಿಸಲಿಕ್ಕೆ ಆಗದೆ ನಗರ ಜನತೆಯ ಆಶೋತ್ತರಗಳನ್ನು ಹಳೆಯ ಕಾಯ್ದೆಗಳಿಂದ ಈಡೆರಿಸಲಿಕ್ಕೆ ಆಗದೆ ಇದ್ದರಿಂದ ಹಲವು ಸಮಿತಿಗಳ (ಬಲವಂತ್ ರಾಯ್ ಮೆಹ್ತಾ, ಆಶೋಕ್ ಮೆಹ್ತಾ ಮತ್ತು ಜಿ.ವಿ.ಕೆ. ರಾವ್) ಶಿಫಾರಿಸಿನ ಅನ್ವಯವಾಗಿ ಗ್ರಾಮೀಣ ಪ್ರದೇಶಗಳಲ್ಲಿ ಸಂವಿಧಾನ ೭೩ನೆಯಾ ೧೯೯೨ರಲ್ಲಿ ತಿದ್ದುಪಡಿಯನ್ನು ಜಾರಿಗೆ ತಂದು ಗ್ರಾಮ ಪಂಚಾಯಿತಿಗಳನ್ನು ಸಬಲೀಕರಣಗೊಳಿಸುವ ಉದ್ದೇಶವಾಗಿತ್ತು. ಇಂತಹ ಒಂದು ಬೆಳವಣೆಗೆಯನ್ನು ರಾಜೀವ್ ಗಾಂಧಿಯವರು ಮನಗಂಡು ಒಂದು ಹೆಜ್ಜೆ ಮುಂದೆ ಹೋಗಿ ೧೯೯೩ರಲ್ಲಿ ೭೪ನೆಯಾ ಸಂವಿಧಾನಿಕ ತಿದ್ದುಪಡಿಯನ್ನು ಜಾರಿಗೆ ತಂದು ನಗರ ಪ್ರದೇಶಗಳನ್ನು ಸಬಲೀಕರಣಗೊಳಿಸುವ ಪ್ರಯತ್ನ ಸ್ವಾಗತರ್ಹವೆಂದು ಹೇಳಲಾಗಿದೆ. ಈ ಹಿನ್ನೆಲೆಯಲ್ಲಿ ಇಂತಹ ಧೋರಣೆಯನ್ನು ಹೊಂದಿರುವ ಕೇಂದ್ರೀಕೃತ ಸರ್ಕಾರಗಳಿಗೆ ೧೯೬೪ರ ಕರ್ನಾಟಕ ಪುರಸಭೆ ಕಾಯ್ದೆ ಮತ್ತು ೧೯೭೬ರ ಕರ್ನಾಟಕ ಮಹಾನಗರ ಕಾಯ್ದೆಗಳಿಗೆ ಅಂದಿನ ಸರ್ಕಾರವು ತಿದ್ದುಪಡಿಗಳನ್ನು ತಂದು ೧೯೯೪ರ ಕರ್ನಾಟಕ ಮುನ್ಸಿಪಾಲಿಟಿಸ್ ಆಕ್ಟ್ ಮತ್ತು ಕರ್ನಾಟಕ ಮುನಿಸಿಪಲ್ ಕಾರ್ಪೋರೇಶನ್ ಆಕ್ಟ್‌ಗಳನ್ನು ಅಂಗೀಕರಿಸಿ ೧೯೯೪ ಜೂನ್‌ನಲ್ಲಿ ಸ್ಥಳೀಯ ಸಂಸ್ಥೆಗಳ ಪರಿಕಲ್ಪನೆಯ ಸ್ಥೂಲ ಚೌಕಟ್ಟನ್ನು ನಿರೂಪಿಸಿ, ಅದರೊಳಗೆ ತಮ್ಮ ಅಗತ್ಯ ಮತ್ತು ಸಂದರ್ಭಗಳಿಗೆ ತಕ್ಕಂತೆ ಅಧಿನಿಯಮಗಳನ್ನು ರಚಿಸಿ, ಅನುಷ್ಠಾನಿಸುವ ಹೊಣೆಯನ್ನು ರಾಜ್ಯ ವಿಧಾನ ಮಂಡಲಗಳಿಗೆ ನೀಡಲಾಯಿತು.[೧೩] ಆದುದರಿಂದ ದೇಶದೆಲ್ಲೆಡೆ ಈಗ ನಗರ ಸ್ಥಳೀಯ ಸರ್ಕಾರಗಳ ವ್ಯವಸ್ಥೆಯಿದ್ದರೂ ಅದರ ಸ್ವರೂಪ ಮತ್ತು ವ್ಯಾಪ್ತಿಯಲ್ಲಿ ರಾಜ್ಯ ರಾಜ್ಯಗಳ ನಡುವೆ ಭಿನ್ನತೆಗಳಿವೆ. ಕೆಲವೇ ರಾಜ್ಯಗಳು ಪ್ರಗತಿ ಪರ ವ್ಯವಸ್ಥೆಯನ್ನು ರೂಪಿಸಿದ ಕೀರ್ತಿಗೆ ಪಾತ್ರವಾಗಿವೆ. ಕರ್ನಾಟಕವು ಅವುಗಳ ಸಾಲಿನಲ್ಲಿದೆ ಎನ್ನುವುದು ಹೆಮ್ಮೆಯ ವಿಷಯ ಎಂದು ಮನಗಾಣಲಾಗಿದೆ.

### ೨.೩. ತಿದ್ದುಪಡಿ ಪೂರ್ವದ ಸನ್ನಿವೇಶ

೭೪ನೇ ಸಂವಿಧಾನ ತಿದ್ದುಪಡಿಗಿಂತ ಮೊದಲು ನಗರ ಸ್ಥಳಿಯ ಸರ್ಕಾರಗಳು ಈ ರೀತಿಯಾಗಿ ಅಸ್ತಿತ್ವದಲ್ಲಿದ್ದವು. ಈ ತಿದ್ದುಪಡಿಗೆ ಮೊದಲು ನಗರ ಸ್ಥಳೀಯ ಸಂಸ್ಥೆಗಳ ವ್ಯವಸ್ಥೆಯು ಎಷ್ಟು ಪರಿಣಾಮಕಾರಿಯಾಗಿ ಇರಬೇಕಾಗಿತ್ತೋ ಅಷ್ಟು ಇರಲಿಲ್ಲ. ಅದರ ಅಧಿಕಾರಗಳು ಪರಿಮಿತವಾಗಿದ್ದವು. ರಾಜ್ಯ ಸರ್ಕಾರವು ನಗರ ಸ್ಥಳೀಯ ಸಂಸ್ಥೆಗಳನ್ನು ವಿನಾಕಾರಣ ವಿಸರ್ಜನೆ ಮಾಡಬಹುದಾಗಿತ್ತು, ಯಾವುದೇ ಹಕ್ಕುಗಳಿಲ್ಲದೆ, ಅಧಿಕಾರಗಳಿಲ್ಲದೆ ಸರ್ಕಾರದ ಕೆಲವೇ ಮಂದಿಯ ಹಂಗಿನಲ್ಲಿದ್ದವು, ಯಾವುದೇ ಸಂಪನ್ಮೂಲಗಳಿಲ್ಲದೆ ಸೊರಗಿದ್ದವು ಹಾಗೂ ಸ್ಥಳೀಯ ಸಂಸ್ಥೆಗಳು ಸರ್ಕಾರದ ಅಧೀನದಲ್ಲಿದ್ದವು. ಈ ಸಂಸ್ಥೆಗಳಿಗೆ ಚುನಾವಣೆಗಳು ನಿರ್ದಿಷ್ಟವಾಗಿ ನಡೆಯುತ್ತಿರಲಿಲ್ಲ. ಈ ಸಂಸ್ಥೆಗಳಲ್ಲಿ ಉತ್ತರದಾಯಿತ್ವವು ಒಂದು ಒಪ್ಪಿತ ಲಕ್ಷಣವಾಗಿರಲಿಲ್ಲ ಹಾಗೂ ವಿವಿಧ ಸಮಿತಿಗಳು, ಆಯೋಗಗಳ ಶಿಫಾರಸುಗಳು ಆಡಳಿತದಲ್ಲಿ ಒಂದು ಬಲಿಷ್ಠವಾದ ಮೂರನೆಯ ಹಂತವನ್ನು ಸೃಷ್ಟಿಸಬೇಕಾದ ಅವಶ್ಯಕತೆಯನ್ನು ಮನವರಿಕೆ ಮಾಡಿಕೊಟ್ಟವು. ಅದು ನಗರ ಸಮುದಾಯಗಳು ತಮ್ಮ ಭವಿಷ್ಯದ ಮೇಲೆ ತಾವೇ

ಪ್ರಭಾವ ಬೀರುವ ಸಾಧ್ಯತೆಗೆ ನೆರವಾಗುವಂತಿತ್ತು. ಇದನ್ನು ಸಾಕಾರಗೊಳಿಸಲು ಆಡಳಿತದ ಮೂರನೆಯ ಹಂತಕ್ಕೆ ಸಂವಿಧಾನಾತ್ಮಕವಾದ ಮನ್ನಣೆ ಕೊಡುವುದು ಅಗತ್ಯ ಎಂದು ಪರಿಗಣಿಸಲಾಯಿತು. ಈ ಪ್ರಕ್ರಿಯೆಯನ್ನು ಉಪಕ್ರಮಿಸಿದ ಗೌರವವು ಹಿಂದಿನ ಪ್ರಧಾನಮಂತ್ರಿ, ದಿವಂಗತ ರಾಜೀವ್ ಗಾಂಧಿ ಅವರಿಗೆ ನಿಸ್ಸಂಶಯವಾಗಿ ಸಲ್ಲಬೇಕು. ಸ್ಥಳೀಯ ಸಂಸ್ಥೆಗಳಿಗೆ ಸಂವಿಧಾನಾತ್ಮಕ ಸ್ಥಾನಮಾನವನ್ನು ನೀಡುವ ಮೂಲಕ ಅವುಗಳನ್ನು ಬಲಪಡಿಸಬೇಕು ಎಂದು ಅವರು ದೃಢವಾಗಿ ನಂಬಿದ್ದರು. ಬಂದ್ಯೋಪಾಧ್ಯಾಯ ಅವರು ಸರಿಯಾಗಿ ಹೇಳಿದಂತೆ, "ಭಾರತದಲ್ಲಿ ಪಂಚಾಯಿತಿಗಳು ಎಂಬ ಈ ಐತಿಹಾಸಿಕ ಸಂಕ್ಷಿಪ್ತ ಚಿತ್ರಣ ಎಂದರು, ಪ್ರಾರಂಭದಲ್ಲಿ ಸಂಪೂರ್ಣವಾಗಿ ರಾಜಕೀಯ ದೂರ ವ್ಯಕ್ತಿಯಾಗಿದ್ದ ರಾಜೀವ್ ಗಾಂಧಿ ಏಕೆ ಮತ್ತು ಹೇಗೆ, ಪ್ರಾಚೀನವಾದ ಮತ್ತು ಪ್ರಸ್ತುತ ಬಳಕೆಯಲ್ಲಿಲ್ಲದ ಸ್ಥಳೀಯ ಆಡಳಿತ ವ್ಯವಸ್ಥೆಯಾದ ಪಂಚಾಯಿತಿಯನ್ನು ಪುನಶ್ಚೇತನಗೊಳಿಸಬೇಕೆಂದು ಮನಗಂಡರು, ಏಕ ಮನಸ್ಸಿನ ನಿಷ್ಠೆ ಮತ್ತು ನಿರ್ಧಾರದಿಂದ ತೀರ್ಮಾನಿಸಿದರು ಎನ್ನುವುದು ಕೊಂಚಮಟ್ಟಿಗೆ ಒಗಟೇ ಆಗಿದೆ. ಅವರು ೨೨ ಸೆಪ್ಟೆಂಬರ್ ೧೯೮೬ರಲ್ಲಿ ಅವರು ಹೀಗೆ ಹೇಳೀದರು, "ನಾವು ಮೇಲುಮಟ್ಟದಿಂದ ಯೋಜನೆಗಳನ್ನು ಮುಂದುವರಿಸಿದರೆ ಜನಸಂಖ್ಯೆಯ ಬಹುಪಾಲು ಜನರು ಹೊರಗೆ ಉಳಿದುಬಿಡುತ್ತಾರೆ. ಅಭಿವೃದ್ಧಿಯಿಂದ ಬರುವ ಪ್ರಯೋಜನೆಗಳ ಪ್ರವಾಹವು, ಬಾತುಕೋಳಿಯ ಬೆನ್ನಮೇಲೆ ಹರಿದುಹೊಗುವ ನೀರಿನಂತೆ, ಅವರ ತಲೆಯ ಮೇಲೆ ದಾಟಿಹೊಗುತ್ತದೆ. ಏಕೆಂದರೆ ಸರ್ಕಾರಿ ಸಂಸ್ಥೆಗಳಿಗೆ ಪ್ರತಿಯೊಬ್ಬ ವ್ಯಕ್ತಿಯ ಬಳಿಗೂ ಹೋಗಿ ಹೀಗೆ ಮಾಡು ಅಥವಾ ಹಾಗೆ ಮಾಡು ಎಂದು ಮಾರ್ಗದರ್ಶನ ಮಾಡುವುದು ಸಾಧ್ಯವಾಗುವುದಿಲ್ಲ". ಆನಂತರ ಸ್ಥಳೀಯ ಸಂಸ್ಥೆಗಳನ್ನು ಬಲಪಡಿಸುವ ರಾಜೀವ್ ಗಾಂಧಿ ಅವರ ಬದ್ಧತೆಯು ಮತ್ತಷ್ಟು ಭದ್ರವಾಯಿತು. ರಾಷ್ಟ್ರದಲ್ಲಿ ಸ್ಥಳೀಯ ಸಂಸ್ಥೆಗಳ ಸಮಸ್ಯೆಗಳ ಬಗ್ಗೆ ಅರ್ಥಮಾಡಿಕೊಳ್ಳಲು ಡಿಸೆಂಬರ್ ೧೯೮೭ರಿಂದ ಜೂನ್ ೧೯೮೮ರವರೆಗೆ ಸಂವೇದನಶೀಲ ಆಡಳಿತ ಎಂಬ ವಿಷಯವಾಗಿ ಅವರು ಅನೇಕ ಕಮ್ಮಟ, ವಿಚಾರ ಸಂಕಿರಣಗಳನ್ನು ಏರ್ಪಡಿಸಿದರು. ಆ ಕಮ್ಮಟಗಳಲ್ಲಿ ಅಂತರ್ಗತವಾಗಿರುವ ಸಮಸ್ಯೆಯು ವಿಧಾನಗಳನ್ನು ಸರಳಗೊಳಿಸಬೇಕಾದ ಸಂಗತಿಯಲ್ಲ ಅಥವಾ ಕುಂದುಕೊರತೆಗಳನ್ನು ಪರಿಹರಿಸುವ ವ್ಯವಸ್ಥೆಯನ್ನು ಸ್ಥಾಪಿಸುವುದಲ್ಲ. ಆದರೆ ಮೂಲಭೂತವಾಗಿ ಅದು ವ್ಯಾಪಕ ಸ್ವರೂಪದ್ದು. ಸ್ಥಳೀಯ ಸಂಸ್ಥೆಗಳ ವಿಷಯವನ್ನು ಸಂವಿಧಾನದ ಅಳವಿನಲ್ಲಿ ದೃಢವಾಗಿ ಎದುರಿಸಬೇಕು ಎನ್ನುವುದು ವಿಶದವಾಗುತ್ತಿದ್ದಂತೆಯೇ ೭೪ನೇ ತಿದ್ದುಪಡಿಯ ರೂಪದಲ್ಲಿ ಪ್ರಸ್ತಾವಗಳು ಬಹಳ ಮುಖ್ಯವಾದವು.[೧೬]

**ಸಂವಿಧಾನದ ೭೪ನೇ ತಿದ್ದುಪಡಿಯ ಮುಖ್ಯ ಅಂಶಗಳು**

೧. ಚುನಾವಣೆಯನ್ನು ಕಡ್ಡಾಯಗೊಳಿಸಲಾಗಿದೆ.

೨. ನಗರ ಸ್ಥಳೀಯ ಸಂಸ್ಥೆಗಳ ಗಡಿಗಳನ್ನು ಗುರುತಿಸುವುದು.

೩. ಮಹಿಳೆಯರಿಗೆ ಮತ್ತು ಇತರ ಹಿಂದುಳಿದ ವರ್ಗಗಳಿಗೆ ಪ್ರತ್ಯೇಕ ಅವಕಾಶ ಕಲ್ಪಿಸಲಾಗಿದೆ.

೪. ಮೂರು ಲಕ್ಷಕ್ಕೂ ಅಧಿಕ ಜನಸಂಖ್ಯೆಯಿರುವ ನಗರಗಳಲ್ಲಿ ವಾರ್ಡು ಸಮಿತಿಗಳನ್ನು ರಚಿಸುವುದು

೫. ಸಂವಿಧಾನದ ೧೨ನೇ ಅನುಸೂಚಿಯಲ್ಲಿ ನಗರ ಸ್ಥಳೀಯ ಸಂಸ್ಥೆಗಳು ಕೈಗೊಳ್ಳಬೇಕಾದ ಕೆಲಸಗಳನ್ನು ಪಟ್ಟಿ ಮಾಡಲಾಗಿದೆ.

೬. ನಗರ ಸ್ಥಳೀಯ ಸಂಸ್ಥೆಗಳು ಸಂಪನ್ಮೂಲ ಸಂಗ್ರಹಣೆಯನ್ನು ತೆರಿಗೆ ಮತ್ತು ಇನ್ನಿತರೆ ಕಂದಾಯದ ಮೂಲಗಳಿಂದ ಸಂಗ್ರಹಿಸಲು ಅವಕಾಶ ನೀಡಲಾಗಿದೆ.

೭. ಪ್ರತಿ ಐದು ವರ್ಷಗಳಿಗೊಮ್ಮೆ ಹಣಕಾಸು ಆಯೋಗವನ್ನು ನೇಮಿಸುವ ಮೂಲಕ ನಗರ ಸ್ಥಳೀಯ ಸಂಸ್ಥೆಗಳ ಹಣಕಾಸಿನ ಸ್ಥಿತಿಯನ್ನು ಪರೀಕ್ಷಿಸಲು ಹಾಗೂ ಅನುದಾನಗಳನ್ನು ಹಂಚಿಕೆ ಮಾಡಲಾಗುತ್ತಿದೆ.

೮. ಜಿಲ್ಲಾ ಯೋಜನಾ ಸಮಿತಿಯನ್ನು ಸ್ಥಾಪಿಸುವುದು, ಮೆಟ್ರೋಪಾಲಿಟನ್ ಯೋಜನೆ ರೂಪಿಸುವ ಮೂಲಕ ನಗರ ಮತ್ತು ಗ್ರಾಮೀಣ ಪ್ರದೇಶಗಳ ಯೋಜನೆಗಳನ್ನು ಕ್ರೋಡೀಕರಿಸುವುದು

೯. ರಾಜ್ಯ ಸರ್ಕಾರ ಸ್ಥಳೀಯ ಸರ್ಕಾರದ ಆಡಳಿತದಲ್ಲಿ ಹಸ್ತಕ್ಷೇಪ ಮಾಡುವುದನ್ನು ಮಿತಿಗೊಳಿಸಲಾಗಿದೆ.

**೨.೪. ಸಂವಿಧಾನದ ೭೪ನೇ ತಿದ್ದುಪಡಿಯ ಅವಶ್ಯಕತೆ**

ಅತಿ ವಿಶಾಲವಾದ ಮತ್ತು ಬಹುಮುಖಿ ಸಂಸ್ಕೃತಿ ಹೊಂದಿದ ವಿಸ್ತಾರ ರಾಷ್ಟ್ರವಾದ ಭಾರತದಲ್ಲಿ ಸ್ಥಳೀಯ ಸ್ವಯಂ ಆಡಳಿತ ಸಂಸ್ಥೆಗಳಿಗೆ ಅಧಿಕಾರದ ವಿಕೇಂದ್ರೀಕರಣವು ಕೆಳಗಿನ ಉದ್ದೇಶಕ್ಕಾಗಿ ಅತ್ಯಾವಶ್ಯಕವಾದದ್ದು.

೧. ಭಾರತದ ಸಂವಿಧಾನದಲ್ಲಿ ನಗರ ಸ್ಥಳೀಯ ಸರ್ಕಾರದ ಬಗ್ಗೆ ಹಾಗೂ ಕರ್ತವ್ಯಗಳ ಬಗ್ಗೆ ತಿಳಿಸಿರಲಿಲ್ಲ.

೨. ಭಾರತದ ಸಂವಿಧಾನದ ಡೈರೆಕ್ಟೀವ್ ಪ್ರಿನ್ಸಿಪಲ್ಸ್ ಆಫ್ ಸ್ಟೇಟ್ ಪಾಲಿಸಿಯಲ್ಲಿ ಗ್ರಾಮಪಂಚಾಯಿತಿ ಬಗ್ಗೆ ವಿವರಣೆ ನೀಡಲಾಗಿತ್ತು. ಎಲ್ಲಿಯೂ ಸಹ ನಗರ ಸ್ಥಳೀಯ ಸಂಸ್ಥೆಯ ಬಗ್ಗೆ ಉಲ್ಲೇಖವಿರಲಿಲ್ಲ.

೩. ರಾಜ್ಯದ ನಗರ ಸ್ಥಳೀಯ ಸರ್ಕಾರಗಳು ರಾಜ್ಯಗಳಿಗೆ ಸಂಬಂಧಿಸಿದವುಗಳಾಗಿದ್ದು, ಇದಕ್ಕೆ ಸಂವಿಧಾನದಲ್ಲಿ ಯಾವುದೇ ಗ್ಯಾರಂಟಿ ನೀಡಿರಲಿಲ್ಲ.

೪. ನಗರ ಸ್ಥಳೀಯ ಸಂಸ್ಥೆಗಳನ್ನು ಅಭಿವೃದ್ಧಿಪಡಿಸುವ ದೃಷ್ಟಿಯಿಂದ ಹಾಗೂ ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ನಗರ ಸ್ಥಳೀಯ ಸರ್ಕಾರಗಳ ಆಡಳಿತ ಕೂಡ ಅತ್ಯಂತ ಮಹತ್ವವಾದದ್ದೆಂದು ಗಮನಿಸಿ ಲೋಕಸಭೆ ೧೯೯೨ರಂದು ೭೪ನೇ ಸಂವಿಧಾನ ತಿದ್ದುಪಡಿಯನ್ನು ಕೈಗೊಂಡಿತು. ಇದಕ್ಕೆ ರಾಷ್ಟ್ರಪತಿಗಳಿಂದ ೧೯೯೩ ಏಪ್ರಿಲ್ ೨೦ರಂದು ಅಂಕಿತ ಹಾಕಲಾಯಿತು. ಈ ಕಾಯಿದೆ ೧೯೯೩ರ ಜೂನ್ ೧ರಿಂದ ಪ್ರಾರಂಭವಾಯಿತು.

೫. ೭೪ನೇ ಸಂವಿಧಾನ ತಿದ್ದುಪಡಿಯ ಗುರಿ ನಗರ ಸ್ಥಳೀಯ ಸಂಸ್ಥೆಗಳಿಗೆ ಸಂವಿಧಾನದಲ್ಲಿ ವ್ಯವಸ್ಥಿತವಾದ ಸ್ಥಾನವನ್ನು ಕಲ್ಪಿಸುವುದು ಹಾಗೂ ಎಲ್ಲಾ ವರ್ಗದ ಜನರಿಗೂ ಆಡಳಿತದಲ್ಲಿ ಅವಕಾಶವನ್ನು ಕಲ್ಪಿಸುವುದು.

೬. ಇದರಿಂದಾಗಿ ಭಾರತದ ಇತಿಹಾಸದಲ್ಲಿಯೇ ಪ್ರಪ್ರಥಮವಾಗಿ ನಗರ ಸ್ಥಳೀಯ ಸಂಸ್ಥೆಗಳಿಗೆ ಸಂವಿಧಾನದಲ್ಲಿ ವಿಶೇಷ ಸ್ಥಾನ ನೀಡಲಾಯಿತು.

೭. ೭೪ನೇ ಸಂವಿಧಾನ ತಿದ್ದುಪಡಿಯಿಂದಾಗಿ ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಅಧಿಕಾರ ವಿಕೇಂದ್ರೀಕರಣದ ಮೂಲಕ ಯೋಜನೆ ಮತ್ತು ಅಭಿವೃದ್ಧಿಯನ್ನು ಕೈಗೊಳ್ಳಲಾಯಿತು.

೮. ನಗರ ಸ್ಥಳೀಯ ಸಂಸ್ಥೆಗಳು ಹಣಕಾಸಿನ ಅಧಿಕಾರ ಮತ್ತು ಕಾರ್ಯಗಳನ್ನು ಕೈಗೊಳ್ಳಲು ಸಾಧ್ಯವಾಗಿದೆ.

೯. ೭೪ನೇ ಸಂವಿಧಾನ ತಿದ್ದುಪಡಿಯ ನಗರ ಸ್ಥಳೀಯ ಸಂಸ್ಥೆಗಳ ಹೊಸ ಯುಗ ದೇಶದಲ್ಲಿ ಪ್ರಾರಂಭವಾಯಿತು.

೧೦. ಈ ಮೂಲಕ ಜನರಿಗೆ ಅಧಿಕಾರ, ನಗರ ಸ್ಥಳೀಯ ಸಂಸ್ಥೆಗಳ ಯೋಜನೆಗಳನ್ನು ನಗರ ಭಾಗವಹಿಸುವಿಕೆಯ ಮೂಲಕ ತಯಾರಿಸಿಕೊಳ್ಳಲು ಮತ್ತು ತೀರ್ಮಾನ ಕೈಗೊಳ್ಳಲು ಅವಕಾಶವಿದೆ.

೧೧. ಹಾಗೆಯೇ ಆಯಾ ರಾಜ್ಯಗಳು ೧೯೯೪ರ ಮೇ ೩೧ರಂದು ಕಾನೂನು ರೂಪಿಸಿಕೊಂಡು ಮತ್ತೆ ಕಾಯಿದೆಗೆ ಕೆಲವು ತಿದ್ದುಪಡಿಯನ್ನು ಮಾಡಿಕೊಳ್ಳುವ ಮೂಲಕ ಸ್ಥಳೀಯ ಆಡಳಿತ ಮತ್ತು ರಾಜಕೀಯ ವ್ಯವಸ್ಥೆಗಳಿಗೆ ಮತ್ತು ಸಮಸ್ಯೆಗಳಿಗೆ ಅನುಗುಣವಾಗಿ ಮಾರ್ಪಾಡು ಮಾಡಿಕೊಳ್ಳಲಾಗಿದೆ.

೧೨. ಸ್ಥಳೀಯ ಅಗತ್ಯಗಳಿಗೆ ವೇಗವಾಗಿ ಸ್ಪಂದಿಸಲು ಸಾಧ್ಯತೆ

೧೩. ಹೆಚ್ಚಿನ ಹೊಣೆಗಾರಿಕೆ, ಪಾರದರ್ಶಕತೆ ಹಾಗೂ ಕಡಿಮೆ ಭ್ರಷ್ಟಾಚಾರ

೧೪. ಮೂಲಭೂತ ಸೇವೆಗಳ ಉತ್ತಮ ಪೂರೈಕೆ

೧೫. ಸುಧಾರಿತ ಮಾಹಿತಿ ರವಾನೆ

೧೬. ಹೆಚ್ಚು ಪರಿಸರಸ್ನೇಹಿ ಯೋಜನೆಗಳು

೧೭. ಸಂಘರ್ಷ ಕರಗಿಸಲು ಹೆಚ್ಚಿನ ಶಕ್ತಿ

೧೮. ರಾಜಕೀಯ ಪ್ರಾತಿನಿಧ್ಯಕ್ಕೆ ವಿಸ್ತರಿಸಿದ ಅವಕಾಶ.[೭]

ಪ್ರಸ್ತುತ ಅಧ್ಯಯನವು ನಗರ ಸ್ಥಳೀಯ ಸಂಸ್ಥೆಗಳ ಕಾರ್ಯವಿಧಾನವನ್ನು ಗುರುತಿಸುವ ಅಧ್ಯಯನವಾಗಿರುವುದರಿಂದ ೧೯೬೪ರ ಕರ್ನಾಟಕ ನಗರಪಾಲಿಕಾ ಕಾಯಿದೆಯನ್ವಯ ನಗರಸಭೆ ರಚನೆ, ಅಧಿಕಾರ ಮತ್ತು ಕಾರ್ಯಗಳನ್ನು ಹೊಂದಿರುವ ಸಂವಿಧಾನದ ಆಶಯವನ್ನು ತಿಳಿಯುದು ಅಗತ್ಯವಾಗಿದೆ. ಮೇಲಿನ ಪುಟಗಳಲ್ಲಿ ನಗರ ಸ್ಥಳೀಯ ಸಂಸ್ಥೆಗಳ ವ್ಯವಸ್ಥೆ ಭಾರತ ಮತ್ತು ಕರ್ನಾಟಕದಲ್ಲಿ ನಡೆದುಬಂದ ದಾರಿಯ ಸ್ಥೂಲ ಚಿತ್ರಣವನ್ನು ನೋಡಬಹುದು. ವಿವಿಧ ಚಾರಿತ್ರಿಕ ಸಂದರ್ಭಗಳಲ್ಲಿ ನಗರ ಸ್ಥಳೀಯ ಸಂಸ್ಥೆಗಳ ವ್ಯವಸ್ಥೆ ವಿವಿಧ ರೂಪದಲ್ಲಿ ಕಾರ್ಯರೂಪದಲ್ಲಿತ್ತು. ಆಯಾಯ ಕಾಲಘಟ್ಟದ ಅಗತ್ಯಕ್ಕೆ ಅನುಗುಣವಾಗಿ ಸಂಸ್ಥೆಗಳು ತಕ್ಕಮಟ್ಟಿನ ಬದಲಾವಣೆಗಳನ್ನು ರೂಢಿಸಿಕೊಳ್ಳಲು ಪ್ರಯತ್ನಿಸಿವೆ. ಇಷ್ಟೊಂದು ಸಮಿತಿಗಳ ನೇಮಕ ಮತ್ತು ಅವು ಮಾಡಿರುವ ಶಿಫಾರಸ್ಸುಗಳು ಒಂದು ಬಹುಮುಖ್ಯ ಅಂಶದ ಕಡೆಗೆ ನಮ್ಮ ಗಮನ ಸೆಳೆಯುತ್ತವೆ. ಪ್ರತಿ ಕಾಲಘಟ್ಟದಲ್ಲೂ ರೂಪುಗೊಂಡ ನಗರಪಾಲಿಕೆ ವ್ಯವಸ್ಥೆ ಆ ಕಾಲಘಟ್ಟದ ಎಲ್ಲಾ ಅವಶ್ಯಕತೆಗಳನ್ನು ತೃಪ್ತಿಕರವಾಗಿ ಪೂರೈಸಿಲ್ಲ ಎನ್ನುವ ಅಂಶ ಈ ಸಮಿತಿಗಳ ಶಿಫಾರಸ್ಸಿನಿಂದ ಸ್ಪಷ್ಟವಾಗುತ್ತದೆ. ಈ ಸಮಸ್ಯೆಗೆ ಮುಖ್ಯ ಕಾರಣ ನಾವು ಇಂದು ಕಾರ್ಯರೂಪಕ್ಕೆ ತರಲು ಪ್ರಯತ್ನಿಸುವ ನಗರಪಾಲಿಕೆ ವ್ಯವಸ್ಥೆ ನಮ್ಮ ಸಮಾಜದ ಚಾರಿತ್ರಿಕ ಬೆಳವಣಿಗೆ ಆಗದಿರುವುದೇ ಆಗಿದೆ. ಈ ಮಾತನ್ನು ಸ್ಥಳೀಯ ಸಂಸ್ಥೆಗಳ ಬಗ್ಗೆ ಹೇಳುವಾಗ ತುಂಬಾ ಜಾಗರೂಕರಾಗಿರಬೇಕು. ಯಾಕೆಂದರೇ ಸ್ಥಳೀಯ ಸಂಸ್ಥೆಗಳು ನಮ್ಮ ಸಮಾಜದ ಚಾರಿತ್ರಿಕ ಬೆಳವಣಿಗೆ ಎನ್ನುವ ನಂಬಿಕೆ ನಮ್ಮಲ್ಲಿ ತುಂಬಾ ಆಳವಾಗಿ ಬೇರು ಬಿಟ್ಟಿದೆ. ಆದರೆ ಈ ನಂಬಿಕೆ ಸರಿಯಿಲ್ಲ ನಮ್ಮಲ್ಲಿ ಚಾರಿತ್ರಿಕವಾಗಿ ರೂಪಗೊಂಡ ಸ್ಥಳೀಯ ಸಂಸ್ಥೆಗಳು

ಆದರ್ಶಕ್ಕೂ ಈಗ ನಾವು ಕಾರ್ಯರೂಪದಲ್ಲಿ ತರಲು ಪ್ರಯತ್ನಿಸುತ್ತಿರುವ ಸಂಸ್ಥೆಗಳ ಆದರ್ಶಕ್ಕೂ ತುಂಬಾ ವ್ಯತ್ಯಾಸವಿದೆ. ಸಮಾನತೆ ಮತ್ತು ಪ್ರಜಾಪ್ರಭುತ್ವದ ಕಲ್ಪನೆಯೇ ಇಲ್ಲದ ಒಂದು ವ್ಯವಸ್ಥೆಯಲ್ಲಿ ರೂಪಗೊಳ್ಳುವ ಸಂಸ್ಥೆಗಳ ಸಮಾನತೆಯ ಕಲ್ಪನೆಯನ್ನು ಪ್ರತಿನಿಧಿಕರಿಸಲು ಸಾಧ್ಯವಿಲ್ಲ. ಇದು ಚಾರಿತ್ರಿಕವಾಗಿ ರೂಪಗೊಂಡ ನಮ್ಮ ಪಂಚಾಯಿತಿಯ ಬಹುದೊಡ್ಡ ಕೊರತೆ. ಇಂದು ಅದಕ್ಕೆ ವಿರುದ್ಧವಾಗಿ ಸಮಾನತೆ ಮತ್ತು ಪ್ರಜಾಪ್ರಭುತ್ವ ತತ್ವದ ನೆಲೆಗಟ್ಟಲ್ಲಿ ಸಂಸ್ಥೆಗಳು ರೂಪುಗೊಳ್ಳುತ್ತಿದೆ. ತಳಮಟ್ಟದ ಜನರ ಪಾಲ್ಗೊಳ್ಳುವಿಕೆಗೆ ಅಗತ್ಯವಾದ ಸಾಂಸ್ಥಿಕ ಚೌಕಟ್ಟನ್ನು ರೂಪಿಸಲು ಸತತ ಪ್ರಯತ್ನ ನಡೆದಿದೆ. ಸ್ಥಳೀಯ ಸಂಸ್ಥೆಯ ನಾಲ್ಕು ಹಂತಗಳನ್ನು ಗಮನಿಸಿದರೆ ತಳಮಟ್ಟದಲ್ಲಿ ಜನರು ನೇರವಾಗಿ ಪಾಲ್ಗೊಳ್ಳಲು ಸಾಧ್ಯವಾಗುವುದು ಪಟ್ಟಣ ಪಂಚಾಯಿತಿ ಮತ್ತು ನಗರಸಭೆ ಮಟ್ಟದಲ್ಲಿ ಮಾತ್ರ. ಈ ಪ್ರಬಂಧ ಕೂಡ ಪಟ್ಟಣ ಪಂಚಾಯಿತಿ ಮತ್ತು ನಗರಸಭೆಯನ್ನು ವಿಕೇಂದ್ರೀಕರಣದ ಕೇಂದ್ರ ಬಿಂದುವಾಗಿ ಇಟ್ಟುಕೊಂಡಿದೆ. ಆದುದರಿಂದ ಪಟ್ಟಣ ಪಂಚಾಯಿತಿ ಮತ್ತು ನಗರಸಭೆ, ಅದರ ಆಧಿಕಾರ, ಜವಾಬ್ದಾರಿ ಮತ್ತು ವ್ಯಾಪ್ತಿ ಬಗ್ಗೆ ಕನಿಷ್ಠ ತಿಳುವಳಿಕೆ ಅಗತ್ಯ.

### ೨.೫. ಸ್ಥಳೀಯ ಸಂಸ್ಥೆಗಳ ಸಭೆಯ ರಚನೆ ಮತ್ತು ಕಾರ್ಯಗಳು

ಕರ್ನಾಟಕ ಪೌರನಿಗಮಗಳ ಅಧಿನಿಯಮ ೧೯೭೬ರ ೭೧ನೇ ಪ್ರಕರಣದ ಅನ್ವಯ ಸ್ಥಳೀಯ ಸಂಸ್ಥೆಗಳ ಸಭೆಯನ್ನು ರಚಿಸಲಾಗಿದೆ. ಈ ಕಾಯ್ದೆಯ ಪ್ರಕಾರ ಮಹಾನಗರ ಪಾಲಿಕೆ ವ್ಯಾಪ್ತಿಯ ರಾಜ್ಯ ವಿಧಾನಸಭಾ ಹಾಗೂ ಲೋಕಸಭೆ ಸದಸ್ಯರು ಕೂಡ ಸದಸ್ಯರಾಗಿರುತ್ತಾರೆ. ಅದರಂತೆ ವಿಧಾನಪರಿಷತ್ತಿನ ಸದಸ್ಯರು ಹಾಗೂ ರಾಜ್ಯಸಭಾ ಸದಸ್ಯರು ಆ ಮಹಾನಗರಪಾಲಿಕೆಯ ವ್ಯಾಪ್ತಿಯ ಮತದಾರರ ಪಟ್ಟಿಯಲ್ಲಿ ಮತದಾರರಾಗಿರಬೇಕು. ಅಂತಹ ಸದಸ್ಯರು ಸಭೆಯಲ್ಲಿ ಭಾಗವಹಿಸಲು ಹಾಗೂ ಮತ ಚಲಾಯಿಸಲು ಹಕ್ಕುಳ್ಳವರಾಗಿರುತ್ತಾರೆ. ಪ್ರಸ್ತುತ ಪ್ರತಿವರ್ಷ ನಾಲ್ಕು ಬಾರಿ ಸಭೆಗಳನ್ನು ಕರೆಯಬೇಕಾಗಿದೆ. ಸಭೆಯ ಬಗ್ಗೆ ಕೌನ್ಸಿಲ್ ಕಾರ್ಯದರ್ಶಿ ಅಧ್ಯಕ್ಷರೊಡನೆ ಸಮಾಲೋಚಿಸಿ ಸಭೆಯ ದಿನಾಂಕ, ಸ್ಥಳ ಮತ್ತು ವೇಳೆಯನ್ನು ನಿಗದಿಪಡಿಸಬೇಕು. ಸಭೆಯ ತಿಳುವಳಿಕೆಯನ್ನು ಪಟ್ಟಣ ಪಂಚಾಯಿತಿ ಮತ್ತು ನಗರಸಭೆಯ ನೋಟಿಸ್ ಬೋರ್ಡ್‌ನಲ್ಲಿ ಮತ್ತು ಸಾರ್ವಜನಿಕ ಸ್ಥಳಗಳಲ್ಲಿ ಪ್ರಚಾರಪಡಿಸಬೇಕು. ನಗರದ ಜನತೆಯ ಗಮನಕ್ಕೆ ತರಲು ಕರಪತ್ರಗಳ ಮೂಲಕ ನಗರದಲ್ಲಿ ಹೆಚ್ಚು ಪ್ರಚಾರಪಡಿಸಬೇಕು. ಸಮರ್ಪಕವಾಗಿ ನಗರಸಭೆಗಳು ನಡೆಸುವುದು, ನಗರ ಜನತೆ ಹೆಚ್ಚು ಭಾಗವಹಿಸುವಂತೆ ಮಾಡುವುದು, ಸರ್ಕಾರ ಇಲಾಖೆಗಳ ಪ್ರತಿನಿಧಿಗಳು ಬರುವಂತೆ ನಗರ ಸ್ಥಳೀಯ ಸಂಸ್ಥೆಗಳನ್ನು ನೋಡಿಕೊಳ್ಳಬೇಕು. ಸ್ಥಳೀಯ ಸಂಸ್ಥೆಗಳ ಕೌನ್ಸಿಲ್ ಕಾರ್ಯದರ್ಶಿ ಪ್ರತಿಯೊಂದು ಸಭೆಯ ನಡಾವಳಿಗಳನ್ನು ಬರೆಯತಕ್ಕದ್ದು.[೧೯] ಹೀಗೆ ಸ್ಥಳೀಯ ಸಂಸ್ಥೆಗಳ ಸಭೆ ತನ್ನ ರಚನೆ ಹೊಂದಿದೆ.

### ಎ. ನಗರ ಸ್ಥಳೀಯ ಸಂಸ್ಥೆಗಳ ರಚನೆ

ಕರ್ನಾಟಕ ಪೌರನಿಗಮಗಳ ಅಧಿನಿಯಮ ೧೯೭೬ರ ಅನ್ವಯ ಪ್ರತಿಯೊಂದು ಸಂಸ್ಥೆಗಳು ಸಭೆಗಳು ಈ ಕೆಳಗಿನ ಕಾರ್ಯಗಳನ್ನು ನಿರ್ವಹಿಸತಕ್ಕದ್ದು.

೧. ಸ್ಥಳೀಯ ಸಂಸ್ಥೆಗಳ ಸಭೆಯನ್ನು ಕಾಲಕಾಲಕ್ಕೆ ಕರೆಯಬೇಕು. ಎರಡು ಸಭೆಗಳ ನಡುವಿನ ಅಂತರ ತಿಂಗಳಗಿಂತ ಹೆಚ್ಚಿರಬಾರದು.

೨. ಸ್ಥಳೀಯ ಸಂಸ್ಥೆಗಳ ಸಭೆಯನ್ನು ಕರೆಯಲು ತಪ್ಪಿದಲ್ಲಿ ಆಯುಕ್ತರು ಕರೆಯತಕ್ಕದ್ದು.

೩. ಅಭಿವೃದ್ಧಿ ಯೋಜನೆಯನ್ನು ನಗರದಲ್ಲಿ ರೂಪಿಸುವುದು.

೪. ಪಟ್ಟಣಗಳಲ್ಲಿನ ಶಿಕ್ಷಣ, ಆರೋಗ್ಯ, ಕುಡಿಯುವ ನೀರಿನ ಬಗ್ಗೆ ಸಂಬಂಧಿಸಿದ ಅಧಿಕಾರಗಳನ್ನು ಕರೆಸಿ ಕುಂದುಕೊರತೆಗಳನ್ನು ಚರ್ಚಿಸಿ ಪರಿಹಾರ ಕಂಡುಕೊಳ್ಳುವುದು.

೫. ನಗರ ನೈರ್ಮಲ್ಯ ಮತ್ತು ಚರಂಡಿವ್ಯವಸ್ಥೆಯನ್ನು ಕಾರ್ಯಗತಗೊಳಿಸುವುದು.

೬. ಸ್ಥಳೀಯ ಸಂಸ್ಥೆಗಳ ಸಭೆಯ ಶಿಫಾರಸ್ಸುಗಳನ್ನು ಮತ್ತು ಸಲಹೆಗಳನ್ನು ಸೂಕ್ಷ್ಮವಾಗಿ ಪರಿಶೀಲಿಸತಕ್ಕದ್ದು.

೭. ಸ್ಥಳೀಯ ಸಂಸ್ಥೆಗಳ ಸಭೆಯ ಅಧ್ಯಕ್ಷತೆಯನ್ನು ಆಯಾ(ಪಟ್ಟಣ ಪಂಚಾಯಿತಿ, ನಗರಸಭೆ) ಮೇಯರ್ ವಹಿಸತಕ್ಕದ್ದು ಅವರ ಗೈರುಹಾಜರಿಯಲ್ಲಿ ಸಂಸ್ಥೆಗಳ ಉಪಮೇಯರ್ ಅಥವಾ ಯಾರೇ ಸದಸ್ಯರು ವಹಿಸಬೇಕು.

೮. ನಗರಕ್ಕೆ ಸಂಬಂಧಪಟ್ಟ ಅಭಿವೃದ್ಧಿ ಯೋಜನೆಗಳನ್ನು ಕಾರ್ಯಗತಗೊಳಿಸುವ ಸಲುವಾಗಿ ಫಲಾನುಭವಿಗಳನ್ನು ಗುರುತಿಸುವುದು.

೯. ನಗರಗಳಿಗೆ ಸಂಬಂಧಪಟ್ಟ ಅಭಿವೃದ್ಧಿ ಯೋಜನೆಗಳನ್ನು ಕಾರ್ಯಗತಗೊಳಿಸುವಲ್ಲಿ ನೆರವಾಗುವುದು ಹೀಗೆ ನಗರ ಸ್ಥಳೀಯ ಸಂಸ್ಥೆಗಳ ಸಭೆಗಳು ಮುಖ್ಯ ಕಾರ್ಯಗಳನ್ನು ಕಾನೂನಿನ ಮೂಲಕ ನಿರ್ವಹಿಸಬೇಕಾಗಿದೆ.[೯]

ಇದಲ್ಲದೇ, ಈ ಪಟ್ಟಿಯಲ್ಲಿರುವ ಕಾರ್ಯಗಳನ್ನು ನಗರ ಸ್ಥಳೀಯ ಸಂಸ್ಥೆಗಳಿಗೆ ಮಾತ್ರ ಮೀಸಲಾಗಿಡದೆ, ರಾಜ್ಯ ಸರ್ಕಾರವು ಸಹಾ ಈ ಕಾರ್ಯಗಳ ಮೇಲೆ ಅದೇ ಸಮನಾದ ಅಧಿಕಾರ ಹೊಂದಿರುತ್ತದೆ. ಆದಕಾರಣ, "ಕೆಳಮಟ್ಟದಲ್ಲಿ ಏನನ್ನು ಮಾಡಲು ಸಾದ್ಯವೋ ಅದನ್ನು ಆ ಮಟ್ಟದಲ್ಲೇ ಮಾಡುವುದು ಉತ್ತಮ" ಎನ್ನುವ ತತ್ವವನ್ನು ಕೈ ಬಿಡಲಾಗಿದೆ. ಅಷ್ಟೇ ಅಲ್ಲದೆ ಕರ್ನಾಟಕ ಮಹಾನಗರ ಪಾಲಿಕೆ ತಿದ್ದುಪಡಿ ಕಾಯಿದೆಯಡಿ, ಈತನಕ ಈ ಕಾರ್ಯಗಳನ್ನು ರಾಜ್ಯ ಸರ್ಕಾರದ ವಿವಿಧ ಇಲಾಖೆಗಳಡಿಯಲ್ಲಿ ನೆರವೇರಿಸುತ್ತಿದ್ದ ಅಧಿಕಾರಿಗಳನ್ನು ತಂದಿಲ್ಲ. ಇದೇ ರೀತಿ, ಅರೆ ಸರ್ಕಾರಿ ಸಂಸ್ಥೆಗಳಾದಂಥ ಬೆಂಗಳೂರು ನೀರು ಸರಬರಾಜು ಹಾಗೂ ಒಳಚರಂಡಿ ಮಂಡಲಿ, ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ, ಬೆಂಗಳೂರು ಮುಖ್ಯ ಪಟ್ಟಣ ಪ್ರಾದೇಶಿಕ ಅಭಿವೃದ್ಧಿ ಪ್ರಾಧಿಕಾರ ಮುಂತಾದ ಸಂಸ್ಥೆಗಳ ಅಧಿಕಾರಿಗಳನ್ನು ನಗರಪಾಲಿಕೆಯಡಿ ತಂದಿಲ್ಲ. ಆದಕಾರಣ ನಗರಪಾಲಿಕೆಗಳಿಗೆ ೧೨ನೇ ಅನುಸೂಚಿ ಪಟ್ಟಿಯಲ್ಲಿ ವಹಿಸಲಾಗಿರುವ ಎಲ್ಲ ಕಾರ್ಯಾಚರಣೆಗಳನ್ನು ಸಮರ್ಪಕವಾಗಿ ನಡೆಸಲು ಸಾಧ್ಯವಾಗುತ್ತಿಲ್ಲ ಹಾಗೂ ೧೨ನೇ ಅನುಚ್ಛೇದದಲ್ಲಿ, ನಗರ ಪಾಲಿಕೆಗಳು ತಮಗೆ ವಹಿಸಿರುವ ಸಾಮಾಜಿಕ ನ್ಯಾಯವನ್ನು ಒದಗಿಸುವ ಕರ್ತವ್ಯವನ್ನು ಪೂರೈಸಲು ನಿರ್ವಹಿಸಬೇಕಾದ ಹಲವಾರು ಕಾರ್ಯಗಳು ಸೇರ್ಪಡೆಯೇ ಆಗಿಲ್ಲ. ಉದಾಹರಣೆಗೆ ಆಹಾರ ಮತ್ತು ನಾಗರಿಕ ಸರಬರಾಜು ವ್ಯವಸ್ಥೆ, ಪ್ರಾಥಮಿಕ ಶಿಕ್ಷಣ ಹಾಗೂ ಪ್ರಾಥಮಿಕ ಆರೋಗ್ಯ, ಶ್ರಮ ಮತ್ತು ಉದ್ಯೋಗ.

**ಬಿ. ಪಟ್ಟಣ ಪಂಚಾಯಿತಿ**

೧೯೬೪ರ ಕರ್ನಾಟಕ ನಗರಪಾಲಿಕೆ ಕಾಯ್ದೆ ಅನ್ವಯ ತಳಮಟ್ಟದ ವ್ಯವಸ್ಥೆಯಾದ ಪಟ್ಟಣ ಪಂಚಾಯಿತಿ ತನ್ನದೇ ಆದ ರಚನೆ, ಅಧಿಕಾರ ಮತ್ತು ಕಾರ್ಯಗಳನ್ನು ಸಂವಿಧಾನಾತ್ಮಕವಾಗಿ ಹೊಂದಿದೆ. ೧೯೬೪ರ ಅಧಿನಿಯಮದ ಕಲಂ ೩೪೯:೩೫೦:೩೫೧ ಕರ್ನಾಟಕ ಮುನಿಸಿಪಲ್ ಅಧಿನಿಯಮದ ಪ್ರಕಾರ ಅಲ್ಲಿನ ಒಟ್ಟು ಜನಸಂಖ್ಯೆ ಕನಿಷ್ಠ ೧೦,೦೦ಕ್ಕಿಂತ ಅಧಿಕ ಮತ್ತು ೨೦,೦೦೦

ಇರಬೇಕು. ಅಲ್ಲಿ ಒಂದು ಚದರ ಕಿಲೋಮೀಟರ್‌ಗೆ ಕನಿಷ್ಠ ೪೦೦ ಮಂದಿ ವಾಸಿಸುತ್ತಿರಬೇಕು. ಅವರಲ್ಲಿ ಕನಿಷ್ಠ ಶೇಕಡ ೭೫ಕ್ಕಿಂತ ಹೆಚ್ಚಿನ ಮಂದಿ ಕೃಷಿಯೇತರ ಚಟುವಟಿಕೆಗಳಲ್ಲಿ ನಿಯೋಜಿತರಾಗಿರಬೇಕು. ಒಮ್ಮೆ ಇಂತಹ ಸ್ಥಳ ತಾಲೂಕು ಕೇಂದ್ರವಾಗಿದ್ದರೆ ಅಲ್ಲಿನ ಒಟ್ಟು ಜನಸಂಖ್ಯೆ ೧೦,೦೦೦ಕ್ಕಿಂತ ಕಡಿಮೆ ಇದ್ದರೂ ಅಭ್ಯಂತರವಿಲ್ಲ. ಈ ಎಲ್ಲಾ ನಿಬಂಧನೆಗಳನ್ನು ಒಳಗೊಂಡ ಪ್ರದೇಶವನ್ನು ರಾಜ್ಯಪಾಲರ ಅಧಿಸೂಚನೆಯ ಮೂಲಕ ಅದೊಂದು ಪರಿವರ್ತನಾ ಪ್ರದೇಶವೆಂದು ಹೆಸರಿಡುವ ಮೂಲಕ ಪಟ್ಟಣ ಪಂಚಾಯಿತಿಯನ್ನು ರಚಿಸಲಾಗಿದೆ. ಯಾವುದೇ ಸಂಬಂಧಿತ ಮುನಿಸಿಪಲ್ ಕೌನ್ಸಿಲ್ ಜೊತೆಗೆ ಸಮಾಲೋಚಿಸಿ, ಸ್ಥಳೀಯ ಸಂಸ್ಥೆಯ ತೀರ್ಮಾನ ಪಡೆದು ತದನಂತರ ಆಕ್ಷೇಪಣೆಗಳನ್ನು ಪರಿಗಣಿಸಿ, ಇಂತಹ ಪರಿವರ್ತನೆಗಳನ್ನು ರಾಜ್ಯಪಾಲರು ಮಾಡುವ ಅಧಿಕಾರವನ್ನು ಹೊಂದಿರುತ್ತಾರೆ. ಹಾಗೆಯೇ ಕನಿಷ್ಠ ೭ ಗರಿಷ್ಠ ೨೦, ಚುನಾಯಿತ ಕೌನ್ಸಿಲರುಗಳು ಒಟ್ಟು ಸಂಖ್ಯೆಯನ್ನು ಸರ್ಕಾರ ನಿರ್ಧರಿಸುವುದು. ಮುನಿಸಿಪಲ್ ಆಡಳಿತ ಅಥವಾ ಆರೋಗ್ಯ ನಗರ ಯೋಜನೆ ಅಥವಾ ಶಿಕ್ಷಣ ವಿಷಯಕ್ಕೆ ಸಂಬಂಧಿಸಿದ ವಿಚಾರಗಳಲ್ಲಿ ವಿಶೇಷ ಜ್ಞಾನ ಹೊಂದಿರುವ ಸಾಮಾಜಿಕ ಕಾರ್ಯಕರ್ತರಾಗಿ ೩ ಜನರನ್ನು ಸರಕಾರ ನಾಮ ನಿರ್ದೇಶನ ಮಾಡಬಹುದು. ಅವರು ಅನುಭವ ಹೊಂದಿದವರಾಗಬೇಕು ಅಥವಾ ಸಾಮಾಜಿಕ ಕಾರ್ಯಕರ್ತ ರಾಗಿರಬೇಕು. ಇವರು ಸಭೆಯಲ್ಲಿ ಮತ ಚಲಾಯಿಸುವ ಹಕ್ಕನ್ನು ಹೊಂದಿರುವುದಿಲ್ಲ. ಅಲ್ಲಿನ ವಿಧಾನಸಭಾ ಕ್ಷೇತ್ರದ ವಿಧಾನಸಭಾ ಸದಸ್ಯರು, ಲೋಕಸಭಾ ಸದಸ್ಯರು, ಪಟ್ಟಣ ಪಂಚಾಯಿತಿಯ ವ್ಯಾಪ್ತಿಯ ಮತದಾರರಾಗಿರುವ ರಾಜ್ಯಸಭಾ ಮತ್ತು ವಿಧಾನಪರಿಷತ್ತಿನ ಸದಸ್ಯರು ಆಯ್ಕೆ ಮಾಡುವರು. ಇಲ್ಲಿ ಪಟ್ಟಣ ಪಂಚಾಯಿತಿಯ ವ್ಯಾಪ್ತಿಯನ್ನು ವಾರ್ಡ್‌ಗಳನ್ನಾಗಿ ವಿಭಜಿಸಲಾಗುವುದು. ಪ್ರತಿ ವಾರ್ಡ್‌ಗೂ ಒಬ್ಬ ಕೌನ್ಸಿಲರನ್ನು ಚುನಾಯಿಸಬೇಕಾಗುತ್ತದೆ.[೨೦] (ಕಲಂ೩೫೨ ಕ.ಮು.ಅ).

ಈ ಕಾಯ್ದೆಯನ್ವಯ ಪ್ರತಿಯೊಂದು ಪಟ್ಟಣ ಪಂಚಾಯಿತಿಯಲ್ಲಿ ಅನುಸೂಚಿತ ಜಾತಿಗಳಿಗೆ ಶೇ. ೧೫ರಷ್ಟು ಅನುಸೂಚಿತ ಪಂಗಡಗಳಿಗೆ ಶೇ.೩ರಷ್ಟು, ಹಿಂದುಳಿದ ವರ್ಗಗಳಿಗೆ ಮತ್ತು ಮಹಿಳೆಯರಿಗೆ ಶೇ. ೫೦ಷ್ಟು ಸ್ಥಾನಗಳನ್ನು ಮೀಸಲಿಡಲಾಗಿದೆ. ಪಟ್ಟಣ ಪಂಚಾಯಿತಿಯ ಅಧಿಕಾರ ವ್ಯಾಪ್ತಿಯಲ್ಲಿ ಬರುವ ಪ್ರದೇಶವನ್ನು ಚುನಾವಣಾ ಕ್ಷೇತ್ರವನ್ನಾಗಿ ವಿಂಗಡಿಸಲಾಗಿದೆ. (ಕಲಂ ೩೫೨ ಕ.ಮು.ಅ) ಪ್ರಕಾರ ಯಾವುದೇ ಪಟ್ಟಣ ಪಂಚಾಯಿತಿ ಸದಸ್ಯರ ಒಟ್ಟು ಸಂಖ್ಯೆಯ ೨/೩ರಷ್ಟು ಸದಸ್ಯರು ಚುನಾಯಿತರಾದಲ್ಲಿ ಆ ಪಟ್ಟಣ ಪಂಚಾಯಿತಿಯು ಅಧಿನಿಯಮ ವ್ಯಾಪ್ತಿಯಲ್ಲಿ ಕ್ರಮಬದ್ಧವಾಗಿ ರಚನೆಯಾಗಿವೆ ಎಂದು ಪರಿಗಣಿಸಬಹುದಾಗಿದೆ. ಅಧಿನಿಯಮ ೧೯೬೪ರ ಅಡಿಯಲ್ಲಿ ಪಟ್ಟಣ ಪಂಚಾಯಿತಿಗೆ ತನ್ನದೇ ಆದ ಕಾನೂನು ಬದ್ಧವಾದ ಅಸ್ತಿತ್ವವನ್ನು ನೀಡಿದೆ. ಪಟ್ಟಣ ಪಂಚಾಯಿತಿಯ ಮೂಲಕ ಪಟ್ಟಣದ ಎಲ್ಲಾ ವ್ಯವಹಾರಗಳನ್ನು ಅದು ಆಡಳಿತಾತ್ಮಕವಾಗಿ ನಿರ್ವಹಿಸಬಹುದಾಗಿದೆ. ರಾಜ್ಯದ ಪ್ರತಿಯೊಂದು ಪಂಚಾಯಿತಿಯು ಒಳಗೊಂಡಿರಬಹುದಾದ ಎಲ್ಲಾ ಚರ ಮತ್ತು ಸ್ಥಿರ ಆಸ್ತಿಗಳ ಮೇಲೆ ಸಂಪೂರ್ಣ ಅಧಿಕಾರವನ್ನು ಅದು ಹೊಂದಿದೆ. ಇದರ ಹೊರತಾಗಿ ಪಟ್ಟಣ ಪಂಚಾಯಿತಿಯ ರಚನೆಯ ಮೂಲ ಉದ್ದೇಶವಾದ ಅಧಿಕಾರ ವಿಕೇಂದ್ರೀಕರಣ ಅಭಿವೃದ್ಧಿ ಯೋಜನೆಗಳನ್ನು ನಿರ್ವಹಿಸಬಹುದಾಗಿದೆ. ಅದಕ್ಕೆ ಅವಶ್ಯವಾದ ಅಧಿಕಾರ ಮತ್ತು ಹಣಕಾಸನ್ನು ಕೇಂದ್ರ ಮತ್ತು ರಾಜ್ಯ ಸರಕಾರಗಳು ಒದಗಿಸಿ ಕೊಟ್ಟಿವೆ. ಕರ್ನಾಟಕ ಮುನಿಸಿಪಲ್ ಅಧಿನಿಯಮದ ಕಲಂ ೧೪ರ ಪ್ರಕಾರ ಪಟ್ಟಣ ಪಂಚಾಯಿತಿ ಸದಸ್ಯರನ್ನು ಆಯ್ಕೆ ಮಾಡುವ ಮತ್ತು ಚುನಾವಣೆ

ನಡೆಸುವ ವಿಧಾನವನ್ನು ತಿಳಿಸುತ್ತದೆ. ಪ್ರತಿಯೊಬ್ಬ ಮತದಾರನು ಆಯ್ದ ಮತ ಕ್ಷೇತ್ರದಿಂದ ಎಷ್ಟು ಮತಗಳನ್ನು ಹೊಂದಿರುತ್ತಾನೆ. ಸದಸ್ಯರನ್ನು ಚುನಾಯಿಸುವಾಗ ಗುಪ್ತ ಮತದಾನ ಪದ್ಧತಿಗೆ ಅನುಗುಣವಾಗಿ ಪಕ್ಷ ರಹಿತವಾಗಿ ಚುನಾವಣೆಗಳನ್ನು ನಡೆಸಬೇಕು. ಪಟ್ಟಣ ಪಂಚಾಯಿತಿಯ ಸದಸ್ಯರನ್ನು ಚುನಾಯಿಸುವುದರಲ್ಲಿ ಯಾವುದಾದರೂ ಅಡೆತಡೆಗಳು ಬಂದರೆ ೬ ತಿಂಗಳ ಅವಧಿಗೆ ಆಡಳಿತಾಧಿಕಾರಿಯನ್ನು ನೇಮಕ ಮಾಡಬೇಕು. ಈ ಅವಧಿಯಲ್ಲಿ ಚುನಾವಣೆ ನಡೆಸಬೇಕು. ಪಟ್ಟಣ ಪಂಚಾಯಿತಿಯ ಸದಸ್ಯರ ಐದು ವರ್ಷ ಕಾಲಾವಧಿಯಲ್ಲಿ ತನ್ನ ಸ್ಥಾನದಲ್ಲಿ ಮುಂದುವರಿಸಿಕೊಂಡು ಹೋಗಬಹುದಾದರೂ ತನಗಿಷ್ಟು ಬಂದ ಸಮಯದಲ್ಲಿ ತನ್ನ ಸ್ಥಾನವನ್ನು ತ್ಯಜಿಸಬಹುದಾಗಿದೆ.[೨೧]

**ಸಿ. ನಗರಸಭೆ ರಚನೆ**

೧೯೬೪ರ ಕರ್ನಾಟಕ ಪುರಸಭೆಗಳ ಅಧಿನಿಯಮದ ಪ್ರಕರಣ ೧೧ರ ಅನ್ವಯ ಈ ಕೆಳಕಂಡ ಸದಸ್ಯರನ್ನೊಳಗೊಂಡ ಮುನ್ಸಿಪಲ್ ಕೌನ್ಸಿಲ್‌ಗಳನ್ನು ರಚಿಸಲಾಗುವುದು.

ಎ. ಜನಸಂಖ್ಯೆ ೨೦,೦೦೦ದಿಂದ ೪೦,೦೦೦ ಇರುವ ಪೌರಪ್ರದೇಶಗಳಲ್ಲಿ ೨೩ ಚುನಾಯಿತ ಕೌನ್ಸಿಲರು.

ಬಿ. ಜನಸಂಖ್ಯೆ ೪೦,೦೦೦ದಿಂದ ೫೦,೦೦೦ ಇರುವ ಪೌರಪ್ರದೇಶಗಳಲ್ಲಿ ೨೭ ಚುನಾಯಿತ ಕೌನ್ಸಿಲರು.

ಸಿ. ಜನಸಂಖ್ಯೆ ೫೦,೦೦೦ದಿಂದ ೧ ಲಕ್ಷ ಇರುವ ಪೌರಪ್ರದೇಶಗಳಲ್ಲಿ ೩೧ ಚುನಾಯಿತ ಕೌನ್ಸಿಲರು.

ಡಿ. ಜನಸಂಖ್ಯೆ ೧ ಲಕ್ಷದಿಂದ ೩ ಲಕ್ಷ ಇರುವ ಪೌರಪ್ರದೇಶಗಳಲ್ಲಿ ೩೫ ಚುನಾಯಿತ ಕೌನ್ಸಿಲರು.

ಇ. ಪೌರಾಡಳಿತ, ಆರೋಗ್ಯ, ನಗರ ಯೋಜನೆ, ಶಿಕ್ಷಣ ವಿಷಯಗಳಲ್ಲಿ ವಿಶೇಷ ಜ್ಞಾನ ಮತ್ತು ಅನುಭವವಿರುವ ಅಥವಾ ಸಮಾಜಸೇವಕ ಇವರಲ್ಲಿ ಸರ್ಕಾರದಿಂದ ನೇಮಕಗೊಂಡ ಗರಿಷ್ಠ ೫ ವ್ಯಕ್ತಿಗಳು.

ಎಫ್. ಪೌರಪ್ರದೇಶವನ್ನು ಒಳಗೊಂಡಿರುವ ಚುನಾವಣಾ ಕ್ಷೇತ್ರವನ್ನು ಪ್ರತಿನಿಧಿಸುವ ಲೋಕಸಭಾ ಸದಸ್ಯರು ಮತ್ತು ವಿಧಾನಸಭಾ ಸದಸ್ಯರು.

ಜಿ. ಪೌರಪ್ರದೇಶದೊಳಗೆ ನೋಂದಾಯಿತರಾಗಿರುವ ರಾಜ್ಯಸಭಾ ಸದಸ್ಯರು ಮತ್ತು ವಿಧಾನಪರಿಷತ್ತಿನ ಸದಸ್ಯರು.[೨೨]

**ಅಧಿಕಾರ, ಸಮಿತಿ ಮತ್ತು ಸಭೆ**

ಪಟ್ಟಣ ಪಂಚಾಯಿತಿ ಪ್ರದೇಶದಲ್ಲಿ ಕಾಲಕಾಲಕ್ಕೆ ನಿರ್ದಿಷ್ಟಪಡಿಸಿದ ಕಾರ್ಯಗಳನ್ನು ಪಟ್ಟಣ ಪಂಚಾಯಿತಿ ನಿರ್ವಹಿಸಬೇಕು ಎಂದು ಕಲಂ ೨೪೩ ಡಬ್ಲ್ಯೂನಲ್ಲಿ ಹೇಳಲಾಗಿದೆ. ಮುಖ್ಯವಾಗಿ ಪಂಚಾಯಿತಿಯು ತನ್ನ ವ್ಯಾಪ್ತಿಯಲ್ಲಿ ಬರುವ ಪ್ರದೇಶದ ವಾಸಿಗಳ ಆರೋಗ್ಯ ಸಂರಕ್ಷಣೆಗೆ, ಶಿಕ್ಷಣ, ಜೀವನ ಮಟ್ಟ ಸುಧಾರಣೆ, ಆರ್ಥಿಕ ಉನ್ನತಿ, ಸೌಕರ್ಯ, ಸಾಮಾಜಿಕ ನ್ಯಾಯ ಇತರೆ ಮಾರ್ಗೋಪಾಯಗಳನ್ನು ನಿರ್ವಹಿಸಲು ಸಹ ಏರ್ಪಾಟು ಮಾಡಬೇಕು. ಸಂವಿಧಾನದ ೭೪ನೇ ತಿದ್ದುಪಡಿಯು ೧೨ನೇ ಅನುಸೂಚಿಯಲ್ಲಿ ೧೮ ವಿಷಯಗಳ ಮೇಲೆ ಪಂಚಾಯಿತಿಗಳಿಗೆ ಅಧಿಕಾರಗಳನ್ನು ಕೊಡಲಾಗಿದೆ. ಇದರಲ್ಲಿ ಮುಖ್ಯವಾಗಿ ನಗರ ಪ್ರದೇಶಗಳ ಯೋಜನೆ, ಭೂಬಳಕೆ ಮತ್ತು ಕಟ್ಟಡ

ನಿರ್ಮಾಣಗಳ ಹಾಗೂ ಕಟ್ಟಡಗಳ ನಿರ್ಮಾಣದ ನಿಯಂತ್ರಣ, ಆರ್ಥಿಕ ಸಾರ್ವಜನಿಕ ಅಭಿವೃದ್ಧಿಗೆ ಯೋಜನೆ, ರಸ್ತೆ ಮತ್ತು ಸೇತುವೆಗಳು, ನೀರು ಸರಬರಾಜು, ಸಾರ್ವಜನಿಕ ಆರೋಗ್ಯ, ನೈರ್ಮಲ್ಯ ಮತ್ತು ಘನ ತ್ಯಾಜ್ಯ ವಸ್ತುಗಳ ನಿರ್ವಹಣೆ, ಪರಿಸರ ಸಂರಕ್ಷಣೆ, ಕೊಳಗೇರಿ ಅಭಿವೃದ್ಧಿ, ನಗರ ಬಡತನ ನಿರ್ಮೂಲನೆ ಮತ್ತು ಜನನ ಮರಣಗಳ ನೋಂದಾವಣೆ ಮತ್ತು ಅಂಕಿ ಅಂಶಗಳ ನಿರ್ವಹಣೆ, ಶಿಕ್ಷಣ, ವಿದ್ಯುಚ್ಛಕ್ತಿ, ಸಾರ್ವಜನಿಕ ಆಸ್ತಿ ರಕ್ಷಣೆ, ಮುಂತಾದವುಗಳು ಇದರಲ್ಲಿ ಸೇರಿವೆ. ಪಟ್ಟಣ ಪಂಚಾಯಿತಿಯು ಈ ಕಾರ್ಯಗಳ ಬಗ್ಗೆ ತನ್ನ ಸಭೆಯಲ್ಲಿ ಅಂಗೀಕರಿಸಿ ಮತ್ತು ಸದಸ್ಯರ ಒಟ್ಟು ೨/೩ ರಷ್ಟು ಸದಸ್ಯರು ಅನುಮೋದಿಸಿದ ಕಾರ್ಯಗಳನ್ನು ಕೈಗೊಳ್ಳಬೇಕೆಂದು ಆದೇಶಿಸಲಾಗಿದೆ.

ನಗರಪಾಲಿಕಾ ಕಾಯ್ದೆಯ ಅನ್ವಯ ಕರ್ನಾಟಕ ಮುನಿಸಿಪಲ್ ಅಧಿನಿಯಮ ೬೩ರ ಪ್ರಕಾರ ರಾಜ್ಯದ ಪ್ರತಿಯೊಂದು ಮುನಿಸಿಪಾಲಿಟಿಗಳು ನಾಲ್ಕು ಸ್ಥಾಯಿಸಮಿತಿಗಳನ್ನು ಹೊಂದಿರಬೇಕು. ಪ್ರತಿ ಸಮಿತಿಯಲ್ಲಿ ಅಧ್ಯಕ್ಷ ಮತ್ತು ಉಪಾಧ್ಯಕ್ಷ ಒಳಗೊಂಡಂತೆ ಐದರಿಂದ ಏಳು ಜನರ ಸದಸ್ಯರನ್ನು ಒಳಗೊಂಡಿರಬೇಕೆಂದು ಹೇಳಲಾಗಿದೆ. ಮುನಿಸಿಪಾಲಿಟಿಯ ಅಧ್ಯಕ್ಷರು ಮತ್ತು ಉಪಾಧ್ಯಕ್ಷರು ಪದನಿಮಿತ್ತ ಸದಸ್ಯರಾಗಿರುವರು. ಆರೋಗ್ಯ, ಶಿಕ್ಷಣ ಹಾಗೂ ಸಾಮಾಜಿಕ ನ್ಯಾಯ ಸಮಿತಿಯಲ್ಲಿ ಏಳು ಜನ ಸದಸ್ಯರ ಪೈಕಿ ಕಡ್ಡಾಯವಾಗಿ ೨ ಸದಸ್ಯರು ಪ.ಜಾತಿ ಮತ್ತು ಪ.ಪಂಗಡದ ಸದಸ್ಯರು ಇರತಕ್ಕದ್ದು. ಒಬ್ಬ ಸದಸ್ಯರಿಗೆ ಒಂದು ಸ್ಥಾಯಿ ಸಮಿತಿಯಲ್ಲಿ ಮಾತ್ರ ಸದಸ್ಯನಾಗಲು ಅವಕಾಶವಿದೆ. ಪ್ರತಿಯೊಂದು ಸ್ಥಾಯಿಸಮಿತಿಯು ಮಹಾನಗರ ಪಾಲಿಕೆ ವಹಿಸಿಕೊಟ್ಟ ಪ್ರಕಾರ್ಯಗಳನ್ನು ಮತ್ತು ಅಧಿಕಾರಗಳನ್ನು ಚಲಾಯಿಸತಕ್ಕದ್ದು, ಪ್ರತಿಯೊಂದು ಸ್ಥಾಯಿ ಸಮಿತಿಯು ಆಯ್ಕೆಯಾದ ದಿನಾಂಕದಿಂದ ಒಂದು ವರ್ಷ ಅವಧಿಗೆ ಮಾತ್ರ ಅಧಿಕಾರದಲ್ಲಿರುತ್ತದೆ. ಪ್ರತಿಯೊಂದು ಸ್ಥಾಯಿಸಮಿತಿಯ ಅವಧಿ ಮುಗಿದ ನಂತರ ಹೊಸದಾಗಿ ಸ್ಥಾಯಿಸಮಿತಿಗಳು ರಚನೆಯಾಗದಿದ್ದಲ್ಲಿ ಹಿಂದಿನ ಸಮಿತಿಗಳ ಅವಧಿ ಮುಂದುವರಿಯುವುದಿಲ್ಲ. ಈ ನಾಲ್ಕು ಸಮಿತಿಗಳು ನಿರ್ದಿಷ್ಟಪಡಿಸಿದ ಕಾರ್ಯಗಳನ್ನು ನಿರ್ವಹಿಸಬೇಕು.

ಎ. ತೆರಿಗೆ ನಿರ್ಧರಣೆ, ಹಣಕಾಸು ಮತ್ತು ಅಪೀಲುಗಳಿಗಾಗಿ ಸ್ಥಾಯಿಸಮಿತಿ

ಬಿ. ಸಾರ್ವಜನಿಕ ಆರೋಗ್ಯ, ಶಿಕ್ಷಣ ಮತ್ತು ಸಾಮಾಜಿಕ ನ್ಯಾಯಕ್ಕಾಗಿ ಸ್ಥಾಯಿಸಮಿತಿ

ಸಿ. ಪಟ್ಟಣ ಯೋಜನೆ ಮತ್ತು ಸುಧಾರಣೆಗಾಗಿ ಸ್ಥಾಯಿಸಮಿತಿ.

ಡಿ. ಲೆಕ್ಕಪತ್ರಗಳಿಗಾಗಿ ಸ್ಥಾಯಿ ಸಮಿತಿ.

**೨.೬. ಸ್ಥಾಯಿ ಸಮಿತಿಗಳ ಅಧ್ಯಕ್ಷರು**

೧. ಪ್ರತಿಯೊಂದು ಸ್ಥಾಯಿಸಮಿತಿಯು ತನ್ನ ಒಬ್ಬ ಸದಸ್ಯನನ್ನು ಸಮಿತಿಯ ಅಧ್ಯಕ್ಷನನ್ನಾಗಿ ಚುನಾಯಿಸತಕ್ಕದ್ದು.

೨. ಅಂಥ ಅಧ್ಯಕ್ಷನು ತನ್ನ ಉತ್ತರಾಧಿಕಾರಿಯು ಚುನಾಯಿತನಾಗುವವರೆಗೆ ಪದಧಾರಣ ಮಾಡತಕ್ಕದ್ದು, ಅಂತೆಯೇ ಪುನಾರಾಯ್ಕೆಗೆ ಅರ್ಹನಾಗಿರತಕ್ಕದ್ದು.

೩. ಅಧ್ಯಕ್ಷನು ಸ್ಥಾಯಿಸಮಿತಿಯ ಸದಸ್ಯನಾಗಿರುವುದು ನಿಂತು ಹೋದಾಗ ತನ್ನ ಪದವಿಯನ್ನು ಖಾಲಿ ಮಾಡತಕ್ಕದ್ದು.

೪. ಅಧ್ಯಕ್ಷನ ಪದದಲ್ಲಿ ಯಾವುದೇ ಆಕಸ್ಮಿಕ ಖಾಲಿ ಸ್ಥಾನ ಸಂಭವಿಸಿದರೆ, ಸಂಬಂಧಪಟ್ಟ ಸ್ಥಾಯಿ ಸಮಿತಿಯು, ಅಂಥ ಖಾಲಿ ಸ್ಥಾನವು ಸಂಭವಿಸಿದ ಅನಂತರ, ಅಂಥ ಖಾಲಿ ಸ್ಥಾನವನ್ನು

ಭರ್ತಿ ಮಾಡುವುದಕ್ಕೆ ಅದರ ಒಬ್ಬ ಸದಸ್ಯನನ್ನು ಚುನಾಯಿಸತಕ್ಕದ್ದು ಮತ್ತು ಹಾಗೆ ಚುನಾಯಿತನಾದ ಪ್ರತಿಯೊಬ್ಬ ವ್ಯಕ್ತಿಯು ಯಾರ ಸ್ಥಾನಕ್ಕೆ ತಾನು ಚುನಾಯಿತನಾದನೋ ಅವನು ಖಾಲಿ ಸ್ಥಾನವು ಸಂಭವಿಸದಿದ್ದರೆ ಧಾರಣ ಮಾಡಬಹುದಾದ ಕಾಲದವರೆಗೆ ಮಾತ್ರ ಮುಂದುವರೆಯತಕ್ಕದ್ದು. ಕರ್ನಾಟಕ ನಗರಾಪಾಲಿಕಾ ಅಧಿನಿಯಮ ೧೯೬೪ರ ಪ್ರಕರಣ ೭೧ರ ಪ್ರಕಾರ ಸಮಿತಿಯೊಂದು ಸ್ಥಳೀಯ ಸಂಸ್ಥೆಗಳ(ಪಟ್ಟಣ ಪಂಚಾಯಿತಿ ಮತ್ತು ನಗರಸಭೆ) ಕಛೇರಿಯಲ್ಲಿ ಕನಿಷ್ಠ ಪ್ರತಿ ತಿಂಗಳು ಕೊನೆಯ ಒಂದು ದಿನ ಸಭೆ ಸೇರತಕ್ಕದ್ದು. ಸಭೆ ನಡೆಯುವ ದಿನಾಂಕ ಮತ್ತು ವೇಳೆಯನ್ನು ಆಯಾ ಅಧ್ಯಕ್ಷರು ನಿರ್ಧರಿಸುತ್ತಾರೆ. ಸಾಮಾನ್ಯ ಸಭೆ, ವಿಶೇಷ ಸಭೆ ಮತ್ತು ತುರ್ತುಸಭೆಗಳನ್ನು ಕರೆಯಬಹುದಾಗಿದೆ.[೨೩]

### ೨.೭. ನಗರ ಸ್ಥಳೀಯ ಸಂಸ್ಥೆಗಳ ಸಭೆಗಳ ವಿವರ

### ಎ. ಸಾಮಾನ್ಯಸಭೆ

ಪಟ್ಟಣ ಪಂಚಾಯಿತಿಯ ಕೌನ್ಸಿಲ್ ಕಾರ್ಯದರ್ಶಿಯು ಸಾಮಾನ್ಯಸಭೆಯ ತಿಳುವಳಿಕೆಯನ್ನು ನೀಡತಕ್ಕದ್ದು ಇಂತಹ ತಿಳುವಳಿಕೆಯಲ್ಲಿ ಸಭೆ ನಡೆಯುವ ದಿನಾಂಕ, ವೇಳೆ ಮತ್ತು ಸ್ಥಳವನ್ನು ನಮೂದಿಸಿರಬೇಕು. ಅಲ್ಲದೇ ಸಭೆಗಳಲ್ಲಿ ನಡೆಯುವ ಕಾರ್ಯಕಲಾಪಗಳ ಪಟ್ಟಿಯನ್ನು ಸಹ ಅದಕ್ಕೆ ಲಗತ್ತಿಸಿರಬೇಕು. ಸಾಮಾನ್ಯಸಭೆ ಕರೆಯುವ ಏಳು ದಿವಸಗಳ ಮೊದಲೇ ನೋಟಿಸ್ ನೀಡಬೇಕು. ಅಂದರೆ ಸಭಾ ತಿಳುವಳಿಕೆಯ ಪತ್ರವು ಏಳು ದಿವಸಗಳ ಮೊದಲು ಎಲ್ಲಾ ಸದಸ್ಯರಿಗೆ ಮತ್ತು ಸರ್ಕಾರ ಗೊತ್ತುಪಡಿಸಿದ ಅಧಿಕಾರಿಗಳಿಗೆ ತಲುಪಬೇಕು. ಅಲ್ಲದೇ ಅದರ ಪ್ರತಿಯನ್ನು ಪಟ್ಟಣ ಪಂಚಾಯಿತಿ ಮತ್ತು ನಗರಸಭೆ ಕಛೇರಿಯ ನೋಟಿಸ್ ಬೋರ್ಡಿನಲ್ಲಿ ಅಂಟಿಸಬೇಕು. ಪಟ್ಟಣ ಪಂಚಾಯಿತಿ ಮತ್ತು ನಗರಸಭೆಯ ಸಾಮಾನ್ಯ ಸಭೆಯಲ್ಲಿ ಸದಸ್ಯರ ಕೋರಂ ಒಟ್ಟು ಸದಸ್ಯರ ೧/೩ರಷ್ಟು ಇರಬೇಕು. ಕಾಯ್ದೆಯು ಹೇಳುವಂತೆ ಅಧ್ಯಕ್ಷನು ಸಭೆಯನ್ನು ಕರೆಯಲು ತಪ್ಪಿದರೆ ಉಪಾಧ್ಯಕ್ಷನು ಕರೆಯತಕ್ಕದ್ದು. ಸದಸ್ಯರ ಒಟ್ಟು ಸಂಖ್ಯೆಯು ೧/೩ರಷ್ಟು ಕೋರಿಕೆಯನ್ನು ಸಲ್ಲಿಸಿದ ತರುವಾಯ ೧೫ ದಿನ ಮೀರದಂತೆ ಅಂತಹ ಸಭೆಯನ್ನು ಕರೆಯತಕ್ಕದ್ದು. ಸದಸ್ಯರಿಗೆ ನೋಟಿಸ್ ಕೊಡುವಂತೆ ಮತ್ತು ಸಭೆಯನ್ನು ಕರೆಯಲು ಅವಶ್ಯವಾಗಬಹುದಾದ ಕ್ರಮವನ್ನು ಕೈಗೊಳ್ಳಲು ಪಟ್ಟಣ ಪಂಚಾಯಿತಿ ಮತ್ತು ನಗರಸಭೆ ಕಾರ್ಯಗಳಿಗೆ ಅಗತ್ಯಪಡಿಸಬಹುದಾದ ಎಲ್ಲಾ ವಿಷಯಗಳ ತೀರ್ಮಾನಗಳನ್ನು ತೆಗೆದುಕೊಳ್ಳುವಾಗ ಹಾಜರಿ ಇರುವ ಸದಸ್ಯರು ಬಹುಮತ ನೀಡುವ ಮೂಲಕ ತೀರ್ಮಾನಿಸಬಹುದಾಗಿದೆ. ಸಮಾನ ಮತ ಬಂದ ಸಂದರ್ಭದಲ್ಲಿ ಅಧ್ಯಕ್ಷನು ನಿರ್ಣಾಯಕ ಮತವನ್ನು ಹಾಕಬಹುದು. ಅಧ್ಯಕ್ಷತೆ ವಹಿಸಿರುವ ಸದಸ್ಯನಿಗೆ ಚರ್ಚೆಯಲ್ಲಿರುವ ಯಾವುದೇ ವಿಷಯದಲ್ಲಿ ಹಣಕಾಸಿನ ಹಿತಾಸಕ್ತಿ ಇದೆ ಎಂದು ಸಭೆಯಲ್ಲಿ ಹಾಜರಿರುವ ಯಾರೇ ಸದಸ್ಯರು ಅಭಿಪ್ರಾಯಪಟ್ಟರೆ ಮತ್ತು ಆ ಬಗ್ಗೆ ಒಂದು ಸೂಚನೆಯನ್ನು ಅಂಗೀಕರಿಸಿದರೆ ಅವರು ಸಭೆಯ ಅಧ್ಯಕ್ಷತೆಯನ್ನು ವಹಿಸತಕ್ಕದ್ದಲ್ಲ ಮತ್ತು ಭಾಗವಹಿಸಕೂಡದು. ಪಟ್ಟಣ ಪಂಚಾಯಿತಿ ಮತ್ತು ನಗರಸಭೆಯಲ್ಲಿ ತೆಗೆದುಕೊಳ್ಳಲಾದ ನಿರ್ಣಯಗಳನ್ನು ಪಾಸು ಮಾಡಿದ ನಂತರ ಆರು ತಿಂಗಳೊಳಗೆ ಒಂದು ಗೊತ್ತುವಳಿಯನ್ನು ಹೊರಡಿಸಲಾಗುವುದು. ಸ್ಥಳೀಯ ಸಂಸ್ಥೆಯಲ್ಲಿ ಅಂಗೀಕರಿಸಿದ ಪ್ರತಿಯೊಂದು ನಿರ್ಣಯದ ಒಂದು ಪ್ರತಿಯನ್ನು ಸಭೆಯ ದಿನಾಂಕದಿಂದ ಹತ್ತು ದಿನಗಳೊಳಗಾಗಿ ಸಂಬಂಧಪಟ್ಟ

ಕಾರ್ಯದರ್ಶಿಯು ಪುರಸಭೆಯ ಕಾರ್ಯನಿರ್ವಹಣೆ ಅಧಿಕಾರಿಗಳಿಗೆ ಕಳುಹಿಸಿಕೊಡತಕ್ಕದ್ದು. ಪಂಚಾಯಿತಿ ಪ್ರದೇಶಕ್ಕೆ ಸಂಬಂಧಿಸಿದ ಯಾವುದೇ ಸಮಸ್ಯೆಯನ್ನು ಸದಸ್ಯರು ಚರ್ಚಿಸಬಹುದು. ಇಂತಹ ಸಮಸ್ಯೆಗಳಲ್ಲಿ ಸ್ಥಳೀಯ ಸಂಸ್ಥೆಗಳ ಕೆಲಸ ನಿರ್ವಹಣೆಯಲ್ಲಿ ಉದಾಸೀನತೆಯಾಗಲಿ ಆಸ್ತಿಯ ಉಪಯೋಗವಾಗಲಿ ಅಥವಾ ಯಾವುದೇ ಪ್ರದೇಶದ ಕುಂದುಕೊರತೆಯನ್ನಾಗಲಿ ಎತ್ತಿ ತೋರಿಸಬಹುದಾಗಿದೆ. ಇದಲ್ಲದೇ ಯಾವುದೇ ಕಾರ್ಯವು ಅಪೇಕ್ಷಣೀಯವಾಗಿದ್ದರೆ ಅವುಗಳ ಸುಧಾರಣೆಗೆ ಸಲಹೆ ಮಾಡಬಹುದು. ಈ ರೀತಿಯ ಅಂಶಗಳು ತಿಂಗಳ ಸಭೆಯಲ್ಲಿ ಚರ್ಚಿಸಬಹುದಾಗಿದೆ.

**ಬಿ. ವಿಶೇಷಸಭೆ**

ಸ್ಥಳೀಯ ಸಂಸ್ಥೆಗಳ ಅಧ್ಯಕ್ಷನು ಸ್ವತಃ ಸೂಕ್ತವೆಂದು ಯೋಚಿಸಿದಾಗ ಅಥವಾ ಸ್ಥಳೀಯ ಸಂಸ್ಥೆಯ ಸದಸ್ಯರ ಒಟ್ಟು ಸಂಖ್ಯೆಯ ಮೂರನೇ ಒಂದು ಭಾಗ ಸದಸ್ಯರಿಗೆ ಕಡಿಮೆ ಇಲ್ಲದಷ್ಟು ಸದಸ್ಯರು ಬರಹದಲ್ಲಿ ಕೋರಿದಾಗ ಅಂತಹ ಕೋರಿಕೆ ತಲುಪಿದ ೧೫ ದಿನಗಳೊಳಗೆ ಮೇಯರ್ ಅವರು ವಿಶೇಷಸಭೆಯನ್ನು ಕರೆಯಬಹುದು. ಮೇಲ್ಕಂಡ ಸದಸ್ಯರು ಕೋರಿದಾಗ ಮೇಯರ್ ವಿಶೇಷ ಸಭೆಯನ್ನು ಕರೆಯಲು ತಪ್ಪಿದಲ್ಲಿ ಉಪಾಧ್ಯಕ್ಷ ಅಥವಾ ಕೋರಿಕೆ ನೀಡಿದ ೧/೩ರಷ್ಟು ಸದಸ್ಯರು ಅಂತಹ ಸಭೆಯನ್ನು ಕರೆಯಬಹುದು. ಇಂತಹ ಸಭೆಗಳ ಕೋರಂ ಹಾಗು ಕಾರ್ಯವಿಧಾನ ಸಾಮಾನ್ಯ ಸಭೆಯ ಕೋರಂ ಹಾಗೂ ಕಾರ್ಯವಿಧಾನವೇ ಆಗುತ್ತದೆ. ಈ ಸಭೆಯ ಎಲ್ಲಾ ಉಸ್ತುವಾರಿಯನ್ನು ಸ್ಥಳೀಯ ಸಂಸ್ಥೆಯ ಕೌನ್ಸಿಲ್ ಕಾರ್ಯದರ್ಶಿ ಹೊತ್ತಿರುತ್ತಾನೆ.

**ಸಿ. ತುರ್ತುಸಭೆ**

ಅಧ್ಯಕ್ಷನು ಯಾವುದಾದರೂ ವಿಷಯದಲ್ಲಿ ತುರ್ತಾಗಿ ನಿರ್ಣಯ ತೆಗೆದುಕೊಳ್ಳಬೇಕಾಗಿದ್ದು ಸಾಮಾನ್ಯ ಸಭೆಯ ಕರೆಯಲು ಬೇಕಾಗುವ ಕಾಲಾವಕಾಶ ನೀಡಲು ಸಾಧ್ಯವಿಲ್ಲದಿದ್ದ ಪಕ್ಷದಲ್ಲಿ ಮತ್ತು ನಿರ್ಣಯಗಳನ್ನು ಕೂಡಲೇ ತೆಗೆದುಕೊಳ್ಳಬೇಕಾದ ಸಂದರ್ಭದಲ್ಲಿ ಮಾತ್ರ ಕೇವಲ ೨೪ ಗಂಟೆಗಳ ನೋಟಿಸನ್ನು ನೀಡಿ ತುರ್ತುಸಭೆ ಕರೆಯಬಹುದು. ಇದರ ಕೋರಂ ಸಹ ಸಾಮಾನ್ಯಸಭೆಯ ಕಾರ್ಯವಿಧಾನವೇ ಆಗಿರುತ್ತದೆ.[೨೪]

**೨.೮. ಸ್ಥಾನಗಳ ಮೀಸಲಾತಿ**

ಮಹಾನಗರ ಪಾಲಿಕೆ, ನಗರಸಭೆ, ಪುರಸಭೆ ಮತ್ತು ಪಟ್ಟಣ ಪಂಚಾಯಿತಿಗಳಲ್ಲಿ ಈ ಕೆಳಗೆ ನಮೂದಿಸಿದ ರೀತಿಯಲ್ಲಿ ಚುನಾಯಿತ ಸ್ಥಾನಗಳಲ್ಲಿ ಮೀಸಲಾತಿ ಕಲ್ಪಿಸಲಾಗಿದೆ.

೧. ಪರಿಶಿಷ್ಟ ಜಾತಿಗಳಿಗಾಗಿ ಮತ್ತು ಪರಿಶಿಷ್ಟ ಪಂಗಡಗಳಿಗಾಗಿ ಸ್ಥಾನಗಳನ್ನು ಮೀಸಲಿಡತಕ್ಕದ್ದು.

೨. ಪೌರಪ್ರದೇಶದಲ್ಲಿರುವ ಒಟ್ಟು ಜನಸಂಖ್ಯೆ ಪರಿಶಿಷ್ಟ ಜಾತಿಗಳ ಅಥವಾ ಪರಿಶಿಷ್ಟ ಪಂಗಡಗಳ ಜನಸಂಖ್ಯೆಯು ಯಾವ ಅನುಪಾತದಲ್ಲಿದೆಯೋ ಹಾಗೆ ಮೀಸಲಿಡಲಾದ ಸ್ಥಾನಗಳ ಸಂಖ್ಯೆಯು ಆಯಾ ನಗರಸಭೆ(ಎಂದರೆ ಮಹಾನಗರ, ಪುರಸಭೆ, ಮತ್ತು ಪಟ್ಟಣ ಪಂಚಾಯಿತಿ)ಯಲ್ಲಿನ ಸ್ಥಾನಗಳ ಒಟ್ಟು ಸಂಖ್ಯೆಯಲ್ಲಿ ಸರಿಸುಮಾರು ಅದೇ ಅನುಪಾತದಲ್ಲಿರತಕ್ಕದ್ದು.

೩. ಸ್ಥಾನಗಳ ಒಟ್ಟು ಸಂಖ್ಯೆಯಲ್ಲಿ ಸರಿಸುಮಾರು ಮೂರನೇ ಒಂದರಷ್ಟು ಸಂಖ್ಯೆಯು ಸ್ಥಾನಗಳನ್ನು ಹಿಂದುಳಿದ ವರ್ಗಗಳ ವ್ಯಕ್ತಿಗಳಿಗಾಗಿ ಮೀಸಲಿರಿಸತಕ್ಕದ್ದು.

೪. ಹಿಂದುಳಿದ ವರ್ಗಗಳಿಗೆ ಮೀಸರಿಸಿದ ಸ್ಥಾನಗಳ ಪೈಕಿ ಶೇಕಡ ೮೦ರಷ್ಟು ಸ್ಥಾನಗಳನ್ನು 'ಎ'

ಪ್ರವರ್ಗಕ್ಕೆ ಸೇರಿದ ವ್ಯಕ್ತಿಗಳಿಗೆ ಮತ್ತು ಉಳಿದ ಶೇಕಡ ೨೦ರಷ್ಟು ಸ್ಥಾನಗಳನ್ನು 'ಬಿ' ಪ್ರವರ್ಗಕ್ಕೆ ಸೇರಿದ ವ್ಯಕ್ತಿಗಳಿಗೆ ಮೀಸಲಿರಸಬೇಕು.

೫. ಆದರೆ 'ಎ' ಪ್ರವರ್ಗಕ್ಕೆ ಸೇರಿದ ವ್ಯಕ್ತಿಗಳು ಲಭ್ಯವಿಲ್ಲದಿದ್ದರೆ ಆ ಪ್ರವರ್ಗಕ್ಕೆ ಸೇರಿದ ಸ್ಥಾನಗಳನ್ನು 'ಬಿ' ಪ್ರವರ್ಗಕ್ಕೆ ಸೇರಿದ ವ್ಯಕ್ತಿಗಳಿಂದ ಭರ್ತಿ ಮಾಡಬೇಕು.

೬. ಹಾಗೆಯೇ 'ಬಿ' ಪ್ರವರ್ಗಕ್ಕೆ ಸೇರಿದ ವ್ಯಕ್ತಿಗಳು ಲಭ್ಯವಿಲ್ಲದಿರುವಾಗ 'ಎ' ಪ್ರವರ್ಗದ ವ್ಯಕ್ತಿಗಳಿಂದ ಭರ್ತಿ ಮಾಡಬೇಕು.

೭. ಪರಿಶಿಷ್ಟ ಜಾತಿಗಳ, ಪರಿಶಿಷ್ಟ ಪಂಗಡಗಳ, ಹಿಂದುಳಿದ ವರ್ಗಗಳ ವ್ಯಕ್ತಿಗಳ ಪ್ರತಿಯೊಂದು ಪ್ರವರ್ಗಕ್ಕೂ ಮೀಸಲಿಟ್ಟ ಸ್ಥಾನಗಳಲ್ಲಿ ಮತ್ತು ಮೀಸಲಿಟ್ಟಿರದ ಸ್ಥಾನಗಳಲ್ಲಿ ೧/೩ರಷ್ಟಕ್ಕೆ ಕಡಿಮೆ ಇಲ್ಲದಷ್ಟು ಸ್ಥಾನಗಳನ್ನು ಮಹಿಳೆಯರಿಗೆ ಮೀಸಲಿರಿಸಬೇಕು.

೮. ಮೀಸಲಿರಿಸಿಲ್ಲದ ಯಾವುದೇ ಸ್ಥಾನಗಳಿಗೆ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ ಹಿಂದುಳಿದ ವರ್ಗ ಅಥವಾ ಮಹಿಳಾ ಚುನಾವಣೆಗೆ ನಿಲ್ಲಲು ಅವಕಾಶವಿರುತ್ತದೆ.

೯. ಮೀಸಲಿರಿಸಿದ ಸ್ಥಾನಗಳನ್ನು ಬೇರೆ ಬೇರೆ ಚುನಾವಣಾ ಕ್ಷೇತ್ರ ಎಂದರೆ ವಾರ್ಡುಗಳಿಗೆ ಸರದಿ ಪ್ರಕಾರ ಹಂಚಿಕೆ ಮಾಡತಕ್ಕದ್ದು.[೨೫]

**೨೯. ಸಂವಿಧಾನದ ೭೪ನೇ ತಿದ್ದುಪಡಿಯಲ್ಲಿ ೧೮ ಕಾರ್ಯಗಳು ಪಟ್ಟಿ ಮಾಡಲಾಗಿದೆ.**

೧. ನಗರ ಯೋಜನೆ

೨. ಭೂಮಿ ಉಪಯೋಗದ ಮೇಲೆ ನಿರ್ಬಂಧ

೩. ಆರ್ಥಿಕ ಯೋಜನೆ ಮತ್ತು ಸಾಮಾಜಿಕ ಅಭಿವೃದ್ಧಿ

೪. ರಸ್ತೆಗಳು ಮತ್ತು ಸೇತುವೆಗಳು

೫. ಕುಡಿಯುವ ನೀರು

೬. ಸಾರ್ವಜನಿಕ ಆರೋಗ್ಯ, ನೈರ್ಮಲ್ಯ ಮತ್ತು ಘನ ತ್ಯಾಜ್ಯ ವಸ್ತುಗಳ ನಿರ್ವಹಣೆ

೭. ನಗರದಲ್ಲಿ ಗಿಡಗಳನ್ನು ಬೆಳೆಸುವುದು/ ಪರಿಸರ

೮. ಹಿಂದುಳಿದ ವರ್ಗದ ಜನರ ಹಿತ ರಕ್ಷಣೆಯನ್ನು ಮಾಡುವುದು

೯. ಕೊಳಗೇರಿ ಅಭಿವೃದ್ಧಿ

೧೦. ನಗರ ಬಡತನ ನಿರ್ಮೂಲನೆ

೧೧. ಪಾರ್ಕ್, ಗಾರ್ಡನ್ ಮತ್ತು ಆಟದ ಮೈದಾನಗಳ ನಿರ್ವಹಣೆ

೧೨. ಶವಸಂಸ್ಕಾರಕ್ಕೆ ವ್ಯವಸ್ಥೆ ಕಲ್ಪಿಸುವುದು

೧೩. ಕ್ಯಾಟಲ್ ಪೌಂಡ್ಸ್

೧೪. ಜನನ ಮತ್ತು ಮರಣ ದಾಖಲಾತಿ

೧೫. ಬೀದಿ ದೀಪ, ಪಾರ್ಕಿಂಗ್ ಮತ್ತು ಬಸ್ ತಂಗುದಾಣ

೧೬. ಮಾಂಸ ಮಾರಾಟಕ್ಕೆ ವ್ಯವಸ್ಥೆ

೧೭. ರಾಜ್ಯ ಸರ್ಕಾರಗಳು ಸಂಗ್ರಹಿಸುವ ತೆರಿಗೆ, ದರಗಳು, ಟೋಲ್ ಫೀಗಳಿಂದ ಹಣಕಾಸಿನ ಷೇರನ್ನು ಪಡೆಯುವುದು.

೧೮.	ನಗರ ಸ್ಥಳೀಯ ಸರ್ಕಾರಗಳಿಗೆ ವಹಿಸಿರುವ ತೆರಿಗೆ, ದರಗಳು, ಟೋಲ್ ಫೀಗಳನ್ನು ನಿರ್ಧರಿಸುವುದು ಮತ್ತು ರಾಜ್ಯ ಸರ್ಕಾರಗಳ ಕನ್ಸಾಲಿಡೇಟ್ ಇತರೆ ನಿಧಿಗಳಿಂದ ಅನುದಾನಗಳನ್ನು ಪಡೆಯುವುದು.

ಮುಖ್ಯವಾದದ್ದು ಏನೆಂದರೆ ಕರ್ನಾಟಕ ಮುನ್ಸಿಪಲ್ ಕಾರ್ಪೋರೇಷನ್ (ಕೆ.ಎಂ.ಸಿ. ಅಮೆಂಡ್‌ಮೆಂಟ್) ಕಾಯಿದೆ ೭೪ನೇ ತಿದ್ದುಪಡಿ ಜತೆ ಹೊಂದಿಕೆ ತರಲು ಈ ಕೆಲವು ಹೊಸ ಕಾರ್ಯಗಳನ್ನು ಸೇರ್ಪಡೆ ಮಾಡಿದೆ. ಅವು ಕೊಳಗೇರಿಗಳ ಅಭಿವೃದ್ಧಿ ಮತ್ತು ಸುಧಾರಣೆ, ನಗರ ಅರಣ್ಯಗಳು, ಪರಿಸರ ರಕ್ಷಣೆ ಮತ್ತು ಜೈವಿಕ ಅಂಶಗಳ ಉತ್ತೇಜನ, ನಗರ ಬಡತನದ ನಿವಾರಣೆ ಮತ್ತು ಸಾಂಸ್ಕೃತಿಕ, ಶೈಕ್ಷಣಿಕ ಮತ್ತು ರಸಾಭಿಜ್ಞತೆಯ ಅಂಶಗಳ ಪ್ರೋತ್ಸಾಹ, ಇವು ನಗರಪಾಲಿಕೆಯ ಸ್ವಂತ ವಿವೇಚನೆಗೆ ಬಿಟ್ಟಿದ್ದು. ಮಾಡಲೇಬೇಕಾದ ನಿಬಂಧನೆ ಇಲ್ಲ. ಇದೂ ಅಲ್ಲದೇ, ೧೨ನೇ ಅನುಸೂಚಿ ಪಟ್ಟಿ(Schedule) ಯಲ್ಲಿರುವಂತೆ ಆರ್ಥಿಕ ಮತ್ತು ಸಾಮಾಜಿಕ ಅಭಿವೃದ್ಧಿಗೋಸ್ಕರ ಯೋಜನೆ ಮತ್ತು ಸಮಾಜದ ದುರ್ಬಲ ವರ್ಗದವರು, ಅಂಗವಿಕಲರು, ಮತ್ತು ಬುದ್ಧಿಮಾಂದ್ಯರನ್ನು ಒಳಗೊಂಡಂತೆ, ಇವರೆಲ್ಲರ ಹಿತಾಸಕ್ತಿ ರಕ್ಷಣೆ ನಗರಪಾಲಿಕೆಯ ಕಾರ್ಯವ್ಯಾಪ್ತಿಯ ಪಟ್ಟಿಯಲ್ಲಿ ಅವುಗಳನ್ನು ಸೇರಿಸಿಯೇ ಇಲ್ಲ[೨೬] ಎಂಬ ಅಂಶವನ್ನು ಕಾಣಬಹುದಾಗಿದೆ.

**೨.೧೦. ಸಂವಿಧಾನದ ೭೪ನೇ ತಿದ್ದುಪಡಿ ಆನಂತರ ಸನ್ನಿವೇಶ**

ನಗರ ಸ್ಥಳೀಯ ಸಂಸ್ಥೆಗಳು ತನ್ನ ಪುನರುಜ್ಜೀವಿತ ರೂಪದಲ್ಲಿ ಪ್ರಜಾಸತ್ತಾತ್ಮಕ ವಿಕೇಂದ್ರೀಕರಣದ ಗುರಿಯನ್ನು ಸಾಕಾರಗೊಳಿಸಲು ಹಾಗೂ ಸಮಾಜೋ-ಆರ್ಥಿಕ ಅಭಿವೃದ್ಧಿಯನ್ನು ಚುರುಕುಗೊಳಿಸಲು ಮತ್ತು ಧರ್ಮಸಮ್ಮತ ಹಕ್ಕು ಮತ್ತು ಸಾಮಾಜಿಕ ನ್ಯಾಯವನ್ನು ಕೊಡಲು ಪ್ರಯತ್ನಿಸಿತು. ೭೪ನೇ ತಿದ್ದುಪಡಿ ಕಾಯಿದೆ, ೧೯೯೨ ಮತ್ತು ಆನಂತರದ ರಾಜ್ಯ ಶಾಸನಗಳು, ಸ್ವಯಾಮಾಡಳಿತದ ಪರಿಣಾಮಕಾರಿ ಸಂಸ್ಥೆಗಳಾಗಿ ಕಾರ್ಯನಿರ್ವಹಿಸಲು ನಗರ ಸ್ಥಳೀಯ ಸಂಸ್ಥೆಗಳಿಗೆ ಸಾಮರ್ಥ್ಯ ನೀಡಲು ಅಗತ್ಯವಾದಷ್ಟು ಅಧಿಕಾರ ಮತ್ತು ವಿಧಾಯಕ ಶಕ್ತಿಯನ್ನು ನೀಡುತ್ತವೆ ಎಂದು ನಿರೀಕ್ಷಿಸಲಾಗಿತ್ತು. ಪ್ರಾರಂಭದಲ್ಲಿ ರಾಜ್ಯಗಳಿಂದ ಧನಾತ್ಮಕ ಪ್ರತಿಸ್ಪಂದನವಿತ್ತು. ಬಹುತೇಕ ಎಲ್ಲಾ ರಾಜ್ಯಗಳೂ ೭೪ನೇ ತಿದ್ದುಪಡಿ ಉಪಬಂಧುಗಳಿಗೆ ಅನುಸಾರವಾಗಿ ತಮ್ಮ ತಮ್ಮ ರಾಜ್ಯ ಶಾಸನಗಳನ್ನು ಅನುಮೊದಿಸಿದವು ಮತ್ತು ಸ್ಥಳೀಯ ಸಂಸ್ಥೆಗಳ ಚುನಾವಣೆಗಳನ್ನು ನಡೆಸಿದವು. ತತ್ಪರಿಣಾಮವಾಗಿ ರಾಜ್ಯದಲ್ಲಿ ಒಟ್ಟು ೨೭೦ ನಗರಗಳಿಗೆ ೭ ಮಹಾನಗರಪಾಲಿಕೆಗಳು, ೪೪ ನಗರಸಭೆಗಳು, ೯೭ ಪುರಸಭೆಗಳು, ೬೮ ಪಟ್ಟಣ ಪಂಚಾಯಿತಿಗಳು ಮತ್ತು ೫ ನೋಟಿಫೈಡ್ ಕಮಿಟಿಗಳು ರಚನೆಯಾದವು. ರಾಷ್ಟ್ರದಾದ್ಯಂತ ಈ ವಿವಿಧ ಹಂತಗಳಲ್ಲಿ ಸುಮಾರು ಚುನಾಯಿತ ಸದಸ್ಯರಾದರು. ಸಂರಚನೆ, ಸಂಯೋಜನೆ, ಅಧಿಕಾರ ಮತ್ತು ಕಾರ್ಯಭಾರಗಳಲ್ಲಿ ವಿಶೇಷವಾಗಿ ಅತ್ಯುನ್ನತ ಮಟ್ಟದ ಏಕರೂಪತೆಯನ್ನು ಪ್ರಥಮ ಬಾರಿಗೆ ಸ್ಥಳೀಯ ಸಂಸ್ಥೆಗಳಿಗೆ ನೀಡಲಾಗಿರುವುದನ್ನು ನೋಡಬಹುದಾಗಿತ್ತು. ಕಾರ್ಯಭಾರ ಮತ್ತು ವಿಧಾಯಕ ಶಕ್ತಿಯನ್ನು ವರ್ಗಾಯಿಸುವುದಕ್ಕೆ ಸಂಬಂಧಿಸಿದಂತೆ ಅಕ್ಷರಶಃ ಮತ್ತು ಭಾವದ ದೃಷ್ಟಿಯಿಂದ ಅನುಸರಿಸಲಾಗಿಲ್ಲ ಎಂಬ ವಾಸ್ತವಾಂಶದ ಬೆಳಕಿನಲ್ಲಿ, ತಿದ್ದುಪಡಿಯ ಆನಂತರದ ಸನ್ನಿವೇಶವನ್ನು ಸರಿಯಾಗಿ ಅರ್ಥಮಾಡಿಕೊಳ್ಳಲು ೭೪ನೇ ತಿದ್ದುಪಡಿಯನ್ನೇ ವಿಶ್ಲೇಷಣೆ ಮಾಡಬೇಕಾದ ಅಗತ್ಯವಿದೆ.

**ಎಪ್ಪತ್ತನಾಲ್ಕನೆಯ ತಿದ್ದುಪಡಿಯ-ಒಂದು ವಿಶ್ಲೇಷಣೆ**

೭೪ನೇ ತಿದ್ದುಪಡಿಯ ವಿಶ್ಲೇಷಣೆಯು ವಿಶದಪಡಿಸುವುದೇನೆಂದರೆ, ಪರಿಣಾಮಕಾರಿಯಾದ ಸ್ವಯಾಮಾಡಳಿತ ಆಡಳಿತ ಸಂಸ್ಥೆಗಳಾಗಿ ಕಾರ್ಯನಿರ್ವಹಿಸುವುದಕ್ಕೆ ಅನುವುವಾಗುವಂತೆ ನಗರ ಸ್ಥಳೀಯ ಸಂಸ್ಥೆಗಳಿಗೆ ವಿಧಾಯಕ ಶಕ್ತಿ ಮತ್ತು ಅಧಿಕಾರಗಳನ್ನು ವಹಿಸಿಕೊಡಬೇಕು. ಇದು ಸೂಚಿಸುವುದೇನೆಂದರೆ ಕಡ್ಡಾಯವಾದ ಚುನಾವಣೆಗಳು ಮೂಲಕ ಅವು ಸ್ವಯಾಮಾಡಳಿತದ ಪರಿಣಾಮಾಕಾರಿಯಾದ ಸಂಸ್ಥೆಗಳಾಗಲು ಅಗತ್ಯವಾದ ನಿಗದಿತ ಮೌಲ್ಯಗಳು, ಆದ್ಯತೆಗಳು ಮತ್ತು ನೀತಿಗಳೊಡನೆ ಸ್ವರೂಪದಲ್ಲಿ ಪ್ರಜಾಸತ್ತಾತ್ಮಕವಾಗಬೇಕು. ಈ ವಿಶ್ಲೇಷಣೆಯು ಮತ್ತೂ ವಿಶದಪಡಿಸುವುದೇನೆಂದರೆ ನಗರ ಸ್ಥಳೀಯ ಸಂಸ್ಥೆಗಳು ಕ್ಷೇಮಾಭಿವೃದ್ಧಿ ಸರ್ಕಾರವಾಗಿ ಕೆಲಸ ಮಾಡಬೇಕು. ಅವು ಅಭಿವೃದ್ಧಿ ಕಾರ್ಯಚಟುವಟಿಕೆಗಳನ್ನು ಆರಂಭಿಸಬೇಕು, ಯೋಜನೆ ಮಾಡಬೇಕು ಮತ್ತು ಅನುಷ್ಠಾನಗೊಳಿಸಬೇಕು ಹಾಗೂ ಸಾಮಾಜಿಕ ನ್ಯಾಯವನ್ನು ತರಬೇಕು ಎಂದು ಅದು ಸೂಚಿಸುತ್ತದೆ. ಈ ಶಾಸನಗಳ ಪೀಠಿಕಾ ಭಾಗಗಳು ಘೋಷಿಸುವುದೇನೆಂದರೆ, ನಗರ ಸ್ಥಳೀಯ ಸಂಸ್ಥೆಗಳನ್ನು ಸೃಷ್ಟಿಸುವುದರ ಹಿಂದಿನ ಉದ್ದೇಶವು ನಗರ ಆಡಳಿತವನ್ನು ಸುಧಾರಿಸುವುದು ಮತ್ತು ಅಭಿವೃದ್ಧಿ ಕಾರ್ಯಕ್ರಮಗಳಲ್ಲಿ ಜನರು ಭಾಗವಹಿಸುವುದನ್ನು ಖಾತ್ರಿ ಮಾಡಿಕೊಳ್ಳುವುದು. ಉದ್ದೇಶ ನಿರೂಪಣೆಯಲ್ಲಿ ಸ್ವಯಾಮಾಡಳಿತದ ಸಂಸ್ಥೆಗಳನ್ನು ಸೃಷ್ಟಿಸಿರುವುದಾಗಿ ಹೇಳಿಕೊಂಡಿರುವ ರಾಜ್ಯಗಳ ಕಾಯಿದೆಗಳು ಅಂತಹ ಮಂಡಳಿಗಳ ಮೂಲಕ ಆಡಳಿತಾತ್ಮಕ ಮತ್ತು ಆರ್ಥಿಕ ಅಧಿಕಾರಗಳನ್ನು ವಿಕೇಂದ್ರೀಕರಣಗೊಳಿಸದ ಸ್ಥಳೀಯ ಸಂಸ್ಥೆಗಳನ್ನು ಸೃಷ್ಟಿಸುವಲ್ಲಿಯೇ ಪರ್ಯವಸಾನಗೊಳ್ಳುತ್ತವೆ.

ರಾಜ್ಯದ ಕಾಯಿದೆಗಳಲ್ಲಿ ಅತ್ಯಂತ ಲೋಪವೆಂದರೆ ಸ್ಥಳೀಯ ಸಂಸ್ಥೆಗಳಿಗೆ ಕಾರ್ಯಭಾರವನ್ನು ವರ್ಗಾಯಿಸುವುದಕ್ಕೆ ಸಂಬಂಧಪಟ್ಟದ್ದು. ಬಹುಪಾಲು ರಾಜ್ಯ ಕಾಯಿದೆಗಳು ೧೨ನೇ ಪರಿಶಿಷ್ಟವನ್ನು ನಕಲೂ ಮಾಡಿದ್ದರೂ(೧೮ ಅಭಿವೃದ್ಧಿಯ ಕಾರ್ಯ ಚಟುವಟಿಕೆಗಳು) ಕೆಲವು ಮಾತ್ರ ನಗರ ಸ್ಥಳೀಯ ಸಂಸ್ಥೆಗಳ ವಿಶಿಷ್ಟ ವ್ಯಾಪ್ತಿಯೆಂದು ಪರಿಶಿಷ್ಟದ ಯಾವುದೇ ಕಾರ್ಯಭಾರಗಳನ್ನು ಗುರುತಿಸಿವೆ. ಪರಿಣಾಮಾವಾಗಿ ಆಡಳಿತಾತ್ಮಕ ಹಾಗೂ ಆರ್ಥಿಕ ಶಕ್ತಿಗಳ ಯಾವುದೇ ಗಮನಾರ್ಹ ವರ್ಗಾವಣೆಯಾಗಿಲ್ಲ. ಮುಂದುವರೆದು ಸ್ಥಳೀಯ ಸಂಸ್ಥೆಗಳ ಪಾತ್ರವನ್ನು ವಿವಿಧ ಅಭಿವೃದ್ಧಿಯ ಕಾರ್ಯಕ್ರಮಗಳು ಅನುಷ್ಠಾನಕ್ಕೆ ತರಲು ರಾಜ್ಯ ಸರ್ಕಾರದ ಸಂಸ್ಥೆಗಳ ಮಟ್ಟಕ್ಕೆ ಇಳಿಸಲಾಗಿದೆ. ಸಂವಿಧಾನದ(೭೪ನೇ ತಿದ್ದುಪಡಿ)ಕಾಯಿದೆ, ೧೯೯೨ರ ಆಶ್ರಯದಲ್ಲಿ ರೂಪಿಸಿಕೊಂಡಿದ್ದ ಸ್ವಯಾಮಾಡಳಿತದ ಸಂಸ್ಥೆಗಳಾಗಿ ನಗರ ಸ್ಥಳೀಯ ಸಂಸ್ಥೆಗಳು ಹೊರಹೊಮ್ಮಲಿಲ್ಲ ಎಂದು ಯಾರೂ ಬೇಕಾದರೂ ಸರಿಯಾಗಿ ಹೇಳಬಹುದು. ವಿಕೇಂದ್ರೀಕೃತ ಆಡಳಿತದ ಗುರಿಯನ್ನು ಮತ್ತು ಜನರೇ ನಿರ್ಣಯ ತೆಗೆದುಕೊಳ್ಳುವ ಗುರಿಯನ್ನು ಸಕಾರಗೊಳಿಸುವುದನ್ನು ಸ್ಥಳೀಯ ಸಂಸ್ಥೆಗಳು, ವಿಶೇಷವಾಗಿ ನಗರ ಪ್ರದೇಶದಲ್ಲಿ ಅರಸುತ್ತಿತ್ತು. ಪ್ರಜಾಸತ್ತಾತ್ಮಕ ಮಾದರಿಯಲ್ಲಿ ಅದು ವಿಕೇಂದ್ರೀಕರಣ ರೂಪ ತಾಳುತ್ತದೆ. ಇದು ರಾಜಕಾರಣ ಆಡಳಿತದ ವ್ಯವಸ್ಥೆ. ಆದರೆ ಭಾರತೀಯ ಮಾದರಿಯು, ಪ್ರೆಂಚ್‌ನಂತೆ ಕೇಂದ್ರೀಕರಣ ಹಾಗೂ ವಿಕೇಂದ್ರೀಕರಣದ ಹಲವು ಮುಖಗಳನ್ನು ಒಳಗೊಳ್ಳುತ್ತದೆ. ಬ್ರಿಟಿಷ್ ಮತ್ತು ಅಮೇರಿಕನ್ ಮಾದರಿಯ ಸ್ಥಳೀಯ ಆಡಳಿತಗಳಾದರೋ ಆಡಳಿತದಲ್ಲಿ ಉನ್ನತ ಶ್ರೇಣಿಯ ವಿಕೇಂದ್ರೀರಣವನ್ನು ಒದಗಿಸುತ್ತದೆ.[೨] ಇದರಿಂದ ಸ್ಥಳೀಯ ಸಂಸ್ಥೆಗಳ ಮೂಲಕ ಸಾಕಾರಗೊಳಿಸಬೇಕಾದ ಪ್ರಜಾಸತ್ತಾತ್ಮಕ ವಿಕೇಂದ್ರೀಕರಣದ ಪರಿಕಲ್ಪನೆಯನ್ನು ಕುರಿತು ನಾವು ಹೊಸ ನೋಟವನ್ನು ಹರಿಸಲು ಸಹಾಯವಾಗುತ್ತದೆ.

ಈ ಭಾಗದ ಅಭಿವೃದ್ಧಿಶೀಲ ರಾಷ್ಟ್ರಗಳಲ್ಲಿ ವಿಕೇಂದ್ರೀಕರಣದ ಅನುಭವಗಳು ತೋರಿಸಿ ಕೊಟ್ಟಿದ್ದೇನೆಂದರೆ ಪೂರ್ವ ನಿರ್ಧಾರಿತವಾದ ನೀತಿಗಳು ಮತ್ತು ಕಾರ್ಯಕ್ರಮಗಳನ್ನು ದೈನಂದಿನ ಸಂಗತಿಗಳೆಂದು ತೆಗೆದುಕೊಳ್ಳುವಂತಿಲ್ಲ. ವೈವಿಧ್ಯಪೂರ್ಣವಾದ ರಾಜಕೀಯ, ಸಾಮಾಜಿಕ, ಆರ್ಥಿಕ, ನಡವಳಿಕೆಯ ಮತ್ತು ಸಾಂಸ್ಥಿಕ ಅಂಶಗಳು ನೀತಿಗಳನ್ನು ಎಷ್ಟರ ಮಟ್ಟಿಗೆ ಅನುಷ್ಠಾನಕ್ಕೆ ತರಬಹುದು ಎನ್ನುವುದರ ಮೇಲೆ ಪ್ರಭಾವ ಬೀರುತ್ತದೆ.[೨೮] ಹಲವು ಸಭಾಸ್ಥಾನಗಳಲ್ಲಿ ನಡೆದ ಭಾರಿ ಸಂವಾದಗಳು ಮತ್ತು ಚರ್ಚೆಗಳು ಆಧರಿಸಿ ಹೇಳುವುದಾದರೆ, ನಗರ ಸ್ಥಳೀಯ ಸಂಸ್ಥೆಗಳ ಮೂಲಕ ಪ್ರಜಾಸತ್ತಾತ್ಮಕ ವಿಕೇಂದ್ರೀಕರಣದ ಪರಿಕಲ್ಪನೆಯನ್ನು ಸಾಕಾರಗೊಳಿಸಲು ಕೆಳಗಿನ ಮೂಲಭೂತ ಅಂಶಗಳು ಬೇಕಾಗುತ್ತವೆ.

೧. ಸ್ಥಳೀಯ ಸಂಸ್ಥೆಗಳ ಆರ್ಥಿಕ, ಆಡಳಿತಾತ್ಮಕ ಮತ್ತು ತಾಂತ್ರಿಕ ಬೆಂಬಲ ಮತ್ತು ಆರ್ಥಿಕ ನೆರವು
೨. ಪ್ರಬಲವಾದ ಸ್ಥಳೀಯ ಸ್ವಯಾಮಾಡಳಿತ ಸಂಸ್ಥೆಗಳ ಜೊತೆಗೆ ಜನರಿಂದ ಚುನಾಯಿತರಾದ ಪ್ರತಿನಿಧಿಗಳಲ್ಲಿ ವಿಧಾಯಕ ಶಕ್ತಿಯು ಇರುತ್ತದೆ
೩. ಪರಿಣಾಮಕಾರಿಯಾದ ಮೇಲುಸ್ತುವಾರಿ ಮತ್ತು ಮೌಲ್ಯಮಾಪನ ವ್ಯವಸ್ಥೆಗಳು. ಮೇಲಿನ ವಿಶ್ಲೇಷಣೆಯನ್ನು ಆಧರಿಸಿ ೭೪ನೇ ಸಂವಿಧಾನ ತಿದ್ದುಪಡಿಯ ಸನ್ನಿವೇಶವು ಒಂದು ಮಿಶ್ರ ಚಿತ್ರವನ್ನು ತೋರಿಸುತ್ತದೆ. ಅದರಲ್ಲಿ ಒಂದು ಕಡೆ ಅಕ್ಷರಶಃ ಮತ್ತು ಭಾವದ ದೃಷ್ಟಿಯಿಂದ ಅಗತ್ಯವಾದ ಅಧಿಕಾರಗಳು ಮತ್ತು ವಿಧಾಯಕ ಶಕ್ತಿಯ ವರ್ಗಾವಣೆ ನೆರವೇರಿಲ್ಲ, ಇನ್ನೊಂದು ಕಡೆ ರಾಷ್ಟ್ರಾದ್ಯಂತ ಸಾವಿರಾರು ಚುನಾಯಿತ ಪ್ರತಿನಿಧಿಗಳು ನಗರ ಸ್ಥಳೀಯ ಸಂಸ್ಥೆಗಳ ಬಹು ಅಂತಸ್ತಿನ ವ್ಯವಸ್ಥೆಯಲ್ಲಿ ತಮ್ಮ ತಮ್ಮ ಸ್ಥಾನಗಳಲ್ಲಿ ಕುಳಿತಿದ್ದಾರೆ. ಕೆಲವು ಸ್ಥಳೀಯ ಸಂಸ್ಥೆಗಳು ಯಶಸ್ವಿಯಾಗಿ ಕೆಲಸ ಮಾಡುವುದನ್ನು ನಾವು ನೋಡುತ್ತೇವೆ. ಅವುಗಳ ನೆರೆಯಲ್ಲಿಯೇ ಇತರ ಕೆಲವು ಸ್ಥಳೀಯ ಸಂಸ್ಥೆಗಳಿಗೆ ಕೆಲಸ ಮಾಡಲು ಅವಕಾಶ ದೊರೆತ್ತಿಲ್ಲದಿರುವುದನ್ನೂ ನೋಡುತ್ತೇವೆ.[೨೯]

ಒಟ್ಟಾರೆಯಾಗಿ ಈ ಸಂಸ್ಥೆಗಳು ಸ್ಥಳೀಯ ಜನಸಮುದಾಯಗಳ ಪ್ರತಿನಿಧಿ ಸಂಸ್ಥೆಗಳಂತಿವೆ. ಸ್ಥಳೀಯ ಜನತೆಗೆ ತಳಮಟ್ಟದಲ್ಲಿ ಪ್ರಜಾಪ್ರಭುತ್ವ ಪ್ರಕ್ರಿಯೆಯ ವಿಸ್ತರಣೆಯನ್ನು ಒದಗಿಸುತ್ತವೆ. ಇಂದು ಸ್ಥಳೀಯ ಸಂಸ್ಥೆಗಳು ಸ್ಥಳೀಯ ಮಟ್ಟದ ಕಾರ್ಯಾಂಗದಂತೆ ಕಾರ್ಯ ನಿರ್ವಹಿಸುವುದರಿಂದ ಸ್ಥಳೀಯ ಜನರ ಹಿತಾಸಕ್ತಿ, ಅನುಕೂಲ ಮತ್ತು ಆದ್ಯತೆಗಳನ್ನು ಪೂರೈಸಬೇಕೆಂದು ಧ್ಯೇಯೋದ್ದೇಶಗಳನ್ನು ಇಟ್ಟುಕೊಂಡು ರಚನೆಗೊಂಡಿವೆ. ಆಧುನಿಕ ಸ್ಥಳೀಯ ಸಂಸ್ಥೆಗಳು ಕೆಳವರ್ಗಗಳ ಉದ್ಧಾರಕ್ಕಾಗಿಯೇ ರಚನೆಗೊಂಡಿವೆ ಎಂಬ ಸೈದ್ಧಾಂತಿಕ ಗ್ರಹಿಕೆ ಇಲ್ಲಿದೆ. ಪ್ರಸ್ತುತ ಅಧ್ಯಯನದಲ್ಲಿ ಈ ಉದ್ದೇಶಗಳು ತಳಮಟ್ಟದಲ್ಲಿ ಎಷ್ಟರಮಟ್ಟಿಗೆ ಕಾರ್ಯರೂಪಕ್ಕೆ ಬಂದಿವೆ, ತಳಸಮುದಾಯಗಳ ಆಸಕ್ತಿ ಪಂಚಾಯಿತಿಯಿಂದ ರಕ್ಷಿತವಾಗಿದೆಯೇ, ಮಹಿಳೆಯರ ಸಬಲೀಕರಣ ಆಗಿದೆಯೇ ಒಂದು ವೇಳೆ ಉದ್ದೇಶಿತ ರೂಪದಲ್ಲಿ ಸ್ಥಳೀಯ ಸಂಸ್ಥೆಗಳಿಗೆ ಕಾರ್ಯನಿರ್ವಹಿಸಲು ಸಾಧ್ಯವಾಗದಿದ್ದರೆ ಯಾಕೆ ಸಾಧ್ಯವಾಗಿಲ್ಲ ಎಂಬಾಯಿತ್ಯಾದಿ ಪ್ರಶ್ನೆಗಳಿಗೆ ಉತ್ತರಿಸಲು ಈ ಅಧ್ಯಯನ ಪ್ರಯತ್ನಿಸುತ್ತದೆ. ಇದು ಒಂದು ರೀತಿಯಲ್ಲಿ ಸ್ಥಳೀಯ ಸಂಸ್ಥೆಗಳ ಕಾರ್ಯವಿಧಾನವನ್ನು ಮಾಪನ ಮಾಡುವ ಕೆಲಸವೂ ಆಗಿದೆ. ಬಳ್ಳಾರಿ ಜಿಲ್ಲೆಯ ಎರಡು ತಾಲೂಕುಗಳಾದ ಹೊಸಪೇಟೆ ನಗರಸಭೆ ಮತ್ತು ಕೂಡ್ಲಿಗಿಯ ಪಟ್ಟಣ ಪಂಚಾಯಿತಿ ಅಧ್ಯಯನದ ಮೂಲಕ ಮೇಲಿನ ಪ್ರಶ್ನೆಗಳಿಗೆ ಉತ್ತರಿಸಲು ಪ್ರಯತ್ನಿಸಲಾಗಿದೆ.

**ಕೊನೆ ಟಿಪ್ಪಣಿಗಳು**

೧. ಗೌರ್ನಮೆಂಟ್ ಆಫ್ ಇಂಡಿಯಾ, ದಿ ರಿಪೋರ್ಟ್ ಆಫ್ ದಿ ಟೀಮ್ ಫಾರ್ ದ ಸ್ಟಡಿ ಆಫ್ ಕಮ್ಯೂನಿಟಿ ಪ್ರೋಜೆಕ್ಟ್ ಆ್ಯಂಡ್ ನ್ಯಾಶನಲ್ ಎಕ್ಸಟೆನ್‌ಶನ್ ಸರ್ವೀಶ್, ನ್ಯೂಡೆಲ್ಲಿ, ಕಮಿಟಿ ಆನ್ ಪ್ಲ್ಯಾನ್ ಪೊಜೆಕ್ಟ್ ವ್ಯಾಲೂಂ – ೩೫, ೧೯೫೯, ಪು.೩

೨. ಕರ್ನಾಟಕ ಸ್ಟೇಟ್ ಗ್ಯಾಜಿಟಿಯರ್ ಪಾರ್ಟ್–೨, ನಂ–೧೦೦/೩, ಬೆಂಗಳೂರು, ೧೯೮೩, ಪು.೪೭

೩. ಅದೇ ಪುಸ್ತಕ, ಪುಟ– ೪೫–೪೬

೪. ಮುಖಾಜಿ, ಆರ್.ಕೆ., "ಲೋಕಲ್ ಗವರ್ನಮೆಂಟ್ ಇನ್ ಏನ್ಷಿಯಂಟ್ ಇಂಡಿಯಾ" ಹಿಸ್ಟಾರಿಕಲ್ ಸೀರಿಸ್, ಮೋತಿಲಾಲ್ ಬನಾರಸಿದಾಸ್, ನ್ಯೂಡೆಲ್ಲಿ, ೧೯೫೮.

೫. ಗವರ್ನಮೆಂಟ್ ಆಫ್ ಇಂಡಿಯಾ, ಪಂಚಾಯತ್ ರಾಜ್ ಸ್ಟೇಟಸ್ ರಿಪೋರ್ಟ್ ೧೯೯೯, ನ್ಯೂಡೆಲ್ಲಿ, ರಾಜೀವ್‌ಗಾಂಧಿ ಪೌಂಢೇಶನ್, ೧೯೯೯, ಪುಟ ೫೭.

೬. ಗವರ್ನಮೆಂಟ್ ಆಫ್ ಇಂಡಿಯಾ ರೆಸೆಲ್ಯೂಶನ್ ನಂ.೧೭೧೭೪೯.೭೫, ಡೇಟೆಡ್– ೧೮ಮೇ ೧೮೮೭.

೭. ಪ್ರದೀಪ್ ಸಚದೇವ್, ಅರ್ಬನ್ ಲೋಕಲ್ ಗವರ್ನಮೆಂಟ್ ಆ್ಯಂಡ್ ಅಡ್ಮೀನಿಸ್ಟ್ರೇಶನ್ ಇನ್ ಇಂಡಿಯಾ, ಅಲಹಾಬಾದ್ ಕೀತಾಬ್ ಮಹಲ್, ೧೯೯೩, ಪು.೫೭.

೮. ಎಸ್.ಕೆ. ಬೋಗ್ಲೆ, ಲೋಕಲ್ ಗವರ್ನಮೆಂಟ್ ಆ್ಯಂಡ್ ಅಡ್ಮೀನಿಸ್ಟ್ರೆಶನ್ ಇನ್ ಇಂಡಿಯಾ, ಔರಂಗಾಬಾದ್, ಪರಿಮಳ ಪ್ರಕಾಶನ, ೧೯೭೭, ಪು. ೫೭

೯. ಗವರ್ನಮೆಂಟ್ ಆಫ್ ಇಂಡಿಯಾ, ಪಂಚಾಯತ್ ರಾಜ್ ಸ್ಟೇಟಸ್ ರಿಪೋರ್ಟ್ ೧೯೯೯, ನ್ಯೂಡೆಲ್ಲಿ, ರಾಜೀವ್‌ಗಾಂಧಿ ಪೌಂಢೇಶನ್, ೧೯೯೯, ಪುಟ ೫೭.

೧೦. ಅದೇ ಪುಸ್ತಕ, ಪುಟ.೧೩–೨೧.

೧೧. ಸತ್ಯಪಾಲ್ ಪುಲಿಯಾನಿ, "ಕರ್ನಾಟಕ ಪೌರನಿಗಮಗಳ ಅಧಿನಿಯಮ–೧೯೬೪, ಕೆಎಲ್‌ಜೆ ಪ್ರಕಾಶಕರು, ಗವರ್ನಮೆಂಟ್ ಆಫ್ ಇಂಡಿಯಾ, ಬೆಂಗಳೂರು, ೨೦೧೦, ಪುಟ–

೧೨. ಡಿ.ಎಸ್. ಮೇಷರಾಮ್ ಆ್ಯಂಡ್ ಆರ್.ಪಿ. ಬನಸಾಲ್, "ಲೀಗಲ್ ಪ್ರೋವಿಜನ್ ಫಾರ್ ಪಬ್ಲಿಕ್ ಪಾರ್ಟಿಸಿಪೇಶನ್ ಇನ್ ಅರ್ಬನ್ ಪ್ರ್ಯಾನಿಂಗ್ ಪ್ರೋಸೆಸ್ ವಿಥ್ ೭೪ನೇ ಅಮೆಂಡ್‌ಮೆಂಟ್ ಆಕ್ಟ್–೧೯೯೨, ನಗರ ಲೋಕಾ ವ್ಯಾಲ್ಯೂಂ ನಂ–೨೫ ಅಕ್ಟೋಬರ್– ಡಿಸೆಂಬರ್, ೧೯೯೩, ಪು.೧೪–೨೮

೧೩. ಡಬ್ಲೂ ಬಿ. ಮನ್ರೋಜ ಆ್ಯಂಡ್ ಅರಿಸ್ಟೋಮೂರ್ಲೆ, ದ ಗವರ್ನಮೆಂಟ್ ಆಫ್ ಯುರೋಪ್, ೧೯೫೦, ೧೯೫೦ ಪು.೨೭೨

೧೪. ಪ್ರದೀಪ್ ಸಚದೇವ್, ಅರ್ಬನ್ ಲೋಕಲ್ ಗವರ್ನಮೆಂಟ್ ಆ್ಯಂಡ್ ಅಡ್ಮೀನಿಸ್ಟ್ರೇಶನ್ ಇನ್ ಇಂಡಿಯಾ, ಅಲಹಾಬಾದ್ ಕೀತಾಬ್ ಮಹಲ್, ೧೯೯೩, ಪು.೧–೨.

೧೫. ಅದೇ ಪುಸ್ತಕ, ಪುಟ.೩೧–೪೨.

೧೬. ಬಂದ್ಯೋಪಾಧ್ಯಾಯ ಡಿ., ಪಂಚಾಯತ್ಸ್ ಅಂಡ್ ಡೆಮಾಕ್ರಸಿ–ಎಲೈಟ್ಸ್ ವರ್ಸಸ್ಸ್ ದಲಿತ್ಸ್ ಇನ್ ಇಷ್ಯೂಸ್ ಪಂಚಾಯತ್ ರಾಜ್, ಟಾಸ್ಕ್ ಪೋರ್ಸ್‌ಆನ್ ಪಂಚಾಯತಿ ರಾಜ್, ರಾಜೀವ್

ಗಾಂಧಿ ಪೌಡೇಶನ್ ಕಾನ್ಸೆಪ್ಟ್ ಪಬ್ಲಿಷಿಂಗ್ ಹೌಸ್, ಹೊಸ ದೆಹಲಿ, ೨೦೦೪. ಪು.೧೫೦

೧೭. ಗವರ್ನ್‌ಮೆಂಟ್ ಆಫ್ ಮೈಸೂರು, "ಕಾನ್‌ಸ್ಟಿಟ್ಯೂಶನ್ ಡೆವಲಪ್‌ಮೆಂಟ್ ಇನ್ ಮೈಸೂರು: ರಿಪೋರ್ಟ್ ಆಫ್ ದಿ ಕಮಿಟಿ ಅಪಾಯಿಂಟೆಡ್ ಟು ವರ್ತ್ ಔಟ್ ದಿ ಡೀಟೇಲ್ಸ್ ಆಫ್ ದಿ ಸ್ಕೀಮ್" ಗವರ್ನ್‌ಮೆಂಟ್ ಪ್ರೆಸ್ ಬೆಂಗಳೂರು, ೧೯೩೮, ಹಿಯರ್ ಆಫ್ಟರ್ ಟು ಯಾಜಶೀಲ್ ಕಮಿಟಿ.

೧೮. ಸತ್ಯಪಾಲ್ ಪುಲಿಯಾನಿ, "ಕರ್ನಾಟಕ ಪೌರನಿಗಮಗಳ ಅಧಿನಿಯಮ–೧೯೭೬, ಪ್ರಕಾಶಕರು ಕೆಎಲ್‌ಜೆ, ಗವರ್ನಮೆಂಟ್ ಆಫ್ ಇಂಡಿಯಾ, ಬೆಂಗಳೂರು, ೨೦೧೦, ಪುಟ–೫೬–೯೮.

೧೯. ಅದೇ ಪುಸ್ತಕ, ಪುಟ. ೩೨.೪೩

೨೦. ಎಂ.ಯರ್ರಿಸ್ವಾಮಿ, ಅಪ್ರಕಟಿತ ಗ್ರಂಥ 'ಗ್ರಾಮ ಪಂಚಾಯತ್ ಮತ್ತು ಸಬಲೀಕರಣ', ಕನ್ನಡ ವಿಶ್ವವಿದ್ಯಾಲಯ, ಹಂಪಿ.

೨೧. ಸತ್ಯಪಾಲ್ ಪುಲಿಯಾನಿ, "ಕರ್ನಾಟಕ ಪೌರನಿಗಮಗಳ ಅಧಿನಿಯಮ–೧೯೬೪, ಪ್ರಕಾಶಕರು ಕೆಎಲ್‌ಜೆ, ಗವರ್ನಮೆಂಟ್ ಆಫ್ ಇಂಡಿಯಾ, ಬೆಂಗಳೂರು, ೨೦೧೦, ಪುಟ–

೨೨. ಅದೇ ಪುಸ್ತಕ, ಪು. ೩೨–೪೩

೨೩. "ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ–೧೯೯೩, ನಗರಸಭೆ, ಪುರಸಭೆ ಮತ್ತು ಪಟ್ಟಣ ಪಂಚಾಯಿತಿಗಳ ಕಾಯಿದೆ ೧೯೯೩", ಕರ್ನಾಟಕ ಸರ್ಕಾರ, ಬೆಂಗಳೂರು, ೧೯೯೩. ಪು.

೨೪. ಅದೇ ಪುಸ್ತಕ, ಪು.೩೨–೪೩

೨೫. ಅದೇ ಪುಸ್ತಕ, ಪು.೩೨–೪೩

೨೬. ಪ್ರದೀಪ್ ಸಚ್‌ದೇವ್, ಲೋಕಲ್ ಗವರ್ನಮೆಂಟ್ ಇನ್ ಇಂಡಿಯಾ, ಡೋರಲಿಂಗ್ ಕೈನರ್ಡಸಲೇ ಪಬ್ಲೀಕೇಷನ್, ದೆಹಲಿ,೨೦೧೧, ಪುಟ.೭–೯.

೨೭. ಮುಲ್ಪಲಿಬ್, ಎಂ.ಎ., ಡಿಸೆಂಟ್ರಲೈಸೇಷನ್, ಲೋಕಲ್ ಗವರ್ನ್‌ಮೆಂಟ್ ಇನ್‌ಸ್ಟಿಟ್ಯೂಶನ್ಸ್ ಅಂಡ್ ರಿಸೋರ್ಸ್ ಮೊಬಿಲೈಸೇಷನ್, ಸಂ.ಹಸ್ನತ್ ಅಬ್ದುಲ್ ಹೈ, ಬಿಎಆರ್‌ಡಿ, ಕೋಮಿಲ್ಲ, ೧೯೮೫.

೨೮. ಗವರ್ನಮೆಂಟ್ ಆಫ್ ಇಂಡಿಯಾ, ಪಂಚಾಯತ್ ರಾಜ್ ಸ್ಟೇಟಸ್ ರಿಪೋರ್ಟ್, ನ್ಯೂಡೆಲ್ಲಿ, ರಾಜೀವ್ ಗಾಂಧಿ ಪೌಂಢೇಶನ್, ೧೯೯೯, ಪುಟ ೫೭.

೨೯. ಅಶೋಕ ಮೆಹ್ತ, ರಿಪೋರ್ಟ್ ಆಫ್ ದಿ ಕಮಿಟಿ ಆನ್ ಪಂಚಾಯತ್ ರಾಜ್ ಇನ್ಸಿಟ್ಯೂಟಿಶನ್ಸ್, ನ್ಯೂಡೆಲ್ಲಿ, ಮಿನಿಸ್ಟ್ರಿ ಆಫ್ ಅಗ್ರಿಕಲ್ಚರ್ ಆಂಡ್ ಇರಿಗೇಷನ್, ೧೯೭೮.

ಪ್ರಬಂಧದ ಎರಡನೆಯಾ ಅಧ್ಯಾಯದಲ್ಲಿ ಭಾರತದಲ್ಲಿ ಸ್ವಾತಂತ್ರ್ಯದ ಪೂರ್ವದಲ್ಲಿ ಆದ ಅಭಿವೃದ್ಧಿ ಮತ್ತು ಈ ಅಭಿವೃದ್ಧಿಯ ವಿಫಲತೆಯನ್ನು ಸರಿದೂಗಿಸುವಲ್ಲಿ, ವಿಕೇಂದ್ರೀಕರಣವನ್ನು ಬಲಯುತಗೊಳಿಸುವಲ್ಲಿ ಕೈಗೊಂಡ ಪ್ರಯತ್ನಗಳನ್ನು ವಿವರಿಸಲಾಗಿದೆ. ಕೇಂದ್ರದ ಕ್ರಮಗಳನ್ನು ರಾಜ್ಯವು ಅನುಸರಿಸಿ ನಗರ ಸ್ಥಳೀಯ ಸಂಸ್ಥೆಗಳ ಸುಧಾರಣೆಗಳನ್ನು ಜಾರಿಗೆ ತಂದ ಬಗೆಯನ್ನು ನೋಡಿದ್ದೇವೆ. ಅಧ್ಯಯನ ಕ್ಷೇತ್ರ ಪರಿಚಯವನ್ನು ಮಾಡಿಸುವ ಉದ್ದೇಶವಿಟ್ಟುಕೊಂಡಿರುವ ಪ್ರಸ್ತುತ ಅಧ್ಯಾಯದಲ್ಲಿ ಅಧ್ಯಯನ ಕ್ಷೇತ್ರದ ಜಿಲ್ಲೆ, ತಾಲೂಕುಗಳ ಮತ್ತು ನಗರ ಸ್ಥಳೀಯ ಸಂಸ್ಥೆಗಳ ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ವಿವರಗಳನ್ನು ಕೊಡಲಾಗಿದೆ. ನಗರ ಸ್ಥಳೀಯ ಸಂಸ್ಥೆಗಳ ಆಯ್ಕೆಯ ನಮೂನೆಯನ್ನು ಅಂಕಿ ಅಂಶಗಳ ಮೂಲಕ ವಿವರವಾಗಿ ವಿಶ್ಲೇಷಿಸಲಾಗಿದೆ. ಪ್ರಸ್ತುತ ಅಧ್ಯಾಯವು ಅದ್ಯಯನ ಕ್ಷೇತ್ರದ ಒಟ್ಟು ಚಿತ್ರಣವನ್ನು ಕೊಡುತ್ತದೆ.

**೩.೧. ಜಿಲ್ಲೆಯಲ್ಲಿ ನಗರ ಸ್ಥಳೀಯ ಸಂಸ್ಥೆಗಳ ವ್ಯವಸ್ಥೆ**

ಬ್ರಿಟಿಷ್ ಭಾರತದ ಕರ್ನಾಟಕದಲ್ಲಿ ೧೮೯೧ರಿಂದ ಸ್ಥಳೀಯ ಸಂಸ್ಥೆಗಳ ರಚನೆಗೆ ಪ್ರಯತ್ನ ನಡೆದಿರುವುದು ಕಂಡುಬರುತ್ತದೆ. ಈ ಫಲವಾಗಿ ೧೯೦೩ರಲ್ಲಿ ೮ ಜಿಲ್ಲಾ ಬೋರ್ಡ್, ೭೭ ತಾಲೂಕು ಬೋರ್ಡ್ ಮತ್ತು ೩೮೦ ಯೂನಿಯನ್‌ಗಳನ್ನು ಸ್ಥಾಪಿಸಲಾಯಿತು. ಆಂಗ್ಲರ ಆಳ್ವಿಕೆಗೊಳಪಟ್ಟ ಕರ್ನಾಟಕದ ಬಹುಭಾಗವೆಲ್ಲ ವಿವಿಧ ಪ್ರಾಂತ್ಯಗಳಾಗಿ ವಿಂಗಡಿಸಲ್ಪಟ್ಟಿತ್ತು. ಆಗಿನ ಮದ್ರಾಸ್ ಪ್ರೆಸಿಡೆನ್ಸಿಗೆ ಸೇರಿದ ಬಳ್ಳಾರಿ ಜಿಲ್ಲೆಯಲ್ಲಿ ನಗರಸಭೆ ಮುನ್ಸಿಪಾಲಿಟಿಗಳು ಅಸ್ತಿತ್ವಕ್ಕೆ ಬಂದಿದ್ದು India act of xxvi ೧೮೫೦ ಕಾಯಿದೆ ಜಾರಿಯಿಂದಲೇ ಇದರಡಿ ಪಟ್ಟಣ/ನಗರಗಳ ನಿವಾಸಿಗಳು ತಮ್ಮ ಊರಿನ ಅಭಿವೃದ್ಧಿಗಾಗಿ ಮೂಲಭೂತ ಅವಶ್ಯಕತೆಗಳ ಪೂರೈಕೆಗಾಗಿ, ನಗರದ ನೈರ್ಮಲ್ಯಕ್ಕಾಗಿ ಹಲವಾರು ಕಾರ್ಯಕ್ರಮಗಳನ್ನು ರೂಪಿಸಿಕೊಳ್ಳಲು ಮುನ್ಸಿಪಾಲಿಟಿಗಳಿಗೆ ಅವಕಾಶ ಕಲ್ಪಿಸಲಾಗಿತ್ತು. ಅದೇಕೋ ಈ ಯೋಜನೆಯು ಜನರ ಸಕ್ರಿಯ ಹಾಗೂ ಸ್ವಯಂ ಪ್ರೇರಣೆಯಿಂದ ಕೂಡಿದ ಪ್ರವೇಶವಿಲ್ಲದೆ

ಯಾವುದೇ ಸಾಫಲ್ಯವನ್ನು ಕಾಣಲಿಲ್ಲ. ಆ ನಂತರದಲ್ಲಿ (Madras towns improvement act x 1865, the town improvement act of 1871) ಕಾಯಿದೆಗಳು ಮುನಿಸಿಪಾಲಿಟಿಗಳ ಕುರಿತು ಜಾರಿಗೊಳಿಸಲ್ಪಟ್ಟವು. ಅಲ್ಲದೇ, Madras District Muncipalities, act iv of ೧೮೮೪ ಕಾಯಿದೆ ಜಾರಿಗೊಳ್ಳುವುದರ ಮೂಲಕ ಪ್ರಥಮ ಬಾರಿಗೆ 'ಮುನ್ಸಿಪಾಲಿಟಿ' ಶಬ್ದವನ್ನು ಅಧಿಕೃತವಾಗಿ ಪರಿಚಯಿಸಲಾಯಿತು. ಈ ಕಾಯಿದೆಯಡಿ ೧೨ ಜನಕ್ಕಿಂತ ಕಡಿಮೆಯಿರದ ಸದಸ್ಯರನ್ನೊಳಗೊಂಡ ಮುನ್ಸಿಪಾಲಿಟಿಯು ೩ ವರ್ಷಗಳ ಅವಧಿಗೆ ಅಧಿಕಾರವನ್ನು ಹೊಂದಿರುತ್ತಿತ್ತು. ಆಗಿನ ಕಂದಾಯ ಅಧಿಕಾರಿ ಮತ್ತು ರೆವಿನ್ಯೂ ಆಫೀಸರ್ ಜಿಲ್ಲೆಯ ಎಲ್ಲಾ ಮುನ್ಸಿಪಾಲಿಟಿಗಳ ಪ್ರಭಾರಿ ಅಧಿಕಾರಿಯಾಗಿದ್ದು, ಪದನಿಮಿತ್ತ ಸದಸ್ಯನಾಗಿರುತ್ತಿದ್ದನು. ಉಳಿದ ಸದಸ್ಯರು ಸರಕಾರದಿಂದ ನೇಮಕಗೊಂಡವರು ಅಥವಾ ೩/೪ರಷ್ಟು ಸದಸ್ಯರು ತಮ್ಮೊಳಗೆ ತೆರಿಗೆದಾರರಿಂದ ಚುನಾಯಿತಗೊಂಡು ನೇಮಕಗೊಳ್ಳುತ್ತಿದ್ದರು. ಜಿಲ್ಲಾಧಿಕಾರಿಯು ಎಲ್ಲಾ ಮುನ್ಸಿಪಾಲಿಟಿಗಳ ಮುಖ್ಯ ಅಧಿಕಾರಿಯಾಗಿರುತ್ತಿದ್ದ. ಈ ನಿಟ್ಟಿನಲ್ಲಿ ಮುನ್ಸಿಪಾಲಿಟಿಗಳು ಸ್ವಯಂ ಆಡಳಿತದೊಂದಿಗೆ ತಮ್ಮ ಆದಾಯದ ಮೂಲಗಳನ್ನು ಭೂಮಿ, ಕೃಷಿ, ನೀರು, ಮನೆಗಳ, ಜಾನುವಾರುಗಳ ಮೇಲಿನ ತೆರಿಗೆಯಿಂದ ಹುಡುಕಿಕೊಳ್ಳುತ್ತಿದ್ದವು. ಊರೊಳಗೆ ಅಂದರೆ ಮುನ್ಸಿಪಾಲಿಟಿ ವ್ಯಾಪ್ತಿಯೊಳಗೆ ಬರುವ ಹೋಗುವ ವಾಹನಗಳಿಗೆ ಸರಕು ಸಾಗಾಣಿಕೆಗಳ ಮೇಲೆ, ವಾಹನ ಪರವಾನಿಗೆ ತೆರಿಗೆಯನ್ನು ವಿಧಿಸಿ ಆದಾಯವನ್ನು ಹೆಚ್ಚಿಸಿಕೊಳ್ಳುತ್ತಿದ್ದವು. ಸ್ವತಂತ್ರ ಭಾರತದ ಕರ್ನಾಟಕವು ಆರಂಭದಲ್ಲಿ ಮೈಸೂರು ರಾಜ್ಯವಾಗಿ ರೂಪುಗೊಂಡಿತ್ತು. ೧೯೫೩ರ ೧ನೇ ಅಕ್ಟೋಬರ್ ಬಳ್ಳಾರಿ ಜಿಲ್ಲೆಯನ್ನು ಮದ್ರಾಸ್ ಪ್ರೆಸಿಡೆನ್ಸಿಯಿಂದ ಆಗಿನ ಹಳೇ ಮೈಸೂರು ಪ್ರಾಂತ್ಯಕ್ಕೆ ಸೇರಿಸಲಾಯಿತು. ಆಡಳಿತ ದೃಷ್ಟಿಯಿಂದ ಜಿಲ್ಲೆಗಳಲ್ಲಿನ ನಗರಗಳ ಆಡಳಿತದ ವ್ಯವಸ್ಥೆಯನ್ನು ಮುನ್ಸಿಪಾಲಿಟಿಗಳ ಅಥವಾ ನಗರಸಭೆಗಳ ಮತ್ತು ಪಟ್ಟಣ ಪಂಚಾಯತ್‌ಗಳ ರಚನೆಯಂತೆ ವಿಭಾಗಿಸಲಾಗುತಿತ್ತು. ಆಗಿನ ನಗರಸಭೆ ಹಾಗೂ ಪಟ್ಟಣ ಪಂಚಾಯತ್‌ಗಳು ಹೀಗಿದ್ದವು.

| | ನಗರಸಭೆ | ಸ್ಥಾಪನೆ ವರ್ಷ |
|---|---|---|
| ೧ | ಬಳ್ಳಾರಿ | ೧೮೬೫ |
| ೨ | ಹೊಸಪೇಟೆ | ೧೯೧೩ |
| ೩ | ಕೂಡ್ಲಿಗಿ | ೧೯೮೦ |

ಮೂಲ : Mysore state Gazetteer of India, Bellary District, 1972

ಬಳ್ಳಾರಿಯು ಆಗಿನ ಮದ್ರಾಸ್ ಪ್ರಾಂತ್ಯದ ಪ್ರಥಮ ದೊಡ್ಡ ನಗರಗಳಲ್ಲಿ ಒಂದಾಗಿತ್ತು. ಆ ಕಾರಣಕ್ಕಾಗಿ ಮುನ್ಸಿಪಾಲಿಟಿ ಆಡಳಿತ ಸಂಸ್ಥೆಯನ್ನು ರಚಿಸಲು ಸಾಧ್ಯವಾಗಿತ್ತು.[೧]

**೩.೨. ಬಳ್ಳಾರಿ ಜಿಲ್ಲೆ(ಮಹಾನಗರ ಪಾಲಿಕೆ)**

ಬಳ್ಳಾರಿ ನಗರಸಭೆಯು ೨೪ನೇ ಅಕ್ಟೋಬರ್ ೧೯೫೫ರಿಂದ(the Mysore town muncipalities act of) ೧೯೫೧ ಕಾಯಿದೆಯ ವ್ಯಾಪ್ತಿಗೊಳಪಟ್ಟಿತ್ತು. ಹೀಗೆ ಬಳ್ಳಾರಿ ಮುನ್ಸಿಪಾಲಿಟಿಯು ಕಾಲಕಾಲಕ್ಕೆ ವಿಕಾಸಗೊಳ್ಳುತ್ತಾ ಹಲವು ಹಂತಗಳಲ್ಲಿ ಬದಲಾವಣೆಗೊಳಪಟ್ಟಿತ್ತು. ೧೯೫೭ರ ನವೆಂಬರ್ ೧ರಂದು

ಮುನ್ಸಿಪಾಲಿಟಿಯನ್ನು ಪುನಾರಚಿಸಲಾಯಿತು. ೧೯೫೭ರಲ್ಲಿ ಒಟ್ಟು ೩೨ ಕೌನ್ಸಿಲ್‌ಗಳನ್ನು ಬಳ್ಳಾರಿ ನಗರಸಭೆಯು ಒಳಗೊಂಡಿತ್ತು. ೧೯೫೯ರಲ್ಲಿ ನಡೆದ ೮ನೆಯ ಡಿವಿಜನ್ ಉಪಚುನಾವಣೆಯಲ್ಲಿ ತೆರವಾದ ೩ ಸ್ಥಾನಗಳಿಗೆ ಸರ್ಕಾರದ ಸದಸ್ಯರು ಆಯ್ಕೆಯಾಗಿದ್ದರು. ಅಧ್ಯಕ್ಷ ಮತ್ತು ಉಪಾಧ್ಯಕ್ಷರಿಬ್ಬರೂ ಸರ್ಕಾರೇತರ ಸದಸ್ಯರಾಗಿದ್ದರು. ಇತ್ತೀಚೆಗೆ ನಡೆದ ದಿನಾಂಕ ೩-೫-೨೦೦೧ನೇ ಚುನಾವಣೆಯಲ್ಲಿದ್ದಂತಹ ಹಾಲಿ ನಗರಸಭೆ ಸದಸ್ಯರು ೩೫ ಇದ್ದರೆ, ಅದರಲ್ಲಿ ಪುರುಷರು ೨೧ ಮಹಿಳಾ ಸದಸ್ಯರು ೧೪ ಜನರಿದ್ದಾರೆ. ಬಳ್ಳಾರಿ ನಗರಸಭೆಯು ನಿವಾಸಿಗಳ ದೈನಂದಿನ ಅವಶ್ಯಕತೆಗಳನ್ನು ಹಾಗೂ ಮೂಲಭೂತ ಸೌಲಭ್ಯಗಳನ್ನು ಒದಗಿಸುವಲ್ಲಿ ಶ್ರಮಿಸುತ್ತಾ ಬಂದಿದೆ. ಅದರ ಪ್ರಮುಖ ನಾಗರಿಕ ಸೇವೆಗಳೆಂದರೆ ಕುಡಿಯುವ ನೀರು ಸರಬರಾಜು, ನಗರ ಯೋಜನೆ ಸಿದ್ಧಪಡಿಸುವುದು, ಕೊಳಚೆ ಪ್ರದೇಶಗಳ ನೈರ್ಮಲ್ಯೀಕರಣ, ಗೃಹ ನಿರ್ಮಾಣ, ಚರಂಡಿ ವ್ಯವಸ್ಥೆ, ಉದ್ಯಾನವನಗಳ ನಿರ್ಮಾಣ ಮತ್ತು ನಿರ್ವಹಣೆ (ಮುನ್ಸಿಪಾಲಿಟಿಯಿಂದ ನಿರ್ವಹಿಸಲ್ಪಡುವುವು), ಪ್ರವಾಸಿ ಮಂದಿರಗಳ ನಿರ್ವಹಣೆ, ಆಹಾರ ಸಂಸ್ಕರಣೆ (Asper the lentral food administortion act) ಆರೋಗ್ಯ ಸೇವೆ, ಮಲೇರಿಯಾ, ರೋಗ ನಿರ್ಮೂಲನೆ, ನಾಗರೀಕರ ಜನನ ಮತ್ತು ಮರಣಗಳ ನೋಂದಣಿ ಮಾಡಿಸುವುದು ಮಾರುಕಟ್ಟೆಗಳ ಮೇಲ್ವಿಚಾರಣೆಯಂತಹ ಕಾರ್ಯಗಳನ್ನು ಮಾಡುತ್ತದೆ. ಅದಲ್ಲದೆ ಸಾರ್ವಜನಿಕ ಅಸ್ತಿ-ಪಾಸ್ತಿ, ರಕ್ಷಣೆ, ಬೆಳಕು ಒದಗಿಸುವುದು, ಶಿಕ್ಷಣವನ್ನು ಕಲಿಸುವುದು, ರಸ್ತೆ ನಿರ್ಮಾಣ ಹಾಗೂ ನಗರದಲ್ಲಿ ಜರುಗುವ ಹಬ್ಬ ಮತ್ತು ಉತ್ಸವಗಳನ್ನು ನೋಡಿಕೊಳ್ಳುತ್ತದೆ. ಎಲ್ಲಾ ಜನರ ವರ್ಗದ ಭಾಷೆಯ ಹಿತಾಸಕ್ತಿಗಳನ್ನು ಕಾಪಾಡಿಕೊಂಡು ಬಂದಿದೆ. ಬಳ್ಳಾರಿ ಜಿಲ್ಲೆ ದ್ವಿಭಾಷಿಕ ಪ್ರದೇಶವಾಗಿದ್ದರಿಂದ ಇದನ್ನು ಮೈಸೂರು ರಾಜ್ಯದ ಪೂರ್ವದ ಬಾಗಿಲು(eastern gateway mysore) ಎಂದೂ ಕರೆಯಲಾಗುತ್ತಿತ್ತು. ಇದು ಮದ್ರಾಸ್ ಪ್ರೆಸಿಡೆನ್ಸಿಯ ಪ್ರಮುಖ ನಗರವಾಗಿತ್ತು. ಬ್ರಿಟಿಷ್ ಕಾಲದ ಆರಂಭದ ದಿನಗಳಲ್ಲಿ ದೇಶದಲ್ಲಿಯೇ ಮೊಟ್ಟಮೊದಲ ಬಾರಿಗೆ ಜಾರಿಗೊಳಿಸಲು ಆರಿಸಲ್ಪಟ್ಟ ನಗರಗಳೆಂದರೆ ಬಾಂಬೆ ಪ್ರೆಸಿಡೆನ್ಸಿಯ ಕರಾಚಿ ಮತ್ತು ಮದ್ರಾಸ್ ಪ್ರೆಸಿಡೆನ್ಸಿಯ ಬಳ್ಳಾರಿ. ಕಾಸ್ಮೋಪಾಲಿಟಿನ್ ನಗರವಾಗಿ ಬಳ್ಳಾರಿ ಬೆಳೆಯಲು ಕಾರಣ ಬಿಜಾಪುರ ಸುಲ್ತಾನರ ಆಳ್ವಿಕೆ ಹಾಗೂ ಹೈದರಾಬಾದಿನ ನಿಜಾಮರ ಆಳ್ವಿಕೆಯ ಪ್ರಭಾವ.[೨] ಉಂಟಾಗಿರುವುದು ತಿಳಿದು ಬಂದಿದೆ.

### ೩.೩. ಜಿಲ್ಲೆಯ ಭೌಗೋಳಿಕ ಮತ್ತು ಚಾರಿತ್ರಿಕ ಹಿನ್ನೆಲೆ

ಬಳ್ಳಾರಿ ಜಿಲ್ಲೆಯು ನೈರುತ್ಯ ಮತ್ತು ಈಶಾನ್ಯ ದಿಕ್ಕುಗಳ ನಡುವೆ ಚಾಚಿಕೊಂಡಿದೆ. ಇದು ಸರಿಯಾಗಿ ಕರ್ನಾಟಕದ ಮದ್ಯಭಾಗದಲ್ಲಿದೆ. ಪ್ರಸ್ತುತ ಬಳ್ಳಾರಿ ಜಿಲ್ಲೆಯ ವ್ಯಾಪ್ತಿಯನ್ನು ಗಮನಿಸಿದಾಗ ನೈರುತ್ಯ ದಿಕ್ಕಿನ ಹಗರಿಬೊಮ್ಮನಹಳ್ಳಿ ತಾಲೂಕು ಕಲ್ಲಹಳ್ಳಿ ಎಂಬ ಗ್ರಾಮದಿಂದ ಈಶಾನ್ಯ ದಿಕ್ಕಿನ ಸಿರಗುಪ್ಪ ತಾಲೂಕಿನ ಸಲ್ಲಕುದಲೂರು ಎಂಬ ಗ್ರಾಮದವರೆಗೆ ೧೮೭ ಕಿ.ಮೀ. ಉದ್ದವಾಗಿ, ಪೂರ್ವ ಪಶ್ಚಿಮವಾಗಿ ಬಳ್ಳಾರಿ ತಾಲೂಕಿನ ಕಾರೇಕಲ್ಲು ವೀರಾಪುರದಿಂದ ಹಡಗಲಿ ತಾಲೂಕಿನ ಹಿರೇಬನ್ನಿ ಹಟ್ಟಿಯವರಿಗೆ ೧೬೧ ಕಿ.ಮೀ. ಅಗಲವಾಗಿ ಹರಡಿಕೊಂಡಿದೆ. ಈ ಜಿಲ್ಲೆಯು ಬ್ರಿಟೀಷರ ಆಳ್ವಿಕೆಯ ಕಾಲದಲ್ಲಿ ಮದ್ರಾಸ್ ಪ್ರಾಂತ್ಯದ ಬಹುದೊಡ್ಡ ಜಿಲ್ಲೆಯಾಗಿತ್ತು.[೩] ೧೯೫೩ಕ್ಕೆ ಮೊದಲು ಜಿಲ್ಲೆಯು ೧೨

ತಾಲೂಕುಗಳನ್ನು ಹೊಂದಿತ್ತು. ಅವುಗಳಲ್ಲಿ ಬಳ್ಳಾರಿ, ಸಿರಗುಪ್ಪ, ಸಂಡೂರು, ಹೊಸಪೇಟೆ, ಹರಪನಹಳ್ಳಿ, ಹೂವಿನ ಹಡಗಲಿ, ಕೂಡ್ಲಿಗಿ, ಮಲ್ಲಾಪುರ ಮತ್ತು ಈಗಿನ ಆಂದ್ರಪ್ರದೇಶದ ಆಲೂರು, ಆದೋನಿ, ರಾಯದುರ್ಗ ತಾಲೂಕುಗಳನ್ನು ಹೊಂದಿತ್ತು. ೧೯೫೬ರ ರಾಜ್ಯ ಪುನರ್‌ವಿಂಗಡಣೆ ಸಂದರ್ಭದಲ್ಲಿ ಪ್ರಾಂತ್ಯವಾಗಿ ಪ್ರತ್ಯೇಕಗೊಂಡಾಗ ಬಳ್ಳಾರಿ ಜಿಲ್ಲೆಗೆ ಸೇರಿದ್ದ ಆಲೂರು, ಆದೋನಿ ಮತ್ತು ರಾಯದುರ್ಗ ತಾಲೂಕುಗಳು ಆಂಧ್ರಪ್ರದೇಶ ರಾಜ್ಯಕ್ಕೆ ಸೇರಿಸಲಾಯಿತು. ಕರ್ನಾಟಕದಲ್ಲಿ ೧೯೯೭ರಲ್ಲಿ ಹೊಸ ಜಿಲ್ಲೆಗಳ ರಚನೆಯ ಸಂದರ್ಭದಲ್ಲಿ ಜಿಲ್ಲೆಗೆ ಸೇರಿದ್ದ ಮತ್ತೊಂದು ತಾಲೂಕು ಹರಪನಹಳ್ಳಿಯನ್ನು ದಾವಣಗೆರೆ ಜಿಲ್ಲೆಗೆ ಸೇರಿಸಲಾಯಿತು. ಹಾಗಾಗಿ ಪ್ರಸ್ತುತ ಬಳ್ಳಾರಿ ಜಿಲ್ಲೆಯು ೭ ತಾಲೂಕುಗಳನ್ನು ಹೊಂದಿದೆ. ಜಿಲ್ಲೆಯ ಭೌಗೋಳಿಕ ವಿಸ್ತೀರ್ಣ ೮೪೫೦ ಚ.ಕಿ.ಮೀ. ಇದ್ದು, ರಾಜ್ಯದ ವಿಸ್ತೀರ್ಣದಲ್ಲಿ ಶೇ. ೪.೪೦ರಷ್ಟು ಪಾಲನ್ನು ಹೊಂದಿದೆ. ಇದು ವಿಸ್ತೀರ್ಣದಲ್ಲಿ ರಾಜ್ಯದಲ್ಲಿ ೮ನೇ ಸ್ಥಾನದಲ್ಲಿದೆ.[೪] ಜಿಲ್ಲೆಯ ಉತ್ತರಕ್ಕೆ ಕೊಪ್ಪಳ, ದಕ್ಷಿಣಕ್ಕೆ ಚಿತ್ರದುರ್ಗ, ಪಶ್ಚಿಮಕ್ಕೆ ಧಾರವಾಡ ಜಿಲ್ಲೆ ಮತ್ತು ಪೂರ್ವಕ್ಕೆ ಆಂಧ್ರಪ್ರದೇಶ ರಾಜ್ಯವಿದೆ. ಜಿಲ್ಲೆಯ ಪೂರ್ವಭಾಗವು ಸಮತಟ್ಟಾದ ಭೂಮಿಯನ್ನು ಹೊಂದಿದ್ದು ಕೃಷಿಗೆ ಅನುಕೂಲವಾಗಿದೆ. ಜಿಲ್ಲೆಯು ಹವಾಮಾನ ದೃಷ್ಟಿಯಿಂದ ಅತಿ ಉಷ್ಣವಲಯವಾಗಿದೆ. ಮಳೆಯ ಪ್ರಮಾಣವು ತೀರಾ ಕಡಿಮೆ, ಶುಷ್ಕ ವಾತಾವರಣದಿಂದ ಕೂಡಿದ ಪೂರ್ವಭಾಗದಲ್ಲಿ ಹೆಚ್ಚು ಅರಣ್ಯ ಪ್ರದೇಶವಿದೆ, ಈ ಭಾಗದಲ್ಲಿ ತುಂಗಭದ್ರಾ ನದಿ ಇರುವುದರಿಂದ ಪೂರ್ವ ತಾಲೂಕುಗಳಿಗೆ ಪ್ರಮುಖ ನೀರಾವರಿಯ ಮೂಲವಾಗಿದೆ. ಈ ನದಿಯು ಜಿಲ್ಲೆಯಲ್ಲಿ ೩೨೦ ಕಿ.ಮೀ.ನಷ್ಟು ದೂರ ಹರಿಯುತ್ತದೆ.[೫] ನೀರಾವರಿ ಕೃಷಿ ಅಭಿವೃದ್ಧಿಗೆ ಈ ನದಿಯು ಬೆನ್ನೆಲುಬಾಗಿದೆ. ಈ ನದಿಯನ್ನು ಬಿಟ್ಟರೆ ಜಿಲ್ಲೆಯ ಪಶ್ಚಿಮ ಭಾಗದಲ್ಲಿ ಕೆಲವು ಸಣ್ಣ ಪುಟ್ಟ ಜಲಾಶಯ, ಕೆರೆ ಮತ್ತು ಕಟ್ಟೆಗಳಿವೆ. ೨೦೧೧ರ ಜನಗಣತಿಯ ಪ್ರಕಾರ ಜಿಲ್ಲೆಯ ಒಟ್ಟು ಜನಸಂಖ್ಯೆ ೬,೨೫,೪೯೪ ಇದ್ದು ರಾಜ್ಯದ ಜನಸಂಖ್ಯೆಯಲ್ಲಿ ಶೇ. ೨೭.೪೩ರಷ್ಟು ಪ್ರಮಾಣವನ್ನು ಹೊಂದಿದೆ. ಜನಸಂಖ್ಯೆಯಲ್ಲಿ ರಾಜ್ಯದ ಆರನೆಯ ಸ್ಥಾನದಲ್ಲಿದೆ. ಜಿಲ್ಲೆಯ ಒಟ್ಟು ಜನಸಂಖ್ಯೆಯಲ್ಲಿ ನಗರ ಜನಸಂಖ್ಯೆಯು ೩,೧೬,೭೭೬(೫೦.೬೪%)ರಷ್ಟು ಗ್ರಾಮೀಣ ಜನಸಂಖ್ಯೆಯು ೩,೦೮,೭೨೮(೪೯.೩೫%)ರಷ್ಟು ಹೊಂದಿರುವುದನ್ನು ಕಾಣಬಹುದಾಗಿದೆ.[೬] **(ಕೊಷ್ಟಕ-೧)**

**೩.೪. ಜಿಲ್ಲೆಯ ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ವಿವರಗಳು**

ಸಾಮಾಜಿಕವಾಗಿ ಜಿಲ್ಲೆಯನ್ನು ನೋಡುವುದಾದರೆ, ಜಿಲ್ಲೆಯು ವಿವಿಧ ಜಾತಿ ವರ್ಗಗಳನ್ನು ಹೊಂದಿದೆ. ಇವುಗಳಲ್ಲಿ ಮುಖ್ಯವಾಗಿ ಲಿಂಗಾಯತ, ಕುರುಬ, ಮುಸ್ಲಿಂ, ವಾಲ್ಮೀಕಿ ಮತ್ತು ಮಾದಿಗ ಜನಾಂಗಗಳನ್ನು ಹೊಂದಿದೆ. ೨೦೧೧ರ ಜನಗಣತಿಯ ಪ್ರಕಾರ ಜಿಲ್ಲೆಯಲ್ಲಿ ೩,೭೩,೦೩೪(೧೮.೭೪%) ಕುಟುಂಬಗಳಿವೆ. ರಾಜ್ಯದ ಒಟ್ಟು ಕುಟುಂಬಗಳಲ್ಲಿ ಜಿಲ್ಲೆಯ ಪಾಲು ಶೇ. ೧೮.೭೪ ರಷ್ಟಿದೆ. ೨೦೧೧ರ ಜನಗಣತಿಯ ಅನ್ವಯ ಜಿಲ್ಲೆಯ ಸಾಕ್ಷರರ ಸಂಖ್ಯೆ ೩,೧೮,೦೪೯(೧೦೦%)ರಷ್ಟಿದೆ. ಇದರಲ್ಲಿ ಹೊಸಪೇಟೆ ನಗರಸಭೆ ೨,೦೬,೧೬೭ ಜನಸಂಖ್ಯೆಯನ್ನು ಹೊಂದಿದ್ದು, ಕೂಡ್ಲಿಗಿ ಪಟ್ಟಣ ಪಂಚಾಯಿತಿಯು ೨೬,೭೧೨ ಜನಸಂಖ್ಯೆಯನ್ನು ಹೊಂದಿರುತ್ತದೆ. ಹಾಗೆಯೇ ಹೊಸಪೇಟೆ ನಗರಸಭೆ

ಮತ್ತು ಕೂಡ್ಲಿಗಿ ಪಟ್ಟಣ ಪಂಚಾಯಿತಿಯ ಸಾಕ್ಷರತೆಯ ಪ್ರಮಾಣ ೧೮೧೧೫೨ ಮತ್ತು ೧೮೩೪೯ ಆಗಿರುತ್ತದೆ.[೭] (ಕೋಷ್ಟಕ–೨) ಹೀಗಾಗಿ ಸಾಕ್ಷರತೆಯಲ್ಲಿ ಹಿಂದುಳಿದಿರುವ ಜಿಲ್ಲೆಗಳಲ್ಲಿ ಬಳ್ಳಾರಿಯು ಒಂದಾಗಿದೆ. ಸಾಕ್ಷರತೆಯನ್ನು ಹೆಚ್ಚಿಸುವ ಸಲುವಾಗಿ ಜಿಲ್ಲೆಯಲ್ಲಿ ಜಿಲ್ಲಾ ಪ್ರಾಥಮಿಕ ಶಿಕ್ಷಣ ಯೋಜನೆ ಮತ್ತು ನಿರಂತರ ಶಿಕ್ಷಣ ಕೇಂದ್ರಗಳನ್ನು ಸ್ಥಾಪಿಸಿ ಸಾಕ್ಷರತೆಗಾಗಿ ವಿವಿಧ ಕಾರ್ಯಕ್ರಮಗಳನ್ನು ರೂಪಿಸಿರುವುದನ್ನು ನೋಡಬಹುದಾಗಿದೆ. ಯಾವುದೇ ಒಂದು ಪ್ರದೇಶದ ಅಭಿವೃದ್ಧಿಯಲ್ಲಿ ಆರ್ಥಿಕ ಚಟುವಟಿಕೆಗಳು ಬಹಳ ಮುಖ್ಯ ಪಾತ್ರ ವಹಿಸುತ್ತವೆ. ಬಳ್ಳಾರಿ ಜಿಲ್ಲೆಯಲ್ಲಿನ ಖನಿಜ ಸಂಪತ್ತು ಔದ್ಯೋಗಿಕ ಪ್ರಗತಿಗೆ ಬೆನ್ನೆಲುಬಾಗಿದೆ. ಜಿಲ್ಲೆಯು ಉತ್ಕೃಷ್ಟ ಕಬ್ಬಿಣ ಮತ್ತು ಮ್ಯಾಂಗನೀಸ್ ಖನಿಜಗಳಿಗೆ ವಿಶ್ವ ವಿಖ್ಯಾತಿ ಗಳಿಸಿದೆ. ಕಬ್ಬಿಣ ನಿಕ್ಷೇಪದ ಪ್ರಮಾಣ ೧೦೩೨.೪೦ ದಶಲಕ್ಷ ಟನ್ ಲಭ್ಯವಿದ್ದು, ಮ್ಯಾಂಗನೀಸ್ ಅದಿರಿನ ನಿಕ್ಷೇಪದ ಪ್ರಮಾಣ ೧೮.೮೧ ದಶಲಕ್ಷ ಟನ್ ಎಂದು ಅಂದಾಜು ಮಾಡಲಾಗಿದೆ. ೧೯೯೧ರ ಮಧ್ಯ ಭಾಗದಲ್ಲಿ ಜಾರಿಗೆ ಬಂದ ಹೊಸ ಆರ್ಥಿಕ ನೀತಿಯ ಖಾಸಗೀಕರಣ ಪ್ರಕ್ರಿಯೆಯ ಪರಿಣಾಮವಾಗಿ ಜಿಲ್ಲೆಯಲ್ಲಿ ಬೃಹತ್ ಕಂಪನಿಗಳು ಕಬ್ಬಿಣ ಮತ್ತು ಉಕ್ಕು ಉದ್ದಿಮೆ ಮೇಲೆ ಬಂಡವಾಳ ತೊಡಗಿಸಿವೆ. ಜಿಲ್ಲೆಯಲ್ಲಿ ಪ್ರಸ್ತುತ ನಾಲ್ಕು ಕಬ್ಬಿಣ ಮತ್ತು ಉಕ್ಕು ಉದ್ದಿಮೆಗಳು ಉತ್ಪಾದನೆಯಲ್ಲಿ ತೊಡಗಿವೆ.[೮] ಹೀಗಾಗಿ ರಾಷ್ಟ್ರದ ಉಕ್ಕು ಉತ್ಪಾದನೆಯಲ್ಲಿ ಬಳ್ಳಾರಿ ಜಿಲ್ಲೆಯ ವಿಶಿಷ್ಟ ಸ್ಥಾನವನ್ನು ಪಡೆದುಕೊಂಡಿದೆ. ಜಿಲ್ಲೆಯಲ್ಲಿ ಜರುಗುತ್ತಿರುವ ಈ ಕೈಗಾರೀಕರಣ ಪ್ರಕ್ರಿಯೆಯು ಜಿಲ್ಲೆಯು ಕೆಲವೇ ಭಾಗಗಳಲ್ಲಿ ನೆಲೆಗೊಂಡಿದೆ. ಈಗಾಗಲೇ ಪ್ರಾದೇಶಿಕವಾಗಿ ಜಿಲ್ಲೆಯನ್ನು ಪೂರ್ವ ಮತ್ತು ಪಶ್ಚಿಮ ತಾಲೂಕುಗಳೆಂದು ವಿಂಗಡಿಸಲಾಗಿದೆ. ಪೂರ್ವ ಭಾಗದಲ್ಲಿ ಬಳ್ಳಾರಿ, ಹೊಸಪೇಟೆ, ಸಿರಗುಪ್ಪ ಮತ್ತು ಸಂಡೂರು ತಾಲೂಕುಗಳಿವೆ. ಕೈಗಾರೀಕರಣ ಪ್ರಕ್ರಿಯೆಯಿಂದ ಪೂರ್ವ ತಾಲೂಕುಗಳು ಸಮೃದ್ಧಿಯಾಗಿವೆ. ಪಶ್ಚಿಮ ಭಾಗದ ತಾಲೂಕುಗಳು ಕೈಗಾರೀಕರಣ ಪ್ರಕ್ರಿಯೆಯಿಂದ ಹೊರಗೆ ಉಳಿದಿವೆ. ಅಭಿವೃದ್ಧಿಯ ಕೈಗಾರೀಕರಣ ಸವಲತ್ತುಗಳು ಪೂರ್ತಿಯಾಗಿ ಪೂರ್ವಭಾಗದ ತಾಲೂಕುಗಳಲ್ಲಿ ನೆಲೆಗೊಂಡಿವೆ. ಹೀಗಾಗಿ ಈ ಎರಡು ಭಾಗಗಳ ನಡುವೆ ಆರ್ಥಿಕ ಅಸಮಾನತೆ ಹೆಚ್ಚು ಕಂಡುಬಂದಿವೆ. ಇದರಿಂದ ಸಾಪೇಕ್ಷವಾಗಿ ಪೂರ್ವ ಭಾಗದ ತಾಲೂಕುಗಳನ್ನು ಅಭಿವೃದ್ಧಿ ಪ್ರದೇಶಗಳೆಂದು ಪಶ್ಚಿಮ ಭಾಗದ ತಾಲೂಕುಗಳನ್ನು ಹಿಂದುಳಿದ ಪ್ರದೇಶಗಳೆಂದು ಗುರುತಿಸಲಾಗಿದೆ. ಜಿಲ್ಲೆಯಲ್ಲಿ ದುಡಿಮೆದವರು ಹೆಚ್ಚು ಕೃಷಿಯನ್ನು ಅವಲಂಬಿಸಿದ್ದಾರೆ. ಒಟ್ಟು ಜನಸಂಖ್ಯೆಯಲ್ಲಿ ೬೩,೯೯೧(೭೩%)ರಷ್ಟು ಕೃಷಿಯನ್ನು ಅವಲಂಬಿಸಿದ್ದಾರೆ. ಈ ಪ್ರಮಾಣವನ್ನು ರಾಜ್ಯಕ್ಕೆ ಹೋಲಿಸಿದರೆ ಶೇ. ೧೦ರಷ್ಟು ಕೃಷಿ ಅವಲಂಬಿತ ಸಂಖ್ಯೆ ಹೆಚ್ಚಿದೆ. ವಲಯವಾರು ದುಡಿಮೆ ವರ್ಗವನ್ನು ನೋಡಿದಾಗ ಪ್ರಾಥಮಿಕ ವಲಯ ೩,೭೭,೮೫೫(೭೬.೧೮%) ರಷ್ಟು, ದ್ವಿತೀಯ ವಲಯ ೩೧,೪೨,೨೫೩(೭.೧) ರಷ್ಟು ಮತ್ತು ತೃತೀಯ ವಲಯ ೩,೭೭,೮೫೫(೧೬.೦೯%)ರಷ್ಟಿದೆ. ಈ ಪ್ರಮಾಣವು ರಾಜ್ಯಕ್ಕೆ ಹೋಲಿಸಿದರೆ ಕ್ರಮವಾಗಿ ೧೩, ೧೬ ಮತ್ತು ೧೨ನೇ ಸ್ಥಾನವನ್ನು ಪಡೆದಿವೆ. ರಾಜ್ಯದ ದುಡಿಮೆಗಾರ ವರ್ಗಕ್ಕೆ ಹೋಲಿಸಿದರೆ ಪ್ರಾಥಮಿಕ ವಲಯದಲ್ಲಿ ಶೇ. ೯ರಷ್ಟು ಹೆಚ್ಚು ದ್ವಿತೀಯ ವಲಯ ಶೇ. ೫.೭ರಷ್ಟು ಮತ್ತು ತೃತೀಯ ವಲಯದಲ್ಲಿ ಶೇ. ೨.೫ರಷ್ಟು ಕಡಿಮೆ

ಇರುವುದನ್ನು ಗಮನಿಸಬಹುದು. (ಕೋಷ್ಟಕ-೪) ಜಿಲ್ಲೆಯ ಒಟ್ಟು ಶ್ರಮಶಕ್ತಿಯ ವಲಯವಾರು ವಿತರಣೆ ಮತ್ತು ಆ ವಿತರಣೆಯಲ್ಲಿ ೧೯೮೧ರಿಂದ ೧೯೯೧ರಲ್ಲಿ ಉಂಟಾದ ಬದಲಾವಣೆ ಅಭಿವೃದ್ಧಿ ದೃಷ್ಟಿಯಿಂದ ಅನುಕೂಲಕರವಾಗಿಲ್ಲ. ಪ್ರಾಥಮಿಕ ವಲಯ ಅಂದರೆ ಕೃಷಿ, ಗಣಿಗಾರಿಕೆ ಮತ್ತು ಮೀನುಗಾರಿಕೆ ಮುಂತಾದ ಕಸುಬುಗಳನ್ನು ಅವಲಂಬಿಸಿಕೊಂಡಿರುವ ಜನರ ಪ್ರಮಾಣ ಶೇ. ೮೭.೦೧ರಿಂದ ಶೇ. ೮೭.೮೭ಕ್ಕೆ ಏರಿದೆ. ಇದನ್ನು ಅಭಿವೃದ್ಧಿಯ ಪ್ರಮುಖ ಚಲನೆ ಎಂದು ಹೇಳಲಾಗಿದೆ. ಇದೇ ಸಮಯದಲ್ಲಿ ಅಂದರೆ ಕೈಗಾರಿಕೆ, ಯಂತ್ರೋದ್ಯಮ ಇತ್ಯಾದಿಯನ್ನು ಅವಲಂಬಿಸಿಕೊಂಡಿರುವವರ ಪ್ರಮಾಣವು ಶೇ. ೭.೧೧ರಿಂದ ಶೇ. ೪.೮೬ಕ್ಕೆ ಇಳಿದಿದೆ. ಅತ್ಯಂತ ಆತಂಕಕಾರಿ ಸಂಗತಿಯೆಂದರೆ ಗಣಿಗಾರಿಕೆ ಬಳ್ಳಾರಿ ಜಿಲ್ಲೆಯ ಮುಖ್ಯ ಕಸುಬು. ಆದರೆ ಈ ವೃತ್ತಿಯನ್ನು ಅವಲಂಬಿಸಿಕೊಂಡಿರುವ ಶ್ರಮಶಕ್ತಿಯ ಪ್ರಮಾಣ ಇದೇ ಅವಧಿಯಲ್ಲಿ ಶೇ. ೨.೪೪ರಿಂದ ಶೇ. ೧.೬೮ಕ್ಕೆ ಇಳಿದಿದೆ. ೧೯೮೧-೧೯೯೧ರ ಅವಧಿಯಲ್ಲಿ ಬಳ್ಳಾರಿ ಜಿಲ್ಲೆಯಲ್ಲಿ ದ್ವಿತೀಯ ವಲಯ ಬೆಳೆದಿದೆ. ಆದರೆ ಹೆಚ್ಚಿನ ಸಂಖ್ಯೆಯಲ್ಲಿ ಶ್ರಮಶಕ್ತಿಯನ್ನು ತೊಡಗಿಸಿಕೊಂಡಿಲ್ಲ.[೧೦] ಈ ಎಲ್ಲ ಅಂಕಿ-ಅಂಶಗಳು ಜಿಲ್ಲೆಯು ಹಿಂದುಳಿದಿರುವುದನ್ನು ಸೂಚಿಸುವುದು. ಯಾವ ಪ್ರದೇಶ ಪ್ರಾಥಮಿಕ ವಲಯವನ್ನು ಹೆಚ್ಚು ಅವಲಂಬಿಸಿರುತ್ತದೆಯೋ ಅ ಪ್ರದೇಶವನ್ನು ಹಿಂದುಳಿದಿರುವ ಪ್ರದೇಶ ಎಂದು ಗ್ರಹಿಸಲಾಗಿದೆ. ಅಭಿವೃದ್ಧಿ ದೃಷ್ಟಿಯಿಂದ ದ್ವಿತೀಯ ಮತ್ತು ತೃತೀಯ ವಲಯದಲ್ಲಿ ಹೆಚ್ಚು ಅವಲಂಬಿತವಾಗಿದ್ದರೆ ಉತ್ತಮ ಬೆಳವಣಿಗೆ ಎಂದು ಹೇಳಬಹುದು. ಹೀಗೆ ಬಳ್ಳಾರಿ ಜಿಲ್ಲೆಯು ರಾಜ್ಯದ ಹಿಂದುಳಿದಿರುವ ಜಿಲ್ಲೆಗಳಲ್ಲಿ ಒಂದಾಗಿದೆ. ಜಿಲ್ಲೆಯ ಕೃಷಿಗೆ ತುಂಗಭದ್ರಾ ನದಿಯು ಪ್ರಮುಖವಾದ ನೀರಾವರಿಯ ಮೂಲವಾಗಿದೆ. ಈ ನದಿಯು ಜಿಲ್ಲೆಯ ಪಶ್ಚಿಮ ಮತ್ತು ಉತ್ತರ ದಿಕ್ಕುಗಳ ಮೊರೆಯಾಗಿದೆ. ಈ ನದಿಯಿಂದ ಇಡೀ ಜಿಲ್ಲೆಯು ನೀರಾವರಿ ಸಮಸ್ಯೆಗೆ ಪರಿಹಾರವಾಗಿಲ್ಲ. ಜಿಲ್ಲೆಯ ಕೆಲವೇ ತಾಲೂಕುಗಳಿಗೆ ನೀರಾವರಿ ದೊರಕಿದೆ. ಇದು ಜಿಲ್ಲೆಯ ಪೂರ್ವ ತಾಲ್ಲೂಕುಗಳಿಗೆ ಮಾತ್ರ ಸೀಮಿತವಾಗಿದೆ. ಈ ತಾಲೂಕುಗಳು ಕೃಷಿಯಿಂದ ಅಭಿವೃದ್ಧಿಯ ಪಥದಲ್ಲಿವೆ. ಪಶ್ಚಿಮ ಭಾಗದ ತಾಲೂಕುಗಳು ಪೂರ್ತಿ ಒಣಭೂಮಿ ಕೃಷಿಯನ್ನು ಅವಲಂಬಿಸಿವೆ. ಆರ್ಥಿಕವಾಗಿ ಜಿಲ್ಲೆಯ ವರಮಾನವು ೧೯೯೫-೯೬ರ ಅವಧಿಯಲ್ಲಿ ಶೇ. ೮,೫೪೪ ರೂ.ಗಳನ್ನು ರಾಜ್ಯದ ಸರಾಸರಿಗಿಂತ ರೂ. ೮೪೦ ಕಡಿಮೆ ಇದೆ. ಅಂತೆಯೇ, ವರಮಾನದಲ್ಲಿ ಜಿಲ್ಲೆಯು ರಾಜ್ಯದಲ್ಲಿ ೮ನೇ ಸ್ಥಾನವನ್ನು ಹೊಂದಿರುವುದು ಹಲವು ಅಧ್ಯಯನಗಳಿಂದ ಕಂಡು ಬಂದಿದೆ. ಮುಂದುವರಿದು, ರಾಜ್ಯ ರಾಜಕೀಯದಲ್ಲಿ ಬಳ್ಳಾರಿ ಜಿಲ್ಲೆಗೆ ವಿಶಿಷ್ಟ ಸ್ಥಾನಮಾನವಿದೆ. ಸ್ವಾತಂತ್ರ್ಯ ನಂತರ ನಡೆದ ಎಲ್ಲಾ ಲೋಕಸಭೆ ಚುನಾವಣೆಗಳಲ್ಲಿ ಕಾಂಗ್ರೆಸ್ ಪಕ್ಷ ಗೆಲ್ಲುತ್ತಾ ಬಂದಿದೆ. ಇದೊಂದು ಐತಿಹಾಸಿಕ ದಾಖಲೆಯಾಗಿದೆ. ಜಿಲ್ಲೆಯು ಒಟ್ಟು ೮ ವಿಧಾನಸಭಾ ಕ್ಷೇತ್ರಗಳನ್ನು, ಒಂದು ಲೋಕಸಭಾ ಕ್ಷೇತ್ರವನ್ನು ಹೊಂದಿದೆ. ಜಿಲ್ಲೆಯ ಹೊಸಪೇಟೆ ತಾಲೂಕು ಕೊಪ್ಪಳ ಲೋಕಸಭಾ ಕ್ಷೇತ್ರಕ್ಕೆ ಸೇರಿದೆ. ಜಿಲ್ಲೆಯನ್ನು ಆಡಳಿತಾತ್ಮಕವಾಗಿ ೨ ಉಪವಿಭಾಗಗಳಾಗಿ ವಿಂಗಡಿಸಲಾಗಿದೆ. ಒಂದು ಬಳ್ಳಾರಿ, ಇನ್ನೊಂದು ಹೊಸಪೇಟೆಯಾಗಿದೆ. ಬಳ್ಳಾರಿ ವಿಭಾಗವು ಮೂರು ತಾಲ್ಲೂಕುಗಳನ್ನು ಮತ್ತು ಹೊಸಪೇಟೆ ವಿಭಾಗವು ೪ ತಾಲೂಕುಗಳನ್ನು

ಹೊಂದಿದೆ. ಹಾಗೆಯೇ ೧೯೬೩ರಲ್ಲಿ ಕರ್ನಾಟಕ ರಾಜ್ಯದಲ್ಲಿ ನಗರಪಾಲಿಕೆ ಕಾಯ್ದೆಯನ್ವಯ ಜಿಲ್ಲೆಯಲ್ಲಿ ನಾಲ್ಕು ಹಂತದ ನಗರಪಾಲಿಕ ಕಾಯ್ದೆ ಜಾರಿಯಲ್ಲಿದೆ. ಪ್ರಸ್ತುತ ಬಳ್ಳಾರಿ ಮಹಾನಗರ ಪಾಲಿಕೆಯಲ್ಲಿ ೩೫ ಜನ ಸದಸ್ಯರಿದ್ದಾರೆ. ಇದರಲ್ಲಿ ಸದಸ್ಯರ ಜಾತಿವಾರು ಸಂಖ್ಯೆಯನ್ನು ಗಮನಿಸಿದಾಗ ಪರಿಶಿಷ್ಟ ಜಾತಿ, ೦೫(೧೪.೨೮%), ಪರಿಶಿಷ್ಟ ಪಂಗಡ ೩(೮.೫೭%), ಹಿಂದುಳಿದ ವರ್ಗ ೧೨(೩೪.೨೮%), ಮತ್ತು ಸಾಮಾನ್ಯ ೧೫(೪೨.೮೫%) ರಷ್ಟಿದ್ದಾರೆ. ಲಿಂಗವಾರು ಪ್ರಮಾಣದಲ್ಲಿ ಪುರುಷರು ೧೯(೫೪.೨೮%), ಮಹಿಳೆಯರು ೧೬(೪೫.೭೧%) ರಷ್ಟಿದ್ದಾರೆ.[೧೧] (ಕೋಷ್ಟಕ–೩) ಹೀಗೆ ಮಹಾನಗರ ಪಾಲಿಕೆಯ ಸದಸ್ಯರು ಪ್ರಾತಿನಿಧ್ಯವನ್ನು ಹೊಂದಿದ್ದಾರೆ.

ಪ್ರಸ್ತುತ ಅದ್ಯಯನವು ನಗರಸಭೆ ಮತ್ತು ಪಟ್ಟಣ ಪಂಚಾಯಿತಿಗಳ ಬಗ್ಗೆ ಕೈಗೊಂಡಿರುವುದರಿಂದ ಜಿಲ್ಲೆಯಲ್ಲಿ ಮಹಾನಗರಪಾಲಿಕೆ ವ್ಯವಸ್ಥೆಯ ಮಧ್ಯದ ಸ್ತರವಾದ ನಗರಸಭೆ ಮತ್ತು ಪಟ್ಟಣ ಪಂಚಾಯಿತಿಗಳ ಕುರಿತು ಸಂಕ್ಷಿಪ್ತವಾಗಿ ಚರ್ಚಿಸಲಾಗಿದೆ. ಜಿಲ್ಲೆಯಲ್ಲಿ ಸ್ವಾತಂತ್ರ್ಯ ನಂತರ ನಗರಸಭೆಯ ಸದಸ್ಯರನ್ನು ಚುನಾವಣೆ ಮತ್ತು ನೇರ ಆಯ್ಕೆಯ ಮೂಲಕ ನೇಮಿಸಲಾಗುತ್ತಿತ್ತು. ಜಿಲ್ಲೆಯ ಹೊಸಪೇಟೆ ನಗರಸಭೆಯಲ್ಲಿ ೩೫ ಸದಸ್ಯರು ಪ್ರಾತಿನಿಧ್ಯ ಹೊಂದಿದ್ದಾರೆ. ಈ ಸದಸ್ಯರಲ್ಲಿ ಲಿಂಗವಾರು ನೋಡಿದಾಗ ಪುರುಷ ಸದಸ್ಯರು ೨೩ (೬೫.೭೧%), ಮಹಿಳಾ ಸದಸ್ಯರು ೧೨(೩೪.೨೮%)ರಷ್ಟು ಪ್ರತಿನಿಧೀಕರಣಗೊಂಡಿದ್ದಾರೆ. ಜಾತಿವಾರು ಪ್ರಾತಿನಿಧ್ಯವನ್ನು ನೋಡಿದಾಗ ಈ ಸದಸ್ಯರಲ್ಲಿ ಪರಿಶಿಷ್ಟ ಜಾತಿ ೫(೧೪.೨೮%), ಪರಿಶಿಷ್ಟ ಪಂಗಡ ೫(೧೪.೨೮%) ಹಿಂದುಳಿದ ವರ್ಗ ೧೨(೩೪.೨೮%), ಸಾಮಾನ್ಯ ವರ್ಗ ೧೩(೩೭.೧೪%)ರಷ್ಟು ಪ್ರತಿನಿಧಿಕರಣಗೊಂಡಿದ್ದಾರೆ.[೧೨](ಕೊಷ್ಟಕ–೩) ಹಾಗೆಯೇ ಈ ಕಾಯ್ದೆಯನ್ವಯ ಸ್ಥಳೀಯ ಸಂಸ್ಥೆಗಳಿಗೆ ಕೆಲವು ಕಾರ್ಯಗಳನ್ನು ವಹಿಸಲಾಗಿತ್ತು. ನಗರ ರಸ್ತೆಗಳು, ಬೀದಿದೀಪ, ಸಾರ್ವಜನಿಕ ಕಟ್ಟಡಗಳ ನಿರ್ಮಾಣ, ಕುಡಿಯುವ ನೀರು, ಚರಂಡಿ ನಿರ್ಮಾಣ, ನೈರ್ಮಲ್ಯ, ಆರೋಗ್ಯ, ಶಿಕ್ಷಣ ಮತ್ತು ನಾಗರಿಕ ಸೌಲಭ್ಯಗಳನ್ನು ಆ ವೇಳೆಗಾಗಲೇ ಸ್ಥಳೀಯ ಸಂಸ್ಥೆಗಳಿಗೆ ವಹಿಸಲಾಗಿತ್ತು. ೩,೮೯೭೩,೦೦೦ರಷ್ಟು ಮಳಿಗೆ ಬಾಡಿಗೆ, ಮನೆಕಂದಾಯ ಮತ್ತು ನೀರಿನ ಕಂದಾಯಗಳನ್ನು ಸ್ಥಳೀಯ ಸಂಸ್ಥೆಗಳು ಸಂಗ್ರಹಿಸುತ್ತಿದ್ದವು.[೧೩] ಸ್ಥಳೀಯ ಸಂಸ್ಥೆಯ ಕಾರ್ಯವ್ಯಾಪ್ತಿ ಮತ್ತು ಆದಾಯಗಳು ಬಹಳ ಸೀಮಿತವಾಗಿದ್ದವು. ಅಭಿವೃದ್ಧಿ ಕಾಮಗಾರಿಗಳಿಗೆ ಅನುದಾನ ಕೊಡುವುದು ಮತ್ತು ಅವುಗಳನ್ನು ಕಾರ್ಯರೂಪಕ್ಕೆ ತರುವುದು ರಾಜ್ಯ ಸರ್ಕಾರದ ಅಧಿಕಾರಿಗಳ ವ್ಯಾಪ್ತಿಯಲ್ಲಿತ್ತು. ಸ್ಥಳೀಯ ಸಂಸ್ಥಗಳಿಗೆ ಹಣವನ್ನು ಬಳಸುವ ಸಂಪೂರ್ಣ ಸ್ವಾತಂತ್ರ್ಯವಿರಲಿಲ್ಲ. ಹಾಗಾಗಿ ನಗರ ಸ್ಥಳೀಯ ಸಂಸ್ಥೆಗಳ ಎಲ್ಲಾ ಹಿಡಿತ ಮೇಲಿನ ಸ್ಥಳಗಳಾದ ರಾಜ್ಯ ಸರ್ಕಾರಗಳ ಹಿಡಿತದಲ್ಲಿದ್ದವು. ನಗರ ಸ್ಥಳೀಯ ಸಂಸ್ಥೆಗಳು ಸ್ಥಳೀಯ ಯೋಜನೆಗಳನ್ನು ತಲುಪಿಸುವ ಸಂಸ್ಥೆಯಾಗಿತ್ತು. ಸ್ಥಳೀಯ ಸಂಸ್ಥೆಗಳಿಗೆ ನಿಶ್ಚಿತ ಅನುದಾನಗಳಾಗಲಿ ಅಥವಾ ಇತರೆ ಆದಾಯದ ಮೂಲಗಳಾಗಲಿ ಇರಲಿಲ್ಲ. ಈ ಲೋಪದೊಷಗಳನ್ನು ನಿವಾರಿಸಿ ೧೯೯೩ರಲ್ಲಿ ೭೪ನೇ ತಿದ್ದುಪಡಿಯನ್ನು ತರುವುದರ ಮೂಲಕ ನಂತರ ಸ್ಥಳೀಯ ಸಂಸ್ಥೆಗಳು ಸ್ವತಂತ್ರ ಸಂಸ್ಥೆಯನ್ನಾಗಿ ರಚಿಸಲಾಯಿತು.[೧೪]

೧೯೯೩ರಲ್ಲಿ ೭೪ನೇ ಸಂವಿಧಾನದ ತಿದ್ದುಪಡಿಯನ್ವಯ ಈ ಸಂಸ್ಥೆಗಳನ್ನು ಸಂವಿಧಾನಿಕಗೊಳಿಸಲಾಯಿತು. ಈ ಸಂವಿಧಾನ ತಿದ್ದುಪಡಿಯನ್ವಯ ನಗರ ಸ್ಥಳೀಯ ಸಂಸ್ಥೆಗಳು ರಚನೆಗೊಂಡಿವೆ. ಬಳ್ಳಾರಿ ಜಿಲ್ಲೆಯು ಈಗ ಒಟ್ಟು ೧ ನಗರಸಭೆ ಮತ್ತು ೪ ಪಟ್ಟಣ ಪಂಚಾಯಿತಿಗಳನ್ನು ಹೊಂದಿದೆ. ಜಿಲ್ಲೆಯಲ್ಲಿ ಹೊಸಪೇಟೆ ನಗರಸಭೆ ಹೊಂದಿದ್ದು ಕೂಡ್ಲಿಗಿ, ಸಂಡೂರು, ಸಿರುಗುಪ್ಪ ಸ್ಥಳೀಯ ಸಂಸ್ಥೆಗಳಲ್ಲಿ ಪಟ್ಟಣ ಪಂಚಾಯಿತಿಗಳನ್ನು ಹೊಂದಿದೆ. ಒಟ್ಟು ನಗರ ಸಭೆ ಮತ್ತು ಪಟ್ಟಣ ಪಂಚಾಯಿತಿಗಳ ಸದಸ್ಯರು ೧೧೨. ಇದರಲ್ಲಿ ಲಿಂಗವಾರು ಸಂಖ್ಯೆಯನ್ನು ನೋಡಿದಾಗ ಪುರುಷರು ೭೩(೬೫.೧೮%) ಮತ್ತು ಮಹಿಳೆಯರು ೩೯(೩೪.೮೨%) ರಷ್ಟು ಪ್ರಾತಿನಿಧ್ಯವನ್ನು ಹೊಂದಿದ್ದಾರೆ. ಇನ್ನೂ ಸದಸ್ಯರ ಜಾತಿವಾರು ಪ್ರಾತಿನಿಧ್ಯವನ್ನು ನೋಡಿದಾಗ, ಪರಿಶಿಷ್ಟ ಜಾತಿ ೨೦(೧೭.೮೫%) ಪರಿಶಿಷ್ಟ ಪಂಗಡ ೨೫(೨೨.೩೫%), ಹಿಂದುಳಿದ ವರ್ಗದಿಂದ ೩೯(೩೪.೮೨%)ರಷ್ಟು ಮತ್ತು ಸಾಮಾನ್ಯವರ್ಗದಿಂದ ೨೯(೨೫.೮೯%)ರಷ್ಟು ಸದಸ್ಯರು ಪ್ರತಿನಿಧೀಕರಣಗೊಂಡಿದ್ದಾರೆ.[೧೫] (ಕೋಷ್ಟಕ-೨) ಹೀಗೆ ಬಳ್ಳಾರಿ ಜಿಲ್ಲೆಯ ಆರ್ಥಿಕ, ಸಾಮಾಜಿಕ ಮತ್ತು ರಾಜಕೀಯ ವಿವರಗಳನ್ನು ನೋಡಿದಾಗ ಆರ್ಥಿಕವಾಗಿ ಮತ್ತು ಸಾಮಾಜಿಕವಾಗಿ ಜಿಲ್ಲೆಯು ರಾಜ್ಯದ ಹಿಂದುಳಿದಿರುವ ಜಿಲ್ಲೆಗಳಲ್ಲಿ ಒಂದಾಗಿದೆ. ಈ ಜಿಲ್ಲೆಯಲ್ಲಿ ವಿಕೇಂದ್ರೀಕರಣ ವ್ಯವಸ್ಥೆಯ ಕೆಳಸ್ತರವಾದ ನಗರ ಸ್ಥಳೀಯ ಸಂಸ್ಥೆಗಳ ಕಾರ್ಯಕ್ಷಮತೆಯನ್ನು ಅಧ್ಯಯನ ಮಾಡಲು ಬಳ್ಳಾರಿ ಜಿಲ್ಲೆಯನ್ನು ಆಯ್ಕೆ ಮಾಡಿಕೊಳ್ಳಲಾಗಿದೆ. ಹಾಗೆಯೇ ಜಿಲ್ಲೆಯಲ್ಲಿ ತಾಲೂಕುಗಳ ಮತ್ತು ಅಧ್ಯಯನಕ್ಕೊಳಗಾದ ಸ್ಥಳೀಯ ಸಂಸ್ಥೆಗಳ ವಿವರಣೆ ಮತ್ತು ಆಯ್ಕೆ ಮಾದರಿಯನ್ನು ಕುರಿತು ಮುಂದೆ ಚರ್ಚಿಸಲಾಗಿದೆ.

**೩.೫. ಅಧ್ಯಯನ ವ್ಯಾಪ್ತಿಯ ತಾಲೂಕುಗಳ ವಿವರಣೆ ಮತ್ತು ಆಯ್ಕೆ**

ಹೀಗೆ ಜಿಲ್ಲೆಯ ತಾಲೂಕುಗಳನ್ನು ಭೌಗೋಳಿಕ, ಪ್ರಾದೇಶಿಕ, ಆರ್ಥಿಕ ಮತ್ತು ಸಾಮಾಜಿಕ ಅಂಕಿಅಂಶಗಳ ಮೂಲಕ ಹೊಸಪೇಟೆ ನೀರಾವರಿ ಪ್ರದೇಶ ಹೊಂದಿದ ಅಭಿವೃದ್ಧಿ ತಾಲೂಕು ಮತ್ತು ಕೂಡ್ಲಿಗಿ ಒಣಭೂಮಿ ಪ್ರದೇಶ ಹೊಂದಿದ ಹಿಂದುಳಿದ ತಾಲೂಕುಗಳಾದ ನಗರ ಸ್ಥಳೀಯ ಸಂಸ್ಥೆಗಳೆಂದು ಪರಿಗಣಿಸಿ ಅಧ್ಯಯನಕ್ಕೆ ಎರಡು ತಾಲೂಕುಗಳನ್ನು ಆಯ್ಕೆ ಮಾಡಿಕೊಳ್ಳಲಾಗಿದೆ. ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡ ತಾಲೂಕುಗಳ ವಿವರಣೆಯನ್ನು ಕೆಳಗೆ ವಿವರಿಸಲಾಗಿದೆ.

**ಹೊಸಪೇಟೆ ತಾಲೂಕು(ನಗರಸಭೆ)**

ಹೊಸಪೇಟೆ ನಗರಸಭೆಯು ಬಳ್ಳಾರಿ ನಗರಸಭೆಯ ವ್ಯಾಪ್ತಿ ಮತ್ತು ಪ್ರಾಮುಖ್ಯತೆಯಲ್ಲಿ ನಂತರದ ಸ್ಥಾನವನ್ನು ಪಡೆದಿದೆ. ೧೯೧೩ ಜನವರಿ ೧ರಲ್ಲಿ ಮೊದಲು ಟೌನ್ ಮುನ್ಸಿಪಲ್ ಕೌನ್ಸಿಲ್ ಇದ್ದಿದ್ದು, ನಂತರ ೨೨ ಫೆಬ್ರವರಿ ೧೯೫೪ರಂದು ಸಿಟಿ ಮುನ್ಸಿಪಲ್ ಕೌನ್ಸಿಲ್‌ಗೆ ಏರಿಸಲಾಯಿತು. ಹಾಗೆಯೇ ಹೊಸಪೇಟೆ ನಗರಸಭೆಗೆ ಡಿ.ಜಿ.ಬ್ಲೆಸ್ ಸಬ್‌ಕಲೆಕ್ಟರ್ ಇವರು ಮೊಟ್ಟಮೊದಲ ಅಧಿಕೃತ ಚೇರಮನ್‌ರಾಗುವುದರೊಂದಿಗೆ ಅಸ್ತಿತ್ವಕ್ಕೆ ಬಂತು. ಇನ್ನುಳಿದ ನಾಮಕರಣಗೊಂಡ ಸರ್ಕಾರೇತರ ಕೌನ್ಸಿಲುಗಳೆಂದರೆ ವಿಠಲ್ ತಂತ್ ಜೋಶಿ, ಬಂಡಿ ನಾಗಲಿಂಗಪ್ಪ ಮತ್ತು ಉಳ್ಳಾಗಡ್ಡಿ ಕಲ್ಮತೆಪುನವರು ಬಳ್ಳಾರಿ ಜಿಲ್ಲೆಯಲ್ಲಿ ಹೊಸಪೇಟೆ ಪ್ರಮುಖ ತಾಲೂಕು ಹಾಗೂ ಉಪವಿಭಾಗವಾಗಿದೆ. ತಾಲೂಕಿನಲ್ಲಿ

ಮುಖ್ಯವಾಗಿ ಗಮನಿಸಬೇಕಾದ ಅಂಶಗಳೆಂದರೆ ಜಿಲ್ಲೆಯಲ್ಲಿ ಹೆಚ್ಚು ನೀರಾವರಿ ಪ್ರದೇಶವನ್ನು ಹೊಂದಿದ್ದು ಮಧ್ಯಮಗಾತ್ರದ ಕಬ್ಬಿಣ ಮತ್ತು ಉಕ್ಕು ಉದ್ಯಮಗಳನ್ನು ಮತ್ತು ಗಣಿಗಾರಿಕೆಯನ್ನು ಹೊಂದಿದೆ. ತಾಲೂಕಿನ ಪೂರ್ವಭಾಗದ ಗ್ರಾಮಗಳು ಹೆಚ್ಚು ನೀರಾವರಿ ಪ್ರದೇಶಗಳಾಗಿವೆ. ಈ ಭಾಗದಲ್ಲಿ ಬೆಳೆಯುವ ವಾಣಿಜ್ಯ ಬೆಳೆಗಳು ಅಧಿಕವಾಗಿದೆ. ಇದರಿಂದ ಹೊಸಪೇಟೆ ಮಾರುಕಟ್ಟೆ ವ್ಯವಹಾರವನ್ನು ಹೆಚ್ಚಿಸಿದೆ. ತಾಲೂಕಿನಲ್ಲಿ ನೀರಾವರಿ ಪ್ರದೇಶ ಕೆಲವೇ ಪ್ರದೇಶಕ್ಕೆ ಸೀಮಿತವಾಗಿದೆ. ತಾಲೂಕಿನ ಉತ್ತರಭಾಗದಲ್ಲಿರುವ ತುಂಗಭದ್ರಾ ನದಿ ನೀರಾವರಿಯ ಪ್ರಮುಖ ಮೂಲವಾಗಿದೆ. ಹೆಚ್ಚು ವಿಶಾಲವಾಗಿರುವ ಈ ತಾಲೂಕು ಈಶಾನ್ಯದಲ್ಲಿ ಸಿರುಗುಪ್ಪ, ಪೂರ್ವದಲ್ಲಿ ಬಳ್ಳಾರಿ, ದಕ್ಷಿಣದಲ್ಲಿ ಸಂಡೂರು, ಪಶ್ಚಿಮದಲ್ಲಿ ಹಗರಿಬೊಮ್ಮನಹಳ್ಳಿ, ಗಂಗಾವತಿ ತಾಲೂಕುಗಳನ್ನು ಸುತ್ತುವರಿದಿದೆ. ಹೊಸಪೇಟೆ ಉಪವಿಭಾಗವು ನಾಲ್ಕು ತಾಲೂಕುಗಳನ್ನು ಹೊಂದಿದೆ. ತಾಲೂಕು ಒಟ್ಟು ೭೮(೧,೫೩,೪೯) ಗ್ರಾಮಗಳನ್ನು ಹೊಂದಿದೆ.[೧೬] ಈ ತಾಲೂಕು ಹೊಸಪೇಟೆ ಸೇರಿದಂತೆ ಮರಿಯಮ್ಮನಹಳ್ಳಿ, ಕಮಲಾಪುರ ಮತ್ತು ಕಂಪ್ಲಿ ಹೋಬಳಿಗಳನ್ನು ಹೊಂದಿದೆ. ಜಿಲ್ಲೆಯ ಪೂರ್ವಭಾಗದ ಪ್ರಮುಖ ತಾಲೂಕು ಹಾಗೂ ಅಭಿವೃದ್ಧಿ ಪ್ರದೇಶವಾಗಿದೆ. ಕೃಷಿ ಮತ್ತು ಕೈಗಾರಿಕೆ ವಲಯದಲ್ಲಿ ತಾಲೂಕು ಪ್ರಗತಿಪಥದಲ್ಲಿದೆ.

**ಜನಸಂಖ್ಯೆ, ಸಾಕ್ಷರತೆ ಇತ್ಯಾದಿ ವಿವರಗಳು**

ಹೊಸಪೇಟೆ ತಾಲೂಕು ೨೦೧೧ರ ಜನಗಣತಿಯ ಪ್ರಕಾರ ಒಟ್ಟು ಜನಸಂಖ್ಯೆ ೩,೭೪,೯೪೯ರಷ್ಟು ಹೊಂದಿದ್ದು, ಇದರಲ್ಲಿ ಪುರುಷರು ೧,೮೯,೬೭೪(೫೦.೫೮%) ಮತ್ತು ಮಹಿಳೆಯರು ೧,೮೫,೨೭೫ (೪೯.೪೧%) ರಷ್ಟಿದ್ದಾರೆ.[೧೭] ಜಿಲ್ಲೆಯ ತಾಲೂಕಿನ ಪಾಲು ಶೇ.೧೯.೮ರಷ್ಟಿದೆ. ಅತಿ ಹೆಚ್ಚು ಜನಸಂಖ್ಯೆಯನ್ನು ಹೊಂದಿದ್ದು, ಜಿಲ್ಲೆಯ ಎರಡನೇ ತಾಲೂಕಾಗಿದೆ. ಜಾತಿವಾರು ಜನಸಂಖ್ಯೆಯಲ್ಲಿ ಪರಿಶಿಷ್ಟರ ಪ್ರಮಾಣ ಶೇ. ೧೮.೪೪ರಷ್ಟು ಹೊಂದಿದ್ದು, ಜಿಲ್ಲೆಯಲ್ಲಿ ೫ನೇ ಸ್ಥಾನದಲ್ಲಿದೆ. ಜಿಲ್ಲೆಯ ಸರಾಸರಿಗಿಂತ ಶೇ. ೯.೦೩ರಷ್ಟು ಕಡಿಮೆಯಿದೆ. ತಾಲೂಕಿನ ಸಾಕ್ಷರರ ವಿವರವನ್ನು ನೋಡಿದಾಗ ಜಿಲ್ಲೆಯಲ್ಲಿ ಅತಿ ಹೆಚ್ಚು ಎಂದರೆ ಶೇ. ೬೦.೯೧ರಷ್ಟು ಸಾಕ್ಷರತೆಯನ್ನು ಹೊಂದಿದೆ.[೧೮] ಜಿಲ್ಲೆಯ ಸರಾಸರಿಗಿಂತ ಶೇ. ೩ರಷ್ಟು ಹೆಚ್ಚು ಸಾಕ್ಷರರನ್ನು ಹೊಂದಿದೆ. ಸಾಕ್ಷರತೆಯ ದೃಷ್ಟಿಯಿಂದ ತಾಲೂಕು ಜಿಲ್ಲೆಯ ಸರಾಸರಿಗಿಂತ ಉತ್ತಮ ಸ್ಥಿತಿಯಲ್ಲಿದೆ. ತಾಲೂಕು ವಿಸ್ತೀರ್ಣ ೯೦೪.೧೭ ಚ.ಕಿ.ಮೀ.ಗಳಷ್ಟಿದ್ದು ವಿಸ್ತೀರ್ಣದಲ್ಲಿ ಒಟ್ಟು ಜಿಲ್ಲೆಯ ತಾಲೂಕಿನ ಪಾಲು ಶೇ. ೧೦.೭೦ ರಷ್ಟು ಪ್ರಮಾಣವನ್ನು ಹೊಂದಿದೆ. ತಾಲೂಕು ಒಟ್ಟು ೭೦,೭೧೯ ಕುಟುಂಬಗಳನ್ನು ಹೊಂದಿದೆ.[೧೯] ತಾಲೂಕಿನಲ್ಲಿ ಪ್ರಮುಖ ಜಾತಿಗಳ ಜನರೆ ಲಿಂಗಾಯತರು, ನಾಯಕರು, ಮಾದಿಗರು, ಮುಸ್ಲಿಮರು ಮತ್ತು ಕುರುಬರು ಇದ್ದಾರೆ. ರಾಜಕೀಯವಾಗಿ ಹೊಸಪೇಟೆ ತಾಲೂಕನ್ನು ನೋಡುವುದಾದರೆ ತಾಲೂಕು ತನ್ನದೇ ಆದ ವಿಧಾನಸಭಾ ಕ್ಷೇತ್ರವನ್ನು ಹೊಂದಿದೆ. ಈ ತಾಲೂಕು ಬಳ್ಳಾರಿ ಜಿಲ್ಲೆಗೆ ಸೇರಿದರೂ ಸಹ ಕೊಪ್ಪಳ ಲೋಕಸಭಾ ಕ್ಷೇತ್ರಕ್ಕೆ ಸೇರಿದೆ. ಹೊಸಪೇಟೆಯು ನಗರಾಭಿವೃದ್ಧಿ ಪ್ರಾಧಿಕಾರ ಮತ್ತು ಸಿಟಿ ಮುನ್ಸಿಪಲ್ ಕೌನ್ಸಿಲನ್ನು ಹೊಂದಿದೆ. ಮುನ್ಸಿಪಲ್ ಕೌನ್ಸಿಲ್‌ನಲ್ಲಿ ೨೩(೬೫.೭೧%) ಪುರುಷರು, ೧೨(೩೪.೨೮%) ಮಹಿಳೆಯರು ಇದ್ದಾರೆ. ಜಾತಿವಾರು ಹಂಚಿಕೆಯನ್ನು ನೋಡಿದಾಗ ಪರಿಶಿಷ್ಟ ಜಾತಿ ೫(೧೪.೨೮%),

ಪರಿಶಿಷ್ಟ ಪಂಗಡ ೫ (೧೪.೨೮%), ಹಿಂದುಳಿದ ವರ್ಗ ೧೨(೩೪.೨೮%) ಮತ್ತು ಸಾಮಾನ್ಯ ವರ್ಗ ೧೩(೩೭.೧೪%)ರಷ್ಟು ಪ್ರಾತಿನಿಧ್ಯ ಹೊಂದಿದ್ದಾರೆ.[೨೦] (ಕೋಷ್ಟಕ-೩) ಸ್ಥಳೀಯ ಸಂಸ್ಥೆಯ ಮಹಿಳಾ ಪ್ರಾತಿನಿಧ್ಯದಲ್ಲಿ ಮೀಸಲಾತಿ ಮೀರಿ ಪ್ರತಿನಿಧೀಕರಣಗೊಂಡಿದ್ದಾರೆ. ಆ ಕಾರಣಕ್ಕೆ ತಾಲೂಕಿನ ನಗರಸಭೆಯನ್ನು ಆಯ್ಕೆ ಮಾಡಿಕೊಳ್ಳಲಾಗಿದೆ.

**ಕೂಡ್ಲಿಗಿ ತಾಲೂಕು(ಪಟ್ಟಣ ಪಂಚಾಯಿತಿ)**

ಕರ್ನಾಟಕ ರಾಜ್ಯದಲ್ಲಿನ ಬಳ್ಳಾರಿ ಜಿಲ್ಲೆಯ ಕೂಡ್ಲಿಗಿ ತಾಲೂಕು ಜಿಲ್ಲೆಯಿಂದ ಪಶ್ಚಿಮಕ್ಕೆ ೮೦ ಕಿ.ಮೀ. ದೂರದಲ್ಲಿದೆ. ೨೦೧೧ರ ಜನಗಣತಿಯ ಪ್ರಕಾರ ಕೂಡ್ಲಿಗಿಯ ಜನಸಂಖ್ಯೆಯನ್ನು ೨,೭೨,೧೮೩ರಷ್ಟು ಹೊಂದಿದೆ. ಪಟ್ಟಣ ಪಂಚಾಯಿತಿಯು ೧೯೯೫ರಲ್ಲಿ ಜಾರಿಗೆ ಬಂದಿದೆ. ಈ ಪಟ್ಟಣ ಪಂಚಾಯಿತಿಯು ೨೦ ವಾರ್ಡ್‌ಗಳನ್ನು ಒಳಗೊಂಡಿದ್ದು, ೨೦ ಚುನಾಯಿತ ಸದಸ್ಯರು ಹಾಗೂ ೨ ನಾಮ ನಿರ್ದೇಶಿತ ಸದಸ್ಯರಿರುತ್ತಾರೆ. ಕೂಡ್ಲಿಗಿ ಪಟ್ಟಣ ಪಂಚಾಯಿತಿ ವ್ಯಾಪ್ತಿಯು ಒಟ್ಟು ೧೬೧೮.೮೭ ಚ.ಕಿ.ಮೀ. ವಿಸ್ತೀರ್ಣ ಹೊಂದಿದೆ. ೧೯೯೫ಕ್ಕೂ ಮೊದಲು ಗ್ರಾಮ ಪಂಚಾಯಿತಿ ಆಗಿದ್ದ ಕೂಡ್ಲಿಗಿ ಪಟ್ಟಣ ಪಂಚಾಯಿತಿ ನಂತರ ಮಂಡಲ ಪಂಚಾಯಿತಿಯಾಗಿ ಪರಿವರ್ತನೆಯಾಗಿ ಮಾರ್ಪಾಡಾಯಿತು. ಈಗ ಪಟ್ಟಣ ಪಂಚಾಯಿತಿಯಾಗಿ ಒಟ್ಟು ೨೦ ವಾರ್ಡ್‌ಗಳನ್ನು ಹೊಂದಿದೆ. ಮುಂದಿನ ದಿನಗಳಲ್ಲಿ ಪುರಸಭೆಯಾಗುವ ಉತ್ಸಾಹದಲ್ಲಿದೆ. ಬಳ್ಳಾರಿ ಜಿಲ್ಲೆಯಲ್ಲಿ ಕೂಡ್ಲಿಗಿಯು ಹಿಂದುಳಿದ ತಾಲೂಕುಗಳಲ್ಲಿ ಒಂದಾಗಿದೆ. ಹೊಸಪೇಟೆ ಉಪವಿಭಾಗಕ್ಕೆ ಸೇರಿದ ಈ ತಾಲೂಕು ಎರಡು ವಿಧಾನಸಭಾ ಕ್ಷೇತ್ರಗಳನ್ನು ಹೊಂದಿದೆ. ಅವುಗಳಲ್ಲಿ ಕೂಡ್ಲಿಗಿ ಮತ್ತು ಕೊಟ್ಟೂರು ತಾಲೂಕು ಪಟ್ಟಣ ಪಂಚಾಯಿತಿಯನ್ನು ಹೊಂದಿದ್ದು, ಈ ತಾಲೂಕು ಪೂರ್ತಿ ಒಣಭೂಮಿ ಪ್ರದೇಶವನ್ನು ಒಳಗೊಂಡಿದೆ. ಶೇ.೮೦ಕ್ಕೂ ಹೆಚ್ಚು ಜನರು ಕೃಷಿಯನ್ನು ಅವಲಂಬಿಸಿದ್ದಾರೆ. ಇನ್ನೂ ಕೃಷಿಯೇತರ ಚಟುವಟಿಕೆಗಳಾದ ಹೈನುಗಾರಿಕೆ, ಕುರಿಸಾಕಾಣಿಕೆ ಮತ್ತು ನೇಕಾರಿಕೆ ಕಸುಬುಗಳು ಪ್ರಾಚೀನ ಕಾಲದಿಂದಲೂ ಬೆಳೆದುಬಂದಿದೆ. ಇದು ಕೃಷಿಯನ್ನು ಅವಲಂಬಿಸಿರುವ ರಾಜ್ಯದ ೩ನೇ ತಾಲೂಕಾಗಿದೆ. ಮಳೆಯನ್ನೇ ನಂಬಿ ಕೃಷಿಯನ್ನು ಇಲ್ಲಿನ ಜನತೆ ಅವಲಂಬಿತರಾಗಿದ್ದಾರೆ. ತಾಲೂಕಿನಾದ್ಯಂತ ಅಧಿಕ ಕೆರೆಗಳಿದ್ದು ಇದರ ಮೂಲಕ ಸಹ ಕೃಷಿಯನ್ನು ಕೈಗೊಂಡಿದ್ದಾರೆ. ಕೆರೆಗಳು ಅಲ್ಪಸ್ವಲ್ಪ ನೀರಾವರಿ ಕೃಷಿಗೆ ಅನುಕೂಲವಾಗಿವೆ. ತಾಲೂಕಿನ ಮುಖ್ಯ ಬೆಳೆಗಳೆಂದರೆ ಶೇಂಗಾ, ಹತ್ತಿ, ಜೋಳ ಮತ್ತು ತೊಗರಿ. ಇಡೀ ಜಿಲ್ಲೆಯಲ್ಲಿ ಹೆಚ್ಚು ಹುಣಸೆ ಮರಗಳನ್ನು ಹೊಂದಿದ ತಾಲೂಕಾಗಿದೆ. ಜಿಲ್ಲೆಯಲ್ಲಿ ೩೩.೬೬೧ ಹೆಕ್ಟೇರುಗಳಷ್ಟು ಅರಣ್ಯ ಪ್ರದೇಶವನ್ನು ಹೊಂದಿದ್ದು, ಜಿಲ್ಲೆಯಲ್ಲೇ ಮೊದಲ ಸ್ಥಾನದಲ್ಲಿದೆ.[೨೧]

**ಜನಸಂಖ್ಯೆ, ಸಾಕ್ಷರತೆ ಇತ್ಯಾದಿ ವಿವರಗಳು**

೨೦೧೧ರ ಜನಗಣತಿಯ ಪ್ರಕಾರ ತಾಲೂಕಿನ ಜನಸಂಖ್ಯೆ ೨,೭೨,೧೮೩ರಷ್ಟಿದ್ದು, ಇದರಲ್ಲಿ ಪುರುಷರು ೧,೩೯,೧೭೦(೫೧.೧೩%) ಮತ್ತು ಮಹಿಳೆಯರು ೧,೩೨,೯೮೧(೪೮.೮೫%) ಇದ್ದಾರೆ. ಜಿಲ್ಲೆಯಲ್ಲಿ ತಾಲೂಕಿನ ಪಾಲು ಶೇ.೨೪ರಷ್ಟಿದೆ. ಜನಸಂಖ್ಯೆಯಲ್ಲಿ ನಾಲ್ಕನೇ ಸ್ಥಾನದಲ್ಲಿದೆ. ತಾಲೂಕಿನ ವಿಸ್ತೀರ್ಣ ೧೬೧೮.೮೭ ರಷ್ಟಿದೆ.[೨೨] **(ಕೋಷ್ಟಕ-೧)** ಶೇ. ೧೯.೧೫ರಷ್ಟು ಜಿಲ್ಲೆಯ ಒಟ್ಟು ವಿಸ್ತೀರ್ಣದಲ್ಲಿ

ಇದರ ಪ್ರಮಾಣವಾಗಿದೆ. (ಕೋಷ್ಟಕ-೨) ಜಿಲ್ಲೆಯಲ್ಲಿ ಬಳ್ಳಾರಿ ತಾಲೂಕನ್ನು ಬಿಟ್ಟರೆ ಅತಿ ದೊಡ್ಡ ತಾಲೂಕು ಇದಾಗಿದೆ. ಜಾತಿವಾರು ಜನಸಂಖ್ಯೆಯನ್ನು ನೋಡಿದಾಗ ಪರಿಶಿಷ್ಟ ಜಾತಿಯಲ್ಲಿ ೫೨,೨೧೨(೧೯.೧೮%) ಇದ್ದು, ಇದರಲ್ಲಿ ೨೬,೫೪೦(೫೦.೮೩%) ಪುರುಷರನ್ನು, ೨೫,೬೭೨(೪೯.೧೬%) ಮಹಿಳೆಯರನ್ನು ಹೊಂದಿದೆ. ಒಟ್ಟು ಪರಿಶಿಷ್ಟ ಪಂಗಡ ಜನಸಂಖ್ಯೆ ೭೩,೬೫೦(೨೭.೦೫%) ಇದ್ದು, ಇದರಲ್ಲಿ ೩೭,೨೯೮(೫೦.೬೪%) ಪುರುಷರನ್ನು ಮತ್ತು ೩೬,೩೫೨(೪೯.೩೫%)ಮಹಿಳೆಯರನ್ನು ಹೊಂದಿದೆ.[೨೩] ಅಲ್ಪ ಸಂಖ್ಯಾತರು ಶೇ. ರಷ್ಟಿದ್ದು, ಇತರೆ ಹಿಂದುಳಿದ ವರ್ಗಗಳು ಶೇ. ೭೬.೪೬ರಷ್ಟು ಮತ್ತು ಸಾಮಾನ್ಯ ಶೇ. ೬೨.೫೪ರಷ್ಟು ಇರುವುದನ್ನು ನೋಡಲಾಗಿದೆ. ಈ ತಾಲೂಕು ಪರಿಶಿಷ್ಟ ಜಾತಿ-ಪಂಗಡ ಜನಸಂಖ್ಯೆಯ ಪ್ರಮಾಣ ೧,೨೫,೮೬೨ (೪೬.೨೪%)ರಷ್ಟು ಹೊಂದಿದ್ದು, ಜಿಲ್ಲೆಯಲ್ಲಿ ಅತಿ ಹೆಚ್ಚು ಪರಿಶಿಷ್ಟರನ್ನು ಹೊಂದಿದೆ. ಶೇ. ೨೭.೧ರಷ್ಟು ಪರಿಶಿಷ್ಟ ಪಂಗಡದವರನ್ನು ಹೊಂದಿದ್ದು, ಜಿಲ್ಲೆಯಲ್ಲಿ ಅತಿ ಹೆಚ್ಚು ಪರಿಶಿಷ್ಟ ಪಂಗಡ ಜನಸಂಖ್ಯೆಯನ್ನು ಹೊಂದಿದ ತಾಲೂಕು ಇದಾಗಿದೆ. ಅಧ್ಯಯನದ ಆಯ್ಕೆಗೆ ಈ ಅಂಶವು ಸಹ ಒಂದು ಕಾರಣವಾಗಿದೆ. ಸಾಕ್ಷರರ ಸಂಖ್ಯೆ ತಾಲೂಕಿನಲ್ಲಿ ೧,೩೫,೬೪೯ ಇದ್ದು, ಜಿಲ್ಲೆಯಲ್ಲಿ ನಾಲ್ಕನೇ ಸ್ಥಾನದಲ್ಲಿದೆ.[೨೪] **(ಕೋಷ್ಟಕ-೩)** ಜಿಲ್ಲೆಗಿಂತ ಶೇ. ೨.೧.ರಷ್ಟು ಹೆಚ್ಚು ಇದ್ದು ಸಾಕ್ಷರತೆಯ ದೃಷ್ಟಿಯಿಂದ ಜಿಲ್ಲೆಗಿಂತ ಉತ್ತಮ ಸ್ಥಿತಿಯಲ್ಲಿದೆ. ಒಣಭೂಮಿ ಪ್ರದೇಶವಾದರೂ ಈ ಸಾಕ್ಷರತೆಯ ಪ್ರಮಾಣ ಹೆಚ್ಚಿದೆ. ಹಾಗಾಗಿ ಇದು ಜಿಲ್ಲೆಯ ತಾಲೂಕಿನಲ್ಲಿ ಮೂರನೆಯ ಸ್ಥಾನವನ್ನು ಹೊಂದಿದೆ. ಈ ತಾಲೂಕಿನಲ್ಲಿ ಲಿಂಗಾಯತರು, ವಾಲ್ಮೀಕಿ, ಕುರುಬರು, ಮಾದಿಗರು, ಅಗಸರು ಮತ್ತು ನೇಕಾರರು ಈ ಪ್ರಮುಖ ಜಾತಿಗಳನ್ನೊಳಗೊಂಡಿದೆ. ರಾಜಕೀಯವಾಗಿ ಕೂಡ್ಲಿಗಿಯು ತನ್ನದೇ ಆದ ವಿಧಾನಸಭಾ ಕ್ಷೇತ್ರವನ್ನು ಒಳಗೊಂಡಿದೆ. ತಾಲೂಕು ಪಟ್ಟಣ ಪಂಚಾಯಿತಿಯನ್ನು ಹೊಂದಿದ್ದು, ಇದರಲ್ಲಿ ೧೩(೬೫%)ರಷ್ಟು ಪುರುಷರು, ೭(೩೫%)ರಷ್ಟು ಮಹಿಳಾ ಸದಸ್ಯರು ಇದ್ದಾರೆ. ಜಾತಿವಾರು ಪ್ರಾತಿನಿಧ್ಯವನ್ನು ನೋಡಿದಾಗ ಪರಿಶಿಷ್ಟ ಜಾತಿ ೩(೧೫%), ಪರಿಶಿಷ್ಟ ಪಂಗಡ ೯(೪೫%), ಹಿಂದುಳಿದ ವರ್ಗ ೭(೩೫%) ಮತ್ತು ಸಾಮಾನ್ಯವರ್ಗ ೧(೫%) ಸದಸ್ಯರು ಪ್ರತಿನಿಧೀಕರಣಗೊಂಡಿದ್ದಾರೆ.[೨೫] **(ಕೋಷ್ಟಕ-೩)** ಮೀಸಲಾತಿಯನ್ನು ಮೀರಿ ಮಹಿಳೆಯರು ಮತ್ತು ಪರಿಶಿಷ್ಟ ಪಂಗಡದವರು ಹೆಚ್ಚು ಆಯ್ಕೆಗೊಂಡಿದ್ದಾರೆ. ಹಾಗಾಗಿ ತಾಲೂಕಿನ ಪಟ್ಟಣ ಪಂಚಾಯಿತಿಯನ್ನು ಅಧ್ಯಯನಕ್ಕೆ ಆಯ್ಕೆ ಮಾಡಿಕೊಳ್ಳಲಾಗಿದೆ.

### ೩.೬. ಜಿಲ್ಲೆಯ ತಾಲೂಕುಗಳ ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ವಿವರಗಳು

ಜಿಲ್ಲೆಯ ವಿವರಣೆ ಮತ್ತು ಆಯ್ಕೆ ನಂತರ ತಾಲೂಕುಗಳ ವಿವರಣೆಯನ್ನು ಅಂಕಿ-ಅಂಶಗಳ ಮೂಲಕ ನೋಡಲಾಗಿದೆ. ಪ್ರಸ್ತುತ ಜಿಲ್ಲೆಯು ೭ ತಾಲೂಕುಗಳನ್ನು ಹೊಂದಿದ್ದು, ಪ್ರಾದೇಶಿಕವಾಗಿ ಈ ತಾಲೂಕುಗಳನ್ನು ಪೂರ್ವ ಮತ್ತು ಪಶ್ಚಿಮ ತಾಲೂಕುಗಳೆಂದು ವಿಭಾಗಿಸಲಾಗಿದೆ. ಬಳ್ಳಾರಿ, ಸಿರುಗುಪ್ಪ, ಹೊಸಪೇಟೆ ಮತ್ತು ಸಂಡೂರು ತಾಲೂಕುಗಳನ್ನು ಪೂರ್ವ ತಾಲೂಕುಗಳೆಂದು ಮತ್ತು ಕೂಡ್ಲಿಗಿ, ಹಗರಿಬೊಮ್ಮನಹಳ್ಳಿ ಮತ್ತು ಹೂವಿನ ಹಡಗಲಿಯನ್ನು ಪಶ್ಚಿಮ ತಾಲೂಕುಗಳೆಂದು ಕರೆಯುವುದು ವಾಡಿಕೆಯಲ್ಲಿದೆ.[೨೬] ಪ್ರಾಕೃತಿಕವಾಗಿ ಮತ್ತು ಆರ್ಥಿಕವಾಗಿ ಪೂರ್ವ ತಾಲೂಕುಗಳು

ಸಮೃದ್ಧಿಯಾದ ಪ್ರದೇಶಗಳಾಗಿದ್ದು ಈ ತಾಲೂಕುಗಳು ಅಭಿವೃದ್ಧಿಯ ಎಲ್ಲಾ ಸವಲತ್ತುಗಳನ್ನು ಅಧಿಕವಾಗಿ ಪಡೆದುಕೊಂಡಿವೆ. ಜಿಲ್ಲೆಯ ಪಶ್ಚಿಮಭಾಗದ ತಾಲೂಕುಗಳು ಪೂರ್ತಿ ಬಯಲುಪ್ರದೇಶ ಮತ್ತು ಒಣಭೂಮಿ ಕೃಷಿಯನ್ನು ಹೊಂದಿದ ಪ್ರದೇಶಗಳಾಗಿವೆ. ಪೂರ್ವ ತಾಲೂಕುಗಳು ಜಿಲ್ಲಾ ಕೇಂದ್ರಕ್ಕೆ ಹತ್ತಿರವಾಗಿದ್ದು ಮತ್ತು ಹೆಚ್ಚು ನೀರಾವರಿ ಕೃಷಿಯನ್ನು ಹೊಂದಿವೆ. ಇದಕ್ಕೆ ವಿರುದ್ಧವಾಗಿ ಪಶ್ಚಿಮ ತಾಲೂಕುಗಳು ಜಿಲ್ಲೆಯಿಂದ ದೂರವಿದ್ದು, ಹೆಚ್ಚು ಒಣಭೂಮಿ ಕೃಷಿಯನ್ನು ಹೊಂದಿವೆ. ದೊಡ್ಡ ಮತ್ತು ಮಧ್ಯಮಗಾತ್ರದ ಉದ್ದಿಮೆಗಳು ಪೂರ್ವಭಾಗದ ತಾಲೂಕುಗಳಲ್ಲಿ ೧೯ ಘಟಕಗಳನ್ನು ಹೊಂದಿದ್ದರೆ, ಪಶ್ಚಿಮಭಾಗದ ತಾಲೂಕುಗಳಲ್ಲಿ ಒಂದೇ ಒಂದು ಘಟಕವಿದೆ. ಗಣಿಗಾರಿಕೆ ಚಟುವಟಿಕೆಗಳೂ ಸಹ ಪೂರ್ವಭಾಗಕ್ಕೆ ಸೀಮಿತವಾಗಿವೆ.[೨೭] ಪಶ್ಚಿಮ ತಾಲೂಕುಗಳಲ್ಲಿ ಯಾವುದೇ ಗಣಿಗಾರಿಕೆ ಚಟುವಟಿಕೆಗಳು ಇರುವುದಿಲ್ಲ. ಅಂದರೆ ಪಶ್ಚಿಮ ತಾಲೂಕುಗಳಲ್ಲಿ ಹೆಚ್ಚು ಕೃಷಿಯನ್ನು ಅವಲಂಬಿಸಿದ್ದಾರೆ. ಈ ಎಲ್ಲಾ ವಿವರಗಳನ್ನು ನೋಡಿದಾಗ ಪೂರ್ವಭಾಗದ ತಾಲೂಕುಗಳು ಅಭಿವೃದ್ಧಿಯ ಪ್ರದೇಶಗಳೆಂದು ಪಶ್ಚಿಮ ಭಾಗದ ತಾಲೂಕುಗಳನ್ನು ಹಿಂದುಳಿದ ಪ್ರದೇಶಗಳೆಂದು ಗುರುತಿಸಬಹುದು. ಆದ್ದರಿಂದ ಪ್ರಸ್ತುತ ಅಧ್ಯಯನಕ್ಕೆ ಪೂರ್ವಭಾಗದ ಹೊಸಪೇಟೆ ತಾಲೂಕನ್ನು(ನಗರಸಭೆ) ಮತ್ತು ಪಶ್ಚಿಮ ಭಾಗದ ಕೂಡ್ಲಿಗಿ ತಾಲೂಕನ್ನು(ಪಟ್ಟಣ ಪಂಚಾಯಿತಿ) ಆಯ್ಕೆ ಮಾಡಿಕೊಳ್ಳಲಾಗಿದೆ.

### ೩.೭. ತಾಲೂಕುಗಳಲ್ಲಿ ದುಡಿಮೆವರ್ಗ

ಒಂದು ಪ್ರದೇಶದ ಅಭಿವೃದ್ಧಿಯು ಅಲ್ಲಿ ವಾಸಿಸುತ್ತಿರುವ ಜನತೆಯ ದುಡಿಮೆಯ ಮೇಲೆ ನಿರ್ಧರಿತವಾಗುತ್ತದೆ. ಜಿಲ್ಲೆಯ ಹೆಚ್ಚು ಶ್ರಮಶಕ್ತಿಯು ಪ್ರಾಥಮಿಕ ವಲಯವನ್ನು ಅವಲಂಬಿಸಿರುವುದರಿಂದ ರಾಜ್ಯದ ಹಿಂದುಳಿದಿರುವ ಜಿಲ್ಲೆಗಳಲ್ಲಿ ಇದು ಒಂದಾಗಿದೆ ಎಂಬುದನ್ನು ಈಗಾಗಲೇ ನೋಡಿದ್ದೇವೆ. ಹಾಗೆಯೇ ಜಿಲ್ಲೆಯ ತಾಲೂಕುಗಳಲ್ಲಿ ಶ್ರಮಶಕ್ತಿ ವಲಯವಾರು ರಚನೆ ಮತ್ತು ದುಡಿಮೆ ವರ್ಗಗಳ ವಿವರಗಳನ್ನು ನೋಡಿದಾಗ ಯಾವ ತಾಲೂಕುಗಳು ಅಭಿವೃದ್ಧಿ ಹೊಂದಿವೆ ಮತ್ತು ಹಿಂದುಳಿದಿವೆ ಎಂಬುದು ಸ್ಪಷ್ಟವಾಗುತ್ತದೆ. ಈ ದುಡಿಮೆವರ್ಗವನ್ನು ಅಂಕಿಅಂಶಗಳ ಮೂಲಕ ನೋಡಿದಾಗ ಜಿಲ್ಲೆಯಲ್ಲಿ ಕೃಷಿಯು ಪ್ರಧಾನ ಕಸುಬುದಾಗಿದೆ. ಜಿಲ್ಲೆಯ ಪಶ್ಚಿಮ ಭಾಗದ ತಾಲೂಕುಗಳಾದ ಹಗರಿಬೊಮ್ಮನಹಳ್ಳಿ, ಕೂಡ್ಲಿಗಿ ಮತ್ತು ಹಡಗಲಿ ತಾಲೂಕುಗಳು ಇಡೀ ರಾಜ್ಯದಲ್ಲಿ ಕ್ರಮವಾಗಿ ಶೇ.೯೩.೪೪, ೮೬.೩೫, ಮತ್ತು ೮೫.೧೧ ಸ್ಥಾನಗಳನ್ನು ಪಡೆದಿವೆ.[೨೮] ಪೂರ್ತಿ ಒಣಭೂಮಿ ಹೊಂದಿರುವ ಈ ತಾಲೂಕುಗಳು ಕೃಷಿ ಅವಲಂಬನೆಯನ್ನು ನೋಡಿದರೆ ಸ್ಪಷ್ಟವಾಗಿ ಈ ತಾಲೂಕುಗಳು ಜಿಲ್ಲೆಯಲ್ಲಿ ಹಿಂದುಳಿದಿರುವ ತಾಲೂಕುಗಳೆಂದು ಗುರುತಿಸಬಹುದು. ಪೂರ್ವ ತಾಲೂಕುಗಳಲ್ಲಿ ಕೃಷಿ ಅವಲಂಬನೆ ಇದ್ದರೂ ನೀರಾವರಿ ಪ್ರದೇಶವಾಗಿದ್ದರಿಂದ ಹೆಚ್ಚು ಆದಾಯ ಬರುತ್ತದೆ. ತಾಲೂಕುಗಳ ವಲಯವಾರು ಅಂಕಿ-ಅಂಶಗಳನ್ನು ನೋಡಿದಾಗ ಹಗರಿಬೊಮ್ಮನಹಳ್ಳಿ, ಕೂಡ್ಲಿಗಿ, ಸಿರಗುಪ್ಪ, ಹಡಗಲಿ ಮತ್ತು ಸಂಡೂರುಗಳಲ್ಲಿ ಪ್ರಾಥಮಿಕ ವಲಯದಲ್ಲಿ ಹೆಚ್ಚು ಅವಲಂಬಿತರಾಗಿದ್ದಾರೆ. ಈ ತಾಲೂಕುಗಳಲ್ಲಿ ಸಿರಗುಪ್ಪ ತಾಲೂಕು ಮಾತ್ರ ನೀರಾವರಿ ಪ್ರದೇಶವಾಗಿದ್ದು ಉಳಿದ ನಾಲ್ಕು ತಾಲೂಕುಗಳ ಒಣಭೂಮಿ ಪ್ರದೇಶಗಳಾಗಿವೆ. ಜಿಲ್ಲೆಯ ಸರಾಸರಿಗಿಂತ ಶೇ. ೧೧ರಷ್ಟು ಅಧಿಕ ಪ್ರಮಾಣವನ್ನು ಹಗರಿಬೊಮ್ಮನಹಳ್ಳಿ, ಕೂಡ್ಲಿಗಿ, ಹೂವಿನ ಹಡಗಲಿ ಮತ್ತು

ಸಿರುಗುಪ್ಪ ತಾಲೂಕುಗಳು ಪ್ರಾಥಮಿಕ ವಲಯವನ್ನು ಅವಲಂಬಿಸಿದ್ದಾರೆ. ಬಳ್ಳಾರಿ ಮತ್ತು ಹೊಸಪೇಟೆ ತಾಲೂಕುಗಳು ಜಿಲ್ಲೆಯ ಸರಾಸರಿಗಿಂತ ಕಡಿಮೆ ಪ್ರಮಾಣವನ್ನು ಪ್ರಾಥಮಿಕ ವಲಯವನ್ನು ಅವಲಂಬಿಸಿವೆ. (ಕೋಷ್ಟಕ–೪) ದ್ವಿತೀಯ ಮತ್ತು ತೃತೀಯ ವಲಯದಲ್ಲಿ ಬಳ್ಳಾರಿ ಮತ್ತು ಹೊಸಪೇಟೆ ಅಗ್ರಸ್ಥಾನದಲ್ಲಿದೆ. ಈ ವಲಯವಾರು ನೋಡಿದಾಗ ತಾಲೂಕುಗಳು ಜಿಲ್ಲೆಯ ಸರಾಸರಿಗಿಂತ ಹೆಚ್ಚು ಉನ್ನತ ಸ್ಥಾನದಲ್ಲಿದೆ. ಉಳಿದ ತಾಲೂಕುಗಳು ಜಿಲ್ಲೆಯ ಸರಾಸರಿಗಿಂತ ಶೇ. ೧೦ರಷ್ಟು ಕಡಿಮೆ ಇರುವುದು ಕಂಡುಬರುತ್ತದೆ. ಹೀಗೆ ಹೊಸಪೇಟೆ ಆರ್ಥಿಕವಾಗಿ ಅಭಿವೃದ್ಧಿ ಹೊಂದಿದ ತಾಲೂಕು. ಈ ಎಲ್ಲಾ ಅಂಕಿಅಂಶಗಳ ಹಿನ್ನೆಲೆಯಲ್ಲಿ ಅಧ್ಯಯನದ ದೃಷ್ಟಿಯಿಂದ ಪೂರ್ವಭಾಗದ ಅಭಿವೃದ್ಧಿ ಹೊಂದಿದ ಹೊಸಪೇಟೆ ನಗರಸಭೆಯನ್ನು ಮತ್ತು ಹಿಂದುಳಿದ ಕೂಡ್ಲಿಗಿ ಪಟ್ಟಣ ಪಂಚಾಯಿತಿಯನ್ನು ಅಧ್ಯಯನಕ್ಕೆ ಆರಿಸಿಕೊಳ್ಳಲಾಗಿದೆ.[೨೯]

**೩.೮. ನೀರಾವರಿ ಮತ್ತು ಒಣಭೂಮಿ ಹೊಂದಿದ ತಾಲೂಕುಗಳು**

ಜಿಲ್ಲೆಯ ಪ್ರಮುಖ ನೀರಾವರಿ ಮೂಲಗಳೆಂದರೆ ತುಂಗಭದ್ರಾ ನದಿ, ನಾರಿಹಳ್ಳ ಜಲಾಶಯ, ಮಾಲ್ವಿ ಜಲಾಶಯ, ಕೆರೆ ಮತ್ತು ಕೊಳವೆ ಬಾವಿಗಳಾಗಿವೆ. ಜಿಲ್ಲೆಯ ಕೆಲವೇ ತಾಲೂಕುಗಳು ತುಂಗಭದ್ರಾ ಕಾಲುವೆ ನೀರನ್ನು ಸಮೃದ್ಧಿಯಾಗಿ ಪಡೆದುಕೊಂಡಿದ್ದರೆ, ಕೆಲವು ತಾಲೂಕುಗಳು ಈ ನೀರಿನಿಂದ ವಂಚಿತವಾಗಿದೆ. ಈ ನದಿಯ ನೀರಾವರಿ ಸಾಮರ್ಥ್ಯ ೧೩ ಲಕ್ಷ ಎಕರೆಗಳು ಇದ್ದು, ಇದರಲ್ಲಿ ಬಳ್ಳಾರಿ ಜಿಲ್ಲೆಯ ಪಾಲು ಕೇವಲ ೩.೧ ಲಕ್ಷ ಎಕರೆಗಳು ಮಾತ್ರ. ಇತರೆ ಜಿಲ್ಲೆ ಮತ್ತು ಆಂಧ್ರಪ್ರದೇಶ ರಾಜ್ಯದ ಪಾಲು ೯.೯ ಲಕ್ಷ ಎಕರೆಯಾಗಿದೆ.[೩೦] ಜಿಲ್ಲೆಯ ಪೂರ್ವತಾಲೂಕುಗಳಾದ ಬಳ್ಳಾರಿ ಹೊಸಪೇಟೆ ಮತ್ತು ಸಿರುಗುಪ್ಪ ಪ್ರದೇಶಗಳು ತುಂಗಭದ್ರಾ ನದಿ ನೀರಿನಿಂದ ಸಮೃದ್ಧಿಯಾಗಿವೆ. ಪಶ್ಚಿಮತಾಲೂಕುಗಳಾದ ಹಗರಿಬೊಮ್ಮನಹಳ್ಳಿ ಮಾತ್ರ ಮಾಲ್ವಿ ಜಲಾಶಯದ ಮೂಲಕ ೨೫೦೮ ಹೆಕ್ಟೇರ್‌ಗಳಷ್ಟು ನೀರಾವರಿ ಪ್ರದೇಶವನ್ನು ಹೊಂದಿದೆ. ಕೂಡ್ಲಿಗಿ ಮತ್ತು ಹಡಗಲಿ ತಾಲೂಕುಗಳು ಯಾವ ನದಿ ನೀರನ್ನು ಅವಲಂಬಿಸದೆ ಮಳೆಯನ್ನೇ ಆಶ್ರಯಿಸಿ ಕೃಷಿಯನ್ನು ನಡೆಸುತ್ತಿವೆ. ಸಂಡೂರು ಸ್ವಲ್ಪ ಪ್ರಮಾಣದಲ್ಲಿ ಕಾಲುವೆ ನೀರನ್ನು ಹೊಂದಿದೆ. ಒಟ್ಟು ಜಿಲ್ಲೆಯ ೧,೫೧,೭೯೬(೩೦.೪೦%) ಹೆಕ್ಟೇರ್‌ಗಳಷ್ಟು ನೀರಾವರಿ ಪ್ರದೇಶವನ್ನು ಹೊಂದಿದ್ದು, ಇದರಲ್ಲಿ ಅತಿ ಹೆಚ್ಚು ನೀರಾವರಿ ಪ್ರದೇಶವನ್ನು ಹೊಸಪೇಟೆ ತಾಲೂಕು ೨೩೦೦೭(೫೮.೬೧%) ಹೆಕ್ಟೇರುಗಳಷ್ಟು ಹೊಂದಿದೆ. ಅತಿ ಕಡಿಮೆ ನೀರಾವರಿ ಪ್ರದೇಶವನ್ನು ಕೂಡ್ಲಿಗಿ ತಾಲೂಕು ೮೫೦೧(೯.೮೫%) ಹೊಂದಿದೆ.[೩೧] **(ಕೋಷ್ಟಕ–೪)** ತಾಲೂಕುವಾರು ನೀರಾವರಿ ಪ್ರದೇಶವನ್ನು ನೋಡಿದಾಗ ಪೂರ್ವತಾಲೂಕುಗಳಾದ ಬಳ್ಳಾರಿ, ಹೊಸಪೇಟೆ, ಸಿರುಗುಪ್ಪ ಪ್ರದೇಶಗಳು ನೀರಾವರಿ ದೃಷ್ಟಿಯಿಂದ ಉತ್ತಮ ಸ್ಥಿತಿಯಲ್ಲಿದ್ದರೆ, ಪಶ್ಚಿಮ ತಾಲೂಕುಗಳಾದ ಕೂಡ್ಲಿಗಿ, ಹಗರಿಬೊಮ್ಮನಹಳ್ಳಿ, ಹಡಗಲಿ ತಾಲೂಕುಗಳು ಮಳೆಯನ್ನೇ ಆಶ್ರಯಿಸಿದ ಅಭಾವದ ಪ್ರದೇಶಗಳಾಗಿವೆ. ನೀರಾವರಿ ದೃಷ್ಟಿಯಿಂದ ಪೂರ್ವತಾಲೂಕುಗಳು ಸಮೃದ್ಧಿಯಾಗಿದ್ದರೆ ಪಶ್ಚಿಮತಾಲೂಕುಗಳು ಅಭಾವದ ತಾಲೂಕುಗಳಾಗಿವೆ. ಎರಡು ಭಾಗಗಳಲ್ಲಿ ಕೃಷಿ ಪ್ರಧಾನ ಉದ್ಯೋಗವಾಗಿದ್ದರೂ ನೀರಾವರಿ ಕೃಷಿಯಿಂದ ಬರುವ ವರಮಾನ ಹೆಚ್ಚಾಗಿರುತ್ತದೆ. ಹಾಗಾಗಿ ಒಣಭೂಮಿಯ ಪ್ರದೇಶಗಳಿಂದ ಬರುವ ಆರ್ಥಿಕ ವರಮಾನ ಕಡಿಮೆಯಾಗಿರುತ್ತದೆ. ಅಧ್ಯಯನದ ದೃಷ್ಟಿಯಿಂದ ಜಿಲ್ಲೆಯಲ್ಲಿ ಅತಿ ಹೆಚ್ಚು ನೀರಾವರಿ ಪ್ರದೇಶವನ್ನು ಹೊಂದಿದ ಹೊಸಪೇಟೆ ತಾಲೂಕನ್ನು ಹಾಗೂ ಅತಿ ಹೆಚ್ಚು ಒಣಭೂಮಿ ಪ್ರದೇಶವನ್ನು ಹೊಂದಿದ ಕೂಡ್ಲಿಗಿ ತಾಲೂಕನ್ನು ಅಧ್ಯಯನಕ್ಕೆ ಆಯ್ದುಕೊಳ್ಳಲಾಗಿದೆ.

### ೩.೯. ತಾಲೂಕುಗಳ ಸಾಕ್ಷರತಾ ಅಂಕಿ ಅಂಶಗಳು

ಒಂದು ಪ್ರದೇಶದ ಅಭಿವೃದ್ಧಿಯನ್ನು ನಿರ್ಧರಿಸುವ ಬಹುಮುಖ್ಯ ಅಂಶವೆಂದರೆ ಸಾಕ್ಷರತೆ ಪ್ರಮಾಣ. ಜಿಲ್ಲೆಯ ತಾಲೂಕುಗಳಲ್ಲಿ ಅತಿ ಹೆಚ್ಚು ಸಾಕ್ಷರತೆಯನ್ನು ಬಳ್ಳಾರಿ ತಾಲೂಕು ಹೊಂದಿದ್ದರೆ, ಅತಿ ಕಡಿಮೆ ಸಾಕ್ಷರತೆಯನ್ನು ಸಿರುಗುಪ್ಪ ತಾಲೂಕು ಹೊಂದಿದೆ. ಸಿರುಗುಪ್ಪ ತಾಲೂಕು ನೀರಾವರಿ ಪ್ರದೇಶವಾದರೂ ಸಾಕ್ಷರತೆಯಲ್ಲಿ ಜಿಲ್ಲೆಯಲ್ಲೇ ಕೊನೆಯ ಸ್ಥಾನದಲ್ಲಿದೆ. ಜಿಲ್ಲೆಯ ಸಾಕ್ಷರತೆ ಪ್ರಮಾಣದ ಸರಾಸರಿಗಿಂತ ಹೊಸಪೇಟೆ ಮತ್ತು ಬಳ್ಳಾರಿ ತಾಲೂಕುಗಳು ಹೆಚ್ಚಿದ್ದು, ಸಾಕ್ಷರತೆಯಲ್ಲಿ ಈ ತಾಲೂಕುಗಳು ಉತ್ತಮ ಸ್ಥಿತಿಯಲ್ಲಿವೆ. ಕೂಡ್ಲಿಗಿ ತಾಲೂಕು ಜಿಲ್ಲೆಯ ಸಾಕ್ಷರತಾ ಸರಾಸರಿಗಿಂತ ಸ್ವಲ್ಪ ಕಡಿಮೆ ಹೊಂದಿದೆ. ಉಳಿದ ತಾಲೂಕುಗಳು ಜಿಲ್ಲೆಯ ಸರಾಸರಿಗಿಂತ ಬಹಳ ಕಡಿಮೆ ಹೊಂದಿದೆ. ಸಾಕ್ಷರತೆಯಲ್ಲಿ ಶೇ. ೧೫ರಷ್ಟು ಅಂತರವಿದೆ. ೨೦೧೧ರ ಜನಗಣತಿ ಅನ್ವಯ ತಾಲೂಕುವಾರು ಸಾಕ್ಷರತೆ ಪ್ರಮಾಣದಲ್ಲಿ ಹೊಸಪೇಟೆ ಒಂದನೇ ಸ್ಥಾನ, ಬಳ್ಳಾರಿ ಎರಡನೇ ಸ್ಥಾನ, ಮೂರನೇ ಸ್ಥಾನ ಕೂಡ್ಲಿಗಿ, ನಾಲ್ಕನೇ ಸ್ಥಾನ ಹಗರಿಬೊಮ್ಮನಹಳ್ಳಿ, ಐದನೇ ಸ್ಥಾನ ಹಡಗಲಿ, ಆರನೇ ಸ್ಥಾನ ಸಂಡೂರು ಮತ್ತು ಸಿರುಗುಪ್ಪ ಕೊನೆಯ ಏಳನೇ ಸ್ಥಾನವನ್ನು ಹೊಂದಿದೆ.[೩೨] ಪೂರ್ವತಾಲೂಕುಗಳಲ್ಲಿ ಸಾಕ್ಷರತೆ ಪ್ರಮಾಣ ಉತ್ತಮವಾಗಿದ್ದರೆ, ಪಶ್ಚಿಮ ತಾಲೂಕುಗಳಲ್ಲಿ ಅತಿ ಹೆಚ್ಚು ಸಾಕ್ಷರತೆಯನ್ನು ಕೂಡ್ಲಿಗಿ ಹೊಂದಿದೆ. ಹಗರಿಬೊಮ್ಮನಹಳ್ಳಿ ೨ನೇ ಸ್ಥಾನದಲ್ಲಿದೆ. ಒಟ್ಟಾರೆ ಜಿಲ್ಲೆಯ ತಾಲೂಕುಗಳ ಸಾಕ್ಷರತೆ ಅಂಕಿಅಂಶಗಳನ್ನು ನೋಡಿದಾಗ ಪೂರ್ವತಾಲೂಕುಗಳು ಸಾಕ್ಷರತೆಯ ಪ್ರಮಾಣದಲ್ಲಿ ಸುಸ್ಥಿತಿಯಲ್ಲಿವೆ. ಪಶ್ಚಿಮತಾಲೂಕುಗಳು ಸಾಕ್ಷರತೆಯ ದೃಷ್ಟಿಯಿಂದ ಪ್ರಗತಿ ಸಾಧಿಸಬೇಕಾಗಿದೆ. ಸಾಕ್ಷರತೆಯಲ್ಲಿಯು ಪೂರ್ವತಾಲೂಕುಗಳು ಉತ್ತಮ ಸ್ಥಿತಿಯಲ್ಲಿವೆ. ಪಶ್ಚಿಮತಾಲೂಕುಗಳು ಸಾಕ್ಷರತೆಯಲ್ಲಿ ಹಿಂದುಳಿದಿವೆ. ಆದ್ದರಿಂದ ಅಧ್ಯಯನಕ್ಕೆ ಪೂರ್ವಭಾಗದ ತಾಲೂಕುಗಳಲ್ಲಿ ಅಧಿಕ ಸಾಕ್ಷರತೆ ಹೊಂದಿರುವ ಹೊಸಪೇಟೆ ತಾಲೂಕನ್ನು(ನಗರಸಭೆ), ಪಶ್ಚಿಮಭಾಗದ ಕೂಡ್ಲಿಗಿ ತಾಲೂಕನ್ನು(ಪಟ್ಟಣ ಪಂಚಾಯಿತಿ) ಅಧ್ಯಯನಕ್ಕೆ ಆಯ್ಕೆ ಮಾಡಿಕೊಳ್ಳಲಾಗಿದೆ.

**ಕೋಷ್ಟಕ-೩.೧.**

**ಬಳ್ಳಾರಿ ಜಿಲ್ಲೆಯ ತಾಲೂಕುವಾರು ಜನಸಂಖ್ಯೆ ಮತ್ತು ಸಾಕ್ಷರರ ಲಿಂಗವಾರು ವಿವರ2011**

| ಕ್ರಸಂ. | ತಾಲೂಕುಗಳು | ಒಟ್ಟು ಜನಸಂಖ್ಯೆ | | | ಒಟ್ಟು ಸಾಕ್ಷರರು | | |
|---|---|---|---|---|---|---|---|
| | | ಪುರುಷರು | ಮಹಿಳೆಯರು | ಒಟ್ಟು | ಪುರುಷರು | ಮಹಿಳೆಯರು | ಒಟ್ಟು |
| ೧. | ಬಳ್ಳಾರಿ | ೩,೧೯,೦೦೮<br>(೫೧.೦೦) | ೩,೦೬,೪೮೬<br>(೪೮.೯೯) | ೬,೨೫,೪೯೪<br>(೧೦೦) | ೧,೯೧,೯೬೮<br>(೬೦.೩೫) | ೧,೨೬,೦೭೧<br>(೩೯.೬೪) | ೩,೧೮,೦೩೯<br>(೧೦೦) |
| ೨. | ಹಡಗಲಿ | ೮೫,೦೫೧<br>(೫೦.೫೯) | ೮೩೦೬೭<br>(೪೯.೪೦) | ೧,೬೮,೧೧೮<br>(೧೦೦) | ೫೨,೧೩೨<br>(೩೭.೬೯) | ೮೬,೧೬೮<br>(೬೨.೩೦) | ೧,೩೮,೩೦೦<br>(೧೦೦) |
| ೩. | ಹೆಚ್.ಬಿ.ಹಳ್ಳಿ | ೮೦,೭೭೦<br>(೫೦.೫೧) | ೭೯೧೧೬<br>(೪೯.೪೮) | ೧,೫೯,೮೮೬<br>(೧೦೦) | ೪೭,೩೭೯<br>(೬೧.೨೫) | ೨೯,೯೭೪<br>(೩೮.೭೪) | ೭೭೩೫೩<br>(೧೦೦) |
| ೪. | ಹೊಸಪೇಟೆ | ೧,೮೯,೬೭೪<br>(೫೦.೫೮) | ೧೮೫೨೭೫<br>(೪೯.೪೧) | ೩,೭೪,೯೪೯<br>(೧೦೦) | ೧,೧೫,೩೩೨<br>(೫೯.೩೬) | ೭೮,೯೨೮<br>(೪೦.೬೩) | ೧,೯೪,೨೬೦<br>(೧೦೦) |

| ೫. | ಕೂಡ್ಲಿಗಿ | ೧,೩೯,೨೦೨ (೫೧.೧೪) | ೧,೩೨,೯೮೧ (೪೮.೮೫) | ೨,೭೨,೧೮೩ (೧೦೦) | ೮೩,೯೭೩ (೬೧.೯೦) | ೫೧,೬೮೬ (೩೮.೦೯) | ೧,೩೫,೬೫೯ (೧೦೦) |
|---|---|---|---|---|---|---|---|
| ೬. | ಸಂಡೂರು | ೯೮,೨೭೮ (೫೧.೪೦) | ೯೨,೮೮೮ (೪೮.೫೯) | ೧,೯೧,೧೬೬ (೧೦೦) | ೫೩,೪೪೦ (೬೩.೧೮) | ೩೧,೧೩೮ (೩೬.೮೧) | ೮೪,೫೭೮ (೧೦೦) |
| ೭. | ಸಿರಗುಪ್ಪ | ೧,೧೭,೭೩೧ (೫೦.೦೨) | ೧,೧೭,೬೧೩ (೪೯.೯೭) | ೨,೩೫,೩೪೪ (೧೦೦) | ೫೪,೯೧೩ (೬೫.೦೦) | ೨೯,೫೬೭ (೩೪.೯೯) | ೮೪,೪೮೦ (೧೦೦) |
|  | ಬಳ್ಳಾರಿ ಜಿಲ್ಲೆ | ೧೦,೨೯,೭೧೪ (೫೦.೭೯) | ೯,೯೭,೪೨೬ (೪೯.೨೦) | ೨೦,೨೭,೧೪೦ (೧೦೦) | ೫,೯೯,೧೩೭ (೬೧.೧೦) | ೩,೮೧,೩೪೬ (೩೮.೮೯) | ೯,೮೦,೪೮೩ (೧೦೦) |

ಸೂಚನೆ: ೦–೬ ವಯೋಮಾನದ ಜನಸಂಖ್ಯೆ ಹೊರತುಪಡಿಸಿ ಗಣನೆ ಮಾಡಿದ ಸಾಕ್ಷರತೆ, ಆವರಣದಲ್ಲಿರುವುದು ಒಟ್ಟು ಜನಸಂಖ್ಯೆಯ ಸಾಕ್ಷರತೆಯನ್ನು ಶೇಕಡವಾರು ಪ್ರಮಾಣದಲ್ಲಿ ಸೂಚಿಸುತ್ತದೆ.

ಮೂಲ: ಗವರ್ನ್‌ಮೆಂಟ್ ಆಫ್ ಕರ್ನಾಟಕ, ಬಳ್ಳಾರಿ ಜಿಲ್ಲಾ ಅಂಕಿ ಅಂಶಗಳ ನೋಟ, ಜಿಲ್ಲಾ ಪಂಚಾಯತ್, ಬಳ್ಳಾರಿ; ೨೦೧

**ಕೋಷ್ಟಕ–೩.೨.**

**ನಗರಸಭೆ, ಪಟ್ಟಣ ಪಂಚಾಯಿತಿ, ಜಿಲ್ಲೆಯ ಲಿಂಗವಾರು ಜನಸಂಖ್ಯೆ ಮತ್ತು ಸಾಕ್ಷರರ ವಿವರ–೨೦೧೧**

| ಕ್ರ.ಸಂ. | ಜಿಲ್ಲೆ/ಪಟ್ಟಣ ಪಂಚಾಯಿತಿ | ವಿಸ್ತೀರ್ಣ | ಒಟ್ಟು ಕುಟುಂಬಗಳ ಸಂಖ್ಯೆ | ಒಟ್ಟು ಜನಸಂಖ್ಯೆ | | | ಒಟ್ಟು ಸಾಕ್ಷರರು | | |
|---|---|---|---|---|---|---|---|---|---|
| | | | | ನಗರ | ಗ್ರಾಮೀಣ | ಒಟ್ಟು | ಪುರುಷ | ಮಹಿಳೆ | ಒಟ್ಟು |
| ೧ | ಬಳ್ಳಾರಿ ಜಿಲ್ಲೆ | ೮೪೫೦ ಚ.ಕಿ.ಮೀ.(೪.೪೦) | ೩,೭೩,೦೩೪ | ೩,೧೬,೭೭೬ (೫೦.೬೪) | ೩,೦೮,೭೨೮ (೪೯.೩೫) | ೬,೨೫,೪೯೪ (೧೦೦) | ೧,೯೧,೧೬೮ (೭೦.೮೦) | ೧,೩೬,೦೭೧ (೪೮.೨೦) | ೩,೧೮,೦೨೯ (೧೦೦) |
| ೨ | ಹೊಸಪೇಟೆ ನಗರಸಭೆ | ೯೦೪.೭ ಚ.ಕಿ.ಮೀ.(೧೦.೭೦) | ೪೪೦೭೬ (೧೧.೮೧) | ೨,೦೬,೧೬೭ (೪೪.೮೧) | ೨,೫೫,೮೨೪ (೫೫.೧೮) | ೪,೬೨,೯೯೧ (೧೦೦) | ೯೭೨೮ (೫೪.೦೫) | ೮೩೨೪ (೪೫.೯೪) | ೧೮೧೫೩ (೧೦೦) |
| ೩ | ಕೂಡ್ಲಿಗಿ ಪಟ್ಟಣ ಪಂಚಾಯಿತಿ | ೧೬೧೮.೮೭ ಚ.ಕಿ.ಮೀ.(೧೯.೧೫) | ೫೦೦೭ (೧.೩೪) | ೨೬,೭೧೨ (೯.೮೧) | ೨,೪೫,೪೭೧ (೯೦.೧೮) | ೨,೭೨,೧೮೩ (೧೦೦) | ೧೦,೧೦೦ (೫೫.೦೪) | ೮,೨೫೯ (೪೪.೯೫) | ೧೮,೩೫೯ (೧೦೦) |

ಸೂಚನೆ: ೨೦೧೧ರ ಜನಗಣತಿಯಿಂದ, ತಾಲೂಕು, ಜಿಲ್ಲೆ ಅಂಕಿ ಅಂಶಗಳಿಗೆ ಹೋಲಿಸಲಾಗಿದೆ. ತಾಲೂಕು, ಜಿಲ್ಲೆಯ ವಿವರಗಳನ್ನು ೨೦೧೧ರ ಜನಗಣತಿಯಿಂದ ಪಡೆಯಲಾಗಿದೆ. ಜಿಲ್ಲೆ ಮತ್ತು ತಾಲೂಕು ವಿಸ್ತೀರ್ಣವನ್ನು ಚ.ಕಿ.ಮೀ.ಗಳಲ್ಲಿ ತಿಳಿಸಲಾಗಿದೆ. ಆವರಣದಲ್ಲಿರುವ ಶೇಕಡವಾರು ಪ್ರಮಾಣವು ಕುಟುಂಬಗಳ ಸಂಖ್ಯೆ ಮತ್ತು ಸಾಕ್ಷರರ ಸಂಖ್ಯೆಯನ್ನು ತಿಳಿಸುತ್ತದೆ.

ಮೂಲ: ಡೈರೆಕ್ಟರ್ ಆಫ್ ಸೆನ್ಸಸ್ ಆಪರೇಷನ್, ಡಿಸ್ಟ್ರಿಕ್ಟ್ ಸೆನ್ಸಸ್ ಹ್ಯಾಂಡ್‌ಬುಕ್, ಬಳ್ಳಾರಿ ಡಿಸ್ಟ್ರಿಕ್ಟ್, ಬೆಂಗಳೂರು; ಗವರ್ನ್‌ಮೆಂಟ್ ಆಫ್ ಕರ್ನಾಟಕ, ೨೦೧೧

ಕೋಷ್ಟಕ–೩.೩.

## ಹೊಸಪೇಟೆ ಮತ್ತು ಕೂಡ್ಲಿಗಿ ನಗರಸಂಸ್ಥೆಗಳ ಚುನಾಯಿತ ಪ್ರತಿನಿಧಿಗಳ ಜಾತಿವಾರು ಲಿಂಗವಾರು ಪ್ರಾತಿನಿಧ್ಯ–೨೦೧೧

| ಜಿಲ್ಲೆ, ತಾಲೂಕು ಸ್ಥಳೀಯ ಸಂಸ್ಥೆಗಳು | ಪರಿಶಿಷ್ಟ ಜಾತಿ | | | ಪರಿಶಿಷ್ಟ ಪಂಗಡ | | | ಹಿಂದುಳಿದ ವರ್ಗ | | | ಸಾಮಾನ್ಯ ವರ್ಗ | | | ಒಟ್ಟುಚುನಾಯಿತ ಪ್ರತಿನಿಧಿಗಳು | | |
|---|---|---|---|---|---|---|---|---|---|---|---|---|---|---|---|
| | ಪು | ಮ | ಒಟ್ಟು | ಪು | ಮ | ಒಟ್ಟು | ಪು | ಮ | ಒಟ್ಟು | ಪು | ಮ | ಒಟ್ಟು | ಪು | ಮ | ಒಟ್ಟು |
| ಬಳ್ಳಾರಿ ಮಹಾನಗರ | ೨ (೫.೭೧) | ೩ (೮.೫೭) | ೫ (೧೪.೨೮) | ೨ (೫.೭೧ | ೧ (೨.೮೫) | ೩ (೮.೫೭) | ೫ (೧೪.೨೮) | ೭ (೨೦) | ೧೨ (೩೪.೨೮) | ೧೦ (೨೮.೫೭) | ೫ (೧೪.೨೮) | ೧೫ (೪೨.೮೫) | ೧೯ (೫೪.೨೮) | ೧೬ (೪೫.೭೧) | ೩೫ (೧೦೦) |
| ಹೊಸಪೇಟೆ ನಗರಸಭೆ | ೩ (೮.೫೭) | ೨ (೫.೭೧) | ೫ (೧೪.೨೮) | ೩ (೮.೫೭ | ೨ (೫.೭೧) | ೫ (೧೪.೨೮ | ೮ (೨೨.೮೫ | ೪ (೧೧.೪೨) | ೧೨ (೩೪.೨೮) | ೯ (೨೫.೭೧) | ೪ (೧೧.೪೨) | ೧೩ (೩೭.೧೪) | ೨೩ (೬೫.೭೧) | ೧೨ (೩೪.೨೮) | ೩೫ (೧೦೦) |
| ಕೂಡ್ಲಿಗಿ ಪಟ್ಟಣ ಪಂಚಾಯಿತಿ | ೨ (೧೦) | ೧ (೫) | ೩ (೧೫) | ೬ (೩೦) | ೩ (೧೫) | ೯ (೪೫) | ೪ (೨೦) | ೩ (೧೫) | ೭ (೩೫) | ೧ (೫) | ೦ (೦) | ೧ (೫) | ೧೩ (೬೫) | ೭ (೩೫) | ೨೦ (೧೦೦) |

ಸೂಚನೆ: ಆವರಣದಲ್ಲಿರುವ ಚುನಾಯಿತ ಪ್ರತಿನಿಧಿಗಳ ಜಾತಿವಾರು ಲಿಂಗವಾರು ಪ್ರಾತಿನಿಧ್ಯವನ್ನು ಶೇಕಡವಾರು ಪ್ರಮಾಣವನ್ನು ಸೂಚಿಸುತ್ತದೆ.

ಮೂಲ: ಮುಖ್ಯ ಯೋಜನಾಧಿಕಾರಿಗಳು, ಸ್ಥಳೀಯ ಸಂಸ್ಥೆಗಳ ಸದಸ್ಯರ ಪಟ್ಟಿ, ಜಿಲ್ಲಾ ಪಂಚಾಯತ್ ಕಚೇರಿ, ಬಳ್ಳಾರಿ ೨೦೧೧

ಕೋಷ್ಟಕ–೩.೪.

## ಜಿಲ್ಲೆ, ತಾಲೂಕುಗಳ ಕೆಲವು ಸಾಮಾನ್ಯ ಅಂಕಿ ಅಂಶಗಳು 2001 ಮತ್ತು 2011

| ಕ್ರ.ಸಂ. | ವಿವರಗಳು | ತಾಲೂಕುಗಳು | | | | | | | ಜಿಲ್ಲೆ |
|---|---|---|---|---|---|---|---|---|---|
| | | ಬಳ್ಳಾರಿ | ಹಡಗಲಿ | ಹೆಚ್.ಬಿ.ಹಳ್ಳಿ | ಹೊಸಪೇಟೆ | ಕೂಡ್ಲಿಗಿ | ಸಂಡೂರು | ಸಿರುಗುಪ್ಪ | ಬಳ್ಳಾರಿ |
| ೧. | ವಿಸ್ತೀರ್ಣ(ಚ.ಕಿ.ಮೀ.) | ೧೬೮೮.೮೩ (೨೦.೨೯) | ೯೪೭.೮೫ (೧೧.೩೮) | ೯೭೩.೯೫ (೧೧.೭೦) | ೯೦೪.೧೭ (೧೦.೮೬) | ೧೬೧೮.೮೭ (೧೯.೪೫) | ೧೧೫೨.೪೨ (೧೩.೮೪) | ೧೦೩೬.೧೭ (೧೨.೪೫) | ೮೩೨೨.೨೬ (೧೦೦) |
| ೨. | ಗ್ರಾಮಗಳ ಸಂಖ್ಯೆ | ೧೮೬ (೧೭.೮೫) | ೧೧೨ (೧೦.೭೪) | ೧೪೪ (೧೩.೮೧) | ೧೨೭ (೧೨.೧೮) | ೨೧೭ (೨೦.೮೨) | ೧೧೪ (೧೦.೯೪) | ೧೪೨ (೧೩.೬೨) | ೧೦೪೨ (೧೦೦) |
| ೩. | ಕುಟುಂಬಗಳ ಸಂಖ್ಯೆ | ೧,೧೭,೨೩೩ (೩೧.೪೨) | ೩೧,೦೮೪ (೮.೩೩) | ೨೮,೮೭೧ (೭.೭೩) | ೭೦,೭೧೯ (೧೮.೯೫) | ೪೭೮೧೧ (೧೨.೮೦) | ೩೫,೨೧೮ (೯.೪೪) | ೪೨,೦೯೮ (೧೧.೨೮) | ೩,೭೩,೦೩೪ (೧೦೦) |
| ೪. | ಪರಿಶಿಷ್ಟರ ಪ್ರಮಾಣ | ೨,೦೩,೦೧೨ (೨೭.೪೭) | ೫೦,೬೯೨ (೬.೮೬) | ೫೧,೬೫೭ (೬.೯೯) | ೧,೩೬,೨೭೧ (೧೮.೪೪) | ೧,೨೫,೮೬೨ (೧೭.೦೩) | ೮೩,೮೪೨ (೧೧.೩೪) | ೮೭,೫೨೦ (೧೧.೮೪) | ೭,೩೮,೮೫೬ (೧೦೦) |
| ೫. | ಸಾಕ್ಷರತೆ ಪ್ರಮಾಣ | ೩,೧೭,೯೮೫ (೩೫.೧೫) | ೮೬,೧೬೮ (೯.೫೨) | ೭೭,೩೫೩ (೮.೫೫) | ೧,೯೪,೨೬೦ (೨೧.೪೭) | ೧,೩೫,೬೮೯ (೧೫.೦೦) | ೮,೪೭೮ (೦.೯೩) | ೮೪,೪೮೦ (೯.೩೪) | ೯,೦೪,೪೧೩ (೧೦೦) |
| ೬. | ಲಿಂಗಾನುಪಾತ | ೯೬೧ | ೯೭೭ | ೯೭೯ | ೯೭೭ | ೯೫೫ | ೯೪೫ | ೯೯೯ | ೯೭೦ |
| ೭. | ಕೃಷಿ ಅವಲಂಬಿತ ವರ್ಗ | ೧,೪೩,೯೦೭ (೨೩.೪೮) | ೬೭,೫೨೪ (೧೧.೦೨) | ೫೭,೪೯೦ (೯.೩೮) | ೮೪,೦೫೫ (೧೩.೭೨) | ೧,೦೬,೪೩೬ (೧೭.೩೭) | ೫೪,೪೭೨ (೮.೮೯) | ೯೮,೭೫೪ (೧೬.೧೧) | ೬,೧೨,೬೩೮ (೧೦೦) |
| ೮. | ಸಾಗುವಳಿ ಪ್ರದೇಶ (ಹೆಕ್ಟೇರುಗಳಲ್ಲಿ) | ೧,೪೯,೭೪೨ (೨೫.೭೩) | ೯೭,೯೦೦ (೧೬.೮೨) | ೫೮,೭೬೮ (೧೦.೦೯) | ೪೫,೪೬೦ (೭.೮೧) | ೧,೦೧,೫೧೫ (೧೭.೪೪) | ೩೦,೯೧೫ (೫.೩೧) | ೯೭,೫೬೯ (೧೬.೭೬) | ೫,೮೧,೮೬೯ (೧೦೦) |
| ೯. | ನೀರಾವರಿ ಪ್ರದೇಶ (ಹೆಕ್ಟೇರುಗಳಲ್ಲಿ) | ೪೭,೬೯೨ (೧೮.೯೨) | ೩೬,೨೪೧ (೧೪.೩೮) | ೫೨,೨೬೬ (೨೯.೭೪) | ೧೯೭೩೩ (೭.೮೩) | ೩೨೮೪೫ (೧೩.೦೩) | ೬೩೩೭ (೨.೫೭) | ೫೬,೮೬೮ (೨೨.೫೬) | ೨,೫೧,೯೮೨ (೧೦೦) |

ಮೂಲ: ಡೈರೆಕ್ಟರ್ ಆಫ್ ಸೆನ್ಸಸ್ ಆಪರೇಷನ್, ಡಿಸ್ಟ್ರಿಕ್ಟ್ ಸೆನ್ಸಸ್ ಹ್ಯಾಂಡ್‌ಬುಕ್, ಬಳ್ಳಾರಿ ಡಿಸ್ಟ್ರಿಕ್ಟ್–ಬೆಂಗಳೂರು, ಗವರ್ನ್‌ಮೆಂಟ್ ಆಫ್ ಕರ್ನಾಟಕ, ೨೦೧೧

## ಕೊನೆ ಟಿಪ್ಪಣೆಗಳು

೧. ದ ಮೈಸೂರು ಟೌನ್ ಮುನ್ಸಿಪಾಲಿಟೀಸ್ ಆಕ್ಟ್–೧೯೫೧, ಗವರ್ನಮೆಂಟ್ ಪ್ರೆಸ್, ಬೆಂಗಳೂರು, ೨೪ ಅಕ್ಟೋಬರ್ ೧೯೫೫, ಪು.೨೪೩.

೨. ಭಾರತ ಗೆಜೆಟಿಯರ್, ಮೈಸೂರು, ಬಳ್ಳಾರಿ ಜಿಲ್ಲೆ, ಗವರ್ನಮೆಂಟ್ ಪ್ರೆಸ್, ಬೆಂಗಳೂರು, ೧೯೭೨, ಪು.೫೧೫

೩. ಚಂದ್ರಶೇಖರ್ ಟಿ.ಆರ್., ಬಳ್ಳಾರಿ ಜಿಲ್ಲೆಯ ನಿಸರ್ಗ ಸಂಪತ್ತು, ಗದಗ; ಪ್ರಭು ಪ್ರಿಂಟಿಂಗ್ ಪ್ರೆಸ್, ೧೯೯೪, ಪು. ೯.

೪. ಚಂದ್ರಶೇಖರ್ ಟಿ.ಆರ್.(ಸಂ), ಜಿಲ್ಲಾ ಅಭಿವೃದ್ಧಿ ಮಾಹಿತಿಕೋಶ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೪, ಪು.೬.

೫. ಚಂದ್ರಶೇಖರ್ ಟಿ.ಆರ್., ಪೂರ್ವೋಕ್ತ, ೧೯೯೪, ಪು.೧೫

೬ ಗವರ್ನ್‌ಮೆಂಟ್ ಆಫ್ ಕರ್ನಾಟಕ, ಹೈ ಪವರ್ ಕಮಿಟಿ ಫಾರ್ ರಿ ಅಡ್ರೆಸಲ್ ಆಫ್ ರೀಜನಲ್ ಇಂಬ್ಯಾಲೆನ್ಸ್ ಫೈನಲ್ ರಿಪೋರ್ಟ್, ಪಾರ್ಟ್.೩, ಜೂನ್–೨೦೦೨, ಬೆಂಗಳೂರು; ಪು.೧೩೦

೭ ಡೈರೆಕ್ಟರ್ ಆಫ್ ಸೆನ್ಸಸ್ ಆಪರೇಷನ್ಸ್, ಡಿಸ್ಟ್ರಿಕ್ಟ್ ಸೆನ್ಸಸ್ ಹ್ಯಾಂಡ್‌ಬುಕ್, ಬಳ್ಳಾರಿ ಡಿಸ್ಟ್ರಿಕ್ಟ್, ಬೆಂಗಳೂರು; ಗವರ್ನ್‌ಮೆಂಟ್ ಆಫ್ ಕರ್ನಾಟಕ ೨೦೧೧

೮. ಶೇಷಾದ್ರಿ ಬಿ., ಬಳ್ಳಾರಿ ಜಿಲ್ಲೆಯಲ್ಲಿ ಕೈಗಾರೀಕರಣ ಮತ್ತು ಜನಾಂದೋಲನ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೮, ಪು.೧

೯. ಚಂದ್ರಶೇಖರ್ ಟಿ.ಆರ್., ಪೂರ್ವೋಕ್ತ, ೧೯೯೯, ಪು.೪೯

೧೦. ಶೇಷಾದ್ರಿ ಬಿ., ಪೂರ್ವೋಕ್ತ, ಪು.೧೧

೧೧. ಅದೇ, ಪು.೧೫

೧೨. ಆಯುಕ್ತರು, ಮಹಾನಗರ ಪಾಲಿಕೆಯ ಸದಸ್ಯರ ಪಟ್ಟಿ, ಬಳ್ಳಾರಿ ಜಿಲ್ಲಾ ಪಂಚಾಯತ್ ಕಚೇರಿ, ಬಳ್ಳಾರಿ, ೨೦೧೧.

೧೩. ಮುಖ್ಯಾಧಿಕಾರಿಗಳು, ನಗರಸಭೆಯ ಸದಸ್ಯರ ಪಟ್ಟಿ, ಬಳ್ಳಾರಿ ಜಿಲ್ಲಾ ಪಂಚಾಯತ್ ಕಚೇರಿ, ೨೦೧೧

೧೪. ಮುಖ್ಯಾಧಿಕಾರಿಗಳು, ಪಟ್ಟಣ ಪಂಚಾಯಿತಿಯ ಸದಸ್ಯರ ಪಟ್ಟಿ, ಬಳ್ಳಾರಿ ಜಿಲ್ಲಾ ಪಂಚಾಯತ್ ಕಚೇರಿ, ಬಳ್ಳಾರಿ, ೨೦೧೧

೧೫. ಮೈಸೂರು ಸ್ಟೇಟ್ ಗೆಜೆಟಿಯರ್, ಬಳ್ಳಾರಿ ಡಿಸ್ಟ್ರಿಕ್ಟ್ ಗೆಜೆಟಿಯರ್, ಮೈಸೂರು ಸರಕಾರ, ೧೯೭೨, ಬೆಂಗಳೂರು, ಪು.೯೫

೧೬. ಚಂದ್ರಶೇಖರ್ ಟಿ.ಆರ್., ಪೂರ್ವೋಕ್ತ, ೧೯೯೪, ಪು.೩೬

೧೭. ಗವರ್ನ್‌ಮೆಂಟ್ ಆಫ್ ಕರ್ನಾಟಕ, ಪೂರ್ವೋಕ್ತ, ಪು.೨೨

೧೮. ಅದೇ, ಪು.೨೧೩

೧೯. ಚಂದ್ರಶೇಖರ್ ಟಿ.ಆರ್., ಪೂರ್ವೋಕ್ತ, ೧೯೯೪, ಪು.೧೩

೨೦. ಗವರ್ನ್‌ಮೆಂಟ್ ಆಫ್ ಕರ್ನಾಟಕ, ಪೂರ್ವೋಕ್ತ, ಪು.೧

೨೧. ಅದೇ, ಪು.೫

೨೨. ಬಳ್ಳಾರಿ ಡಿಸ್ಟ್ರಿಕ್ಟ್ ಹ್ಯಾಂಡ್‌ಬುಕ್, ಪೂರ್ವೋಕ್ತ, ಪು.೧

೨೩. ಕಾರ್ಯ ನಿರ್ವಾಹಕ ಅಧಿಕಾರಿಗಳು, ಸಿಟಿ ಮುನ್ಸಿಪಾಲಿಟಿ ಸದಸ್ಯರ ಪಟ್ಟಿ, ೨೦೧೧; ಹೊಸಪೇಟೆ. ನಗರಸಭೆ ಕಾರ್ಯಾಲಯ, ೨೦೧೧

೨೪. ಚಂದ್ರಶೇಖರ್ ಟಿ.ಆರ್., ಪೂರ್ವೋಕ್ತ, ೧೯೯೪, ಪು.೨೪

೨೫. ಗವರ್ನ್‌ಮೆಂಟ್ ಆಫ್ ಕರ್ನಾಟಕ, ಪೂರ್ವೋಕ್ತ, ಪು. ೧–೫

೨೬. ಕಾರ್ಯ ನಿರ್ವಾಹಕ ಅಧಿಕಾರಿಗಳು, ಪಟ್ಟಣ ಪಂಚಾಯಿತಿ ಸದಸ್ಯರ ಪಟ್ಟಿ, ೨೦೧೧, ಕೂಡ್ಲಿಗಿ; ಪಟ್ಟಣ ಪಂಚಾಯಿತಿ ಕಾರ್ಯಾಲಯ, ೨೦೧೧

೨೭. ಪಂಚಾಯತ್ ಕಾರ್ಯದರ್ಶಿ ಪಟ್ಟಣ ಪಂಚಾಯಿತಿ ಬೇಡಿಕೆ ರಿಜಿಸ್ಟರ್, ಕೂಡ್ಲಿಗಿ ಪಟ್ಟಣ ಪಂಚಾಯಿತಿ ಕಚೇರಿ ಕೂಡ್ಲಿಗಿ, ೨೦೧೧.

೨೮. ಕರ್ನಾಟಕ ಪೌರ ಸುಧಾರಣೆಯನ್ನು ೧೯೭೬

೨೯. ಅದೇ ಪುಸ್ತಕ, ಪು.

೩೦. ಸಿಟಿ ಮುನ್ಸಿಪಾಲಿಟಿ ನಗರಸಭೆ ಮತ್ತು ಪಟ್ಟಣ ಪಂಚಾಯಿತಿ ಸದಸ್ಯರ ಪಟ್ಟಿ, ಹೊಸಪೇಟೆ: ಜಿಲ್ಲಾ ಪಂಚಾಯತ್ ಕಚೇರಿ, ಬಳ್ಳಾರಿ, ೨೦೧೧

೩೧. ಶೇಷಾದ್ರಿ ಬಿ., ಪೂರ್ವೋಕ್ತ, ಪು.೨೪

೩೨. ಗವರ್ನ್‌ಮೆಂಟ್ ಆಫ್ ಕರ್ನಾಟಕ, ಪೂರ್ವೋಕ್ತ, ಪು. ೧೦೬

**ಪೀಠಿಕೆ**

ನಗರ ಸ್ಥಳೀಯ ಸಂಸ್ಥೆಗಳು ಮೂಲಕ ಅಭಿವೃದ್ಧಿ ಚಟುವಟಿಕೆಗಳನ್ನು ನೋಡುವ ಉದ್ದೇಶವನ್ನು ಇಟ್ಟುಕೊಂಡು ಅಧ್ಯಯನ ಕೈಗೊಳ್ಳಲಾಗಿದೆ. ಈ ಹಿನ್ನೆಲೆಯಲ್ಲಿ ಹಿಂದಿನ ಅಧ್ಯಯನಗಳಲ್ಲಿ ಅಧ್ಯಯನದ ಕ್ಷೇತ್ರ ಪರಿಚಯಿಸಲಾಗಿದೆ. ಪ್ರಸ್ತುತ ಅಧ್ಯಯನದಲ್ಲಿ ನಗರ ಸ್ಥಳೀಯ ಸಂಸ್ಥೆಗಳು ಮತ್ತು ಅಭಿವೃದ್ಧಿ ಚಟುವಟಿಕೆಗಳ ಬಗ್ಗೆ ವಿಶ್ಲೇಷಿಸಲಾಗಿದೆ. ದೇಶದಲ್ಲಿ ಅತ್ಯಂತ ಹೆಚ್ಚಿನ ರೀತಿಯಲ್ಲಿ ನಗರೀಕರಣಗೊಂಡ ರಾಜ್ಯಗಳಲ್ಲಿ ಕರ್ನಾಟಕ ನಾಲ್ಕನೆಯಾ ಸ್ಥಾನದಲ್ಲಿದೆ. ದೇಶದ ಜನಸಂಖ್ಯೆಯ ಪೈಕಿ ನಗರ ಪ್ರದೇಶದ ಸರಾಸರಿ ಜನಸಂಖ್ಯೆ ಶೇಕಡಾ ೩೪ರಷ್ಟಿದೆ. ಅದಕ್ಕೆ ಪ್ರತಿಯಾಗಿ ರಾಜ್ಯದ ೫೨.೭೩ ದಶಲಕ್ಷ ೨೧೪ ನಗರ ಸ್ಥಳೀಯ ಸಂಸ್ಥೆಗಳು, ೮ ಮಹಾನಗರ ಪಾಲಿಕೆಗಳು, ೪೪ ನಗರ ಸಭೆಗಳು, ೯೪ ಪುರಸಭೆಗಳು ಹಾಗೂ ೬೮ ಪಟ್ಟಣ ಪಂಚಾಯತ್‌ಗಳಲ್ಲಿನ ಒಟ್ಟು ಜನಸಂಖ್ಯೆಯ ಪೈಕಿ ಅತಿ ಹೆಚ್ಚಿನ ಜನ ಈ ಸ್ಥಳಗಳಲ್ಲಿ ವಾಸಿಸುವುದರಿಂದ ಇವುಗಳಿಗೆ ಹೆಚ್ಚಿನ ಗಮನ ನೀಡಬೇಕಾಗಿದೆ. ಕಳೆದ ದಶಕದಲ್ಲಿ ಕರ್ನಾಟಕದಲ್ಲಿ ನಗರೀಕರಣದ ಪ್ರಮಾಣ ಶೇ. ೨೮.೮೬ರಷ್ಟು ಇದರಿಂದಾಗಿ ಅಗತ್ಯ ಮೂಲ ಸೌಕರ್ಯಗಳಿಗೆ ಉತ್ತಮ ಗುಣಮಟ್ಟದ, ದುಬಾರಿಯಲ್ಲದ ಹಾಗೂ ಬೇಡಿಕೆಗನುಗುಣವಾದ ಪೌರ ಸೇವೆಗಳಿಗೆ ಬೇಡಿಕೆ ಹೆಚ್ಚಾಗಿದ್ದು ದೀರ್ಘಕಾಲ ಉಳಿಯಬಲ್ಲ ಇಂಥ ಸೇವೆಯನ್ನು ಒದಗಿಸುವುದು ಸರ್ಕಾರಕ್ಕೆ ಖಂಡಿತವಾಗಿಯೂ ಒಂದು ಸವಾಲಾಗಿದೆ. ಆದ್ದರಿಂದ ನಗರ ಸ್ಥಳೀಯ ಸಂಸ್ಥೆಗಳು, ನಗರ ಪ್ರದೇಶದ ಸಮಸ್ಯೆಗಳನ್ನು ಪರಿಣಾಮಕಾರಿಯಾಗಿ ಪರಿಹರಿಸಲು ಮತ್ತು ಅದನ್ನು ಎದುರಿಸಲು ತನ್ನ ಸಾಮರ್ಥ್ಯವನ್ನು ಹೆಚ್ಚಿಸಿಕೊಳ್ಳಲು ಸೂಕ್ತ ಕಾರ್ಯಕ್ರಮಗಳನ್ನು ರೂಪಿಸುವುದಕ್ಕೆ ನಿರಂತರವಾಗಿ ಪ್ರಯತ್ನಿಸುವುದು ಅತ್ಯಗತ್ಯವಾಗಿದೆ. ನಗರಕ್ಕೆ ಯೋಜನೆಯನ್ನು ರೂಪಿಸುವಂತೆ, ಅಲ್ಪ ಮತ್ತು ದೀರ್ಘಕಾಲದ ಆಧಾರದ ಮೇಲೆ ಸೂಕ್ತ ಅಭಿವೃದ್ಧಿ ಯೋಜನೆಯನ್ನು ತಯಾರಿಸುವಂತೆ, ಆರ್ಥಿಕವಾಗಿ ಕಾರ್ಯಸಾಧ್ಯವಾಗುವ ಹಾಗೆ ತಮ್ಮ ಸ್ವಂತ ಸಂಪನ್ಮೂಲಗಳನ್ನು ಸೃಜಿಸಿಕೊಳ್ಳುವಂತೆ ಹಾಗು ಅವರ ಸ್ವಂತವಾಗಿ ತೀರ್ಮಾನವನ್ನು ಕೈಗೊಳ್ಳುವಲ್ಲಿ ಮತ್ತು ನಗರಗಳ ಸಮಸ್ಯೆಗಳನ್ನು ಎದುರಿಸುವಲ್ಲಿ

ಮಾನವಶಕ್ತಿ ಸಾಮರ್ಥ್ಯವನ್ನು ಹೆಚ್ಚಿಸಿಕೊಳ್ಳುವಂತೆ ನಗರ ಸ್ಥಳೀಯ ಸಂಸ್ಥೆಗಳನ್ನು ಸಜ್ಜುಗೊಳಿಸುವುದೇ ಸರ್ಕಾರದ ದೂರದೃಷ್ಟಿಯಾಗಿದೆ. ಅದರಂತೆ ಭಾರತ ಸಂವಿಧಾನವು ವಿಕೇಂದ್ರೀಕರಣಗೊಂಡ ನಗರ ಸ್ಥಳೀಯ ಸಂಸ್ಥೆಗಳು ಸೌಲಭ್ಯದಿಂದ ವಂಚಿತರಾದವರಿಗಾಗಿ ಯೋಜನೆಯನ್ನು ಅನುಷ್ಠಾನಗೊಳಿಸುವುದರ ಮೂಲಕ ಅಭಿವೃದ್ಧಿಗಾಗಿ ವಿಶೇಷ ಹಕ್ಕುಗಳನ್ನು ನೀಡಿದೆ. ಇದರೊಂದಿಗೆ ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ಸ್ಥಳೀಯ ಸಂಸ್ಥೆಗಳ ಯೋಜನೆಗಳ ಬಗ್ಗೆ ಅರಿವು ಜೊತೆಗೆ ಭಾಗವಹಿಸುವುದರ ನಿಟ್ಟಿನಲ್ಲಿ ಅವಕಾಶ ವಂಚಿತ ವರ್ಗಗಳನ್ನು ಅಭಿವೃದ್ಧಿಯ ಮುಖ್ಯವಾಹಿನಿಯೊಂದಿಗೆ ಸಮೀಕರಿಸಲು ಸರ್ಕಾರಗಳು ರೂಪಿಸಬೇಕಾದ ಅಭಿವೃದ್ಧಿ ನೀತಿಯನ್ನು ಕೂಡ ಅಂಗೀಕರಿಸಿದೆ. ಈ ನಿಟ್ಟಿನಲ್ಲಿ, ಸಂವಿಧಾನದ ನಾಲ್ಕನೇ ಭಾಗದ ೩೮(೨)ರ ಅನುಚ್ಛೇದದಲ್ಲಿ ರಾಜ್ಯವು ವಿಶೇಷವಾಗಿ ಆದಾಯದಲ್ಲಿನ ಅಸಮಾನತೆಯನ್ನು ಕಡಿಮೆ ಮಾಡಲು ಪ್ರಯತ್ನಿಸತಕ್ಕದ್ದು ಮತ್ತು ಬೇರೆ ಬೇರೆ ಪ್ರದೇಶಗಳಲ್ಲಿ ವಾಸಿಸುತ್ತಿರುವ ಅಥವಾ ಬೇರೆ ಬೇರೆ ವೃತ್ತಿಗಳಲ್ಲಿ ತೊಡಗಿರುವ ವ್ಯಕ್ತಿಗಳಲ್ಲಿ ಮಾತ್ರವಲ್ಲದೆ ಜನ ಸಮೂಹಗಳಲ್ಲಿ ಸಹ ಸ್ಥಾನಮಾನ, ಸೌಲಭ್ಯಗಳು ಮತ್ತು ಅವಕಾಶಗಳಲ್ಲಿರುವ ಅಸಮಾನತೆಗಳನ್ನು ತೊಡೆದುಹಾಕಲು ಪ್ರಯತ್ನಿಸತಕ್ಕದ್ದು ಎಂದು ತಿಳಿಸಿದೆ. ಅನುಚ್ಛೇದ ೩೯ರಲ್ಲಿ ರಾಜ್ಯವು ನಿರ್ದಿಷ್ಟವಾಗಿ ಅನುಸರಿಸಬೇಕೆಂದು ಕೆಲ ನೀತಿಗಳನ್ನು ತಿಳಿಸಿದೆ.

ಜನಸಮುದಾಯದ ಭೌತಿಕ ಸಾಧನ ಸಂಪತ್ತಿನ ಒಡೆತನ ಮತ್ತು ನಿಯಂತ್ರಣ, ಸಾಮಾಜಿಕ ಹಿತಸಾಧನೆಗಾಗಿ ಹಂಚಿಕೆಯಾಗುವುದು, ನಾಗರಿಕರು, ಪುರುಷರು ಮತ್ತು ಸ್ತ್ರೀಯರು ಸಾಕಷ್ಟು ಜೀವನೋಪಾಯ ಸಾಧನಗಳನ್ನು ಹೊಂದಲು ಸಮಾನವಾಗಿ ಜೀವನ ಸಾಗಿಸುವ ಹಕ್ಕು, ಆರ್ಥಿಕ ವ್ಯವಸ್ಥೆಯ ಪ್ರವರ್ತನೆಯು ಸರ್ವೇಸಾಮಾನ್ಯ ಹಿತ ಸಾಧನೆಗೆ ಬಾಧಕವಾಗುವ ರೀತಿಯಲ್ಲಿ ಸಂಪತ್ತು, ಉತ್ಪಾದನಾ ಸಾಧನಗಳು ಕೇಂದ್ರೀಕೃತವಾಗದಿರುವುದು, ಪುರುಷರು ಮತ್ತು ಸ್ತ್ರೀಯರಿಗೆ ಸಮಾನ ಕೆಲಸಕ್ಕೆ ಸಮಾನ ವೇತನ ಮತ್ತು ಪುರುಷ ಮತ್ತು ಸ್ತ್ರೀ ಕೆಲಸಗಾರರ ಆರೋಗ್ಯ ಅಪ್ರಾಪ್ತ ವಯಸ್ಸಿನ ಮಕ್ಕಳನ್ನು ದುಡಿಸಿಕೊಳ್ಳುವುದು ಮತ್ತು ದುರುಪಯೋಗವಾಗದಂತೆ ನೋಡಿಕೊಳ್ಳುವುದು. ಈ ಎಲ್ಲಾ ಅನುಚ್ಛೇದಗಳು ವಿವಿಧ ಪ್ರದೇಶಗಳಲ್ಲಿ ವಾಸಿಸುತ್ತಿರುವ ಅಥವಾ ಬೃಹತ್ ನಗರ ಪ್ರದೇಶಗಳೆನ್ನದೆ ಜನಸಮೂಹಗಳಲ್ಲಿ ಸಹ ನ್ಯಾಯ ಮತ್ತು ಸಮಾನತೆ ಇರುವಂತೆ ಮಾಡುವುದು ಹಾಗೂ ಆರ್ಥಿಕ ವ್ಯವಸ್ಥೆಯ ಕಾರ್ಯಚರಣೆಯಿಂದ ಯಾವುದೇ ಸಾಮಾನ್ಯ ಕೆಡುಕು ಉಂಟಾಗದಂತೆ ಸೂಕ್ತ ನೀತಿಗಳ ಮೂಲಕ ನೋಡಿಕೊಳ್ಳುವುದು ರಾಜ್ಯದ ಜವಾಬ್ದಾರಿಯಾಗಿದೆ. ಸಂವಿಧಾನದ ರಾಜ್ಯ ನಿರ್ದೇಶಕ ತತ್ವಗಳಲ್ಲಿ ಗ್ರಹಿಸಿಕೊಂಡಿರುವ ಅಭಿವೃದ್ಧಿ ನೀತಿಯನ್ನು ಕಡ್ಡಾಯವಾಗಿ ಪಾಲಿಸಲು ಸರ್ಕಾರಗಳಿಗೆ ನಿರ್ದೇಶಿಸಿದೆ. ಆದರೆ ನಗರ ಅಭಿವೃದ್ಧಿಗೆ ವಿಶೇಷವಾಗಿ ನೀತಿಗಳನ್ನು ರೂಪಿಸಿದರೂ ಸ್ಥಳೀಯ ನಾಗರಿಕರು ಸಾಮಾಜಿಕವಾಗಿ, ಆರ್ಥಿಕವಾಗಿ ಮತ್ತು ರಾಜಕೀಯವಾಗಿ ಅತ್ಯಂತ ಹಿಂದುಳಿದಿರುವುದನ್ನು ಅಧ್ಯಯನಗಳು ದೃಢೀಕರಿಸುತ್ತವೆ.[೮] ಈ ಅಧ್ಯಯನಗಳು ಅಭಿವೃದ್ಧಿಯ ವಾಸ್ತವಿಕತೆಯನ್ನು ಸ್ಪಷ್ಟಪಡಿಸುತ್ತದೆ. **ಅಂದರೆ,** ನಗರ ಅಭಿವೃದ್ಧಿ ನೀತಿಗಳು ಸಾಮಾನ್ಯವಾಗಿ ಜನರ ನಿರೀಕ್ಷೆಗಳ ಆಧಾರದ ಮೇಲೆ ರೂಪುಗೊಳ್ಳುತ್ತವೆ. ಜನರ ನಂಬಿಕೆಗಳು, ಅದಕ್ಕೆ ಅವರು ನೀಡುವ ಮೌಲ್ಯ ಪ್ರಸ್ತುತ ಸ್ಥಿತಿಯ ಅವಲೋಕನದಿಂದ ಮುಂದಿನ ದಿನಗಳಲ್ಲಿ ಆಗಬೇಕಾದ ಪರಿವರ್ತನೆಯ ಹಾದಿಯ ಸ್ಥಿತಿಯನ್ನು ನಿರ್ಧರಿಸಿ, ರೂಪುಗೊಳ್ಳುವ ನಿಯಮವೇ ನೀತಿಯಾಗಿರುತ್ತದೆ. ರಾಷ್ಟ್ರೀಯ ನಗರಾಭಿವೃದ್ಧಿ ನೀತಿಯು

ಸ್ಥಳೀಯ ನಗರಾಭಿವೃದ್ಧಿ ಸ್ಥಿತಿಯನ್ನು ಉತ್ತಮಗೊಳಿಸುವ ಗುರಿಯನ್ನು ಹೊಂದಿರುವುದಾಗಿದೆ. ಈ ನಿರ್ದಿಷ್ಟ ಗುರಿ ಸಾಧನೆಯ ಆದ್ಯತೆಯ ಮೇಲೆ ಅಗತ್ಯ ನಿರ್ದೇಶನಗಳನ್ನು ಸಂಘಟಿತ ಕಾರ್ಯಕ್ಕೆ ನೀಡುತ್ತಾ ಬರಲಾಗಿದೆ.

ನಗರ ಸ್ಥಳೀಯ ಸಮಸ್ಯೆಯ ನಿರ್ಮೂಲನೆಗಾಗಿ ಅಲ್ಲಿಯ ಸಾಮಾಜಿಕ ಮತ್ತು ಆರ್ಥಿಕ ವ್ಯವಸ್ಥೆ, ರಾಜಕೀಯ ಹಾಗೂ ಆಡಳಿತಾತ್ಮಕ ತಂತ್ರಗಾರಿಕೆಗಳಿಗನುಗುಣವಾಗಿ ಪ್ರತಿಯೊಂದು ದೇಶವು ತನ್ನ ಜನರ ಅಭಿವೃದ್ಧಿ ಉನ್ನತಿಗಾಗಿ ನೀತಿಯನ್ನು ರೂಪಿಸಿಕೊಳ್ಳುತ್ತವೆ. ಇದರಲ್ಲಿ ರಾಜಕೀಯ ಇಚ್ಛಾಶಕ್ತಿಯ, ಹಣಕಾಸು ವಿನಿಯೋಗ, ಆಡಳಿತಾತ್ಮಕ ಬದಲಾವಣೆ, ಸಮುದಾಯ ಭಾಗವಹಿಸುವಿಕೆ ಮತ್ತು ಅರಿವು ಹಾಗೂ ಶಾಸನಾತ್ಮಕ ವಿಚಾರಗಳು ಪ್ರಮುಖ ನಿರ್ಣಯಗಳಾಗಿರುತ್ತವೆ. ಈ ಹಿನ್ನೆಲೆಯಲ್ಲಿ ರಾಜ್ಯದಲ್ಲಿನ ನಗರ ಸ್ಥಳೀಯ ಸಂಸ್ಥೆಗಳು ಆರ್ಥಿಕ ಸಂಪನ್ಮೂಲಗಳ ಅಭಾವ, ರಾಜಕೀಯ ಇಚ್ಛಾಶಕ್ತಿಯ ಕೊರತೆ ಮತ್ತು ಸ್ವಾಯತ್ತತೆಯ ಕೊರತೆ, ಭ್ರಷ್ಟಾಚಾರ, ಸ್ವಜನ ಪಕ್ಷಪಾತ, ಸಾಮಾಜಿಕ ನ್ಯಾಯದ ಕೊರತೆ ಅನೇಕ ದೌರ್ಬಲ್ಯಗಳಿಂದ ನಿರ್ಮಾಣಗೊಂಡಿದೆ. ೭೪ನೇ ಸಂವಿಧಾನ ತಿದ್ದುಪಡಿ ಅಧಿನಿಯಮ ನಗರ ಸ್ಥಳೀಯ ಸಂಸ್ಥೆಗಳನ್ನು ಸ್ವಯಂ ಆಡಳಿತ ಘಟಕಗಳಾಗಿ ಅಭಿವೃದ್ಧಿಯನ್ನು ನೋಡುತ್ತಾ ನಗರ ಸ್ಥಳೀಯ ಸಂಸ್ಥೆಗಳ ಮೂಲಕ ನಗರದಲ್ಲಿ ವಾಸಿಸುವ ವಂಚಿತ ಸಮುದಾಯಗಳಿಗೆ ಪರಿಹಾರವನ್ನು ಕಂಡುಕೊಳ್ಳುವ ನಿಟ್ಟಿನಲ್ಲಿ ನಗರಾಭಿವೃದ್ಧಿ ನೀತಿ ಮತ್ತು ಕಾರ್ಯಕ್ರಮಗಳು ಪ್ರಮುಖವಾಗಿ ಕಾಣಿಸಿಕೊಳ್ಳುತ್ತವೆ.

### ೪.೧. ನಗರಾಭಿವೃದ್ಧಿ ನೀತಿ ಕುರಿತು

ಸ್ವಾತಂತ್ರ್ಯಪೂರ್ವದಲ್ಲಿ ನಮ್ಮ ಗ್ರಾಮೀಣ ಭಾರತಕ್ಕೆ ನಿಗದಿತವಾದ ನಗರಾಭಿವೃದ್ಧಿ ನೀತಿ ಕಂಡು ಬರುವುದಿಲ್ಲ. ಎರಡನೆಯ ಮಹಾಯುದ್ದದ ನಂತರ ಭಾರತದಲ್ಲಿ ನಗರಗಳ ಮೇಲೆ ಕಳಪೆ ಆರ್ಥಿಕತೆ ನೆಲೆ ಮತ್ತು ಕ್ರಿಯಾತ್ಮಕ ವಿಭಾಗಗಳು ಮಾಡದೆಯೇ ನಗರೀಕರಣ ಅಭಿವ್ಯಕ್ತವಾಗಿದೆ. ಆದ್ದರಿಂದ ಭಾರತದ ನಗರೀಕರಣ ಕ್ಷೇತ್ರದಲ್ಲಿ ಕೆಲವು ಸಾಮಾಜಿಕ, ಆರ್ಥಿಕ, ಮೂಲಭೂತ ಸೌಕರ್ಯಗಳ ಸಮಸ್ಯೆಗಳು ಹೆಚ್ಚಾದವು. ವಸತಿ, ಕೊಳಗೇರಿ, ಸಾರಿಗೆ, ನೀರು ಪೂರೈಕೆ, ನೈರ್ಮಲ್ಯ (ಶಿಕ್ಷಣ, ಆರೋಗ್ಯ, ಉತ್ತಮ ಜೀವನ ಮಟ್ಟ) ಇವುಗಳನ್ನು ಸಮಗ್ರವಾಗಿ ನಿಭಾಯಿಸಲು ಭಾರತಕ್ಕೆ ಅಗತ್ಯ ನಗರಾಭಿವೃದ್ಧಿ ನೀತಿ ಮತ್ತು ಧೋರಣೆಯನ್ನು ರೂಪಿಸುವುದು ಅನಿವಾರ್ಯವಾಗಿತ್ತು.[೨] ಇದಕ್ಕಾಗಿ ಭಾರತದಲ್ಲಿ ೧೯೫೦ರಿಂದ ನಗರಾಭಿವೃದ್ಧಿ ಮತ್ತು ವಸತಿ ಯೋಜನೆಯ ನೀತಿಗಳ ಬಗ್ಗೆ ತಕರಾರುಗಳು(ಆಕ್ಷೇಪ) ಬಂದ ನಂತರ ನಗರ ಜನಸಂಖ್ಯೆ ಮತ್ತು ವಸತಿಗಳ ಮೂಲಭೂತ ಸೇವೆಗಳ ಕೊರತೆಯು ಒತ್ತಡಕ್ಕೆ ಮೂಲ ಸಾಕ್ಷಿಯಾಗಿವೆ. ಆದಾಗ್ಯೂ ನೀತಿ ನಿರೂಪಕರ ಸಾಮಾನ್ಯ ಗ್ರಹಿಕೆಯು ಭಾರತ ಕೃಷಿ ಮತ್ತು ಗ್ರಾಮೀಣ ಆರ್ಥಿಕತೆಯ ಮೇಲೆ ನಗರೀಕರಣ ಹೆಚ್ಚು ದುಷ್ಪರಿಣಾಮ ಬೀರುತ್ತದೆ. ಅದರಂತೆ ಹಿಂದಿನ ಲಭ್ಯ ಮಾಹಿತಿಯನ್ನು ಸಂಗ್ರಹಿಸಿ ಇದ್ದ ರಾಷ್ಟ್ರೀಯ ಆರ್ಥಿಕ ನೀತಿಗಳ ಧನಾತ್ಮಕ ಅಂಶಗಳ ವಿಷಯಗಳಿಗೆ ಹೆಚ್ಚು ಒತ್ತು ನೀಡಲಾಗಿತ್ತು. ಈ ನೀತಿ ನಿರೂಪಕರು ನೀಡಿದ ನಿರ್ದೇಶನ ಮತ್ತು ಮಾರ್ಗದರ್ಶನ ಆಧಾರದ ಮೇಲೆ ಭಾರತದಲ್ಲಿ ನಗರ ಪ್ರದೇಶಗಳಲ್ಲಿ ಸಮಸ್ಯೆಗಳನ್ನು, ಅದರಲ್ಲಿಯೂ ಸಾಮಾಜಿಕ ಕಲ್ಯಾಣ ಕ್ಷೇತ್ರಗಳಲ್ಲಿ ಹೂಡಿಕೆ ಮತ್ತು ಉಳಿಕೆ ಮಾಡಿ ಸಮಸ್ಯೆಗಳನ್ನು ಬಗೆಹರಿಸುವಂತಹ ನಗರಾಭಿವೃದ್ಧಿ ನೀತಿ ಮತ್ತು ಸೇವೆಗಳನ್ನು ಅಭಿವೃದ್ಧಿ ಪಡಿಸಲು

ಕ್ರಮ ವಹಿಸಲಾಯಿತು. ಸ್ವಾತಂತ್ರ್ಯ ನಂತರ ಮೂರನೆಯ ಪಂಚವಾರ್ಷಿಕ ಯೋಜನೆಯಲ್ಲಿ ದೇಶದ ನಗರಾಭಿವೃದ್ಧಿ ಇತಿಹಾಸದಲ್ಲಿ ಮಹತ್ವದ ತಿರುವು ಸಿಕ್ಕಿತ್ತು. ಪ್ರಾದೇಶಿಕ ಅಭಿವೃದ್ಧಿಯಲ್ಲಿ ಪಟ್ಟಣ ಮತ್ತು ನಗರಗಳ ಸಮತೋಲನ ಬೆಳವಣಿಗೆಯ ಮಹತ್ವವನ್ನು ಗುರಿತಿಸಲಾಯಿತು. ಮತ್ತು ದೊಡ್ಡ ನಗರಗಳ ವ್ಯವಸ್ಥಿತ ಬೆಳವಣಿಗೆಗೆ ಪ್ರಮುಖ ಯೋಜನೆ ರೂಪಿಸಿಕೊಳ್ಳುವಂತೆ ತಿಳಿಸಲಾಯಿತು. ಹಾಗೂ ನಗರಾಡಳಿತ ವ್ಯವಸ್ಥೆಯನ್ನು ಬಲಪಡಿಸಬೇಕು ಎಂಬ ಅಂಶಕ್ಕೆ ಗಮನಹರಿಸಲಾಯಿತು. ಈ ಯೋಜನೆಯ ವಿನ್ಯಾಸ ಮತ್ತು ಪದ್ಧತಿಯನ್ನು ಆಧರಿಸಿ ನಗರ ಯೋಜನ ಕಾಯ್ದೆಗಳನ್ನು ರೂಪಿಸಿಕೊಂಡವು. ಹೀಗೆ ದೇಶದ ನಗರ ಯೋಜನೆ ನೀತಿ ನಿರ್ಮಾಣದಲ್ಲಿ ಮೂರನೆಯ ಪಂಚವಾರ್ಷಿಕ ಯೋಜನೆ ಮಹತ್ವದ ಪಾತ್ರವಹಿಸಿತು. ಅಲ್ಲದೇ, ಈ ನಿಟ್ಟಿನಲ್ಲಿ ವಿಷಯ ಪರಿಣಿತರು ಒಂದಾಂಶಕ್ಕೆ ಹೆಚ್ಚು ಮಹತ್ವ ನೀಡಿದರು. ಅದೆಂದರೆ ಭಾರತದ ಬಹಳಷ್ಟು ನಗರಗಳು ಸ್ವಂತವಾಗಿಯೇ ಅಭಿವೃದ್ಧಿ ಹೊಂದಿರುವುದು ಗಮನಾರ್ಹ ಅಂಶ. ದೊಡ್ಡ ನಗರಗಳ ಬೆಳವಣಿಗೆಗಳಲ್ಲಿ ಸರ್ಕಾರದ ನೀತಿ ಮತ್ತು ಕಾರ್ಯಕ್ರಮಗಳು ಕೆಲವೂಮ್ಮೆ ಪ್ರಭಾವ ಬೀರಿದ್ದರೂ, ಸಣ್ಣ ಪಟ್ಟಣ ಮತ್ತು ನಗರಗಳ ಮೇಲೆ ಸರ್ಕಾರದ ನೀತಿ ಮತ್ತು ಕಾರ್ಯಕ್ರಮಗಳು ಪರಿಣಾಮ ಬೀರಿಲ್ಲ ಎಂಬುದನ್ನು ಷಾ ವರದಿ ತಿಳಿಸಿದೆ. ಹೀಗೆ ಹಲವಾರು ವರದಿ, ಸಮಿತಿಗಳ ಶಿಫಾರಸ್ಸುಗಳ ಆಧಾರದ ಮೇಲೆ ನಗರ ನೀತಿ ಯೋಜನೆ ಮತ್ತು ಕಾರ್ಯಕ್ರಮಗಳ ಕುರಿತ ಸಮಗ್ರ ರಾಷ್ಟ್ರೀಯ ನಗರಾಭಿವೃದ್ಧಿಗೆ ಅಗತ್ಯವಾದ ನೀತಿಯನ್ನು ರೂಪಿಸುತ್ತಾ ಬಂದಿದೆ. ನಗರ ವಲಯದಲ್ಲಿ ಅತ್ಯಂತ ಪ್ರಮುಖವಾದ ಕಾರ್ಯನೀತಿ ಬದಲಾವಣೆಯ ಪರಿಣಾಮವಾಗಿ ೭೪ನೇ ಸಂವಿಧಾನ ತಿದ್ದುಪಡಿ ಅಧಿನಿಯಮ ೧೯೯೨ರ ೭೪ನೆಯಾ ತಿದ್ದುಪಡಿ ರೂಪದಲ್ಲಿ ಬಂತು. ದೇಶದಲ್ಲಿ ನಗರ ಸ್ಥಳೀಯ ಸಂಸ್ಥೆಗಳ ಮೂಲಕ ಅಭಿವೃದ್ಧಿಯನ್ನು ಸಾಧಿಸುವುದು ಅದರ ಗುರಿಯಾಗಿತ್ತು.[೩]

ಸಂಸದೀಯ ಪ್ರಜಾಸತ್ತಾತ್ಮಕ ಆಡಳಿತವನ್ನು ವಿಕೇಂದ್ರೀಕರಣಗೊಳಿಸಬೇಕೆಂದು ಸಂವಿಧಾನದಲ್ಲಿ ಕರೆ ನೀಡಿರುವ ಹಿನ್ನೆಲೆಯಲ್ಲಿ ಮತ್ತು ತತ್ಪರಿಣಾಮವಾಗಿ ನಗರ ಸ್ಥಳೀಯ ಸಂಸ್ಥೆಗಳು ತಮ್ಮ ಆಡಳಿತವನ್ನು ತಾವೇ ನಿರ್ವಹಿಸುವುದಕ್ಕಾಗಿ ಸಾಕಷ್ಟು ಆಡಳಿತಾತ್ಮಕ, ಆರ್ಥಿಕ ಮತ್ತು ತಾಂತ್ರಿಕ ಸಾಮರ್ಥ್ಯವನ್ನು ಹೊಂದಿರುವಂತೆ ನೋಡಿಕೊಳ್ಳುವುದಕ್ಕಾಗಿ ಕರ್ನಾಟಕದ ನಗರ ಪ್ರದೇಶಗಳಾಗಿ ಹೊಸದೊಂದು ಮಾರ್ಗವನ್ನು ರೂಪಿಸುವ ಕಾರ್ಯವನ್ನು ವಹಿಸಲಾಗಿದೆ. ಅಂದ ಹಾಗೇ ಪ್ರತಿ ನಗರವೂ ನಗರ ಅಭಿವೃದ್ಧಿ ಯೋಜನೆಯನ್ನು (ಸಿಡಿಪಿ) ಹೊಂದುವುದು ಕಡ್ಡಾಯ. ನಗರ ಬೆಳವಣಿಗೆ ಕುರಿತಾದ ದೂರಗಾಮಿ ದೃಷ್ಟಿಯನ್ನು ಅದು ಹೊಂದಿರಬೇಕು. ನಗರ ಭೂಮಿತಿ ಕಾಯ್ದೆಯ ರದ್ದತಿ, ನನಗ ಸ್ಥಳೀಯ ಸಂಸ್ಥೆಗಳ ಬಲವರ್ಧನೆ, ಹಣಕಾಸು ಲೆಕ್ಕಪತ್ರ ಸಮರ್ಪಕ ನಿರ್ವಹಣೆಯಂಥ ಕೆಲವು ನಿಬಂಧನೆಗಳಿಗೂ ಇದು ಒಳಪಟ್ಟಿದೆ. ಸರ್ಕಾರ ಮತ್ತು ಖಾಸಗಿ ಸಹಭಾಗಿತ್ವದ ಯೋಜನೆಗಳನ್ನು ಕೈಗೊಳ್ಳುವುದಕ್ಕೂ ಇದು ಆಸ್ಪದ ಕೊಡುತ್ತದೆ. ಬಡತನ ನಿವಾರಣೆ, ಉದ್ಯೋಗ ಸೃಷ್ಟಿ, ಕೌಶಲ್ಯ ಅಭಿವೃದ್ಧಿ, ಸ್ವಸಹಾಯ ಗುಂಪುಗಳ ರಚನೆ, ಸ್ವಂತ ಉದ್ಯೋಗಕ್ಕಾಗಿ ಸಣ್ಣ ಮೊತ್ತದ ಸಾಲ ಇತ್ಯಾದಿ ಅಂಶಗಳನ್ನು ಇದು ಒಳಗೊಂಡಿದೆ. ದೇಶದ ಇತರ ಭಾಗಗಳಲ್ಲಿರುವ ಅಭಿವೃದ್ಧಿಯ ವಿವಿಧ ಮಾದರಿಗಳನ್ನು ಈ ಸಮಗ್ರ ನಗರಾಭಿವೃದ್ಧಿ ಯೋಜನೆಯಲ್ಲಿ ಅಳವಡಿಸಿಕೊಳ್ಳುವಂತೆ ಯೋಜನಾ ಆಯೋಗ ೨೦೦೮ರಲ್ಲಿ ಅಭಿಪ್ರಾಯಪಟ್ಟಿದೆ. ಈ ನಿಟ್ಟಿನಲ್ಲಿ ನಗರ ಪ್ರದೇಶಗಳಲ್ಲಿ

ಸೇವೆಗಳನ್ನು ಉತ್ತಮಪಡಿಸುವ ಸಲುವಾಗಿ ನೀತಿಯನ್ನು ಯೋಜಿಸಲಾಯಿತು.[೧] ರಾಜ್ಯದ ಸಂದರ್ಭಕ್ಕನುಗುಣವಾಗಿ ಸರಕಾರಿ ನಗರಾಭಿವೃದ್ಧಿ ನೀತಿ ಬದಲಾಗುತ್ತಾ ಬಂದಿದೆ. ಈ ಹಿನ್ನೆಲೆಯಲ್ಲಿ ನಗರ ಸ್ಥಳೀಯ ಸಂಸ್ಥೆಗಳು ಮತ್ತು ಅಭಿವೃದ್ಧಿಗೆ ಸಂಬಂಧಿಸಿದಂತೆ ಕರ್ನಾಟಕ ರಾಜ್ಯ ಸಮಗ್ರ ನಗರಾಭಿವೃದ್ದಿ ನೀತಿ ರೂಪಿಸಿ ಅನುಷ್ಠಾನಗೊಳಿಸಿದೆ.

ಅಲ್ಲದೇ, ರಾಜ್ಯವು ಇದುವರೆಗೆ ಯೋಜನಾ ಆಯೋಗವು ರೂಪಿಸಿದ ಪಂಚವಾರ್ಷಿಕ ಯೋಜನೆಗಳ ಚೌಕಟ್ಟು, ನಗರ ಸ್ಥಳೀಯ ಸಂಸ್ಥೆಗಳ ಕೇಂದ್ರ ನಿರ್ಣಯಗಳು, ಕೇಂದ್ರ ನಗರಾಭಿವೃದ್ಧಿ ಅಧಿನಿಯಮ ಮತ್ತು ಕೇಂದ್ರ ಸರ್ಕಾರ ರೂಪಿಸಿದ ರಾಷ್ಟ್ರೀಯ ನಗರಾಡಳಿತ ಕಾರ್ಯಕ್ರಮಗಳ ಮೂಲಕ ಕಾರ್ಯನೀತಿ ಮಾರ್ಗದರ್ಶಿ ಸೂತ್ರಗಳನ್ನು ಅನುಸರಿಸುತ್ತಾ ಬಂದಿರುವುದಾಗಿ ತಿಳಿಸಿದೆ.[೨] ನಂತರ ನಗರಾಭಿವೃದ್ಧಿ ರಾಷ್ಟ್ರಮಟ್ಟದಲ್ಲಿ ಪ್ರತ್ಯೇಕ ನೀತಿಗಳನ್ನು ರೂಪಿಸಲಾಗಿದ್ದು, ಅವುಗಳನ್ನು ೭೪ನೇ ತಿದ್ದುಪಡಿಗೆ ಅನುಸಾರವಾಗಿ ಪಟ್ಟಣಗಳು ಮತ್ತು ನಗರಗಳ ಪುನರ್ ಸೃಜನೆ ಮಾಡಲಾಗಿದೆ. ಕರ್ನಾಟಕ ಹೊಸ ಕೈಗಾರಿಕಾ ನೀತಿ(೨೦೦೯–೧೪), ಮೂಲಸೌಕರ್ಯ ಕಾರ್ಯನೀತಿ(೨೦೦೭), ರಾಜ್ಯ ಪ್ರವಾಸೋದ್ಯಮ ನೀತಿ(೨೦೦೯), ವಸತಿ ಮತ್ತು ನಗರಾಭಿವೃದ್ಧಿ ನಿಗಮವೂ(ಹುಡ್ಕೋ) ೧೯೭೫ ಜನವರಿ ೨೬ರಲ್ಲಿ ಅಸ್ತಿತ್ವಕ್ಕೆ ಬಂದಿತು. ಇದು ನಗರ ಪ್ರದೇಶಗಳ ಮತ್ತಿತರ ವಸತಿ ಯೋಜನೆಯ ಸಂಸ್ಥೆಗಳಿಗೆ ಹಣಕಾಸು ನೆರವು ನೀಡಲು ಉದ್ದೇಶಿತವಾಗಿತ್ತು. ಇದರ ಹಿನ್ನೆಲೆಯಾಗಿ ವಸತಿ ನೀತಿ(೨೦೦೭), ನಗರಾಭಿವೃದ್ಧಿ ಪ್ರಾಧಿಕಾರ ಮಾರ್ಗದರ್ಶಿ ಸೂತ್ರಗಳು, ಪಟ್ಟಣ ಮತ್ತು ನಗರ ಯೋಜನಾ ಸಂಸ್ಥೆ, ರಾಷ್ಟ್ರೀಯ ನಿರ್ಮಾಣ ಸಂಸ್ಥೆ ಮತ್ತು ದೆಹಲಿ ಅಭಿವೃದ್ಧಿ ಪ್ರಾಧಿಕಾರ, ನಗರಾಭಿವೃದ್ಧಿ ಸಂಸ್ಥೆಗಳು, ಈ ಅವಧಿಯಲ್ಲಿ ಆರಂಭಗೊಂಡ ಸಂಸ್ಥೆಗಳು. ಜನಪ್ರತಿನಿಧಿಗಳು, ಜನಸಂಖ್ಯೆ(೨೦೧೧), ಐದನೇ ಪಂಚವಾರ್ಷಿಕ ಯೋಜನೆಯಲ್ಲಿ ನಗರ ಭೂಮಿಮಿತಿ ಮತ್ತು ನಿಯಂತ್ರಣ ಕಾಯ್ದೆ ೧೯೭೬ ಅಂಗೀಕಾರಿಸಲಾಯಿತು. ಉದ್ದೇಶದಿಂದ ಪಟ್ಟಣಗಳ ಮತ್ತು ನಗರಗಳ ಅಭಿವೃದ್ಧಿಗೆ ಅವಶ್ಯಕವಾದ ಕಾಯಿದೆಯನ್ನು ರೂಪಿಸಿಕೊಳ್ಳುವಂತೆ ಈ ಅವಧಿಯಲ್ಲಿಯೇ ರಾಜ್ಯಗಳಿಗೆ ಕರೆ ನೀಡಲಾಗಿತ್ತು.[೩] ಅದಲ್ಲದೇ, ನಗರಾಭಿವೃದ್ಧಿಗೆ ಸಂಬಂಧಿಸಿ ನೀತಿ ಹಾಗೂ ಕಾರ್ಯಕ್ರಮಗಳನ್ನು ಕೆಲವು ಪರಿಷ್ಕೃತ ಬದಲಾವಣೆಗಳನ್ನು ರೂಪಿಸಿತು. ಅವೆಂದರೆ ಸಾಮರ್ಥ್ಯ ಹೆಚ್ಚಳ ಮತ್ತು ಉತ್ತಮ ಹಣಕಾಸು ನಿರ್ವಹಣೆ ಕ್ರಮಗಳಿಂದ ನಗರ ಸ್ಥಳೀಯ ಸಂಸ್ಥೆಗಳನ್ನು ಬಲಪಡಿಸುವುದು, ನಗರ ಭೂಮಿ ಅಭಿವೃದ್ಧಿ ಮತ್ತು ಅನಿಯಂತ್ರಣ ಕ್ರಮಗಳಿಂದ ಅವುಗಳ ದಕ್ಷತೆ ಮತ್ತು ಉತ್ಪಾದನಾ ಸಾಮರ್ಥ್ಯವನ್ನು ಹೆಚ್ಚಿಸುವುದು, ನಗರ ಮೂಲಸೌಕರ್ಯದ ಮೇಲಣ ಸರ್ಕಾರಿ ಹಿಡಿತವನ್ನು ಸಡಿಲಿಸಿ ಖಾಸಗಿ ಹೂಡಿಕೆಗೆ ಸೂಕ್ತವಾದ ವಾತಾವರಣವನ್ನು ಕಲ್ಪಿಸುವುದು, ಸರ್ಕಾರಿ ಮತ್ತು ಖಾಸಗಿ ವಲಯಗಳ ಉಸ್ತುವರಿಗೆ ಸ್ವಾಯತ್ತ ನಿಯಂತ್ರಣ ವ್ಯವಸ್ಥೆಯನ್ನು ರೂಪಿಸುವುದು, ಬಡತನದ ಪ್ರಮಾಣ ತಗ್ಗಿಸುವುದು, ಒಟ್ಟಾರೆಯಾಗಿ ನಗರ ಸ್ಥಳೀಯ ಸಂಸ್ಥೆಗಳನ್ನು ಸಂಪೂರ್ಣ ಸಬಲಗೊಳಿಸುವಲ್ಲಿ ರಾಜ್ಯ ಸರ್ಕಾರಗಳು ನಿರಾಸಕ್ತವಾಗಿರುವುದರಿಂದ ಈ ಉದ್ದೇಶಕ್ಕೆ ತಂದಿದ್ದ ಸಂವಿಧಾನದ ೭೪ನೆಯ ತಿದ್ದುಪಡಿಯ ಅನುಷ್ಠಾನದ ಅವಶ್ಯಕತೆ ಉಂಟಾಯಿತು ಎಂಬ ಅಂಶವನ್ನು ವಿವಿಧ ಅಧ್ಯಯಗಳಿಂದ ತಿಳಿದುಬಂದಿದೆ. ನಗರ ಪ್ರದೇಶಗಳೆಲ್ಲ ಒಂದೇ ಆಡಳಿತ ಕೇಂದ್ರದ ವ್ಯಾಪ್ತಿಗೆ ಒಳಪಡದ ಕಾರಣ ಈ ಸಂಬಂಧದ ಅನೇಕ ಯೋಜನೆಗಳ ಅನುಷ್ಠಾನ ಯಶಸ್ವಿಯಾಗದಿರುವುದು ಕಾಣಬಹುದಾಗಿದೆ.

ಹೀಗಾಗಿ ರಾಷ್ಟ್ರ ಮತ್ತು ರಾಜ್ಯಮಟ್ಟದಲ್ಲಿ ಹಲವಾರು ಅಭಿವೃದ್ಧಿ ನೀತಿಗಳನ್ನು ಪರಿಷ್ಕರಣಗೆ ಒಳಪಡಿಸಿ ಜಾರಿಗೊಳಿಸಲಾಗುತ್ತಿದೆ.

### ೪.೨. ನಗರಾಭಿವೃದ್ಧಿ ನೀತಿಗಳು

#### ಅ. ರಾಷ್ಟ್ರೀಯ ನಗರ ನಿರ್ಮಲೀಕರಣ ನೀತಿ

ನಗರ ಸ್ಥಳೀಯ ಸಂಸ್ಥೆಗಳು ಪ್ರಜಾಪ್ರಭುತ್ವದ ಬುನಾದಿಗೆ ಪ್ರಮುಖ ಹಂತ ಎನ್ನುವುದು ಒಪ್ಪಿತ ಸಂಗತಿ. ನಗರ ಪ್ರದೇಶ ಮತ್ತು ಜೀವನಕ್ಕೆ ನೇರವಾಗಿ ಸಂಬಂಧಪಟ್ಟ ಚಟುವಟಿಕೆಗಳ ಬಗೆಗೆ ತೀರ್ಮಾನಗಳನ್ನು ತೆಗೆದುಕೊಳ್ಳಲು ಜನರನ್ನು ಒಳಪಡಿಸುವುದೇ ಪ್ರಜಾಪ್ರಭುತ್ವ ಸರ್ಕಾರದ ಗುರಿ. ಸಹಜವಾಗಿಯೇ ಸ್ಥಳೀಯ ಸಂಸ್ಥೆಗಳು ಅಭಿವೃದ್ಧಿಯ ಕಾರ್ಯಚಟುವಟಿಕೆಗಳಲ್ಲಿ ನೇರವಾಗಿ ಭಾಗವಹಿಸಲು ನಗರ ಬಡಜನರಿಗೆ ಅವಕಾಶ ಕೊಡಬೇಕು ಮತ್ತು ಸಹಾಯ ಮಾಡಬೇಕು. ತತ್ಪರಿಣಾಮವಾಗಿ ರಾಷ್ಟ್ರೀಯ ನಗರ ನಿರ್ಮಲೀಕರಣ ನೀತಿಯ ಈ ಎಲ್ಲಾ ವಿಷಯಗಳನ್ನು ಗಮನಕ್ಕೆ ತೆಗೆದುಕೊಳ್ಳುತ್ತದೆಯಾದರೂ, ಈ ಸಂಬಂಧ ಇರುವ ಅನೇಕ ಇಲಾಖೆ ನಡುವೆ ಹೇಗೆ ಸಮನ್ವಯ ಸಾಧಿಸಬೇಕೆನ್ನುವ ಬಗ್ಗೆ ಮತ್ತು ಇದರಿಂದ ಬಾಧಿಸಲ್ಪಡುವ ವಿವಿಧ ಜನರ ಸಮಸ್ಯೆಯನ್ನು ಹೇಗೆ ನಿಭಾಯಿಸಬೇಕೆನ್ನುವ ಕೊರತೆ ಕಾಣುತ್ತದೆ. ಅದರಂತೆ, ಇದರ ಅನುಷ್ಠಾನವು ಬಿಡಿ ಯೋಜನೆಯ ಗುರಿ ಸಾಧನೆಗೆ ಹೆಚ್ಚಿನ ಗಮನ ಕೊಟ್ಟಿತೇ ವಿನಾಃ ನಿರಂತರವಾಗಿ ನಗರದ ಬಡಜನರ ಮುಖ್ಯ ಸಮಸ್ಯೆ ಭೂಗೇಣಿಯ ಪರಿಣಾಮವಾಗಿ ವಸತಿಗೆ ಸಂಬಂಧಿಸಿದಂತೆ ಅವರು ಎದುರಿಸುವ ಅನಿಶ್ಚಿತತೆ ಮತ್ತು ಅಸುರಕ್ಷತತೆ ಒಕ್ಕಲೆಬ್ಬಿಸುವ ನಿರಂತರ ಭಯದೊಂದಿಗೇ ಬದುಕುವ ಅವರಿಗೆ ಕುಡಿಯುವ ನೀರು ಮತ್ತು ಶೌಚವ್ಯವಸ್ಥೆಯಂತ ಮೂಲಭೂತ ಸೌಕರ್ಯಗಳೂ ಲಭ್ಯವಿರುವುದಿಲ್ಲ. ಇಂತಹ ಕೋಳಗೇರಿಯಲ್ಲಿ ನೀರು ಸಂಗ್ರಹಿಸುವ ಮತ್ತು ನೈರ್ಮಲ್ಯ ಕಾಪಾಡುವ ಹೆಚ್ಚಿನ ಹೊಣೆಯು ಮಹಿಳೆಯರ ಮೇಲೆ ಇರುತ್ತದೆ. ಈ ಪರಿಸ್ಥಿತಿಯನ್ನು ಸರಿಪಡಿಸಲು ಭಾರತ ಸರ್ಕಾರವು ರಾಷ್ಟ್ರೀಯ ನಗರ ನಿರ್ಮಲೀಕರಣ ನೀತಿಯು ನಗರದ ಬಡವರು ಮತ್ತು ಮಹಿಳೆಯರನ್ನು ಕೇಂದ್ರವಾಗಿಟ್ಟುಕೊಂಡ ಒಂದು ಮಹತ್ವಾಕಾಂಕ್ಷೆ ನೀತಿಯೊಂದನ್ನು ೨೦೦೮ರಲ್ಲಿ ಪ್ರಾರಂಭಿಸಿತು. ಇದು ಒಂದು ನೈರ್ಮಲ್ಯಕ್ಕೆ ಸಂಬಂಧಿಸಿದ ಸಮಗ್ರತಾ ಯೋಜನೆಯಾಗಿದ್ದು, ಬಡವರಿಗೆ ಆರೋಗ್ಯವಂತ, ಸಮುದಾಯ ಚಾಲಿತ, ವಾಸ ಯೋಗ್ಯ ನಗರಗಳಾಗಿ ಮತ್ತು ಎಲ್ಲಾರಿಗೂ ಉತ್ತಮ ಪರಿಸರ ವ್ಯವಸ್ಥೆ ಮುಂತಾದ ನಿರ್ಮಲೀಕರಣದ ಎಲ್ಲಾ ಅಂಶಗಳನ್ನು ಒಳಗೊಳ್ಳುತ್ತದೆ ಎಂದು ಗ್ರಹಿಸಲಾಗಿದೆ.

#### ನೀತಿಯ ಉದ್ದೇಶಗಳು

ರಾಷ್ಟ್ರೀಯ ನಗರ ನಿರ್ಮಲೀಕರಣ ನೀತಿಯ ಉದ್ದೇಶವು ನಗರ–ಭಾರತವನ್ನು ಸಾರ್ವತ್ರಿಕ ನೈರ್ಮಲ್ಯ ವ್ಯವಸ್ಥೆಯುಳ್ಳ, ಸಮುದಾಯ ಚಾಲಿತ, ವಾಸ ಯೋಗ್ಯ ನಗರ ಮತ್ತು ಪಟ್ಟಣಗಳಾಗಿ ಪರಿವರ್ತಿಸುವ ಈ ಯೋಜನೆಯ ಉದ್ದೇಶವಾಗಿದೆ. ಭಾರತದ ಎಲ್ಲಾ ನಗರಗಳೂ ಸಂಪೂರ್ಣ ಶೌಚವ್ಯವಸ್ಥೆಯುಳ್ಳ ಆರೋಗ್ಯವಂತ, ಸಮುದಾಯ ಚಾಲಿತ, ವಾಸ ಯೋಗ್ಯ ನಗರಗಳಾಗಿ ಮತ್ತು ಎಲ್ಲಾರಿಗೂ ಉತ್ತಮ ಪರಿಸರ ಒದಗಿಸುವ ಗುರಿ ಹೊಂದಿದೆ. ಇದರ ಮೂಲ ಉದ್ದೇಶವೇನೆಂದರೆ, ಜನರಲ್ಲಿ ಜಾಗೃತಿ ಮೂಡಿಸಿ ಅವರ ನಡವಳಿಕೆಯಲ್ಲಿ ಧನಾತ್ಮಕ ಪರಿವರ್ತನೆ ತರುವುದು, ತನ್ಮೂಲಕ

ನಗರ ನೈರ್ಮಲ್ಯ ಕಾರ್ಯಕ್ರಮವನ್ನು ಪರಿಣಾಮಕಾರಿಯಾಗಿ ಜಾರಿಗೊಳಿಸಿ, ಸಮಗ್ರ ಶೌಚವ್ಯವಸ್ಥೆಯ ಅನುಷ್ಠಾನ ಮತ್ತು ನಿರ್ವಹಣೆಯ ಮೂಲಕ ಬಯಲು ಶೌಚಾಲಯ ಮುಕ್ತ ನಗರಗಳ ಗುರಿಯನ್ನು ಸಕಾರಾಗೊಳಿಸುವುದೇ ಆಗಿದೆ. ಇದರ ಪ್ರಕಾರ ಪ್ರತಿ ರಾಜ್ಯ ತನ್ನದೇ ರಾಜ್ಯ ನೈರ್ಮಲೀಕರಣ ಮತ್ತು ನಗರ ನೈರ್ಮಲೀಕರಣ ಯೋಜನೆಗಳನ್ನು ರೂಪಿಸಿಕೊಳ್ಳಬೇಕು ಎಂಬ ಆಶಯವನ್ನು ಹೊಂದಿದೆ.[೭]

**ಆ. ರಾಷ್ಟ್ರೀಯ ವಸತಿ ನೀತಿ(೧೯೯೮)**

ನಗರ ಸ್ಥಳೀಯ ಸಂಸ್ಥೆಗಳ ಅಭಿವೃದ್ಧಿಯ ಮಟ್ಟವನ್ನು ಅಳೆಯಲು ಬಯಸುವ ನಗರಾಭಿವೃದ್ಧಿ ಸೂಚಿಗಳಾದ ಶಿಕ್ಷಣ, ಉತ್ತಮ ಜೀವನಮಟ್ಟ, ಗರಿಷ್ಟ ಮೂಲಭೂತ ಸೌಲಭ್ಯಗಳು, ಆರೋಗ್ಯ, ನೈರ್ಮಲ್ಯೀಕರಣ, ಉದ್ಯೋಗ ಮುಂತಾದವುಗಳಿಗಾಗಿ ಭಾರತ ಸರ್ಕಾರದ ಪ್ರಾಯೋಜಿತ ವಸತಿ ಮತ್ತು ಆವಾಸಸ್ಥಾನ ನೀತಿಯನ್ನು ೧೯೯೮ರಲ್ಲಿ ಜಾರಿಗೆ ತರಲಾಯಿತು. ಇದು ಸಾಧಿಸಬೇಕಾದ ಗುರಿಯನ್ನು ಪರಿಣಾಮಾತ್ಮಕವಾಗಿ ಸೂಚಿಸಿರುವುದು ತಿಳಿದುಬಂದಿದೆ. ಅದು ವಸತಿ ಯೋಜನೆಯನ್ನು ದೃಢೀಕರಿಸುವುದರ ಜೊತೆಗೆ ಮೂಲಭೂತ ಸೌಲಭ್ಯಗಳನ್ನು ಸೃಷ್ಟಿಸುವಲ್ಲಿ ಬಯಸುತ್ತದೆ ಎಂಬುದಾಗಿತ್ತು. ಈ ನೀತಿಯು ಕೇಂದ್ರ ಮತ್ತು ರಾಜ್ಯ ಸರಕಾರಗಳ ಜವಾಬ್ದಾರಿಗಳನ್ನು ಸ್ಪಷ್ಟಪಡಿಸುವುದರ ಜೊತೆಗೆ ಹಣಕಾಸು ಸಂಸ್ಥೆ ಮತ್ತು ಸಂಶೋಧನಾ ಗುಣಮಟ್ಟ ಹಾಗೂ ತಾಂತ್ರಿಕ ಸಂಸ್ಥೆಗಳನ್ನು ಗುರುತಿಸಿದೆ. ಈ ಗುರಿಯನ್ನು ಸಾಧಿಸಲು ಎಲ್ಲಾರಿಗೂ ವಸತಿ ಗುರುತಿಸುವ ಉದ್ದೇಶದೊಂದಿಗೆ ಎರಡು ಮಿಲಿಯನ್ ವಸತಿ ಕಾರ್ಯಕ್ರಮ(೧೯೯೮-೧೯೯೯), ೨೦೦೧-೦೨ರಲ್ಲಿ ಬಡತನ ರೇಖೆಗಿಂತ ಕೆಳಗಿನವರಿಗಾಗಿ ವಾಲ್ಮೀಕಿ-ಅಂಬೇಡ್ಕರ್ ಯೋಜನೆ(VAMBAY)ಯನ್ನು (೧೦ನೇ ಪಂಚವಾರ್ಷಿಕ ಯೋಜನೆ, ಪ್ರತಿ ಮನೆಗೆ ೨೦-೩೦ಸಾವಿರ) ಆರಂಭಿಸಲಾಯಿತು. ಅದಕ್ಕೆ ಬೇಕಾದಂತಹ ಹಲವಾರು ಕಾರ್ಯಕ್ರಮಗಳನ್ನು ರೂಪಿಸಿ ಹಣ ವಿನಿಯೋಗ ಮಾಡಿದ ಹಿನ್ನೆಲೆಯಾಗಿ ನಿಗಧಿತ ಗುರಿಯನ್ನು ಸಾಧಿಸಲಾಗಿದೆ ಎಂದು ಹಲವು ಅಂಕಿ-ಅಂಶಗಳಿಂದ ತಿಳಿಯಲಾಗಿದೆ. ಆದರೆ ಈ ಗುರಿಯನ್ನು ನಿಗದಿತ, ನಿರ್ದಿಷ್ಟ ಸಮಯದಲ್ಲಿ ಮುಗಿಸದೇ ಅನೇಕ ವರ್ಷಗಳು ಮುಂದುವರಿಸಿಕೊಂಡು ಬಂದರೂ ನಗರ ಸ್ಥಳೀಯ ಸಂಸ್ಥೆಗಳನ್ನು ಪೂರ್ಣ ಪ್ರಮಾಣದಲ್ಲಿ ಸಬಲಗೊಳಿಸುವಲ್ಲಿ ರಾಜ್ಯ ಸರ್ಕಾರಗಳು ನಿರಾಸಕ್ತವಾಗಿರುವುದರಿಂದ ಈ ಉದ್ದೇಶಕ್ಕೆ ತಂದಿದ್ದ ಸಂವಿಧಾನದ ೭೪ನೇ ತಿದ್ದುಪಡಿಯ ಅನುಷ್ಠಾನ ಸಮಂಜಸವಲ್ಲ ಎಂದು ಹಲವು ಬರಹಗಳಿಂದ ಗ್ರಹಿಸಲಾಗಿದೆ. ನಗರ ಪ್ರದೇಶಗಳಲ್ಲಿ ಒಂದೇ ಆಡಳಿತ ಕೇಂದ್ರದ ವ್ಯಾಪ್ತಿಗೆ ಒಳಪಡದ ಕಾರಣ ಈ ಸಂಬಂಧದ ಅನೇಕ ಯೋಜನೆಗಳ ಅನುಷ್ಠಾನ ಯಶಸ್ವಿಯಾಗದೆ ಸ್ಥಳೀಯ ಚುನಾಯಿತ ಸದಸ್ಯರು, ಸರ್ಕಾರಿ ಅಧಿಕಾರಿಗಳು ಮತ್ತು ವಾರ್ಡಿನ ಜನರು ನಿಯಮಿತವಾಗಿ ಭಾಗವಹಿಸದೆ ರಾಜಕೀಯ ನಿರ್ಲಕ್ಷ್ಯದಿಂದ ಗುರಿಯನ್ನು ತಲುಪಲು ಸಾಧ್ಯವಾಗದೆ ಇರುವುದು ವಿಷಾದದ ಸಂಗತಿಯಾಗಿದೆ.

**ಇ. ಕುಡಿಯುವ ನೀರು ಮತ್ತು ನೈರ್ಮಲ್ಯ ನೀತಿ**

ಕರ್ನಾಟಕ ಸರ್ಕಾರವು ೨೦೦೨ರಲ್ಲಿ ನಗರ ಕುಡಿಯುವ ನೀರು ಮತ್ತು ನೈರ್ಮಲ್ಯ ನೀತಿಯನ್ನು ಜಾರಿಗೆ ತಂದಿದೆ. ಬೇಡಿಕೆ ಆಧಾರಿತ ಸಾರ್ವತ್ರಿಕ ವ್ಯಾಪ್ತಿಯ ನೀರು ಸರಬರಾಜು, ಪ್ರವರ್ತನೆಯ ವಾಣಿಜ್ಯ ಮತ್ತು ಆರ್ಥಿಕ ಸಾಮರ್ಥ್ಯ ಮತ್ತು ಎಲ್ಲಾ ನಾಗರಿಕರಿಗೆ ಕನಿಷ್ಠಮಟ್ಟದ ಸೇವೆಯನ್ನು ಖಚಿತಪಡಿಸುವುದು ನೀತಿಯ ಉದ್ದೇಶವಾಗಿರುತ್ತದೆ. ಈ ನೀತಿಯು ಜಲಸಂಗ್ರಹಣೆಯಿಂದ

ತ್ಯಾಜ್ಯ ನೀರು ಸಂಸ್ಕರಣೆವರೆಗೆ ನೀರು ಸರಬರಾಜು ಮತ್ತು ಒಳಚರಂಡಿ ಸೇವೆಗಳಿಗೆ ನಗರ ಸ್ಥಳೀಯ ಸಂಸ್ಥೆಗಳು ಜವಾಬ್ದಾರಿಯಾಗಿರುತ್ತವೆ. ಆದರೂ ಸಾರ್ವಜನಿಕ ಸಂಸ್ಥೆಗಳು ಅಥವಾ ಖಾಸಗಿ ವಲಯ ಭಾಗವಹಿಸುವಿಕೆ ವ್ಯವಸ್ಥೆಯ ಮೂಲಕ ನೇರವಾಗಿ ಸೇವೆ ಒದಗಿಸುವ ಆಯ್ಕೆ ನಗರ ಸ್ಥಳೀಯ ಸಂಸ್ಥೆಗಳು ಹೊಂದಿರುತ್ತವೆ. ಕೆ.ಯು.ಡಬ್ಲ್ಯುಎಸ್. ಹಾಗೂ ಡಿ.ಬಿ. ಮತ್ತು ಬಿ.ಡಬ್ಲ್ಯುಎಸ್.ಎಸ್.ಬಿ. ಇವು ಎಲ್ಲಾ ನಗರ ಸ್ಥಳೀಯ ಸಂಸ್ಥೆಗಳಲ್ಲಿ ಸಾಮರ್ಥ್ಯ ಸೃಜನೆ ಮತ್ತು ವರ್ಧನೆಗೆ ಜವಾಬ್ದಾರಿಯಾಗಿರುತ್ತವೆ. ನೀರಿನ ಬಳಕೆದಾರರಿಂದ ಸೇವೆಯ ಪೂರ್ಣ ವೆಚ್ಚ ವಸೂಲು ಮಾಡಲು ಸಮುಚಿತ ವ್ಯವಸ್ಥೆ ಮಾಡಲಾಗುವುದು. ಆದರೂ ನಿರ್ಗತಿಕ ಬಡವರಿಗೆ ಸಹಾಯಧನ ವ್ಯವಸ್ಥೆ ಮುಂದುವರಿಯುತ್ತಿದೆ. ಅತಿಯಾದ ಬಳಕೆ ಮತ್ತು ನೀರಿನ ದುರುಪಯೋಗಕ್ಕೆ ಪ್ರೋತ್ಸಾಹ ನೀಡಿಕೆ ನಿಲ್ಲಿಸುವುದು ಮುಂತಾದ ದರಗಳನ್ನು ರೂಪಿಸಬೇಕು. ನೀರಿನ ಗರಿಷ್ಠ ಉಪಯೋಗ ಸೂತ್ರದ ಮೇಲೆ ಬಂಡವಾಳ ಹೂಡಿಕೆ ಆಧಾರವಾಗಿರುತ್ತದೆ ಮತ್ತು ಆರ್ಥಿಕ ಸಂಪನ್ಮೂಲಗಳು ಮತ್ತು ಹೂಡಿಕೆಗಳು ಮೇಲಿನ ವರಮಾನವು ಕ್ರಮಬದ್ಧ ರೀತಿಯಲ್ಲಿ ಖಾಸಗಿ ವಲಯ ಭಾಗವಹಿಸುವಿಕೆಯನ್ನು ಪ್ರೋತ್ಸಾಹಿಸುತ್ತದೆ. ದಕ್ಷತೆಯ ನಿಯಂತ್ರಣ, ಮೇಲ್ವಿಚಾರಣೆ ಮತ್ತು ಮೌಲ್ಯಮಾಪನದ ಜವಾಬ್ದಾರಿ ಸರ್ಕಾರದ್ದಾಗಿರುತ್ತದೆ.

ಮೇಲಿನ ನೀತಿ ವಿವರಣೆಯನ್ನು ಅನುಷ್ಠಾನಗೊಳಿಸುವ ಮೂಲಕ ಪಾಲನೆ ಮಾಡಬೇಕಾಗಿದೆ. ನೀರು ಸರಬರಾಜನ್ನು ಹೆಚ್ಚಿಸಲು ಹಲವಾರು ನೀರು ಸರಬರಾಜು ಯೋಜನೆಗಳನ್ನು ಕೈಗೆತ್ತಿಕೊಳ್ಳಲಾಗಿದೆ. ಆದರೆ ನಿಗದಿಪಡಿಸಿರುವ ಮಾದರಿಗಳ ಪ್ರಕಾರ ನೀರು ಒದಗಿಸುವ ಅಸಾಮರ್ಥ್ಯತೆ, ವಿತರಣಾ ವ್ಯವಸ್ಥೆಯಲ್ಲಿ ಅದಕ್ಷತೆ, ತೀವ್ರ ನೀರಿನ ಹಾನಿ, ವಾಣಿಜ್ಯಕವಾಗಿ ಲಾಭದಾಯಕವಲ್ಲದ ನೀರು ಸರಬರಾಜು ಮತ್ತು ವಿವಿಧ ಏಜೆನ್ಸಿಗಳ ನಡುವೆ ಸಮನ್ವಯದ ಕೊರತೆ ಇವುಗಳಿಂದ ವಾರ್ಷಿಕ ಸಮಸ್ಯೆಗಳು ಮುಂದುವರೆದಿದೆ. ಪ್ರತಿ ದಿನದ ನೀರು ಸರಬರಾಜು ಸರಾಸರಿ ವೇಳೆಯು ಕಾರ್ಪೋರೇಷನ್‌ಗಳಲ್ಲಿ ೨೦೦೩ರಲ್ಲಿ ೯ ಗಂಟೆಗಳಿದದ್ದು ೨೦೦೬ರಲ್ಲಿ ೭ ಗಂಟೆಗೆ ಮತ್ತು ಟೌನ್ ಪಂಚಾಯಿತಿಗಳಲ್ಲಿ ೧೦ ಗಂಟೆಗಳಿಂದ ೭ ಗಂಟೆಗೆ ಇಳಿದಿದೆ. ನೀರು ಒಂದು ನಿರ್ಣಾಯಕ ಸಂಪನ್ಮೂಲವಾಗಿದ್ದು ನಗರಾಭಿವೃದ್ಧಿಗೆ ಸಾಕಷ್ಟು ಪ್ರಮಾಣದಲ್ಲಿ ಲಭ್ಯವಿರದಿದ್ದರೂ ಅತ್ಯಂತ ಸೀಮಿತವಾಗಿ ದೊರೆಯುವ ವಸ್ತುವಾಗಿರುತ್ತದೆ. ರಾಜ್ಯದ ನಗರ ಪ್ರದೇಶಗಳಿಗೆ ನೀರು ಸರಬರಾಜಿನ ಪ್ರಸ್ತುತ ಕೊರತೆಯನ್ನು ಪರಿಗಣಿಸಿ ಮತ್ತು ನೀರಿನ ಸರಬುರಾಜನ್ನು ವೃದ್ಧಿಸುವುದಕ್ಕೆ ಸಂಬಂಧಿಸಿದ ಸಮಸ್ಯೆಗಳನ್ನು ಗಮನಿಸಿ ಈ ಮುಂದಿನ ಅಂಶಗಳು ಸುಸಂಗತವಾಗಿವೆ. ಅವುಗಳಾದ ರಾಜ್ಯದ ಜಲಸಂಪನ್ಮೂಲಗಳ ಸಂರಕ್ಷಣೆ, ಸರಬುರಾಜು ಹೆಚ್ಚಿಸುವ ಬದಲಿ ವಿಧಾನಗಳ ಅಳವಡಿಕೆ, ನೀರಿನ ನಷ್ಟ/ಯು.ಎಫ್.ಡಬ್ಲ್ಯು ಕಡಿಮೆ ಮಾಡುವುದು, ನೀರಿನ ದರ ನಿಗದಿ, ಖಾಸಗಿ ವಲಯ ಭಾಗವಹಿಸುವಿಕೆಗೆ ಅವಕಾಶ ಮತ್ತು ಸಾಂಸ್ಥಿಕ ಚೌಕಟ್ಟು ಅಲ್ಲದೆ ಖಾಸಗಿ ವಲಯ ಭಾಗವಹಿಸುವಿಕೆಯ ಪ್ರಶ್ನೆಯನ್ನು ಎಚ್ಚರಿಕೆಯಿಂದ ಪ್ರಸ್ತಾವಿಸತಕ್ಕದ್ದು. ಸಾರ್ವಜನಿಕ ನೀರು ಸರಬರಾಜು ವ್ಯವಸ್ಥೆಗಳ ನಿರ್ವಹಣೆಯಲ್ಲಿ ಖಾಸಗಿ ವಲಯದ ಪಾತ್ರದ ಬಗ್ಗೆ ಜನರ ಮನಸ್ಸಿನಲ್ಲಿ ಭಯ ಮೂಡಿಸಿದೆ. ಎಲ್ಲಿ ನಗರ ಸ್ಥಳೀಯ ಸಂಸ್ಥೆಗಳು ಯೋಜನೆಯ ಮಾಲೀಕರಾಗಿ ಮುಂದುವರಿಯುವರೋ ಮತ್ತು ನೀರು ಸರಬರಾಜು ಮಾಡುವ ಜವಾಬ್ದಾರಿ ನಿರ್ವಹಿಸುವರೋ ಅಲ್ಲಿ ಖಾಸಗೀಕರಣ ಮತ್ತು ಖಾಸಗಿ ವಲಯದ ಭಾಗವಹಿಸುವಿಕೆ ನಡುವಿನ ವ್ಯತ್ಯಾಸದ ಬಗ್ಗೆ ಜನರಲ್ಲಿ ಜಾಗೃತಿ ಮೂಡಿಸಬೇಕಾಗುತ್ತದೆ. ಸರಬರಾಜು ಮತ್ತು ವಿತರಣಾ

ವ್ಯವಸ್ಥೆಯು ದಕ್ಷತೆಯ ಸುಧಾರಣೆ, ನೀರಿನ ನಷ್ಟ ಕಡಿಮೆ ಮಾಡುವುದು ಮತ್ತು ದೀರ್ಘಾವಧಿಯಲ್ಲಿ ೨೭/೭ ಸರಬರಾಜಿನ ಗುರಿ ಹೊಂದುವುದು ಒಟ್ಟು ಉದ್ದೇಶವಾಗಿರುತ್ತದೆ. ಈ ಉದ್ದೇಶವು ಒಳ್ಳೆಯಾದೆಯಾಗಿದ್ದು, ನೀರು ಸರಬುರಾಜು ವ್ಯವಸ್ಥೆಯನ್ನು ಖಾಸಗಿಯವರಿಗೆವಹಿಸುವುದರ ಜೊತೆಗೆ ಮೀಟರ್ ಕೂಡಿಸಿ ಹಣ ವಸೂಲಿ ಮಾಡುವುದು ಅಷ್ಟೊಂದು ಸಮಜಂಸವಲ್ಲ ಯಾಕೆಂದರೆ, ನೀರು ನೈಸರ್ಗಿಕ ಸಂಪತ್ತು ಮತ್ತು ಪ್ರಮುಖ ಮೂಲಭೂತ ಅವಶ್ಯಕತೆಗಳಲ್ಲಿ ಒಂದಾಗಿದೆ. ಇವತ್ತು ಖಾಸಗಿ ಕಂಪನಿಗಳು ಈಗ ೨ ರೂಪಾಯಿಗೆ ೨೦ ಲೀಟರ್ ನೀರನ್ನು ನೀಡುತ್ತಿವೆ. ಮುಂದಿನ ವರ್ಷ ೨೦ ರೂಪಾಯಿಗೆ ಲೀಟರ್ ನೀರು ಆದರೂ ಕೊಂಡು ಕುಡಿಯಲೇಬೇಕಾದ ಅನಿವಾರ್ಯ. ಹೀಗೆ ಸರ್ಕಾರವು ಸಾರ್ವಜನಿಕರ ಹಿತವನ್ನು ಕಡೆಗಣಿಸಿ ಖಾಸಗೀ ಹಿತವನ್ನು ಕಾಪಾಡಿದಂತೆಯಾಗುತ್ತದೆ. ನಗರ ಪ್ರದೇಶದಲ್ಲಿ ಕೆಳವರ್ಗದ ಕುಟುಂಬಗಳು ಉದ್ಯೋಗ ಮತ್ತು ಬಡತನದ ಸಮಸ್ಯೆಯನ್ನು ಎದುರಿಸುತ್ತಿವೆ. ಹೀಗಾಗಿ ನೀರು ಮತ್ತೊಂದು ಸಮಸ್ಯೆಯಾಗಿ ಕಾಡುತ್ತದೆ. ಅವರ ನಿಕೃಷ್ಟವಾದ ಜೀವನವನ್ನು ದೂಡುತ್ತಿದ್ದಾರೆ.

**ಈ. ರಾಷ್ಟ್ರೀಯ ನೈರ್ಮಲ್ಯ ನೀತಿ**

ನಗರಾಭಿವೃದ್ಧಿ ಮಂತ್ರಾಲಯ ಮತ್ತು ಕೇಂದ್ರ ಸರ್ಕಾರ ಇದು ೨೦೦೮ರಲ್ಲಿ ಸಹಭಾಗಿತ್ವದಲ್ಲಿ ರಾಷ್ಟ್ರೀಯ ನೈರ್ಮಲ್ಯ ನೀತಿಯನ್ನು ಜಾರಿಗೆ ತಂದಿದೆ. ಸಾಂಪ್ರದಾಯಿಕವಾಗಿ ನೈರ್ಮಲ್ಯವೆಂದರೆ ಮಾನವ ಮಲ–ಮೂತ್ರ ವಿಸರ್ಜನಾ ತ್ಯಾಜ್ಯಗಳ ನಿರ್ವಹಣೆಯನ್ನು ಸ್ಥೂಲವಾಗಿ ತಿಳಿಸುತ್ತದೆ. ಇದು ಸಾರ್ವಜನಿಕ ಆರೋಗ್ಯ ಮತ್ತು ಪರಿಸರ ಪರಿಣಾಮಗಳೊಡನೆ ಸಂಬಂಧ ಹೊಂದಿರುತ್ತದೆ. ಆದುದರಿಂದ ಇದು ತ್ಯಾಜ್ಯ ನಿರ್ವಹಣೆ–ಘನತ್ಯಾಜ್ಯ ಕೈಗಾರಿಕೆ ಮತ್ತು ಅಪಾಯಕಾರಿ ತ್ಯಾಜ್ಯ, ಚರಂಡಿ ವ್ಯವಸ್ಥೆ ಮತ್ತು ಕುಡಿಯುವ ನೀರು ಸರಬರಾಜು ನಿರ್ವಹಣೆಯನ್ನು ಒಳಗೊಂಡಿರುತ್ತದೆ. ಈ ನಿಟ್ಟಿನಲ್ಲಿ ನಗರ ನೈರ್ಮಲ್ಯದ ಕ್ಷೇತ್ರವು ಈ ಮುಂದಿನಂತಿದೆ. ಭಾರತ ಎಲ್ಲ ನಗರಗಳ ಸಮಗ್ರವಾಗಿ ನೈರ್ಮಲ್ಯಪೂರಿತ, ಆರೋಗ್ಯಕರ ಮತ್ತು ಜೀವನಾರ್ಹವಾಗುವಂತಿರಬೇಕು ಮತ್ತು ತನ್ನ ಎಲ್ಲಾ ನಾಗರಿಕರು ಒಳ್ಳೆಯ ಸಾರ್ವಜನಿಕ ಆರೋಗ್ಯ ಮತ್ತು ಪರಿಸರ ಖಚಿತಪಡಿಸುವುದರ ಜೊತೆಗೆ ನಗರದ ಬಡವರಿಗೆ ಮತ್ತು ಮಹಿಳೆಯರಿಗೆ ಆರೋಗ್ಯ ಮತ್ತು ಒದಗಿಸಬಹುದಾದ ನೈರ್ಮಲ್ಯ ಸೌಲಭ್ಯಗಳಿಗೆ ವಿಶೇಷ ಒತ್ತು ನೀಡುವುದಾಗಿದೆ. ಅದಲ್ಲದೇ, ಮೇಲಿನ ದೃಷ್ಟಿಕೋನವನ್ನು ಸಾಧಿಸುವ ದೃಷ್ಟಿಯಿಂದ ಈ ಮುಂದಿನ ನೀತಿಯು ಅಂಶಗಳನ್ನು ಪಾಲಿಸಬೇಕಾಗಿದೆ. ಅವುಗಳೆಂದರೆ, ಸಾರ್ವಜನಿಕ ತಿಳುವಳಿಕೆ, ನೈರ್ಮಲ್ಯದ ಸಾಮಾಜಿಕ ಮತ್ತು ಪರಿಸರಕ್ಕೆ ಸಂಬಂಧಿಸಿದ ಅಂಶಗಳು, ಒಡೆದ ಸಾಂಸ್ಥಿಕ ಪಾತ್ರಗಳು ಮತ್ತು ಜವಾಬ್ದಾರಿಗಳು, ಕ್ರೋಡೀಕೃತ ನಗರ ವ್ಯಾಪ್ತಿ ಪ್ರಸ್ತಾವನೆ ಇಲ್ಲದಿರುವುದು, ಸೀಮಿತ ತಾಂತ್ರಿಕತೆಯ ಆಯ್ಕೆ, ಸೇವೆ ವಂಚಿತರಾದವರನ್ನು ಹಾಗೂ ಬಡವರನ್ನು ತಲುಪುವುದು ಮತ್ತು ಬೇಡಿಕೆಗೆ ಪ್ರತಿಕ್ರಿಯೆ ಇಲ್ಲದಿರುವುದು

**ಕರ್ನಾಟಕ ನೈರ್ಮಲ್ಯ ನೀತಿ**

೧. ಶೌಚಾಲಯ ಸೌಲಭ್ಯಗಳಿಂದ ನಗರ ಪ್ರದೇಶಗಳಲ್ಲಿನ ಎಲ್ಲಾ ಕುಟುಂಬಗಳಿಗೆ ಶೌಚಾಲಯಗಳನ್ನು ಒದಗಿಸುವುದು. ಉತ್ತರ ಕರ್ನಾಟಕದ ಹಲವಾರು ಸ್ಥಳೀಯ ಸಂಸ್ಥೆಗಳಲ್ಲಿ ಅತ್ಯಂತ ನಿಕೃಷ್ಟ ಸೌಲಭ್ಯವಿರುವ ಜಿಲ್ಲೆಗಳಿಗೆ ವಿಶೇಷ ಗಮನ ನೀಡಬೇಕಾಗಿದೆ.

೨. ಚರಂಡಿ ವ್ಯವಸ್ಥೆ ಸೌಲಭ್ಯಗಳ ವಿಸ್ತರಣೆ ಚರಂಡಿ ವ್ಯವಸ್ಥೆಗಳ ನಿರ್ಮಾಣವು ಬಂಡವಾಳ ಆಧಾರವಾಗಿರುತ್ತದೆ. ಹೀಗಾಗಿ ಇದು ದೊಡ್ಡ ನಗರಗಳಿಗೆ ಸೀಮಿತವಾಗುತ್ತದೆ ಮತ್ತು ಕಡಿಮೆ ವೆಚ್ಚದ ನೈರ್ಮಲ್ಯ ಸೌಲಭ್ಯಗಳನ್ನು ಸಣ್ಣ ಪಟ್ಟಣಗಳಿಗೆ ಒದಗಿಸಲಾಗುವುದು. ಕೇಂದ್ರ ಸರ್ಕಾರದಿಂದ ಶೇ. ೭೫ರಷ್ಟು ಸಹಾಯಧನ ಒದಗಿಸುವ ಸುಸಂಘಟನೆ ಕಡಿಮೆ ವೆಚ್ಚ ನೈರ್ಮಲ್ಯದ ಕೇಂದ್ರ ಪುರಸ್ಕೃತ ಯೋಜನೆಯನ್ನು ಸಂಪೂರ್ಣವಾಗಿ ಉಪಯೋಗಿಸಿ ಕೊಳ್ಳಬೇಕಾಗಿದೆ.

೩. ಚರಂಡಿ ತ್ಯಾಜ್ಯ ಸಂಸ್ಕರಣಾ ಸ್ಥಾವರವನ್ನು ಎಲ್ಲೆಲ್ಲಿ ಚರಂಡಿ ಸೌಲಭ್ಯಗಳನ್ನು ಒದಗಿಸಲಾಗಿದೆಯೋ ಅಂತಹ ಸ್ಥಳದಲ್ಲಿ ಸ್ಥಾಪಿಸತಕ್ಕದ್ದು. ರಾಜ್ಯದ ೪೬ ನಗರಗಳಲ್ಲಿ ಚರಂಡಿ ತ್ಯಾಜ್ಯ ಸಂಸ್ಕರಣಾ ಸ್ಥಾವರಗಳನ್ನು ರಚಿಸಲಾಗಿದೆ ಆದರೆ ೨೯ ನಗರಗಳಲ್ಲಿ ಮಾತ್ರ ಕಾರ್ಯ ನಿರ್ವಹಿಸುತ್ತಿವೆ.

೪. ಕುಡಿಯುವುದಕ್ಕಲ್ಲದೆ ಬೇರೆ ಉದ್ದೇಶಗಳಿಗೆ ಸಂಸ್ಕರಿಸಿದ ತ್ಯಾಜ್ಯನೀರಿನ ರೀಸೈಕ್ಲಿಂಗ್ ಮತ್ತು ಪುನರ್‌ಬಳಕೆ, ನೈರ್ಮಲ್ಯಕ್ಕೆ ಸಂಬಂಧಿಸಿದ ಎಲ್ಲಾ ಅಂಶಗಳನ್ನೊಳಗೊಂಡ ರಾಜ್ಯ ನೈರ್ಮಲ್ಯ ಕಾರ್ಯತಂತ್ರವನ್ನು ಸಿದ್ಧಪಡಿಸಲಾಗಿದೆ ಮತ್ತು ಪ್ರತಿಯೊಂದು ನಗರ ಮತ್ತು ಪಟ್ಟಣಕ್ಕೆ ನಗರ ನೈರ್ಮಲ್ಯ ಯೋಜನೆಯನ್ನು ಸಿದ್ಧಪಡಿಸಿರುವುದು ಕಾಣಲಾಗಿದೆ.[೯]

### ಉ. ಘನತ್ಯಾಜ್ಯ ನಿರ್ವಹಣಾ ನೀತಿ

ಕರ್ನಾಟಕವು ೨೦೦೦ದಲ್ಲಿ ಸುಸಂಘಟಿತ ಘನತ್ಯಾಜ್ಯ ನಿರ್ವಹಣಾ ನೀತಿಯನ್ನು ರೂಪಿಸಿದೆ. ನೀತಿಯ ಉದ್ದೇಶಗಳಾದ ಪರಿಸರದ ದೃಷ್ಟಿಯಿಂದ ಸಾಮಾಜಿಕವಾಗಿ, ಆರ್ಥಿಕವಾಗಿ ಸಮರ್ಥನೀಯವಾಗಿರುವುದೇ ಅಲ್ಲದೇ ಕಾರ್ಯರೂಪಕ್ಕೆ ಬರುವಂತಹ ರೀತಿಯಲ್ಲಿ ನಿರ್ವಹಣಾ ಚಟುವಟಿಕೆಗಳನ್ನು ಕೈಗೊಳ್ಳಲು ನಿರ್ದೇಶನ ನೀಡುವುದು, ಪುರಸಭಾ ಘನತ್ಯಾಜ್ಯ ನಿರ್ವಹಣೆಗಾಗಿ (ಎಂಎಸ್‌ಡಬ್ಲ್ಯುಎಂ) ಕ್ರೋಢೀಕೃತ ಮತ್ತು ಸ್ವಯಂಪೂರ್ಣ ಪ್ರವರ್ತನಾ ವ್ಯವಸ್ಥೆಯನ್ನು ಸ್ಥಾಪಿಸತಕ್ಕದ್ದು. ಇದು ವಿವಿಧ ತ್ಯಾಜ್ಯನಿರ್ವಹಣಾ ಚಟುವಟಿಕೆಗಳನ್ನು ನಿರ್ವಹಿಸಲು ಸಮುಚಿತ ಮಾರ್ಗೋಪಾಯ ಮತ್ತು ತಾಂತ್ರಿಕತೆಗಳನ್ನು ಅಭಿವೃದ್ಧಿಪಡಿಸುವುದನ್ನು ಒಳಗೊಂಡಿರುತ್ತದೆ ಮತ್ತು ನಗರ ಸ್ಥಳೀಯ ಸಂಸ್ಥೆಗಳು ತನ್ನ ನಾಗರಿಕರಿಗೆ ಘನತ್ಯಾಜ್ಯ ಸೇವೆಗಳನ್ನು ಒದಗಿಸಲು ಅವುಗಳ ಸಾಮಾರ್ಥ್ಯವನ್ನು ಹೆಚ್ಚಿಸುವುದು. ತ್ಯಾಜ್ಯದ ಸಂಗ್ರಹಣೆ, ಸಾಗಾಣಿಕೆ ಮತ್ತು ಸಂಸ್ಕರಣೆಗೆ ಸಂಬಂಧಿಸಿದ ಎಂ.ಎಸ್.ಡಬ್ಲ್ಯು.ಎಂ. ಪ್ರಕ್ರಿಯೆಯ ಮುಂದಿನ ಪ್ರಸ್ತಾವನೆಗೆ ಮಾರ್ಗದರ್ಶನ ನೀಡುವ ಸೂತ್ರಗಳನ್ನು ತಿಳಿಸತಕ್ಕದ್ದು. ಆರೋಗ್ಯ ಮತ್ತು ಪರಿಸರದ ದೃಷ್ಟಿಯಿಂದ ತ್ಯಾಜ್ಯ ನಿರ್ವಹಣೆಯ ಮಹತ್ವದ ಬಗ್ಗೆ ತಿಳುವಳಿಕೆ ಮೂಡಿಸಲು ಒತ್ತು ನೀಡತಕ್ಕದ್ದು[೧೦] ಎಂದು ಹೇಳಲಾಗಿದೆ. ಈ ನೀತಿಯ ಉದ್ದೇಶವು ಗುಣಮಟ್ಟದಾಗಿದ್ದರೂ ನಗರ ಸ್ಥಳೀಯ ಸಂಸ್ಥೆಗಳಲ್ಲಿ ರಾಜಕೀಯ ಇಚ್ಛಾಶಕ್ತಿಯ ಕೊರತೆ, ಅಜ್ಞಾನ ಮತ್ತು ಯೋಜನೆಗಳ ಬಗ್ಗೆ ತಿಳುವಳಿಕೆಯ ಕೊರತೆಯಿಂದ ಎರಡು ದಶಕಗಳಾದರೂ ಇನ್ನೂ ನಗರ ಪ್ರದೇಶದಲ್ಲಿ ವಾಸಿಸುವ ಶೇ. ೬೦ರಷ್ಟು ಮಧ್ಯಮ ವರ್ಗ ಮತ್ತು ಕೆಳವರ್ಗದ ಜನರು ನೈರ್ಮಲ್ಯದ ಕೊರತೆಯಿಂದ ಹಲವು ಖಾಯಿಲೆಗಳಿಗೆ ತುತ್ತಾಗಿ ಉತ್ತಮ ಜೀವನ ನಿರ್ವಹಣೆಯಲ್ಲಿ ವಿಫಲವಾಗಿರುವುದು ಕಾಣಬಹುದಾಗಿದೆ.

## ೪.೩. ಸರ್ಕಾರದ ನೀತಿಗನುಗುಣವಾಗಿ ರೂಪಿತವಾದ ನಗರಾಭಿವೃದ್ಧಿ ಕಾರ್ಯಕ್ರಮ

ಜನಗಣತಿ ೨೦೦೧ರ ಪ್ರಕಾರ ೨೮೫.೩೫ ದಶಲಕ್ಷ ಜನರು ನಗರ ಪ್ರದೇಶಗಳಲ್ಲಿ ವಾಸವಾಗಿದ್ದರು. ಇದು ದೇಶದ ಒಟ್ಟು ಜನಸಂಖ್ಯೆಯ ಶೇಕಡ ೨೭.೮ರಷ್ಟನ್ನು ಒಳಗೊಂಡಿತ್ತು. ೨೦೧೧ರ ಜನಗಣತಿಯನ್ವಯ ಸುಮಾರು ೩೮೧ ದಶಲಕ್ಷ ಜನರು ನಗರ ಪ್ರದೇಶಗಳಲ್ಲಿ ವಾಸವಾಗಿದ್ದು, ಭಾರತದ ಒಟ್ಟು ಜನಸಂಖ್ಯೆಯ ಶೇ. ೩೧.೧೬ರಷ್ಟು ಆಗಿದೆ. ಸ್ವಾತಂತ್ರ್ಯಾ ನಂತರದ ಕಾಲದಲ್ಲಿ ಭಾರತದ ಜನಸಂಖ್ಯೆ ೩ ಪಟ್ಟು ಬೆಳೆದಿದ್ದರೆ, ನಗರದ ಜನಸಂಖ್ಯೆ ೫ ಪಟ್ಟು ಬೆಳೆದಿದೆ. ನಗರದ ಜನಸಂಖ್ಯಾ ಹೆಚ್ಚಳವು ಅಲ್ಲಿನ ಬಡವರ ಸಂಖ್ಯೆಯ ಏರಿಕೆಗೂ ಕಾರಣವಾಗಿದೆ. ೨೦೦೧ರ ಅಂದಾಜಿನಂತೆ ಕೊಳಗೇರಿ ಜನಸಂಖ್ಯೆಯು ಸುಮಾರು ೬೧.೮ ದಶಲಕ್ಷವಾಗಿದೆ. ಕೊಳಗೇರಿ ನಿವಾಸಿಗಳ ಸಂಖ್ಯೆಯ ಸತತ ಹೆಚ್ಚಳವು ನಗರ ಮೂಲಭೂತ ಸೇವೆಗಳು ಮತ್ತು ಮೂಲಭೂತ ಸೌಕರ್ಯಗಳ ಮೇಲಿನ ಅತೀವ ಒತ್ತಡಕ್ಕೆ ಕಾರಣವಾಗುತ್ತದೆ. ನಗರದ ಕ್ಷಿಪ್ರ ಬೆಳವಣಿಗೆಯ ಪರಿಣಾಮವಾಗಿ ಉದ್ಭವಿಸಿರುವ ತೀವ್ರ/ ಬೃಹತ್ ಸಮಸ್ಯೆಗಳನ್ನು ನಿಭಾಯಿಸುವ ಸಲುವಾಗಿ, ಆಯ್ದ ನಗರಗಳಲ್ಲಿ ಅಭಿಯಾನದ ಮಾದರಿಯಲ್ಲಿ ಯೋಜನೆಗಳನ್ನು ಅನುಷ್ಠಾನಗೊಳಿಸಲು ಸುಸಂಬಂಧ ನಗರೀಕರಣ ನೀತಿ/ಕಾರ್ಯತಂತ್ರಗಳನ್ನು ರೂಪಿಸುವುದು ಕಡ್ಡಾಯವಾಗಿದೆ. ಯಾವುದೇ ಒಂದು ಪ್ರದೇಶ ಅಥವಾ ಸಂಸ್ಥೆಯನ್ನು ಅಭಿವೃದ್ಧಿ ಪಡಿಸಲು ನೀತಿ ನಿಯಮಗಳು ಬೇಕು. ಅಂದರೆ ರಚಿತವಾದ ನೀತಿ ನಿಯಮಗಳ ಪಾಲನೆ ಪ್ರತಿಯೊಬ್ಬರ ಆದ್ಯ ಕರ್ತವ್ಯವಾಗಿರುತ್ತದೆ. ಆಗ ಪ್ರದೇಶ ಅಥವಾ ಸಂಸ್ಥೆಯನ್ನು ಅಭಿವೃದ್ಧಿಪಡಿಸಲು ಸಾಧ್ಯ. ನೀತಿನಿಯಮಗಳು ಗಟ್ಟಿಗೊಂಡಷ್ಟು ಶಿಸ್ತುಪಾಲನೆಗೆ ದಾರಿಯಾಗುತ್ತದೆ. ಅದರಂತೆ ನಗರ ಸ್ಥಳೀಯ ಸಂಸ್ಥೆಗಳು ನೀತಿಗಳ ಮೂಲಕ ಅಭಿವೃದ್ಧಿ ಸಾಧಿಸಲು ನಿಗದಿತ ಯೋಜನೆಗಳು ಅಥವಾ ಕಾರ್ಯಕ್ರಮಗಳನ್ನು ರಚಿಸಬೇಕಾಗುತ್ತದೆ. ಕಾರ್ಯಕ್ರಮಗಳ ಮೂಲಕ ನಿಗದಿತ ಗುರಿಯನ್ನು ಸಾಧಿಸಬಹುದು. ಅದರ ಪರಿಣಾಮವಾಗಿ ನೀತಿಗನುಗುಣವಾಗಿ ನಿರ್ಮಿತವಾದ ಕಾರ್ಯಕ್ರಮಗಳು ಈ ಕೆಳಗಿನಂತೆ ನೋಡಬಹುದಾಗಿದೆ. ಅಧ್ಯಯನ ದೃಷ್ಟಿಯಿಂದ ಇವುಗಳನ್ನು ಮೂರು ಭಾಗಗಳಾಗಿ ವಿಭಾಗಿಸಿಕೊಳ್ಳಲಾಗಿದೆ.

ಅ. ರಾಷ್ಟ್ರೀಯ ನಗರಾಭಿವೃದ್ಧಿ ಕಾರ್ಯಕ್ರಮಗಳು

ಆ. ರಾಜ್ಯ ನಗರಾಭಿವೃದ್ಧಿ ಕಾರ್ಯಕ್ರಮಗಳು

ಇ. ವಿದೇಶಿ ನೆರವಿನಿಂದ ರಚಿತವಾದ ನಗರಾಭಿವೃದ್ಧಿ ಕಾರ್ಯಕ್ರಮಗಳು

ಭಾರತ ಸ್ವಾತಂತ್ರ್ಯ ಪಡೆದ ನಂತರ ನಗರಾಭಿವೃದ್ಧಿಯನ್ನು ಮಾಡಲು ಅನೇಕ ಕಾರ್ಯಕ್ರಮಗಳನ್ನು ಕೇಂದ್ರ ಸರ್ಕಾರವು ಕೈಗೊಂಡಿತು. ಅವು ನಗರಾಭಿವೃದ್ಧಿ ಕಾರ್ಯಕ್ರಮಗಳಾಗಿ ರಚನೆಗೊಂಡವು. ಇವುಗಳ ಮೂಲ ಉದ್ದೇಶ ಲಾಭದಾಯಕ ಉದ್ಯೋಗಗಳನ್ನು ನಗರ ನಿರುದ್ಯೋಗಿ ಅಥವಾ ಇಂತಹ ಸೂಕ್ತವಾದ ಉದ್ಯೋಗಿಗಳಿಗೆ ನೀಡುವಂತಹ ಸ್ವ–ಉದ್ಯೋಗಗಳನ್ನು ಸೃಷ್ಟಿಸುವುದು, ಕೂಲಿಯಾಧಾರಿತ ಉದ್ಯೋಗಗಳನ್ನು ಸೃಷ್ಟಿಸುವುದು, ದೇಶಾದ್ಯಂತ ನಗರಗಳಲ್ಲಿ ಅಭಿವೃದ್ಧಿ ಸಾಧಿಸುವುದು, ನಗರ ಮೂಲಸೌಕರ್ಯ ಒದಗಿಸುವುದು, ಉತ್ತಮ ಜೀವನಮಟ್ಟ ಸುಧಾರಣೆ, ಸಮುದಾಯದಲ್ಲಿ ಭಾಗವಹಿಸುವಿಕೆಯಿಂದ ದಕ್ಷತೆಯ ಸಾಮರ್ಥ್ಯವನ್ನು ಹೆಚ್ಚಿಸುವುದು, ನೈರ್ಮಲ್ಯೀಕರಣ, ಶಿಕ್ಷಣ ಕೊಡಿಸುವುದರೊಂದಿಗೆ ಸ್ಥಳೀಯ ಸಂಸ್ಥೆಗಳ ಬಗ್ಗೆ ಅರಿವು ಮೂಡಿಸಿ ಪರಿಹರಿಸುವಂತದ್ದು, ಚರಂಡಿ ವ್ಯವಸ್ಥೆ, ಘನತ್ಯಾಜ್ಯ ನಿರ್ವಹಿಸುವುದು, ಉತ್ತಮ ರಸ್ತೆ ಸಂಪರ್ಕ ಕಲ್ಪಿಸುವುದು ಮತ್ತು ನೀರು

ಸರಬರಾಜು ವ್ಯವಸ್ಥೆಯನ್ನು ಕೈಗೊಂಡು ಉತ್ತಮ ಆಡಳಿತದ ನಿರ್ವಹಣೆಯಿಂದ ನಗರಾಭಿವೃದ್ಧಿ ಮಾಡುವುದಾಗಿದೆ. ಈ ನಿಟ್ಟಿನಲ್ಲಿ ಇತ್ತೀಚಿನವರೆಗೂ ಅಭಿವೃದ್ಧಿಗಾಗಿ ಅನುದಾನ ನೀಡುವಾಗ ಮತ್ತು ಸರ್ಕಾರದ ಕಾರ್ಯಕ್ರಮಗಳನ್ನು ಕೈಗೊಳ್ಳುವಾಗ ಹೆಚ್ಚಾಗಿ ಗ್ರಾಮೀಣ ಪ್ರದೇಶಗಳನ್ನೇ ಕೇಂದ್ರೀಕರಿಸಲಾಗುತ್ತಿತ್ತು. ಆದರೆ ನಗರ ಪ್ರದೇಶಗಳಲ್ಲಿ ತೀವ್ರಗತಿಯಲ್ಲಿ ಆಗುತ್ತಿರುವ ಬದಲಾವಣೆಯ ಕಾರಣದಿಂದಾಗಿ ಅಭಿವೃದ್ಧಿಯಲ್ಲಿ ಆಗಿರುವ ಕೊರತೆಯನ್ನು ತುಂಬಲು ಬಹಳ ತಡವಾಗಿ ಪ್ರಯತ್ನಗಳನ್ನು ನಡೆಸಲಾಗುತ್ತಿದೆ. ಈ ಹಿನ್ನೆಲೆಯಲ್ಲಿ ಸರ್ಕಾರದ ಕಾರ್ಯಕ್ರಮಗಳು ಈ ಮುಂದಿನ ಸ್ವರೂಪದಲ್ಲಿ ನಿರ್ಮಾಣಗೊಂಡಿವೆ.

೧. ನಗರ ಪ್ರದೇಶಗಳಿಗೆ ಹೆಚ್ಚಿನ ಹಣಕಾಸು ಹಂಚಿಕೆ.
೨. ಸಂವಿಧಾನ ತಿದ್ದುಪಡಿ ಮೂಲಕ ನಗರ ಸ್ಥಳೀಯ ಸಂಸ್ಥೆಗಳಿಗೆ ೧೮ ಆಡಳಿತಾತ್ಮಕ ಕೆಲಸ ಕಾರ್ಯಗಳನ್ನು ವಹಿಸಿಕೊಡುವುದು.
೩. ಮಹಾನಗರಗಳಲ್ಲಿ ಮಹಾನಗರ ಯೋಜನಾ ಸಮಿತಿಗಳನ್ನು ಸ್ಥಾಪಿಸುವುದು ಮತ್ತು ಇತರ ಪ್ರದೇಶಗಳಲ್ಲಿ ಜಿಲ್ಲಾ ಯೋಜನಾ ಪ್ರಾಧಿಕಾರಗಳನ್ನು ನಿರ್ಮಿಸುವುದು.
೪. ದೊಡ್ಡ ನಗರಗಳಿಗೆ ಪರ್ಯಾಯವಾಗಿ ಸಣ್ಣ ಪಟ್ಟಣಗಳನ್ನು ಅಭಿವೃದ್ಧಿಪಡಿಸುವ ಪ್ರಯತ್ನ.
೫. ವಿಶೇಷವಾಗಿ ಬಡಜನತೆಗಾಗಿ ನಗರ ಉದ್ಯೋಗ ನೆರವು.

ಈ ಯೋಜನೆಗಳು ಹೆಚ್ಚೆಂದರೆ ಮಿಶ್ರ ಮತ್ತು ಸೀಮಿತ ಫಲಿತಾಂಶಗಳನ್ನು ನೀಡಿರುವುದು ಅಧ್ಯಯನಗಳಿಂದ ತಿಳಿಯುತ್ತದೆ. ಈ ಹಿನ್ನೆಲೆಯಲ್ಲಿ ನಗರಾಡಳಿತ ಮತ್ತು ಮೂಲಸೌಕರ್ಯಾಭಿವೃದ್ಧಿಗೆ ಹೊಸತೊಂದು ವೇಗವನ್ನು ನೀಡುವ ಉದ್ದೇಶದಿಂದ ಕೇಂದ್ರ ಸರ್ಕಾರವು ಕೇಂದ್ರ ಮತ್ತು ರಾಜ್ಯಗಳು ಸಂಯುಕ್ತವಾಗಿ ಹಣಕಾಸು ನೀಡುವ ಒಂದು ಅಭಿಯಾನವಾಗಿ ಜವಹರ್‌ಲಾಲ್ ನೆಹರೂ ನಗರ ನವನಿರ್ಮಾಣ ಅಭಿಯಾನವನ್ನು ಪ್ರಾರಂಭಿಸಲಾಗಿದೆ. ಕಾರ್ಯಕ್ರಮದಡಿಯಲ್ಲಿ ಅಭಿವೃದ್ಧಿ ಮತ್ತು ಅದರ ಆಡಳಿತವನ್ನು ನಿರ್ವಹಿಸುವ ಹಾಗೂ ನಗರಾಡಳಿತದ ಮೂಲಕ ಅಭಿವೃದ್ಧಿಯನ್ನು ಕಾಣಲಾಗುತ್ತದೆ. ಈ ಅಭಿಯಾನವು ನಗರ ಪ್ರದೇಶಗಳ ಪುನರುಜ್ಜೀವನಕ್ಕೆ ದೊರೆಯತಕ್ಕ ಸಂಪನ್ಮೂಲಗಳನ್ನು ಹೆಚ್ಚಿಸುವುದರ ಜೊತೆಗೆ ಬೃಹತ್ ನಗರಗಳನ್ನು ತನ್ನ ಕೇಂದ್ರ ವಿಷಯವಾಗಿ ಇರಿಸಿಕೊಂಡಿದೆ. ಸಣ್ಣ ಮತ್ತು ಮಧ್ಯಮ ಪಟ್ಟಣಗಳಿಗೆ ನೆರವನ್ನು ನೀಡುತ್ತದೆ. ಆದರೂ ಅಸಂಖ್ಯಾತ ಸಣ್ಣ ಪಟ್ಟಣಗಳ ಮತ್ತು ನಗರ ಸಮಸ್ಯೆಯನ್ನು ಪರಿಹರಿಸುವ ಭಾರ ಬಹುಪಾಲು ರಾಜ್ಯಗಳ ಮೇಲೆ ಬಿದ್ದಿರುವ ಅಂಶವು ವಿವಿಧ ಅಧ್ಯಯನಗಳಲ್ಲಿ ಗ್ರಹಿಸಲಾಗಿದೆ.[೧೧]

ಇದುವರೆಗೆ ಇವು ನಗರಗಳ ಮೂಲಸೌಕರ್ಯಗಳನ್ನು ಸುಧಾರಿಸಿವೆ. ಆದರೆ ಬೇಡಿಕೆ ಮತ್ತು ಪೂರೈಕೆ ನಡುವೆ ಇನ್ನೂ ಗಣನೀಯ ಅಂತರ ಇದೆ. ಭೂಬಳಕೆ ಮಾಹಿತಿಯ ಕಳಪೆ ಗುಣಮಟ್ಟ, ಸರ್ಕಾರಿ ಇಲಾಖೆಗಳ ಒಳಗೆ ಯೋಜನೆ ಮಾಡುವ ಸಾಮರ್ಥ್ಯದ ಕೊರತೆ, ವಿವಿಧ ಯೋಜನಾ ಏಜೆನ್ಸಿಗಳ ಕಾರಣದಿಂದಾಗಿ ಪ್ರದೇಶಗಳ ನಡುವೆ ಸಮನ್ವಯವಿಲ್ಲದಿರುವುದು–ಇವುಗಳ ಕಾರಣದಿಂದಾಗಿ ಯೋಜನಾಭಿಮುಖ ಕಾರ್ಯಕ್ರಮಗಳೂ ಸಹ ಭಾಗಶಃ ಯಶಸ್ವಿಯಾಗಿವೆ. ಇವೆಲ್ಲದರ ನಡುವೆ ಖಾಸಗಿ ವಲಯದಲ್ಲಿ ಆಗುತ್ತಿರುವ ಕೈಗಾರಿಕಾ ಅಭಿವೃದ್ಧಿಯು ಈಗಿರುವ ಸಮಸ್ಯೆಗಳ ಮೇಲೆ ನಿರಂತರವಾಗಿ ಒತ್ತಡವನ್ನು ಹೇರುತ್ತಿವೆ. ಇವುಗಳ ಹಿನ್ನೆಲೆಯಾಗಿ ಭಾರತದ ಬಹಳಷ್ಟು ನಗರಗಳು

ಸ್ವಂತವಾಗಿಯೇ ಅಭಿವೃದ್ಧಿಯನ್ನು ಕಾಣುತ್ತದೆ. ದೊಡ್ಡ ನಗರಗಳ ಬೆಳವಣಿಗೆಯಲ್ಲಿ ಸರ್ಕಾರದ ನೀತಿ ಮತ್ತು ಕಾರ್ಯಕ್ರಮಗಳು ಕೆಲವೊಮ್ಮೆ ಭಾಗಶಃ ಪ್ರಭಾವ ಬೀರಿದ್ದರೂ ಸಣ್ಣ ಪುಟ್ಟ ನಗರಗಳ ಮೇಲೆ ಸರ್ಕಾರದ ನೀತಿ ಮತ್ತು ಕಾರ್ಯಕ್ರಮಗಳು ಹೆಚ್ಚಿನ ರೀತಿಯಲ್ಲಿ ಪರಿಣಾಮ ಬೀರದೆ ಇರುವುದನ್ನು ಸಂಶೋಧನೆಯ ಮೂಲಕ ತಿಳಿಯಲಾಗಿದೆ.

**ಅ. ರಾಷ್ಟ್ರೀಯ ನಗರಾಭಿವೃದ್ಧಿ ಕಾರ್ಯಕ್ರಮಗಳು**

**೧. ಜವಹರಲಾಲ್ ನೆಹರು ರಾಷ್ಟ್ರೀಯ ನಗರ ನವೀಕರಣ ಯೋಜನೆ**

ದೇಶಾದ್ಯಂತ ನಗರಗಳಲ್ಲಿ ತ್ವರಿತ ಅಭಿವೃದ್ಧಿ, ನಗರ ಮೂಲಸೌಕರ್ಯ, ವಿತರಣಾ ಸೇವೆಯ ವ್ಯವಸ್ಥೆ, ಸಮುದಾಯದಲ್ಲಿ ಭಾಗವಹಿಸುವಿಕೆಯಿಂದ ದಕ್ಷತೆ ತರುವಲ್ಲಿ ಸ್ಥಳೀಯ ಸಂಸ್ಥೆಗಳು ಮತ್ತು ಸಮೂಹ ಸಂಘಟನೆಗಳೊಂದಿಗೆ ಹೊಣೆಗಾರಿಕೆಯಿಂದ ನಿರ್ವಹಿಸುವಂತಹ ಉದ್ದೇಶವನ್ನು ಇಟ್ಟುಕೊಂಡು ಕೇಂದ್ರ ಸರ್ಕಾರ ಜವಹರಲಾಲ್ ನೆಹರು ರಾಷ್ಟ್ರೀಯ ನಗರ ನವೀಕರಣ ಮಿಷನ್ ಎಂಬ ಮಹತ್ವದ ಯೋಜನೆಯನ್ನು ೨೦೦೫ರ ಡಿಸೆಂಬರ್‌ನಲ್ಲಿ ಪ್ರಾರಂಭಿಸಿದೆ. ಅಂದರೆ ಸಣ್ಣ ಮತ್ತು ಮಧ್ಯಮ ನಗರ ಪ್ರದೇಶಗಳನ್ನು ಅಭಿವೃದ್ಧಿಪಡಿಸುವ (ಯು.ಐ.ಡಿ.ಎಸ್.ಎಸ್.ಎಂ.ಟಿ.) ಕಾರ್ಯಕ್ರಮವು ಜವಹರಲಾಲ್ ನೆಹರು ರಾಷ್ಟ್ರೀಯ ನಗರ ಪುನರುತ್ಥಾನ ಮಿಷನ್ ೨೦೦೫-೦೬ರಿಂದ ಆರಂಭಿಸಿ ೨೦೧೧-೧೨ರ ಅವಧಿಯಲ್ಲಿ ೩೮ ಯೋಜನೆಗಳನ್ನು ಈ ಕಾರ್ಯಕ್ರಮದಡಿ ಕೈಗೆತ್ತಿಕೊಳ್ಳಲಾಗಿದೆ. ಅಂದರೆ ಅನುಮೋದಿತ ಯೋಜನೆಗಳಾದ ಕುಡಿಯುವ ನೀರು, ಒಳ ಚರಂಡಿ, ರಸ್ತೆ, ಚರಂಡಿ ಮತ್ತು ಮಳೆ ನೀರು ಕೊಯ್ಲುಗಳಿಗೆ ಸಂಬಂಧಪಟ್ಟವುಗಳಾಗಿದ್ದು ಇದುವರೆಗೆ ನಗರ ಸ್ಥಳೀಯ ಸಂಸ್ಥೆಗಳಲ್ಲಿ ಕುಡಿಯುವ ನೀರಿಗೆ ಸಂಬಂಧಿಸಿದ ೧೭ ಯೋಜನೆಗಳು, ಒಳಚರಂಡಿಗೆ ಸಂಬಂಧಿಸಿದ ೧೦ ಯೋಜನೆಗಳು, ೮ ರಸ್ತೆ ಮತ್ತು ಚರಂಡಿಗಳಿಗೆ ಸಂಬಂಧಿಸಿದವುಗಳಾಗಿದ್ದು, ಉಳಿಕೆ ೩ ಮಳೆ ನೀರು ಕೊಯ್ಲಿಗೆ ಸಂಬಂಧಿಸಿದ ಯೋಜನೆಗಳಾಗಿರುತ್ತವೆ. ಜೆ-ನರ್ಮ್ ಕಾರ್ಯಕ್ರಮದಡಿ ಉಪಕಾರ್ಯಕ್ರಮವಾಗಿ ರೂಪಿಸಲಾಗಿರುವ ಯು.ಐ.ಡಿ.ಎಸ್.ಎಸ್.ಎಂ.ಟಿ. ಕಾರ್ಯಕ್ರಮವು ನಗರ ಸ್ಥಳೀಯ ಸಂಸ್ಥೆಗಳ ನಾಗರಿಕ ಕೇಂದ್ರೀಕೃತ ಸೇವೆಗಳನ್ನು ಒದಗಿಸುವ ನಿಟ್ಟಿನಲ್ಲಿ ಹೊಸ ಆಯಾಮವನ್ನು ಕಲ್ಪಿಸಿರುತ್ತದೆ. ಈ ಯೋಜನೆಯು ಮೂಲಸೌಕರ್ಯ ಅಭಿವೃದ್ಧಿಯಲ್ಲಿ ಪ್ರಮುಖವಾಗಿ ಕುಡಿಯುವ ನೀರಿನ ಸೌಲಭ್ಯ ಮತ್ತು ಒಳಚರಂಡಿ ವ್ಯವಸ್ಥೆಯನ್ನು ಕಲ್ಪಿಸುವಲ್ಲಿ ಹೆಚ್ಚಿನ ಯೋಜನೆಗಳನ್ನು ಕೈಗೆತ್ತಿಕೊಳ್ಳಲು ಸಹಾಯಕವಾಗಿರುತ್ತದೆ. ಈ ಯೋಜನೆಯು ಎರಡು ಬಗೆಯಲ್ಲಿ ಕಾರ್ಯಪ್ರವೃತ್ತವಾಯಿತು.

**ಅ. ನಗರ ಮೂಲಸೌಕರ್ಯ ಹಾಗೂ ಆಡಳಿತ (ಯು.ಐ.ಜಿ.)**

ನಗರ ಮೂಲಸೌಕರ್ಯ ಹಾಗೂ ಆಡಳಿತ(ಯುಐಜಿ)ದ ಮೇಲೆ ಉಪಯೋಜನೆ ಧ್ಯೇಯ(ಮಿಷನ್)ದ ಹಾದಿಯನ್ನು ನವೀಕರಿಸುವ ದೃಷ್ಟಿಯಿಂದ ನಗರ ಪ್ರದೇಶಗಳ ಬಡವರ ವಸತಿ ಸಮಸ್ಯೆ, ಕುಡಿಯುವ ನೀರು ಪೂರೈಕೆ, ನೈರ್ಮಲ್ಯ, ಚರಂಡಿ, ಘನತ್ಯಾಜ್ಯ ನಿರ್ವಹಣೆ, ರಸ್ತೆ ಸಂಪರ್ಕಜಾಲ, ನಗರ ಸಾರಿಗೆ, ನಗರಗಳ ಒಳ ಭಾಗ ಮತ್ತು ಹೊರವಲಯಗಳ ಅಭಿವೃದ್ಧಿಗೆ ಲಕ್ಷ್ಯವಹಿಸುದಾಗಿದೆ. ಜೊತೆಗೆ ಪ್ರದೇಶಗಳಲ್ಲಿ ಸರಿಹೊಂದದ ಕೈಗಾರಿಕೆಗಳನ್ನು ಮತ್ತು ವಾಣಿಜ್ಯ ಚಟುವಟಿಕೆಗಳ ಸ್ಥಾಪನೆ ಅಥವಾ ಬದಲಾಯಿಸುವಂತಹ ಉದ್ದೇಶವನ್ನು ಹೊಂದಲಾಗಿದೆ. ಇದರೊಂದಿಗೆ ಈ ಯೋಜನೆಯು ಇನ್ನಿತರ ನಗರ ಸೇವೆಗಳಾದ ಕೊಳಗೇರಿಗಳ ಸಮಗ್ರ ಅಭಿವೃದ್ಧಿ ಎಂದರೆ, ವಸತಿ

ಮತ್ತು ನಗರಗಳಲ್ಲಿನ ಕೊಳಚೆ ಮೂಲಸೌಕರ್ಯ ಯೋಜನೆಗಳ ಅಭಿವೃದ್ಧಿ, ನಗರ ಬಡವರಿಗೆ ಸೇವೆಗಳ ಆಧಾರದಲ್ಲಿ ಅಭಿವೃದ್ಧಿ/ಸುಧಾರಣೆ/ನಿರ್ವಹಣೆ ಒಳಗೊಂಡ ಯೋಜನೆಗಳನ್ನು ಅನುಷ್ಠಾನಗೊಳಿಸಲಾಗುವುದು, ಕೊಳಗೇರಿಗಳ ಸುಧಾರಣೆ ಮತ್ತು ಪುನರ್‌ವಸತಿ ಯೋಜನೆಗಳು, ನೀರು ಸರಬರಾಜು/ಚರಂಡಿ/ಒಳಚರಂಡಿ ಸಮುದಾಯ ಶೌಚಾಲಯಗಳು/ಸ್ನಾನ ಇತ್ಯಾದಿ ಯೋಜನೆಗಳಲ್ಲಿ ಹೂಡಿಕೆ/ ಆರಂಭಿಸುವುದು, ಪರಿಸರಾತ್ಮಕ ಕೊಳಚೆ ಮತ್ತು ಒಳ ಚರಂಡಿ ನೀರು ನಿರ್ವಹಣೆ ಮತ್ತು ನಿರ್ಮಾಣ, ಬೀದಿ ದೀಪ ಮತ್ತು ಸಮುದಾಯ ಭವನಗಳು, ಶಿಶುಪಾಲನಾ ಕೇಂದ್ರಗಳು ಇತ್ಯಾದಿ ನಾಗರಿಕ ಸೌಲಭ್ಯಗಳನ್ನು ಒದಗಿಸುವುದು ಸ್ವಾಗತಾರ್ಹ ಅಂಶವಾಗಿದೆ.

**ಆ. ನಗರ ಪ್ರದೇಶದಲ್ಲಿರುವ ಜನರಿಗೆ ಕೊಳಚೆ ಪ್ರದೇಶಗಳ ವಾಸಿಗಳಿಗೆ ಯೋಜನೆಗಳು**

ಬಡಜನರಿಗೆ ನಗರಗಳ ಮೂಲಭೂತ ಸೇವೆಗಳು (ಅರ್ಬನ್ ಬೇಸಿಕ್ ಸರ್ವಿಸಸ್ ಫಾರ್ ದಿ ಪೂರ್– ಯುಬಿ.ಎಸ್.ಪಿ.) ಮತ್ತು ನಗರಗಳ ಕೊಳಚೆ ಪ್ರದೇಶಗಳ ಪರಿಸರ ಸುಧಾರಣೆ (ಎನ್‌ವೈರನ್‌ಮೆಂಟಲ್ ಇಂಪ್ರೂವ್‌ಮೆಂಟ್ ಆಫ್ ಅರ್ಬನ್ ಸ್ಲಮ್ಸ್–ಇ.ಐ.ಯು.ಎಸ್) ಈ ಎರಡು ಉಪ–ಯೋಜನೆಗಳು ನಗರಗಳ ಕೊಳಚೆ ಪ್ರದೇಶಗಳ ವಾಸಿಗಳ ಜೀವನ ಮಟ್ಟವನ್ನು ಸುಧಾರಿಸುವ ಉದ್ದೇಶದಿಂದ ಜಾರಿಗೆ ತರಲಾಗಿದ್ದು, ನಗರಗಳ ಬಡಜನರಿಗಾಗಿ ಕೈಗೊಳ್ಳುವ ಪರಿಯೋಜನೆಗಳನ್ನು ರೂಪಿಸುವುದು, ಅವುಗಳ ಅನುಷ್ಠಾನ ಮತ್ತು ಉಸ್ತುವಾರಿಯಲ್ಲಿ ಈ ಜನರು ಸಹಭಾಗಿಗಳಾಗುವುದನ್ನು ಉತ್ತೇಜಿಸುವುದು ಯು.ಬಿ.ಎಸ್.ಪಿ.ಯು ಗುರಿ ಮತ್ತು ಆರೋಗ್ಯ, ಕುಟುಂಬ ಕಲ್ಯಾಣ, ಮಕ್ಕಳು ಮತ್ತು ಮಹಿಳೆಯರ ಅಭಿವೃದ್ಧಿ, ಶಿಕ್ಷಣ ಮತ್ತು ಕಲ್ಯಾಣ ಮುಂತಾದ ಇಲಾಖೆಗಳು ಒದಗಿಸುವ ಅನೇಕ ಸಾಮಾಜಿಕ ಸೇವೆಗಳನ್ನು ಯು.ಬಿ.ಎಸ್.ಪಿ. ಒಂದು ಕಡೆ ಸಂಘಟಿಸುತ್ತದೆ. ಹಾಗೂ ಕೊಳಚೆ ಪ್ರದೇಶಗಳ ವಾಸಿಗಳು ಒಟ್ಟಿಗೆ ಕಲೆತು ನೆರೆಹೊರೆಯ ಸಮಿತಿಗಳನ್ನು ರಚಿಸಿಕೊಳ್ಳುತ್ತಾರೆ. ಈ ಸಮಿತಿಗಳು ಕೊಳಚೆ ಪ್ರದೇಶಗಳ ವಾಸಿಗಳಿಗೆ ಅಗತ್ಯವಾದ ಅಭಿವೃದ್ಧಿ ಪರಿಕರಗಳನ್ನು ನಿರ್ಧರಿಸಲು ತಮ್ಮದೇ ಆದ ಮಿನಿಯೋಜನೆಗಳನ್ನು ಸಿದ್ಧಪಡಿಸಿಕೊಂಡು ಯೋಜನೆಗಳಡಿ ನಗರಗಳ ಕೊಳಚೆ ಪ್ರದೇಶಗಳ ವಾಸಿಗಳಿಗೆ ನೀರು ಸರಬರಾಜು, ಚರಂಡಿ ವ್ಯವಸ್ಥೆ, ಸಮುದಾಯ ಸ್ನಾನ ಗೃಹ, ಶೌಚಾಲಯಗಳು ಮತ್ತು ರಸ್ತೆ ದೀಪಗಳನ್ನು ಒದಗಿಸಲಾಗುತ್ತದೆ ಎಂದು ತಿಳಿದುಬಂದಿದೆ.[೨] ಅಂದರೆ ಹಳ್ಳಿಗಳಲ್ಲಿರುವಂತಹ ಸ್ಥಿತಿಯು ನಗರಗಳಲ್ಲಿಯೂ ಸಹ ನಿರ್ಮಾಣವಾಗಿರುವುದರಿಂದ ಇಂತಹ ಸೇವೆಗಳ ಸದುಪಯೋಗವಾಗದೆ ನಗರದಲ್ಲಿ ಶೋಚನಿಯ ಜೀವನ ನಡೆಸುತ್ತಿರುವುದು ನೋಡಲಾಗುತ್ತಿದೆ.

**೨. ಮುಖ್ಯಮಂತ್ರಿಗಳ ಸಣ್ಣ ಮತ್ತು ಮಧ್ಯಮ ಪಟ್ಟಣಗಳ ಸಮಗ್ರ ಅಭಿವೃದ್ಧಿ ಯೋಜನೆ (ಯು.ಐ.ಡಿ.ಎಸ್.ಎಸ್.ಎಂ.ಟಿ.)**

ನಗರ ಪ್ರದೇಶಗಳ ಸಮಗ್ರ ಅಭಿವೃದ್ಧಿಗಾಗಿ ಆರನೆಯಾ ಪಂಚವಾರ್ಷಿಕ ಯೋಜನೆಯ ಅವಧಿಯಲ್ಲಿ ೧೯೭೯–೮೦ರಲ್ಲಿ ಸಣ್ಣ ಮತ್ತು ಮಧ್ಯಮ ಪಟ್ಟಣಗಳ ಸಮಗ್ರ ಅಭಿವೃದ್ಧಿಯ ಯೋಜನೆಯನ್ನು ಕೇಂದ್ರ ಸರ್ಕಾರ ಜಾರಿಗೊಳಿಸಿತು. ಇದರಲ್ಲಿ ಎರಡು ವೇತನ ಉದ್ಯೋಗ ಯೋಜನೆಗಳು ಅಸ್ತಿತ್ವದಲ್ಲಿದ್ದವು. ಅವು ಯಾವುವುವೆಂದರೆ, ನಗರ ಸ್ವ–ಉದ್ಯೋಗ ಯೋಜನೆ ಮತ್ತು ನಗರ

ಮಜೂರಿ ಉದ್ಯೋಗ ಯೋಜನೆ ಇವೆರೆಡು ಯೋಜನೆಗಳನ್ನು ೧೯೭೯–೮೦ರಲ್ಲಿ ವಿಲೀನಗೊಳಿಸಿ ಸಣ್ಣ ಮತ್ತು ಮಧ್ಯಮ ಪಟ್ಟಣಗಳ ಸಮಗ್ರ ಅಭಿವೃದ್ಧಿ ಯೋಜನೆಯನ್ನಾಗಿ ರಚಿಸಲಾಯಿತು. ಹಾಗೆಯೇ ಇದರಿಂದ ದೊಡ್ಡ ನಗರಗಳಿಗೆ ವಲಸೆ ಬರುವುದನ್ನು ಕಡಿಮೆ ಮಾಡಬಹುವುದಾಗಿದೆ, ಮೂಲಸೌಲಭ್ಯಗಳ ಅಭಿವೃದ್ಧಿ ಮತ್ತು ಉದ್ಯೋಗ ಅವಕಾಶಗಳನ್ನು ಸೃಷ್ಟಿಸಬಹುದು ಹಾಗೂ ಇದಲ್ಲದೇ ನಗರ ಬಡಜನರಿಗೆ ಲಾಭದಾಯಕ ಉದ್ಯೋಗ ಒದಗಿಸುವುದು ಈ ಯೋಜನೆಯ ಉದ್ದೇಶವನ್ನು ಮನಗಾಣಲಾಗಿದೆ.

ಈ ಉದ್ದೇಶಕ್ಕೆ ಪೂರಕವಾಗಿ ನಗರ ಸ್ವ ಉದ್ಯೋಗಗಳ ಯೋಜನೆಯು ಅತಿ ಸಣ್ಣ ಉದ್ಯಮಗಳ ಸ್ಥಾಪನೆ, ನಗರ ಪ್ರದೇಶಗಳಲ್ಲಿ ಮಹಿಳೆಯರ ಮತ್ತು ಮಕ್ಕಳ ಅಭಿವೃದ್ಧಿ, ಉಳಿತಾಯ ಮತ್ತು ಸಾಲ ಸಮೂಹಗಳು ಹಾಗೂ ತರಬೇತಿಗೆ ಅವಕಾಶ ಕಲ್ಪಿಸುತ್ತದೆ. ನಗರ ಮಜೂರಿ ಉದ್ಯೋಗ ಕಾರ್ಯಕ್ರಮವು ರಸ್ತೆಗಳು, ಒಳಚರಂಡಿಗಳು, ಸಮುದಾಯ ಶೌಚಾಲಯಗಳು ಮುಂತಾದ ಮೂಲ ಸೌಲಭ್ಯಗಳ ಅಭಿವೃದ್ಧಿ ಕೆಲಸಗಳನ್ನು ಕೈಗೆತ್ತಿಕೊಳ್ಳುವ ಮೂಲಕ ಬಡತನ ರೇಖೆಗಿಂತ ಕೆಳಗಿರುವ ಕುಟುಂಬಗಳಿಗೆ ಉತ್ತಮ ಜೀವನಮಟ್ಟ ಕೊಡುವುದು ಮತ್ತು ಅಭಿವೃದ್ಧಿಪಡಿಸಲು ಶಿಕ್ಷಣ ನೀಡುವುದು ಹಾಗೂ ಸ್ಥಳೀಯ ಪ್ರದೇಶ ಪಟ್ಟಣ, ನಗರ ಪ್ರದೇಶದ ಆರ್ಥಿಕ ಸಾಮರ್ಥ್ಯವನ್ನು ನಿರ್ಮಿಸುವುದರ ಸಲುವಾಗಿ ಉದ್ಯೋಗ ಒದಗಿಸಲಾಗುತ್ತಿದೆ. ಇದರಿಂದ ವಾಸ್ತವಿಕ ಉದ್ಯೋಗ ಸೃಜನೆ ಮತ್ತು ನಗರ ಬಡತನ ಕಡಿಮೆಗೊಳಿಸಲು ಶ್ರೀಮಂತರಿಗೆ ಹೆಚ್ಚಿನ ಮಟ್ಟದಲ್ಲಿ ಅನುಕೂಲವಾಗಿರುವುದು ಅಧ್ಯಯನದಿಂದ ತಿಳಿದುಬಂದಿದೆ.

ಒಟ್ಟಾರೆಯಾಗಿ ಈ ರೀತಿಯ ಬಹಳಷ್ಟು ನಗರ ಸ್ಥಳೀಯ ಸಂಸ್ಥೆಗಳ ಅಭಿವೃದ್ಧಿಗಾಗಿ ಕಾರ್ಯಕ್ರಮಗಳನ್ನು ಸರಕಾರ ರೂಪಿಸಿದ್ದರೂ ನಗರ ಪ್ರದೇಶದಲ್ಲಿ ಕನಿಷ್ಠಮಟ್ಟ ಮೂಲಭೂತ ಸೌಲಭ್ಯಗಳು, ಶಿಕ್ಷಣ, ಆರೋಗ್ಯ ಮತ್ತು ಉದ್ಯೋಗ ಸೌಲಭ್ಯಗಳ ದೊರೆಯುವಿಕೆಯಲ್ಲಿ ನಿರ್ದಿಷ್ಟಮಟ್ಟದ ಅಭಿವೃದ್ಧಿಯನ್ನು ಸಾಧಿಸದಿರುವುದು ಕಂಡುಬರುತ್ತದೆ. ಇದರ ಅರ್ಥ ನಗರ ಸ್ಥಳೀಯ ಸಂಸ್ಥೆಗಳಲ್ಲಿ ಯಾವುದೇ ರೀತಿಯ ಅಭಿವೃದ್ದಿ ಕಾರ್ಯ ನಡೆದಿಲ್ಲವೆಂದೇನೂ ಅಲ್ಲ. ಒಟ್ಟಾರೆಯಾಗಿ ಸ್ಥಳೀಯ ರಾಜಕೀಯದಲ್ಲಿ ಚುನಾಯಿತ ಪ್ರತಿನಿಧಿಗಳು ಮತ್ತು ಜನರ ಮಧ್ಯೆ ಇರುವ ಸಾಮರಸ್ಯದ ಕೊರತೆಯಿಂದ ಅರಿವು ಮತ್ತು ಭಾಗವಹಿಸದೆ ಆಡಳಿತದಲ್ಲಿ ರಾಜಕೀಯ ಇಚ್ಛಾಶಕ್ತಿಯ ಕೊರತೆಯಿಂದ ಸೂಕ್ತ ಗುರಿಯನ್ನು ತಲುಪಲು ಸಾಧ್ಯವಾಗಿಲ್ಲ ಎಂದು ತಿಳಿಯಬಹುದಾಗಿದೆ. ಬದಲಾಗಿ ಈ ಯೋಜನೆಯಡಿಯಲ್ಲಿ ಕನಿಷ್ಠ ಮೂಲಭೂತ ಸೌಕರ್ಯಕ್ಕೆ ಸಂಬಂಧಪಟ್ಟಂತೆ ಕೈಗೊಳ್ಳುತ್ತಿರುವ ಕಾಮಗಾರಿಗಳಾದ ನೀರು ಸರಬರಾಜು, ಒಳಚರಂಡಿ, ನೈರ್ಮಲ್ಯ, ನಗರ ಪುನರುಜ್ಜೀವನ, ಘನತ್ಯಾಜ್ಯ ವಸ್ತು ನಿರ್ವಹಣೆ, ರಸ್ತೆಗಳು ಮತ್ತು ಕೆರೆ ಅಭಿವೃದ್ಧಿ ಇನ್ನಿತರ ಕಾಮಗಾರಿಗಳಿಗೆ ಆದ್ಯತೆಯನ್ನು ನೀಡಲಾಗುತ್ತಿದೆ.[೧೩] ಇವು ಸಹ ವಿರಳ. ಇಂತಹ ಕಾಮಗಾರಿಗಳ ಉಪಯೋಗ ಕೆಲವೆ ಕೆಲವು ವಾರ್ಡಿಗೆ ಮಾತ್ರ ಸೌಲಭ್ಯಗಳ ತಲುಪುವಿಕೆಯನ್ನು ನೋಡಬಹುದಾಗಿದೆ.

**೩. ಸಮಗ್ರ ವಸತಿ ಮತ್ತು ಕೊಳಗೇರಿ ಅಭಿವೃದ್ಧಿ ಯೋಜನೆ**

ಸಮಗ್ರ ವಸತಿ ಮತ್ತು ಕೊಳಚೆ ಪ್ರದೇಶ ಅಭಿವೃದ್ಧಿ ಯೋಜನೆಯನ್ನು ಡಿಸೆಂಬರ್ ೨೦೦೫ರಲ್ಲಿ ನಗರ ಬಡಜನರ ಮೂಲಭೂತ ಸೌಕರ್ಯ ಯೋಜನೆಯನ್ನು ಅನುಷ್ಠಾನಗೊಳಿಸುತ್ತಿರುವ ನಗರಗಳಾದ

ಬೆಂಗಳೂರು ಮತ್ತು ಮೈಸೂರು ನಗರಗಳನ್ನು ಹೊರತುಪಡಿಸಿ ಉಳಿದ ನಗರ/ಪಟ್ಟಣಗಳಲ್ಲಿ ಮನೆಗಳನ್ನು ನಿರ್ಮಾಣ ಮಾಡಲು ಮತ್ತು ಕೊಳಚೆ ಪ್ರದೇಶಗಳನ್ನು ಅಭಿವೃದ್ಧಿಪಡಿಸುವ ಉದ್ದೇಶದಿಂದ ಈ ಯೋಜನೆಯನ್ನು ಜಾರಿಗೊಳಿಸಲಾಗಿದ್ದು, ಈ ಯೋಜನೆಯು ಹಿಂದಿನ ಯೋಜನೆಗಳಾದ ವಾಲ್ಮೀಕಿ–ಅಂಬೇಡ್ಕರ್ ಅವಾಸ್ ಯೋಜನೆ ಮತ್ತು ರಾಷ್ಟ್ರೀಯ ಕೊಳಚೆ ಪ್ರದೇಶ ಮತ್ತು ಅಭಿವೃದ್ಧಿ ಯೋಜನೆಗಳನ್ನು ಒಗ್ಗೂಡಿಸಿ ಕೊಳಚೆ ನಿವಾಸಿಗಳಿಗೆ ಸಮಗ್ರವಾಗಿ ವಸತಿ ಮತ್ತು ಮೂಲಭೂತ ಸೌಲಭ್ಯಗಳನ್ನು ಒದಗಿಸಲು ಹಾಗೂ ಕೊಳಚೆ ನಿವಾಸಿಗಳ ಶೋಚನೀಯ ಸ್ಥಿತಿಗಳನ್ನು ನಿವಾರಿಸಲು ಈ ಯೋಜನೆಯನ್ನು ಅನುಷ್ಠಾನಗೊಳಿಸಲಾಗಿದೆ. ಜೊತೆಗೆ ಸಾರ್ವಜನಿಕ ಶೌಚಾಲಯಗಳ ನಿರ್ಮಾಣ, ನೀರು ಸರಬುರಾಜು, ಪ್ರವಾಹ ಒಳಚರಂಡಿಗಳ ನಿರ್ಮಾಣ, ಸಾರ್ವಜನಿಕ ಸ್ನಾನಗೃಹಗಳ ನಿರ್ಮಾಣ, ಬೀದಿ ದೀಪ, ರಸ್ತೆಗಳ ಅಗಲೀಕರಣ, ಇವೆಲ್ಲಾವೂ ಈ ಯೋಜನೆಯಯಲ್ಲಿದ್ದು, ಅವುಗಳ ಮೂಲಕ ನಗರ ಪ್ರದೇಶಗಳಲ್ಲಿರುವ ಸಾರ್ವಜನಿಕರನ್ನು ಗುಣಮಟ್ಟದಂತೆ ನೋಡವ ದೃಷ್ಟಿಕೋನ ಇದರದ್ದಾಗಿದೆ.

**೪. ರಾಜೀವ್ ಆವಾಸ್ ಯೋಜನೆ(ಆರ್‌ಎವೈ)**

ಕೇಂದ್ರ ಸರ್ಕಾರದ ಮಹತ್ವಾಕಾಂಕ್ಷೆಯ ಕಾರ್ಯಕ್ರಮವಾದ ರಾಜೀವ್ ಆವಾಸ್ ಯೋಜನೆಯಡಿಯಲ್ಲಿ ಆಯೋಜಿಸಿರುವ ರಾಷ್ಟ್ರವನ್ನು ಕೊಳಚೆ ಪ್ರದೇಶ ಮುಕ್ತ ನಗರ ಪ್ರದೇಶಗಳ ನಿರ್ಮಾಣ. ಸ್ವಾತಂತ್ರ್ಯ ಬಂದಾಗಿನಿಂದಲೂ ತಮ್ಮದೇ ಆದ ಸೂರನ್ನು ಹೊಂದುವ ಕನಸು ಕಾಣುತ್ತಿರುವ ಬಡವರು ಮತ್ತು ವಸತಿಹೀನರಿಗೆ ಆರ್‌ಎವೈ ಯೋಜನೆ ಒಂದು ಆಶಾಕಿರಣವಾಗಿದೆ. ಇದು ಇಂದಿರಾ ಆವಾಸ್ ಯೋಜನೆ ಮಾದರಿಯಲ್ಲಿ ನಗರ ಪ್ರದೇಶಗಳ ಕೊಳಚೆ ನಿವಾಸಿಗಳಿಗೆ ವಸತಿ ಮತ್ತು ಮೂಲಭೂತ ಸೌಕರ್ಯ ಒದಗಿಸಲು ರಾಜೀವ್ ಆವಾಸ್ ಯೋಜನೆ ಎಂಬ ಹೊಸ ಯೋಜನೆಯನ್ನು ೨೦೧೧ರ ಜೂನ್ ೨ರಂದು ಆರಂಭಿಸಲಾಯಿತು. ಈ ಯೋಜನೆಯು ಸದ್ಯ ಇರುವ ಕೊಳಗೇರಿಗಳನ್ನು ಮುಖ್ಯವಾಹಿನಿಯೊಂದಿಗೆ ಸೇರಿಸುವ ಜೊತೆ ಜೊತೆಗೇ ಕೊಳಗೇರಿಗಳ ಸೃಷ್ಟಿಯ ಕಾರಣವಾಗುವ ಸೂಕ್ಷ್ಮ ವಿಷಯಗಳನ್ನೂ ಅಭ್ಯಸಿಸುತ್ತದೆ. ಸ್ಥಳೀಯ ಸಂಸ್ಥೆಗಳ ಆಯವ್ಯಯದ ಮಿತಿಯಲ್ಲಿಯೇ ನಗರದ ಬಡಜನರಿಗೆ ಮೂಲಸೌಕರ್ಯ ಒದಗಿಸುವತ್ತಾ ಈ ಯೋಜನೆ ಗಮನಹರಿಸಿದೆ. ಇದು ಎರಡು ಮೂಲ ಅಂಗಗಳನ್ನು ಹೊಂದಿರುತ್ತದೆ. ಒಂದನೆಯದು ಗೃಹ ನಿರ್ಮಾಣ ಎರಡನೆಯದು ಮೂಲಭೂತ ಸೌಕರ್ಯ ಹಾಗೂ ಇತರೆ ಸೌಕರ್ಯಗಳನ್ನು ಒದಗಿಸುವುದಾಗಿದೆ.

**ಯೋಜನೆಯ ಉದ್ದೇಶಗಳು**

ಈ ಯೋಜನೆಯಡಿ ರಾಜ್ಯವನ್ನು ಆಯ್ಕೆ ಮಾಡಿಕೊಂಡು ೨೦೧೭ರೊಳಗೆ ಕೊಳಚೆ ಪ್ರದೇಶ ಮುಕ್ತ ರಾಜ್ಯವನ್ನಾಗಿ ಮಾಡುವ ಉದ್ದೇಶ ಹೊಂದಿದೆ. ಈ ಯೋಜನೆಯು ಕೊಳಚೆವಾಸಿಗಳಿಗೆ ಹಕ್ಕುಪತ್ರ ನೀಡುವುದಲ್ಲದೆ, ಆ ಪ್ರದೇಶಗಳನ್ನು ನಾಗರಿಕ ಸೌಲಭ್ಯಗಳಿಂದ ಉನ್ನತೀಕರಿಸುವ ಉದ್ದೇಶ ಹೊಂದಿತ್ತು. ಹೊಸದಾಗಿ ಕೊಳಚೆ ಪ್ರದೇಶಗಳು ತಲೆ ಎತ್ತದಂತೆ ನೋಡಿಕೊಳ್ಳುವ ಹೊಣೆಯೂ ಈ ಯೋಜನೆಯಲ್ಲಿ ಅಂತರ್ಗತವಾಗಿತ್ತು. ಯಾವುದೇ ಒಡೆತನಕ್ಕೆ ಸಂಬಂಧಿಸಿದ ಜಾಗವಿದ್ದರೂ ನಗರ ಪ್ರದೇಶದ ಎಲ್ಲಾ ಕೊಳಚೆ ಪ್ರದೇಶಗಳಿಗೂ ಅನ್ವಯವಾಗಿದ್ದ ಈ ಯೋಜನೆ ಪಾದಚಾರಿ ಮಾರ್ಗದಲ್ಲಿ ವಸತಿವ್ಯವಸ್ಥೆ ಮಾಡಿಕೊಂಡಿದ್ದ ಅಲೆಮಾರಿಗಳಿಗೂ ಸುರಕ್ಷಿತ ನೆಲೆ ಕಂಡುಕೊಳ್ಳುವ ಭರವಸೆ ಮೂಡಿಸಿತ್ತು

ಹಾಗೂ ಈ ಯೋಜನೆಯು ಸಹ ನಗರದ ಬಡಜನರಿಗೆ ಕುಡಿಯುವ ನೀರು ಮತ್ತು ಶೌಚವ್ಯವಸ್ಥೆ ಸೌಲಭ್ಯ ಒದಗಿಸುವುದೆನ್ನೇ ತನ್ನ ಮೂಲ ಉದ್ದೇಶ. ಬಡತನ ನಿವಾರಣೆ ಮತ್ತು ಉದ್ಯೋಗ ನಿರ್ಮಿತಿಯ ಉದ್ದೇಶಗಳನ್ನು ಒಳಗೊಂಡಿದ್ದ ಈ ಬೃಹತ್ ಕಾರ್ಯಕ್ರಮ ಹನ್ನೆರಡನೇ ಪಂಚವಾರ್ಷಿಕ ಯೋಜನೆಯಲ್ಲಿ ರಾಷ್ಟ್ರೀಯ ನಗರ ಜೀವನ ಮಾರ್ಗದ ಪ್ರಮುಖ ಹೆಜ್ಜೆಯಾಗಿತ್ತು. ನಗರವಾಸಿ ಬಡವರಿಗೆ ಉದ್ಯೋಗ ಅವಕಾಶಗಳನ್ನು ಒದಗಿಸಿ ಅವರ ಕೌಶಲ್ಯ ಹೆಚ್ಚಿಸುವ ಉದ್ದೇಶ ಈ ಯೋಜನೆಗಿತ್ತು.[೧೯] ಒಟ್ಟಾರೆ ಯೋಜನೆಗಳ ಹಿನ್ನೆಲೆಯನ್ನು ಗಮನಿಸಿದಾಗ ಸೂರು ಇಲ್ಲದವರಿಗೆ ಸೂರನ್ನು ನೀಡಿ ಅವರಿಗೆ ಭದ್ರತೆಯನ್ನು ಒದಗಿಸುವ ಆಶಾವಾದದ ನೆಲೆಯಲ್ಲಿ ನೋಡಿದಾಗ ನಗರ ಜನರ ಅಭಿಪ್ರಾಯಗಳನ್ನು ಪಡೆದಂತಹ ನಿಟ್ಟಿನಲ್ಲಿ ಯಾವ ಸೌಲಭ್ಯ ದೊರಕದೆ ನಿರಾಶಾವಾದದಿಂದ ನಗರ ಸ್ಥಳೀಯ ಸಂಸ್ಥೆಗಳಲ್ಲಿರುವ ಚುನಾಯಿತ ಪ್ರತಿನಿಧಿಗಳ ರಾಜಕೀಯ ಇಚ್ಛಾಶಕ್ತಿಯ ಬಗ್ಗೆ ಬೇಸರ ವ್ಯಕ್ತಪಡಿಸುತ್ತಿರುವುದು ಅಧ್ಯಯನದಿಂದ ತಿಳಿಯುತ್ತದೆ. ಆದರೂ ನಗರಾಭಿವೃದ್ಧಿಗೆ ಇರುವಂತಹ ಯೋಜನೆಗಳು ಉದ್ಯೋಗ ಸೃಷ್ಟಿಸುವಲ್ಲಿ ವಿಫಲವಾಗಿರುವುದನ್ನು ವಾರ್ಡಿನ ಜನರ ನಿರುದ್ಯೋಗದ ಹಿನ್ನೆಲೆಯನ್ನು ಕೇಳಿದಾಗ ತಿಳಿದುಬರುತ್ತದೆ.

**೫. ಪೌರಾಡಳಿತ ನಿರ್ದೇಶನಾಲಯ**

ಪೌರಾಡಳಿತ ನಿರ್ದೇಶನಾಲಯವು ರಾಜ್ಯದಲ್ಲಿನ ನೋಟಿಫೈಡ್ ಏರಿಯಾ ಕಮಿಟಿಗಳು ಸೇರಿದಂತೆ ಎಲ್ಲಾ ೨೧೨ ನಗರ ಮತ್ತು ಪಟ್ಟಣ ಪ್ರದೇಶಗಳ ಒಟ್ಟಾರೆ ಆಡಳಿತದ ಮೇಲುಸ್ತುವಾರಿಯನ್ನು ನಿರ್ವಹಿಸುತ್ತಿದೆ. ಈ ನಿರ್ದೇಶನಾಲಯವು ನಾಗರಿಕ ಸೌಲಭ್ಯಗಳನ್ನು ಉತ್ತಮಪಡಿಸುವ ನಿಟ್ಟಿನಲ್ಲಿ ಕೆಲವೊಂದು ಕ್ರಮಗಳನ್ನು ಕೈಗೊಂಡಿರುತ್ತದೆ. ಅದರ ಅಂಗವಾಗಿ ಮುನಿಸಿಪಲ್ ವಲಯದ ಸೇವೆಗಳನ್ನು ಕರ್ನಾಟಕ ಸರ್ಕಾರದ ಗ್ಯಾರಂಟೀಡ್ ಸರ್ವೀಸ್ ಟು ಸಿಟಿಜನ್ಸ್ ಆಕ್ಟ್ ಆಗಿದೆ. ಈ ನಿರ್ದೇಶನಾಲಯವು ನಗರ ಬಡತನ ನಿವಾರಣೆಯ ಅಂಗವಾಗಿ ನಿರ್ಮಲ ಗಂಗಾ ಮತ್ತು ಶೇ. ೨೨.೭೫ ಅನುದಾನ ಈ ಎರಡು ಕಾರ್ಯಕ್ರಮಗಳನ್ನು ಹಮ್ಮಿಕೊಂಡಿದೆ. ನಿರ್ಮಲ ಗಂಗಾ ಕಾರ್ಯಕ್ರಮವು ನಗರ ಪ್ರದೇಶಗಳಲ್ಲಿ ಬಡತನ ರೇಖೆಗಿಂತ ಕೆಳಗಿರುವ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗದ ಕುಟುಂಬಗಳಿಗೆ ಉಚಿತವಾಗಿ ಕುಡಿಯುವ ನೀರು ಮತ್ತು ಶೌಚಾಲಯವನ್ನು ಒದಗಿಸುವ ಕಾರ್ಯಕ್ರಮವಾಗಿರುತ್ತದೆ. ಈ ಉದ್ದೇಶಕ್ಕಾಗಿ ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯಲ್ಲಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡ ವರ್ಗದವರಿಗೆ ಮೀಸಲಿಟ್ಟಿರುವ ಹಣದಿಂದ ಭರಿಸಲಾಗುತ್ತದೆ. ಶೇ. ೨೨.೭೫ ಕಾರ್ಯಕ್ರಮವು ನಗರಕಲ್ಯಾಣ ಕಾರ್ಯಕ್ರಮವಾಗಿದ್ದು ಇದು ಬಡ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಆರ್ಥಿಕ ಏಳಿಗೆಗಾಗಿ ಹಲವಾರು ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಗಿದೆ.

**ಪೌರಾಡಳಿತ ನಿರ್ದೇಶನಾಲಯದ ವತಿಯಿಂದ ಅನುಷ್ಠಾನಗೊಳಿಸುತ್ತಿರುವ ಯೋಜನೆಗಳು**

**೧. ಕರ್ನಾಟಕ ಪೌರ ಸುಧಾರಣಾ ಯೋಜನೆ(ಕೆ.ಎಂ.ಆರ್.ಪಿ.)**

ಕರ್ನಾಟಕ ನಗರ ಮೂಲಸೌಕರ್ಯ ಅಭಿವೃದ್ಧಿ ಮತ್ತು ಹಣಕಾಸು(ಕೆ.ಯು.ಐ.ಡಿ.ಎಫ್.ಸಿ.) ಸಂಸ್ಥೆಯ ಮೂಲಕ ಈ ಯೋಜನೆ ಅನುಷ್ಠಾನಗೊಳ್ಳುತ್ತಿದೆ. ಈ ಯೋಜನೆಯ ಮುಖ್ಯ ಉದ್ದೇಶವೇನೆಂದರೆ

ನಗರ ಸ್ಥಳೀಯ ಸಂಸ್ಥೆಗಳ ಜವಾಬ್ದಾರಿಕೆ ಮತ್ತು ಪಾರದರ್ಶಕತೆಯನ್ನು ಹೆಚ್ಚಿಸುವುದು ಹಾಗೂ ಅವುಗಳ ಆಡಳಿತ ಸ್ಥಿತಿಯನ್ನು ಅಭಿವೃದ್ಧಿಪಡಿಸುವುದು, ನಗರ ಸ್ಥಳೀಯ ಸಂಸ್ಥೆಗಳನ್ನು ಜನರ ಬೇಡಿಕೆಗಳಿಗೆ ತಕ್ಕಂತೆ ಸ್ಪಂದಿಸುವ ಸಲುವಾಗಿ ಅವುಗಳನ್ನು ಸ್ವಾವಲಂಬಿ ಸಂಸ್ಥೆಗಳನ್ನಾಗಿ ಮಾಡುವುದು, ನಗರ ಸ್ಥಳೀಯ ಸಂಸ್ಥೆಗಳ ಹಣಕಾಸು ಸ್ಥಿತಿಯನ್ನು ಅಭಿವೃದ್ಧಿ ಪಡಿಸುವುದು, ಸಾಂಸ್ಥಿಕ ಸುಧಾರಣೆಗಳಿಗೆ, ಸಾಮರ್ಥ್ಯ ನಿರ್ಮಾಣದ ಕ್ರಮಗಳಿಗೆ ಮತ್ತು ಕಾರ್ಯಾಚರಣೆಗೆ ಆಧಾರಿತ ಬಂಡವಾಳ ಹೂಡಿಕೆಗಳಿಗೆ ಪ್ರೋತ್ಸಾಹ ನೀಡುವುದು, ಸಾರ್ವಜನಿಕವಾಗಿ ಖಾಸಗಿ ಪಾಲುದಾರಿಕೆಗಳಿಗೆ ಪ್ರೋತ್ಸಾಹ ನೀಡುವುದು, ಸಾಂಸ್ಥಿಕ ಅಭಿವೃದ್ಧಿ ಘಟಕದಲ್ಲಿ ಪೌರಕಾರ್ಯಗಳ ಗಣಕೀಕರಣ, ಲೆಕ್ಕಪತ್ರಗಳು ಮತ್ತು ಬಜೆಟ್ ಸುಧಾರಣೆಗೆ ಅವಕಾಶ ಕಲ್ಪಿಸುವುದು ಮತ್ತು ನಗರ ಪ್ರದೇಶಗಳ ದೊಡ್ಡ ಪ್ರಮಾಣದ ನಕ್ಷೆ ತಯಾರಿಕೆಯೊಂದಿಗೆ ೧೬೩ ಸ್ಥಳೀಯ ಸಂಸ್ಥೆಗಳಲ್ಲಿ ಸಿಬ್ಬಂದಿ ಸಾಮರ್ಥ್ಯ ನಿರ್ಮಾಣ ಹಾಗೂ ಸಿಬ್ಬಂದಿಯ ಸಾಮರ್ಥ್ಯವನ್ನು ಹೆಚ್ಚಿಸುವಂತಹ ಕಾರ್ಯ ಈ ಯೋಜನೆಯದ್ದಾಗಿದೆ.[೧೫]

**೨. ನಿರ್ಮಲ ನಗರ ಯೋಜನೆ**

ನಿರ್ಮಲ ನಗರ ಯೋಜನೆಯು ಒಂದು ನಗರ ಮೂಲಸೌಕರ್ಯ ಅಭಿವೃದ್ಧಿ ಯೋಜನೆಯಾಗಿದ್ದು, ಅದನ್ನು ಆಗಸ್ಟ್ ೨೦೦೩ರಲ್ಲಿ ಜಾರಿಗೆ ತರಲಾಯಿತು. ಈ ಕಾರ್ಯಕ್ರಮದ ಉದ್ದೇಶವು ನಾಗರಿಕರಿಗೆ ಸ್ವಚ್ಛ ಪರಿಸರ ಕಲ್ಪಿಸುವುದು, ಬಿ.ಪಿ.ಎಲ್. ಕುಟುಂಬಗಳ ಮಹಿಳೆಯರ ಸಬಲೀಕರಣ ಮತ್ತು ಬಡವರನ್ನು ಉದ್ಧಾರ ಮಾಡುವುದು, ಪೌರಾಡಳಿತದಲ್ಲಿ ಪಾರದರ್ಶಕತೆ, ಅಧಿಕಾರಿ ವರ್ಗ ಮತ್ತು ನಾಗರಿಕರ ನಡುವೆ ನೇರ ಸಂಕಲ್ಪ ಕಲ್ಪಿಸುವುದು, ಆದಾಯ ತೆರಿಗೆಗಳ ಬಲವರ್ಧನೆ ಹಾಗೂ ನವೀನ ಮಾದರಿಯ ಲೆಕ್ಕ ಪತ್ರ ನಿರ್ವಹಣೆ ಮತ್ತು ಇ-ಆಡಳಿತ ಈ ಕಾರ್ಯಕ್ರಮದ ಉದ್ದೇಶವಾಗಿದೆ. ಮೂಲತಃ ಒಂದು ಸಮಗ್ರತಾ ಕಾರ್ಯಕ್ರಮವಾಗಿದ್ದು ನಿರ್ಮಲ ನಗರ ಕಾರ್ಯಕ್ರಮದಲ್ಲಿರುವ ಪ್ರಮುಖ ಸೇವೆಗಳಾದ ನಗರ ಸ್ತ್ರೀ ಶಕ್ತಿ ಕಾರ್ಯಕ್ರಮ, ಘನತ್ಯಾಜ್ಯ ವಸ್ತುಗಳ ನಿರ್ವಹಣೆ, ನಗರದ ಬಡವರಿಗೆ ಶೌಚಾಲಯ ವ್ಯವಸ್ಥೆ, ಮಳೆನೀರು ಸಂಗ್ರಹಣೆ ಮತ್ತು ಬಳಕೆ, ಆಸ್ತಿ ತೆರಿಗೆಗಳ ಸುಧಾರಣೆ ಹಾಗೂ ಆಸ್ತಿಗಳಿಗೆ ಸಂಬಂಧಿಸಿದ ಜಿ.ಐ.ಎಸ್, ಗಣಕೀಕರಣ ಮತ್ತು ಸ್ಥಿರನಿಧಿ ಆಧಾರಿತ ಲೆಕ್ಕಪತ್ರ ವ್ಯವಹಾರಗಳ ಅನುಷ್ಠಾನ. ನಿರ್ಮಲ ನಗರ ಕಾರ್ಯಕ್ರಮವನ್ನು ರಾಜ್ಯ ಸರ್ಕಾರ ಮೂರು ಹಂತಗಳಲ್ಲಿ ಅನುಷ್ಠಾನ ಮಾಡಲಾಗುತ್ತದೆ. ಮೊದಲನೇ ಹಂತ ೨೦೦೪ರಲ್ಲಿ ೫೭ ನಗರಸಭೆಗಳಿಂದ ಕಾರ್ಯಚಟುವಟಿಕೆಗಳು ಅನುಷ್ಠಾನಗೊಳ್ಳುತ್ತವೆ. ಎರಡನೇ ಹಂತ ೨೦೦೬ರಲ್ಲಿ ೭೩ ಪುರಸಭೆಗಳು ಅನುಷ್ಠಾನಗೊಳಿಸುತ್ತವೆ ಹಾಗೂ ಮೂರನೇ ಹಂತ ೨೦೦೭ರಲ್ಲಿ ಉಳಿದ ೯೦ ಪಟ್ಟಣ ಪಂಚಾಯಿತಿಗಳು ಅನುಷ್ಠಾನಗೊಳಿಸಲಾಗುತ್ತದೆ.[೧೬] ಇದರ ಉದ್ದೇಶವು ಗಮನಾರ್ಹವಾದ್ದು ಆದರೂ ಇವುಗಳನ್ನು ನಿರ್ವಹಿಸುವುದರಲ್ಲಿ ವಿಫಲವಾಗಿರುವುದನ್ನು ಅಧ್ಯಯನಗಳಿಂದ ತಿಳಿದಾಗ ಸ್ವಾತಂತ್ರ್ಯ ಬಂದು ಆರು ದಶಕಗಳಾದರೂ ನಮ್ಮ ಜನರಿಗೆ ಸರಿಯಾದ ರೀತಿಯಲ್ಲಿ ಕನಿಷ್ಠ ಮೂಲಭೂತ ಸೌಲಭ್ಯಗಳನ್ನು ಒದಗಿಸುವಲ್ಲಿ ಸಫಲವಾಗಲಿಲ್ಲ ಎಂದರೆ ದುರಂತವೇ ಅನಿಸುತ್ತದೆ.

## ೪.೪. ರಾಜ್ಯ ಮತ್ತು ಕೇಂದ್ರ ಸರ್ಕಾರದ ಯೋಜನೆಗಳು

### ನಗರ ವಸತಿ ಯೋಜನೆಗಳು

ವಸತಿಯು ಮಾನವನ ಮೂಲಭೂತ ಅವಶ್ಯಕತೆಗಳಲ್ಲಿ ಒಂದು. ಅದನ್ನು ಆದ್ಯತೆಯ ಮೇಲೆ ಪೂರೈಸಬೇಕು. ಒಬ್ಬ ಸಾಮಾನ್ಯ ಮನುಷ್ಯನಿಗೆ ಒಂದು ಸೂರನ್ನು ಹೊಂದಿರುವುದು ಆರ್ಥಿಕ ಸುಭದ್ರತೆಯನ್ನು ಒದಗಿಸುವುದಷ್ಟೆ ಅಲ್ಲದೇ ಅವನ ಕುಟುಂಬವನ್ನು ಬಿರು ಬೇಸಿಗೆ/ಮಳೆಗಾಲದಿಂದ ರಕ್ಷಿಸುತ್ತದೆ. ಅದು ಸಾಮಾಜಿಕ ಬದಲಾವಣೆ ಮತ್ತು ಸ್ಥಿರತೆಯನ್ನು ತಂದುಕೊಡುತ್ತದೆ. ಅದರ ಮೂಲಕ ಒಬ್ಬ ವ್ಯಕ್ತಿಯು ಸುತ್ತಣ ಸಾಮಾಜಿಕ ಪರಿಸರಕ್ಕೆ ಸುಲಭವಾಗಿ ಮತ್ತು ಯುಕ್ತವಾಗಿ ಹೊಂದಿಕೊಳ್ಳುವುದಕ್ಕೆ ಸಾಧ್ಯವಾಗುತ್ತದೆ. ನಗರ ಬಡ ಜನರಿಗೆ ತಕ್ಕುದಾದ ಮನೆಗಳನ್ನು ಒದಗಿಸಲು ಕಾಲ ಕಾಲಕ್ಕೆ ಅನೇಕ ಉಪಕ್ರಮಗಳನ್ನು ಕೈಗೊಳ್ಳಲಾಗಿದೆ. ಆದರೂ ೧೯೮೦ರ ದಶಕದಲ್ಲಷ್ಟೇ ನಗರ ಪ್ರದೇಶಗಳಲ್ಲಿ, ಅದರಲ್ಲೂ ಮುಖ್ಯವಾಗಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳಿಗೆ ಸೇರಿದವರು ಹಾಗೂ ತುಳಿತಕ್ಕೆ ಒಳಗಾದವರಿಗೆ ವಸತಿ ಕಲ್ಪಿಸಿಕೊಡಲು ವಿಶೇಷ ಗಮನವನ್ನು ನೀಡಲಾಯಿತು. ೧೯೮೫–೮೬ರಲ್ಲಿ ಇಂದಿರಾ ಆವಾಸ್ ಯೋಜನಾ ರೀತಿಯಲ್ಲಿ ನಗರ ಬಡ ಜನರಿಗೆ ಮನೆಗಳ ಸೌಲಭ್ಯ ಒದಗಿಸಲು ರಾಜೀವ್ ಗಾಂಧಿ ನಿಗಮದಿಂದ ನಗರ ವಸತಿ ಯೋಜನೆಗಳನ್ನು ಪ್ರಾರಂಭಿಸಲಾಯಿತು. ಜೊತೆಗೆ ವಸತಿಸೌಕರ್ಯದ ಬೇಡಿಕೆಯ ಬೆಳವಣಿಗೆಗೆ ಸ್ಪಂದಿಸುವುದರಲ್ಲಿ ಸರ್ಕಾರವು ತನ್ನ ನೀತಿಗಳಲ್ಲಿ ಸಕ್ರಿಯವಾಗಿ ಕಾರ್ಯೋನ್ಮುಖವಾಗಿದೆ. ನಗರ ಪ್ರದೇಶಗಳಲ್ಲಿನ ಬಡವರ ಹಾಗೂ ಕೆಳವರ್ಗದವರಿಗೆ ವಸತಿಸೌಕರ್ಯವನ್ನು ಕಲ್ಪಿಸುವುದರಲ್ಲಿ ಸರ್ಕಾರವು ಮಹತ್ವವಾದ ಪ್ರಾಮುಖ್ಯತೆಯನ್ನು ಸರ್ಕಾರವು ನೀಡುತ್ತಾ ಬಂದಿದೆ. ಈ ನಿಟ್ಟಿನಲ್ಲಿ ನಗರ ಪ್ರದೇಶಗಳಲ್ಲಿ ಆರ್ಥಿಕವಾಗಿ ಹಿಂದುಳಿದ ಜನರಿಗೆ ವಸತಿ ಸೌಲಭ್ಯವನ್ನು ಒದಗಿಸುವ ರಾಜ್ಯ ಹಾಗೂ ಕೇಂದ್ರ ಪುರಸ್ಕೃತ ಯೋಜನೆಗಳನ್ನು ಅನುಷ್ಠಾನಿಸುವ ಸಲುವಾಗಿ ರಾಜೀವ್ ಗಾಂಧಿ ವಸತಿ ನಿಗಮ ನಿಯಮಿತವನ್ನು ೨೦ನೇ ಏಪ್ರಿಲ್ ೨೦೦೦ರಂದು ಸ್ಥಾಪಿಸಿದೆ. ಈ ನಿಗಮದ ಪ್ರಮುಖ ಉದ್ದೇಶ ಆರ್ಥಿಕವಾಗಿ ಹಿಂದುಳಿದ ಹಾಗೂ ಕಡಿಮೆ ವರಮಾನ ಗುಂಪಿನವರಿಗೆ ಧಾರಣೀಯ ವಸತಿ ಸೌಲಭ್ಯವನ್ನು ಒದಗಿಸುವುದು.

### ೧. ನಗರ ಆಶ್ರಯ/ವಾಜಪೇಯಿ ನಗರ ವಸತಿ ಯೋಜನೆ

ಈ ಯೋಜನೆಯನ್ನು ೧೯೯೨–೯೩ನೇ ಸಾಲಿನಲ್ಲಿ ಪರಿಚಯಿಸಲಾಗಿದ್ದು, ವಾಜಪೇಯಿ ನಗರವಸತಿ ಯೋಜನೆಯ ಪ್ರಮುಖ ಗುಂಪುಗಳೆಂದರೆ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಸದಸ್ಯರು ಹಾಗೂ ನಗರರ ಪ್ರದೇಶದಲ್ಲಿ ಬಡತನ ರೇಖೆಗಿಂತ ಕೆಳಗೆ ವಾಸಮಾಡುತ್ತಿರುವ ತುಳಿತಕ್ಕೆ ಒಳಗಾದ ಜನರು. ನಗರ ಪ್ರದೇಶದಲ್ಲಿ ೧೧,೮೦೦ ರೂ.ಗಳಿಗಿಂತ ಕಡಿಮೆ ವಾರ್ಷಿಕ ವರಮಾನವಿರುವ ಫಲಾನುಭವಿಗಳಿಗೆ ವಸತಿ ನಿವೇಶನಗಳನ್ನು ವೆಚ್ಚರಹಿತವಾಗಿ ವಿತರಿಸಲಾಗುತ್ತಿದೆ. ಬೇರೆ ಯಾವ ವಸತಿ ಯೋಜನೆಯಲ್ಲಿ ಅವರು ಒಳಗೊಂಡಿರಬಾರದು, ಅವರು ನಗರ ಪ್ರದೇಶದಲ್ಲಿ ವಾಸವಾಗಿರಬೇಕು ಹಾಗೂ ಅವರಿಗೆ ಮನೆ ಇರಬಾರದು ಅಥವಾ ಇರುವ ವಸತಿಯನ್ನು ಸುಧಾರಿಸುವ ಅಗತ್ಯದಲ್ಲಿರಬೇಕು.[೮]

## ೨. ಸ್ವರ್ಣಜಯಂತಿ ಷಹರಿ ರೋಜ್‌ಗಾರ್ ಯೋಜನೆ(ಎಸ್.ಜೆ.ಆರ್.ವೈ.)

ನಗರ ಪ್ರದೇಶದಲ್ಲಿ ಉದ್ಯೋಗಗಳನ್ನು ನಗರದ ನಿರುದ್ಯೋಗಿ ಅಥವಾ ಇಂತಹ ಸೂಕ್ತವಾದ ಉದ್ಯೋಗಿಗಳಿಗೆ ನೀಡುವಂತಹ ಸ್ವ–ಉದ್ಯೋಗಗಳನ್ನು ಸೃಷ್ಟಿಸುವುದು ಅಥವಾ ಕೂಲಿಯಾಧಾರಿತ ಉದ್ಯೋಗಗಳನ್ನು ಸೃಷ್ಟಿಸುವಂತಹ ಪ್ರಮುಖ ಉದ್ದೇಶವನ್ನುಟ್ಟುಕೊಂಡು. ಸ್ವರ್ಣಜಯಂತಿ ಷಹರಿ ರೋಜ್‌ಗಾರ್ ಯೋಜನೆ (ಎಸ್.ಜೆ.ಎಸ್.ಆರ್.ವೈ) ೧೯೯೭ ಡಿಸೆಂಬರ್ ೧ರಲ್ಲಿ ಜಾರಿಗೆ ಮಾಡಲಾಗಿತ್ತು. ನಂತರ ಬಡತನ ನಿರ್ಮೂಲನಾ ಕಾರ್ಯಕ್ರಮಗಳಾದ ನೆಹರು ರೋಜ್‌ಗಾರ್ ಯೋಜನೆ (ಎನ್.ಆರ್.ವೈ.), ನಗರದ ಬಡವರಿಗೆ ಮೂಲಭೂತ ಸೌಕರ್ಯ ಸೇವೆ ಕಾರ್ಯಕ್ರಮ (ಯು.ಬಿ.ಎಸ್.ಪಿ.), ನಗರ ಮೂಲಭೂತ ಸೇವೆಗಳು (ಯು.ಬಿ.ಎಸ್) ಮತ್ತು ಪ್ರಧಾನಮಂತ್ರಿ ಸಮಗ್ರ ಬಡತನ ನಿರ್ಮೂಲನಾ ಕಾರ್ಯಕ್ರಮ (ಪಿ.ಎಂ.ಐ.ಯು.ಪಿ.ಇ.ಪಿ.) ಅಸ್ತಿತ್ವದಲ್ಲಿದ್ದವು. ಈ ಎಲ್ಲಾ ಯೋಜನೆಗಳನ್ನು ಸೇರಿಸಿ ಎಸ್.ಜೆ.ಎಸ್.ಆರ್.ವೈ ಯೋಜನೆಯಲ್ಲಿ ವಿಲೀನಗೊಳಿಸಲಾಗಿದೆ. ಯೋಜನೆಯ ಪರಿಷ್ಕೃತ ಮಾರ್ಗಸೂಚಿಯ ಪ್ರಕಾರ ೨೦೦೯ ಏಪ್ರಿಲ್‌ನಲ್ಲಿ ಸ್ವರ್ಣಜಯಂತಿ ಷಹರಿ ರೋಜ್‌ಗಾರ್ ಯೋಜನೆ (ಎಸ್.ಜೆ.ಎಸ್.ಆರ್.ವೈ) ಜಾರಿಗೊಳಿಸಲಾಗಿದೆ. ನಗರ ಪ್ರದೇಶಗಳ ಬಡಜನರನ್ನು ಕೇಂದ್ರವಾಗಿಟ್ಟುಕೊಂಡು ಯೋಜನೆಯನ್ನು ರೂಪಿಸಲಾಗಿದೆ. ಈ ಯೋಜನೆಗೆ ಹಣಕಾಸಿನ ಸಹಾಯವನ್ನು ಕೇಂದ್ರ ಮತ್ತು ರಾಜ್ಯಗಳು ೭೫:೨೫ರ ಅನುಪಾತದ ಅಧಾರದಲ್ಲಿ ನಿಗದಿಪಡಿಸಿವೆ. ಇದು ವಿಶೇಷವಾಗಿ ಎರಡು ಕಾರ್ಯಕ್ರಮಗಳನ್ನು ಹೊಂದಿದೆ.

### ಅ. ನಗರ ಸ್ವಯಂ ಉದ್ಯೋಗ ಕಾರ್ಯಕ್ರಮ(ಯು.ಎಸ್.ಇ.ಪಿ)

ಈ ಕಾರ್ಯಕ್ರಮ ಮೂರು ಘಟಕಗಳನ್ನಾಗಿ ಜಾರಿಗೆ ತರಲಾಗಿದೆ. ಮೊದಲ ಘಟಕದಲ್ಲಿ ನಗದರಲ್ಲಿ ಪ್ರತ್ಯೇಕ ವಾಸಿಸುತ್ತಿರುವ ಬಡ ಫಲಾನುಭವಿಗಳಿಗೆ ಲಾಭದಾಯಕ ಸ್ವಯಂ ಉದ್ಯೋಗಗಳ ಆರಂಭಕ್ಕೆ ಸಹಾಯ ಮಾಡುವುದು ಎರಡನೆಯ ಘಟಕದಲ್ಲಿ ನಗರ ಬಡ ಮಹಿಳೆಯರ ಗುಂಪಿಗೆ ನೆರವು ನೀಡಲು ಲಾಭದಾಯಕ ಸ್ವಸಹಾಯ ಉದ್ಯೋಗಗಳನ್ನು ಸೃಷ್ಟಿಸುವುದು. ಈ ಯೋಜನೆಗೆ ನಗರ ಪ್ರದೇಶಗಳಲ್ಲಿನ ಮಹಿಳೆಯರ ಮತ್ತು ಮಕ್ಕಳ ಅಭಿವೃದ್ಧಿ(ಡ್ವಾಕ್ರಾ) ಎನ್ನುವ ಹಾಗೂ ಮೂರನೆಯ ಘಟಕದಲ್ಲಿ ವೃತ್ತಿಪರ ಮತ್ತು ಔದ್ಯಮಿಕ ಕೌಶಲ್ಯಗಳನ್ನು ತರಬೇತಿ ನೀಡುವುದು. ಭಾರತದ ಎಲ್ಲ ನಗರ ಪಟ್ಟಣಗಳು ಈ ಯೋಜನೆಗೆ ಅನ್ವಯಿಸುತ್ತವೆ. ವಿಶೇಷವಾಗಿ ನಗರ ವಲಯಗಳಲ್ಲಿರುವ ಬಡವರಿಗೆ ವಿಶೇಷ ಪ್ರಾಧಾನ್ಯತೆಯನ್ನು ಯೋಜನೆ ನೀಡುತ್ತದೆ. ಈ ಯೋಜನೆಯು ನಗರ ಬಡವರನ್ನು ಗುರಿಯಾಗಿಸಿಕೊಂಡಿದೆ ವಿಶೇಷವಾಗಿ ಬಡತನ ರೇಖೆಗಿಂತ ಕೆಳಗೆ ವಾಸಿಸುತ್ತಿರುವವರು ವಿಶೇಷ ಪ್ರಾಧಾನ್ಯತೆ, ಮಹಿಳೆಯರಲ್ಲಿ ಪರಿಶಿಷ್ಟ ಜಾತಿ, ವರ್ಗ ಮತ್ತು ವಿಕಲಚೇತನರಿಗೆ ನೀಡಲಾಗಿದೆ. ಅದರೂ ಈ ಯೋಜನೆಯ ಫಲಾನುಭವಿಯಾಗಲು ಕನಿಷ್ಠ ೯ನೇ ತರಗತಿಯವರೆಗೆ ಶಿಕ್ಷಣವನ್ನು ಪಡೆದಿರಬೇಕು. ಇಲ್ಲಿ ವಿಧವೆಯರು, ವಿಚ್ಛೇದಿತರು, ಮನೆಯ ಹಿರಿಯ ಮಹಿಳೆ(ಗೃಹಿಣಿ ಹಾಗೂ ಮನೆಯ ಅದ್ಯತೆಯ ಸ್ಥಾನದ ಮೇಲೆ ನೀಡಲಾಗುತ್ತದೆ. ಮಹಿಳಾ ಮತ್ತು ಮಕ್ಕಳ ನಗರ ಪ್ರದೇಶಾಭಿವೃದ್ಧಿ ಯೋಜನೆಯ ಗುರಿಗಳು ಸ್ವಸಹಾಯ ಗುಂಪುಗಳಲ್ಲಿ ಸ್ವಯಂ ಉದ್ಯೋಗಗಳನ್ನು ನಿರ್ವಹಿಸುತ್ತಿರುವವರಿಗೆ ಸಹಾಯ ನೀಡಲಾಗುವುದು.

**೬. ನಗರ ವೇತನಾಧಾರಿತ ಕೂಲಿ ಉದ್ಯೋಗ ಕಾರ್ಯಕ್ರಮ(ಯು.ಡಬ್ಲ್ಯೂ.ಇ.ಪಿ.)**

ಈ ಯೋಜನೆಯು ನಗರ ಸ್ಥಳೀಯ ಸಂಸ್ಥೆಗಳ ವ್ಯಾಪ್ತಿಯಲ್ಲಿ ಬಡತನ ರೇಖೆಗಿಂತ ಕೆಳಗೆ ವಾಸಿಸುವ ಫಲಾನುಭವಿಗಳಿಗೆ ಸಾಮಾಜಿಕವಾಗಿ ಮತ್ತು ಆರ್ಥಿಕವಾಗಿ ಉಪಯುಕ್ತವಾದ ಆಸ್ತಿಗಳನ್ನು ಕಾರ್ಮಿಕರನ್ನು ಬಳಸಿಕೊಂಡು ಸೃಷ್ಟಿಸುವಂತಹ ವೇತನ ಉದ್ಯೋಗ ಒದಗಿಸಲು ಯತ್ನಿಸುತ್ತದೆ. ಈ ಯೋಜನೆಯ ಫಲಾನುಭವಿಗಳಿಗೆ ಯಾವುದೇ ಕ್ಷಣಿಕ ಅರ್ಹತೆಯನ್ನು ನಿಗದಿಪಡಿಸಿಲ್ಲ. ಯೋಜನೆಯು ೫ ಲಕ್ಷಕ್ಕಿಂತ ಕಡಿಮೆ ಜನಸಂಖ್ಯೆ ವಾಸಿಸುವ ಸ್ಥಳೀಯ ನಗರ ಸಂಸ್ಥೆಗಳ ಪ್ರದೇಶಗಳು ಇದರ ವ್ಯಾಪ್ತಿಗೆ ಬರುತ್ತದೆ. ಚಾಲ್ತಿಯಲ್ಲಿರುವ ಕನಿಷ್ಠ ವೇತನ ದರ, ಪ್ರತಿ ಪ್ರದೇಶದ ಸಮಯ ಸೂಚಿಸುವ ಪ್ರದೇಶ, ಯೋಜನೆಯಡಿಯಲ್ಲಿ ಪಾವತಿಸಲಾಗುವುದು. ಯೋಜನೆಯು ರಾಜ್ಯದ ಪರಿಸರವಲಯದ ನಗರ ಕೊಳಚೆ(ಇ.ಐ.ಯು.ಎಸ್.) ಸುಧಾರಣೆ ಯೋಜನೆ ಹಾಗೂ ರಾಷ್ಟ್ರೀಯ ಕೊಳಚೆ ಅಭಿವೃದ್ಧಿ ಕಾರ್ಯಕ್ರಮ(ಎನ್.ಎಸ್.ಡಿ.ಪಿ.) ಜೊತೆಯಲ್ಲಿದ್ದು, ಈ ಯೋಜನೆಯು ರಾಜ್ಯವಲಯದ ಇ.ಐ.ಯು.ಎಸ್. ಮತ್ತು ಎನ್.ಎಸ್.ಡಿ.ಪಿ. ಯೋಜನೆಯ ಅನುಗುಣವಾಗಿ ವಿನ್ಯಾಸಗೊಳಿಸಲಾಗಿದೆ.[೧೮] ಇವೆರೆಡೂ ಒಂದೇ ಕಾರ್ಯಕ್ರಮದ ಅಡಿಯಲ್ಲಿ ಪುನರ್ ವ್ಯವಸ್ಥೆಯಾಗಿರುವುದಾಗಿ ತಿಳಿಯುತ್ತದೆ.

**೭. ಕಡಿಮೆ ವೆಚ್ಚದ ಸಮಗ್ರ ಶೌಚ ವ್ಯವಸ್ಥೆ ಯೋಜನೆ(ಐ.ಎಲ್.ಸಿ.ಎಸ್.)**

ನಗರಾಡಳಿತ, ಸಮುದಾಯ ಮತ್ತು ಸರ್ಕಾರೇತರ ಸಂಸ್ಥೆಗಳು ಸೇರಿ ಹೇಗೆ ನಗರದ ನಿರ್ಮಲೀಕರಣ ಸಮಸ್ಯೆಯನ್ನು ಬಗೆಹರಿಸಿಕೊಳಬೇಕೆಂಬುದುಕ್ಕೆ ಇಡೀ ಪಟ್ಟಣದಲ್ಲಿ ವಾಸಿಸುವ ಎಲ್ಲ ವರ್ಗದವರಿಗೂ ಅನ್ವಯವಾಗುವಂತೆ(ಹೆಚ್ಐಜಿ, ಎಂಐಜಿ, ಎಲ್ಐಜಿ ಮತ್ತು ಇಡಬ್ಲುಎಸ್) ಅಡಿಯಲ್ಲಿ ಬರುತ್ತವೆ. ೧೯೮೧ರ ಜನಗಣತಿಯ ಪ್ರಕಾರ ೫ ಲಕ್ಷಕ್ಕೂ ಮೀರದ ಜನಸಂಖ್ಯೆ ಹೊಂದಿರುವ ಸಣ್ಣ ಮತ್ತು ಮಧ್ಯಮ ನಗರಗಳಿಗೆ ಅನ್ವಯವಾಗುವಂತೆ. ಕಡಿಮೆ ವೆಚ್ಚದ ಸಮಗ್ರ ಶೌಚವ್ಯವಸ್ಥೆ ಯೋಜನೆಯಡಿ ಶೌಚಾಲಯಗಳ ನಿರ್ಮಾಣ ಸಮಗ್ರ ನಿರ್ಮಲೀಕರಣ ವ್ಯವಸ್ಥೆಯ ಒಂದು ಭಾಗವಾಗಿದೆ. ನಗರದಲ್ಲಿ ಒಂದಲ್ಲಾ ಒಂದು ಕಾರಣದಿಂದ ಶೌಚಗೃಹಗಳನ್ನು ಕಟ್ಟಿಸಲು ಅಸಮರ್ಥರಾದವರಿಗಾಗಿಯೇ ಕಡಿಮೆ ವೆಚ್ಚದ ಸಮಗ್ರ ಶೌಚವ್ಯವಸ್ಥೆ ಯೋಜನೆಯಡಿ ಶೌಚಗೃಹಗಳನ್ನು ಕಟ್ಟಿಸಿಕೊಡುವುದರ ಸಲುವಾಗಿಯೇ ಈ ಯೋಜನೆಯ ಪ್ರಸ್ತುತ ಸಂದರ್ಭದಲ್ಲಿ ಹೆಚ್ಚಿನ ಪ್ರಾಮುಖ್ಯತೆಯನ್ನು ಗಳಿಸಿದೆ ಎಂದು ತಿಳಿಯಲಾಗಿದೆ.

**ಯೋಜನೆಯ ಉದ್ದೇಶಗಳು**

ಸಣ್ಣ ಇರುವ ಒಣಶೌಚಾಲಯಗಳನ್ನು ನೀರು-ಸಹಿತ ಪಾಯಖಾನೆಯುಕ್ತ ಶೌಚವ್ಯವಸ್ಥೆಯಾಗಿ ಪರಿವರ್ತಿಸುವುದು. ಮತ್ತು ಪಾಯಖಾನಿ ಹೊಂದಿಲ್ಲದ ಆರ್ಥಿಕವಾಗಿ ಹಿಂದುಳಿದ(ಇ.ಡಬ್ಲ್ಯೂ.ಎಸ್.) ವರ್ಗಕ್ಕೆ ಸೇರಿದ ಕುಟುಂಬದ ಮನೆಗಳಲ್ಲಿ ಹೊಸ ಪಾಯಿಖಾನೆಗಳ ನಿರ್ಮಾಣ ಈ ಯೋಜನೆಯ ಮುಖ್ಯ ಉದ್ದೇಶವಾಗಿದೆ. ಒಟ್ಟಾರೆಯಾಗಿ, ನಗರಗಳ ನೈರ್ಮಲ್ಯವನ್ನು ಹೆಚ್ಚಿಸುತ್ತವೆ. ಅದಕ್ಕಿಂತ ಮುಖ್ಯವಾಗಿ ಮಲಹೊರುವ ಪದ್ಧತಿಯನ್ನು ನಿರ್ಮೂಲನೆಗೊಳಿಸುವಲ್ಲಿ ಸಹಾಯವಾಗಿದೆ.[೧೯]

**೪.೫. ಬಾಹ್ಯ ನೆರವಿನ ಯೋಜನೆಗಳು**

೧. ರಾಜ್ಯದಲ್ಲಿ ನಗರ ಮೂಲಸೌಲಭ್ಯ ಅಭಿವೃದ್ಧಿ ಸುಧಾರಣೆಗಾಗಿ ಹಲವಾರು ಬಾಹ್ಯ ನೆರವಿನ ಯೋಜನೆಗಳನ್ನು ಜಾರಿಗೊಳಿಸಲಾಗುತ್ತಿದೆ. ಇವುಗಳೆಂದರೆ ೧೦೭ ದಶಲಕ್ಷ ಡಾಲರ್‌ನ

ಯೋಜನಾವೆಚ್ಚದಲ್ಲಿ ಮಹಾನಗರ ಮತ್ತು ನಗರಸಭೆಯನ್ನೊಳಗೊಂಡ ಪಟ್ಟಣಗಳನ್ನು ಒಳಗೊಂಡಿರುವ ಏಷಿಯಾ ಅಭಿವೃದ್ಧಿ ಬ್ಯಾಂಕ್ ನೆರವಿನ ಕರ್ನಾಟಕ ನಗರ ಮೂಲಸೌಲಭ್ಯ ಅಭಿವೃದ್ಧಿ ಯೋಜನೆ.

೨. ೯೯೮ ಕೋಟಿ ರೂಪಾಯಿಗಳ ಯೋಜನಾವೆಚ್ಚದಲ್ಲಿ ೧೦ ಕರಾವಳಿ ಪಟ್ಟಣಗಳನ್ನೊಳಗೊಂಡಂತೆ ಏಷಿಯಾ ಅಭಿವೃದ್ಧಿ ಬ್ಯಾಂಕ್ ನೆರವಿನ ಕರ್ನಾಟಕ ನಗರ ಅಭಿವೃದ್ಧಿ ಮತ್ತು ಕರಾವಳಿ ಪರಿಸರ ಯೋಜನೆ.

೩. ೨೨೭ ಕೋಟಿ ರೂಪಾಯಿಗಳ ಯೋಜನಾವೆಚ್ಚದಲ್ಲಿ ಮಹಾನಗರಗಳಲ್ಲಿ ವಿಶ್ವಬ್ಯಾಂಕ್ ನೆರವಿನ ಕರ್ನಾಟಕ ನಗರ ಜಲವಲಯ ಸುಧಾರಣಾ ಯೋಜನೆ.

೪. ೧೨೩೬ ಕೋಟಿ ರೂಪಾಯಿಗಳ ಯೋಜನಾವೆಚ್ಚದಲ್ಲಿ ಉತ್ತರ ಕರ್ನಾಟಕದಲ್ಲಿ ೨೫ ಪಟ್ಟಣಗಳಲ್ಲಿ ಏಷಿಯಾ ಅಭಿವೃದ್ಧಿ ಬ್ಯಾಂಕಿನ ನೆರವಿಗೆ ಕರ್ನಾಟಕ ನಗರವಲಯ ಹೂಡಿಕೆ ಕಾರ್ಯಕ್ರಮ.

೫. ೧೩೬೪ ಕೋಟಿ ರೂಪಾಯಿಗಳ ಯೋಜನಾವೆಚ್ಚದಲ್ಲಿ ನಗರಸೇವೆಗಳ ವಿತರಣಾ ಸುಧಾರಣೆಗಾಗಿ ಸಾಂಸ್ಥಿಕ ಅಭಿವೃದ್ಧಿಯನ್ನು ಗುರಿಯಾಗಿ ಹೊಂದಿರುವ ವಿಶ್ವಬ್ಯಾಂಕ್ ನೆರವಿನ ಕರ್ನಾಟಕ ಪುರಸಭಾ ಸುಧಾರಣೆಗಳ ಯೋಜನೆ (೧ನೇ ಹಂತ ೭೪ ಪಟ್ಟಣಗಳು, ೨ನೇ ಹಂತ ೯೦ ಪಟ್ಟಣಗಳು).

೬. ಮೊದಲ ಮೂರು ಯೋಜನೆಗಳನ್ನು ಪೂರ್ಣಗೊಳಿಸಲಾಗಿದೆ. ಇತರೆ ಎರಡು ಯೋಜನೆಗಳು ಪ್ರಾರಂಭಿಕ ಹಂತದಲ್ಲಿವೆ.[೨೦]

ಒಟ್ಟಾರೆ ಈ ಅಧ್ಯಯನದಲ್ಲಿ ಕಂಡುಬಂದಿರುವುದು ನಗರ ಸ್ಥಳೀಯ ಸಂಸ್ಥೆಗಳ ನೀತಿಗನುಗುಣವಾಗಿ ಹಲವು ನಗರಾಭಿವೃದ್ಧಿ ಕಾರ್ಯಕ್ರಮಗಳು ಕೇಂದ್ರ ಮತ್ತು ರಾಜ್ಯ ಸರ್ಕಾರಗಳ ಮೂಲಕ ರಚಿಸಲಾಗಿವೆ. ಆದರೆ ಅವುಗಳ ಸಮರ್ಪಕ ನಿರ್ವಹಣೆ ಮಾತ್ರ ಸಾಧ್ಯವಾಗದಿರುವುದು ಕಂಡುಬಂದಿದೆ. ಅಲ್ಲದೇ ನೀತಿಗನುಗುಣವಾಗಿ ಸ್ಥಳೀಯ ಸಂಸ್ಥೆಗಳಲ್ಲಿ ಇರಬೇಕಾದ ಸಮಸ್ಯೆಗಳಿಗೆ ಸಮರ್ಪಕವಾದ ಸೇವಾಸೌಲಭ್ಯಗಳು ಇಲ್ಲದೆ ಕೊರತೆಯಿಂದ ಕೂಡಿರುವುದು ಕಂಡುಬಂದಿದೆ. ಅವುಗಳೆಂದರೆ ನೀತಿಗನುಗುಣವಾಗಿ ಸ್ಥಳೀಯ ಸಂಸ್ಥೆಗಳ ಪ್ರತಿನಿಧಿಗಳ ಚುನಾವಣೆ, ಅಧ್ಯಕ್ಷರ, ಉಪಾಧ್ಯಕ್ಷರ ನೇಮಕವಾಗಿರುವುದು, ಸ್ಥಳೀಯ ಸಂಸ್ಥೆಗಳಿಂದ ಸಮರ್ಪಕ ಪರಿಹಾರ ಸಿಗದಿರುವುದು, ಸ್ಥಳೀಯ ವಾರ್ಡ್‌ಸಭೆಗಳು ನಡೆಯದಿರುವುದು, ಪ್ರತಿನಿಧಿಗಳು ನಿರ್ದಿಷ್ಟ ಸಮಯದಲ್ಲಿ ಯೋಜನೆಗಳನ್ನು ಅನುಷ್ಠಾನಗೊಳಿಸದದಿರದು, ಆಡಳಿತ ನಿರ್ವಹಣೆ ಮಾಡದಿರುವುದು, ಸಮಸ್ಯೆಗಳಿಗೆ ಪೂರಕವಾದ ಪರಿಹಾರ ಸಿಗದಿರುವುದು, ಅದರ ಅನ್ವಯದಂತೆ ಕನಿಷ್ಠ ಮೂಲಭೂತ ಸೇವೆಗಳು ಲಭ್ಯವಿಲ್ಲದಿರುವುದು. ಇಷ್ಟೆಲ್ಲಾ ಕೊರತೆಗಳ ನಡುವೆ ನೀತಿಗನುಗುಣವಾಗಿ ರಚಿತಗೊಂಡ ನಗರಾಭಿವೃದ್ಧಿ ಕಾರ್ಯಕ್ರಮಗಳ ಮೂಲಕ ನಗರ ಸ್ಥಳೀಯ ಜನರಿಗೆ ಉತ್ತಮವಾದಂತಹ ಸೇವೆಗಳನ್ನು ನೀಡಲು ಪ್ರಯತ್ನಿಸುತ್ತಿರುವುದು ಕಂಡುಬರುತ್ತದೆ. ಈ ಸೇವಾ ಯೋಜನೆಗಳು ಅನುಷ್ಠಾನ ಹಂತದಲ್ಲಿ ಹೆಚ್ಚು ವಿಫಲತೆ ಕಾಣುತ್ತಿವೆ. ನಗರ ಸ್ಥಳೀಯ ಮಟ್ಟದ ಸೇವೆಯಲ್ಲಿ ನಿರೀಕ್ಷಿತ ಗುರಿ ಸಾಧಿಸಲು ಸಾಧ್ಯವಾಗಿಲ್ಲದಿದ್ದರೂ ಪ್ರಗತಿಯಲ್ಲಿದೆ. ನಿರೀಕ್ಷಿತ ಗುರಿ ಸಾಧನೆಗಾಗಿ ಪ್ರಯತ್ನ ಸಾಗುತ್ತಿರುವುದು ಕಂಡುಬಂದಿದೆ. ನೀತಿಗನುಗುಣವಾದ ಕಾರ್ಯಕ್ರಮಗಳು

ಎರಡೂ ನಗರ ಸ್ಥಳೀಯ ಸಂಸ್ಥೆಗಳಲ್ಲಿಯೂ ಕಾರ್ಯ ನಿರ್ವಹಿಸುತ್ತಿವೆಯಾದರೂ ಸಾಪೇಕ್ಷವಾಗಿ ಮುಂದುವರಿದ ಹೊಸಪೇಟೆ ನಗರಸಭೆ ಮತ್ತು ಹೆಚ್ಚು ಹಿಂದುಳಿದ ಕೂಡ್ಲಿಗಿ ಪಟ್ಟಣ ಪಂಚಾಯಿತಿಯಲ್ಲಿ ಲಭ್ಯವಿರಬೇಕಾದ ನಗರ ಸ್ಥಳೀಯ ಸೌಲಭ್ಯಗಳು ಹೆಚ್ಚು ಕೊರತೆಯಲ್ಲಿರುವುದು ಅಧ್ಯಯನದಲ್ಲಿ ವಿವಿಧ ರಾಷ್ಟ್ರೀಯ, ರಾಜ್ಯ ಮತ್ತು ವಿದೇಶಿ ನೆರವಿನ ಕಾರ್ಯಕ್ರಮಗಳು ನಗರ ಸ್ಥಳೀಯ ಸಂಸ್ಥೆಗಳಲ್ಲಿ ಅನುಷ್ಠಾನಗೊಳಿಸುವುದರಲ್ಲಿ ಚುನಾಯಿತ ಸದಸ್ಯರು ರಾಜಕೀಯ ಇಚ್ಛಾಶಕ್ತಿಯ ಕೊರತೆಯಿಂದ ಅಭಿವೃದ್ಧಿಯಲ್ಲಿ ಕೆಳಮಟ್ಟದಲ್ಲಿರುವುದು ತಿಳಿದುಬಂದಿದೆ.

## ಕೊನೆ ಟಿಪ್ಪಣೆಗಳು

೧. ಗ್ರಾನ್ ವಿಲ್ಲೆ ಆಸ್ಟಿನ್, ದ ಇಂಡಿಯನ್ ಕಾನ್‌ಸ್ಟಿಟ್ಯೂಷನ್; ಕಾರ್ನರ್ ಸ್ಟೋನ್ ಆಫ್ ಎ ನೇಷನ್ ಬಾಂಬೆ; ಆಕ್ಸ್‌ಫರ್ಡ್ ಯೂನಿವರ್ಸಿಟಿ ಪ್ರೆಸ್, ೧೯೭೨, ಪು.೧೪೪.

೨. ಭಾರತ ಸರ್ಕಾರ, "ರೀಪೋರ್ಟ್ ಆಫ್ ದಿ ನ್ಯಾಶನಲ್ ಕಮೀಶನ್ ಆನ್ ಅರ್ಬನೈಜೇಶನ್", ಮಿನಿಸ್ಟರಿ ಆಫ್ ಅರ್ಬನ್ ಡೆವಲಪ್‌ಮೆಂಟ್, ೧೯೮೮, ನ್ಯೂಡೆಲ್ಲಿ, ಪು.೨.

೩. ಪ್ರದೀಪ್ ಸಚದೇವ, "ಅರ್ಬನ್ ಲೋಕಲ್ ಗವರ್ನಮೆಂಟ್ ಆಯಂಡ್ ಅಡ್ಮಿನಿಸ್ಟ್ರೇಶನ್ ಇನ್ ಇಂಡಿಯಾ, ನ್ಯೂಡೆಲ್ಲಿ, ಕಿತಾಬ ಮಹಲ್, ೧೯೯೩, ಪು.೨೫೪.

೪. ಕರ್ನಾಟಕ ಸರ್ಕಾರ, ನಗರಾಭಿವೃದ್ಧಿಯ ನೀತಿ, ನಗರಾಭಿವೃದ್ಧಿ ಇಲಾಖೆ, ನವೆಂಬರ್–೨೦೦೯, ಬೆಂಗಳೂರು, ಪು.೩.

೫. ಕ್ರಾನಿಕಲ್ ಇಂಡಿಯಾ–೨೦೧೨ ಪ್ರೋಗ್ರಾಮ್ಸ್ ಆಯಂಡ್ ಪಾಲಿಸಿ,(ಅರ್ಬನೈಜೇಶನ್), ಕ್ರಾನಿಕಲ್ ಐ.ಎ.ಎಸ್. ಅಕಾಡೆಮಿ, ನ್ಯೂಡೆಲ್ಲಿ, ೨೦೧೨. ಪು.೧೬೫–೧೭೨.

೬. ಅದೇ ಪುಸ್ತಕ, ಪು. ೧೬೫–೧೭೨.

೭ ತ್ರಿಶಾ ಅಗರ್‌ವಾಲ್(ಕನ್ನಡಕ್ಕೆ: ಹೇಮ ಹೆಬ್ಬಗೋಡಿ), ನಗರ ನೈರ್ಮಲ್ಯ–ತಿರುಚಿದ ಬೆಳವಣಿಗೆ, ಸಂಚಿಕೆ–೬, ಸಂಪುಟ–೩೦, ಯೋಜನಾ–ಕನ್ನಡ ಪ್ರಕಾಶನ ವಿಭಾಗ, ಜನವರಿ–೨೦೧೫, ಪು.೧೩.೧೭.

೮. ಆರ್. ಬಿ. ಭಗತ್(ಕನ್ನಡಕ್ಕೆ: ಸ್ಮಿತಾ.ಎನ್.ಡಿ.) ಸೆಪ್ಟೆಂಬರ್–೨೦೧೪, ಸಂಚಿಕೆ–೨, ಸಂಪುಟ–೩೦, ಯೋಜನಾ, ಕನ್ನಡ ಪ್ರಕಾಶನ ವಿಭಾಗ, ಬೆಂಗಳೂರು, ಪು–೭.

೯. ಮೆಹೋತ್ರ, ಎಸ್, ಗೌರೆನ್ಸ್ ಆಯಂಡ್ ಬೇಸಿಕ್ ಸೋಶಿಯಲ್ ಸರ್ವೀಸ್: ಎಸ್ಪೋರಿಂಗ್ ಅಕೌಂಟ್ ಬಿಲಿಟಿ ಇನ್ ಸರ್ವೀಸ್ಸ್ ಡೆಲಿವೆರಿ ಥ್ರೋ ಡೀಪ್ ಡೆಮಾಕ್ರಟಿಕ್ ಡೀಸೆಂಟ್ರಲೈಜೇಷನ್, ಜರ್ನಲ್ ಆಫ್ ಇಂಟರ್ ನ್ಯಾಶನಲ್ ಡೆವಲಪ್‌ಮೆಂಟ್, ನ್ಯೂಡೆಲ್ಲಿ, ೨೦೦೬, ಪು.೨೬೩–೨೮೩.

೧೦. ಕರ್ನಾಟಕ ಸರ್ಕಾರ, ಕರ್ನಾಟಕದಲ್ಲಿ ನಗರಾಭಿವೃದ್ಧಿಯ ಚಿತ್ರಣ, ನಗರಾಭಿವೃದ್ಧಿ ಇಲಾಖೆ, ೨೦೦೯, ಬೆಂಗಳೂರು, ಪು.೧೮–೨೪

೧೧. ಓಂ ಪ್ರಕಾಶ, ಮಾಥುರ್, ಮೂವಿಂಗ್ ಫಾರ್ವರ್ಡ್ ವಿತ್ ದಿ ಜೆನ್.ಎನ್.ಯು.ಆರ್.ಎಂ. ರಿಫಾರ್ಮ್ಸ್. ಬಿಸಿನೆಸ್ ಸ್ಟಾಂಡರ್ಡ್, ಜೂನ್ ೧೪, ೨೦೦೭. ಪುಟ. ೫೪–೬೩.

೧೨. ಕರ್ನಾಟಕ ಸರ್ಕಾರ, ಕರ್ನಾಟಕದಲ್ಲಿ ನಗರಾಭಿವೃದ್ಧಿಯ ಚಿತ್ರಣ, ನಗರಾಭಿವೃದ್ಧಿ ಇಲಾಖೆ, ೨೦೦೯, ಬೆಂಗಳೂರು, ಪು.೧೮–೨೪

೧೩. ಭಾರತ ಸರ್ಕಾರ, ಯೋಜನಾ ಆಯೋಗ, ಕರ್ನಾಟಕ ಆರ್ಥಿಕ ಸಮೀಕ್ಷೆ– ೨೦೧೨–೧೩, ಗ್ರಾಮೀಣ – ನಗರಾಭಿವೃದ್ಧಿ, ಪು.೧೭೮.

೧೪. ಆರ್. ಬಿ. ಭಗತ್(ಕನ್ನಡಕ್ಕೆ ಸ್ಮಿತಾ. ಎನ್. ಡಿ.) ಸೆಪ್ಟೆಂಬರ್–೨೦೧೪, ಸಂಚಿಕೆ–೨, ಸಂಪುಟ–೩೦, ಯೋಜನಾ, ಕನ್ನಡ ಪ್ರಕಾಶನ ವಿಭಾಗ, ಬೆಂಗಳೂರು, ಪು.೭.

೧೫. ಭಾರತ ಸರ್ಕಾರ, ಯೋಜನಾ ಆಯೋಗ, ಕರ್ನಾಟಕ ಆರ್ಥಿಕ ಸಮೀಕ್ಷೆ– ೨೦೧೨–೧೩, ಗ್ರಾಮೀಣ – ನಗರಾಭಿವೃದ್ಧಿ), ಪು.೧೭೮.

೧೬. ಕ್ರಾನಿಕಲ್ ಇಂಡಿಯಾ–೨೦೧೨ ಪ್ರೋಗ್ರಾಮ್ಸ್ ಆಯಂಡ್ ಪಾಲಿಸಿ(ಅರ್ಬನೈಜೇಶನ್), ಕ್ರಾನಿಕಲ್ ಐ.ಎ.ಎಸ್. ಅಕಾಡೆಮಿ, ನ್ಯೂಡೆಲ್ಲಿ, ೨೦೧೨, ಪು. ೧೬೫–೧೭೨.

೧೭. ಮೆಹೋತ್ರ, ಎಸ್, "ಗೌರ್ನೆನ್ಸ್ ಆಯಂಡ್ ಬೇಸಿಕ್ ಸೋಶಿಯಲ್ ಸರ್ವೀಸ್: ಎಸ್ಸೋರಿಂಗ್ ಅಕೌಂಟ ಬಿಲಿಟಿ ಇನ್ ಸರ್ವೀಸ್ಸ್ ಡೆಲಿವೆರಿ ಥ್ರೋ ಡೀಪ್ ಡೆಮಾಕ್ರಟಿಕ್ ಡೀಸೆಂಟ್ರಲೈಜೇಷನ್", ಜರ್ನಲ್ ಆಫ್ ಇಂಟರ್ ನ್ಯಾಶನಲ್ ಡೆವಲಪ್‌ಮೆಂಟ್, ನ್ಯೂಡೆಲ್ಲಿ, ೨೦೦೬, ಪು.೨೬೩-೨೮೩.
೧೮. ಕರ್ನಾಟಕ ಸರ್ಕಾರ, ಕರ್ನಾಟಕದಲ್ಲಿ ನಗರಾಭಿವೃದ್ಧಿಯ ಚಿತ್ರಣ, ನಗರಾಭಿವೃದ್ಧಿ ಇಲಾಖೆ, ೨೦೦೯, ಬೆಂಗಳೂರು, ಪು.೧೮-೨೪
೧೯. ಆರ್.ಬಿ. ಭಗತ್(ಕನ್ನಡಕ್ಕೆ: ಸ್ಮಿತಾ. ಎನ್.ಡಿ.) ಸಂಚಿಕೆ-೨, ಸಂಪುಟ-೩೦, ಯೋಜನಾ-ಕನ್ನಡ ಪ್ರಕಾಶನ ವಿಭಾಗ, ಸೆಪ್ಟೆಂಬರ್-೨೦೧೪, ಬೆಂಗಳೂರು, ಪು-೭.
೨೦. ಮೆಹೋತ್ರ, ಎಸ್., ಗೌರ್ನೆನ್ಸ್ ಆಯಂಡ್ ಬೇಸಿಕ್ ಸೋಶಿಯಲ್ ಸರ್ವೀಸ್: ಎಸ್ಸೋರಿಂಗ್ ಅಕೌಂಟ ಬಿಲಿಟಿ ಇನ್ ಸರ್ವೀಸ್ಸ್ ಡೆಲಿವೆರಿ ಥ್ರೋ ಡೀಪ್ ಡೆಮಾಕ್ರಟಿಕ್ ಡೀಸೆಂಟ್ರಲೈಜೇಷನ್", ಜರ್ನಲ್ ಆಫ್ ಇಂಟರ್ ನ್ಯಾಶನಲ್ ಡೆವಲಪ್‌ಮೆಂಟ್, ನ್ಯೂಡೆಲ್ಲಿ, ೨೦೦೬, ಪು.೨೬೩-೨೮೩.

**ಪೀಠಿಕೆ**

ಪ್ರಬಂಧದ ನಾಲ್ಕನೆಯಾ ಅಧ್ಯಯನದಲ್ಲಿ ನಗರ ಸ್ಥಳೀಯ ಸಂಸ್ಥೆಗಳ ಅಭಿವೃದ್ಧಿ ಚಟುವಟಿಕೆಗಳ ಕುರಿತು ಅಧ್ಯಯನ ಮಾಡುವ ಉದ್ದೇಶವನ್ನಿಟ್ಟುಕೊಂಡು ಭಾರತದಲ್ಲಿ ನಗರ ಸ್ಥಳೀಯ ಸಂಸ್ಥೆಗಳಿಗೆ ಇರುವ ನಗರಾಭಿವೃದ್ಧಿ ನೀತಿಗಳು ಅದಕ್ಕೆ ಪೂರಕವಾಗಿ ನಗರ ಅಭಿವೃದ್ಧಿಗೆ ಹೇಗೆ ಕಾರ್ಯಕ್ರಮಗಳು ರೂಪಿತಗೊಂಡಿವೆ ಅಲ್ಲದೆ ವಿದೇಶಿ ನೆರವಿನಿಂದ ಅನುಷ್ಠಾನಗೊಂಡ ಅಭಿವೃದ್ಧಿ ಕಾರ್ಯಕ್ರಮಗಳ ಮೂಲಕ ನಗರ ಪ್ರದೇಶಗಳು ಯಾವ ರೀತಿಯಾಗಿ ಬಲಗೊಂಡಿವೆ ಎಂಬುದನ್ನು ನೋಡಲಾಗಿದೆ. ಪ್ರಸ್ತುತ ಅಧ್ಯಾಯದಲ್ಲಿ ನಗರ ಸ್ಥಳೀಯ ಸಂಸ್ಥೆಗಳಲ್ಲಿ ಜನತೆಯ ಪಾಲ್ಗೋಳ್ಳುವಿಕೆಯನ್ನು ನೋಡುವ ಉದ್ದೇಶದೊಂದಿಗೆ ಎರಡು ನಗರಗಳ ಜನತೆಯನ್ನು ರ್‍ಯಾಂಡಮ್ ಮಾದರಿಯಲ್ಲಿ ಸಂದರ್ಶಿಸಲಾಗಿದೆ. ಹಾಗಾಗಿ, ಕುಟುಂಬಗಳ ಅರಿವು ಮತ್ತು ಭಾಗವಹಿಸುವಿಕೆಯನ್ನು ಗುರುತಿಸಲಾಗಿದೆ. ಅಂತೆಯೇ, ಇಂದು ನಗರ ಜೀವನ ವ್ಯವಸ್ಥೆಯು ಸಮರ್ಪಕವಾಗಿರಲು ಸರ್ಕಾರವು ಹತ್ತು ಹಲವು ಯೋಜನೆಗಳನ್ನು ರೂಪಿಸುತ್ತಿದೆ. ಬದಲಾಗುತ್ತಿರುವ ನಗರ ಜೀವನಕ್ಕೆ ಅನುಕೂಲವಾಗುವಂತೆ ಈ ವ್ಯವಸ್ಥೆಗಳು ಅನುಷ್ಠಾನಗೊಳ್ಳುತ್ತಿವೆ. ಆರೋಗ್ಯ, ಶಿಕ್ಷಣ, ಕುಡಿಯುವ ನೀರು, ಒಳಚರಂಡಿ ವ್ಯವಸ್ಥೆ, ಬೀದಿದೀಪ, ಉತ್ತಮ ರಸ್ತೆ, ನೈರ್ಮಲ್ಯ, ತ್ಯಾಜ್ಯ ವಸ್ತುಗಳ ನಿರ್ವಹಣೆಗೆ ಈಗ ಹೆಚ್ಚು ಆದ್ಯತೆ ನೀಡಲಾಗುತ್ತಿದೆ. ಆದರೆ ಈ ಎಲ್ಲಾ ಕೆಲಸಗಳನ್ನು ಕೇವಲ ಚುನಾಯಿತ ಪ್ರತಿನಿಧಿಗಳು ಮಾತ್ರ ನಿರ್ವಹಿಸುವುದು ಕಷ್ಟಸಾಧ್ಯವಾದ ಮಾತಾಗಿದೆ. ಇದಕ್ಕೆ ಜನಪ್ರತಿನಿಧಿಗಳ ಜೊತೆಗೆ ಅಧಿಕಾರಿ ವರ್ಗ ಮತ್ತು ನಗರ ಜನತೆಯು ಭಾಗವಹಿಸಬೇಕು. ಹೀಗಾಗಿ ನಗರ ಆಡಳಿತ ವ್ಯವಸ್ಥೆ ಸುಧಾರಣೆಯಾಗುವುದು ಆದ್ಯತೆಯ ಕೆಲಸವಾಗಿರುತ್ತದೆ. ಹಾಗೂ ಹೆಚ್ಚುತ್ತಿರುವ ವಲಸೆ ನಗರೀಕರಣದಿಂದಾಗಿ ಅನೇಕ ಸಮಸ್ಯೆಗಳು ಉದ್ಭವವಾಗುವುದಲ್ಲದೆ, ದೇಶದ ಅಭಿವೃದ್ಧಿಗೆ ಸವಾಲಾಗುತ್ತಿದೆ. ಆದ್ದರಿಂದ ನಗರಾಭಿವೃದ್ಧಿ ಇಂದು ಪ್ರಮುಖವಾದ ಕೆಲಸವಾಗಿದ್ದು, ಈ ಮೂಲಕ ನಗರಾಭಿವೃದ್ಧಿಗಾಗಿ ಶ್ರಮವಹಿಸಬೇಕಾಗಿದೆ. ಈ ಹಿನ್ನೆಲೆಯಲ್ಲಿ ನಗರ ಪ್ರದೇಶದಲ್ಲಿ ವಾಸಿಸುವ ಜನತೆಗೆ ಒದಗಿಸಬೇಕಾದ ಮೂಲಭೂತ ಸೌಲಭ್ಯಗಳನ್ನು

ಹಾಗೂ ನಗರದ ಸರ್ವಾಂಗೀಣ ಅಭಿವೃದ್ಧಿಗೆ ಯೋಜನೆಗಳನ್ನು ಹಮ್ಮಿಕೊಳ್ಳಬೇಕಾಗುತ್ತದೆ. ನಗರದ ಅಭಿವೃದ್ಧಿಯ ಬಗ್ಗೆ ದೂರದೃಷ್ಟಿ ಹೊಂದಿರುವ ಜನಪ್ರತಿನಿಧಿಗಳ ಹಾಗೂ ಪ್ರಜ್ಞಾವಂತ ನಾಗರಿಕರಿಂದ ಮಾತ್ರ ಅಂತಹ ಸುಸಜ್ಜಿತವಾದ, ಸುಂದರ ನಗರ ನಿರ್ಮಾಣ ಸಾಧ್ಯ ಎಂದು ಹೇಳಬಹುದು. ಒಟ್ಟಾರೆ ಜನಪ್ರತಿನಿಧಿಗಳು ಹಾಗೂ ನಗರದ ಜನತೆ ಮತ್ತು ಅಧಿಕಾರಿ ವರ್ಗ ಒಗ್ಗೂಡಿದಾಗ ನಗರ ನಿರ್ವಹಣೆ ಕಷ್ಟವಾದುದೇನಲ್ಲ. ಇದರಿಂದ ಜನರ ಭಾಗವಹಿಸುವಿಕೆಯಿಂದಾಗಿ ನಗರ ಜನತೆಯ ಜೀವನ ಗುಣಮಟ್ಟ ಹೆಚ್ಚುತ್ತದೆ ಎಂದು ಗ್ರಹಿಸಲಾಗಿದೆ.

**ಕೋಷ್ಟಕ: ೫.೧.**

**ನಗರವಾರು ಸಂದರ್ಶನ ಮಾಡಿದ ಕುಟುಂಬಗಳ ಸಾಮಾಜಿಕ ಮತ್ತು ಆರ್ಥಿಕ ಹಿನ್ನೆಲೆ ಜಾತಿವಾರು ಪ್ರಾತಿನಿಧ್ಯ**

| ಸಾಮಾಜಿಕ ಮತ್ತು ಆರ್ಥಿಕ ಅಂಶಗಳು | ವಿವರಗಳು | ಕೂಡ್ಲಿಗಿ ಪಟ್ಟಣ ಪಂಚಾಯಿತಿ | | ಹೊಸಪೇಟೆ ನಗರ ಸಭೆ | |
|---|---|---|---|---|---|
| | | ಕುಟುಂಬಗಳು | ಶೇಕಡವಾರು | ಕುಟುಂಬಗಳು | ಶೇಕಡವಾರು |
| ಜಾತಿಗಳು | ಪರಿಶಿಷ್ಟ ಜಾತಿ | ೩೪ | ೪೨.೫ | ೪೨ | ೩೫.೦೦ |
| | ಪರಿಶಿಷ್ಟ ಪಂಗಡ | ೧೯ | ೨೩.೭೫ | ೨೧ | ೧೭.೫ |
| | ಹಿಂದುಳಿದ ಜಾತಿ | ೧೫ | ೧೮.೭೫ | ೩೭ | ೩೦.೮೩ |
| | ಸಾಮಾನ್ಯ | ೧೨ | ೧೫.೦೦ | ೨೦ | ೧೬.೬೭ |
| | ಒಟ್ಟು | ೮೦ | ೧೦೦ | ೧೨೦ | ೧೦೦ |

**ಮೂಲ: ಕ್ಷೇತ್ರ ಕಾರ್ಯದ ಮಾಹಿತಿ**

ನಗರವಾರು ಸಂದರ್ಶನ ಮಾಡಿದ ಕುಟುಂಬಗಳು ಯಾವ ಜಾತಿಗೆ ಸೇರಿದ್ದಾರೆ ಎಂದು ಕೋಷ್ಟಕ–೧ರಲ್ಲಿ ತೋರಿಸಲಾಗಿದೆ. ಕೂಡ್ಲಿಗಿ ಪಟ್ಟಣ ಪಂಚಾಯಿತಿಯಲ್ಲಿ ಶೇ. ೪೨.೫ರಷ್ಟು ಕುಟುಂಬಗಳು ಪರಿಶಿಷ್ಟ ಜಾತಿಗೆ ಸೇರಿದವರಾಗಿದ್ದು, ಶೇ. ೨೩.೭೫ರಷ್ಟು ಕುಟುಂಬಗಳು ಪರಿಶಿಷ್ಟ ಪಂಗಡಕ್ಕೆ ಸೇರಿದವರಾಗಿದ್ದು, ಶೇ. ೧೮.೭೫ ರಷ್ಟು ಹಿಂದುಳಿದ ಜಾತಿಗೆ ಸೇರಿದ್ದು, ಶೇ. ೧೫ರಷ್ಟು ಸಾಮಾನ್ಯ ಜಾತಿಗೆ ಸೇರಿದವರಾಗಿದ್ದಾರೆ ಹಾಗೂ ಹೊಸಪೇಟೆ ನಗರಸಭೆಯಲ್ಲಿ ಶೇ. ೩೫.೦೦ರಷ್ಟು ಪರಿಶಿಷ್ಟ ಜಾತಿಗೆ ಸೇರಿದವರಾಗಿದ್ದಾರೆ. ಅದೇ ರೀತಿಯಾಗಿ ಶೇ. ೧೭.೫೦ರಷ್ಟು ಪರಿಶಿಷ್ಟ ಪಂಗಡಕ್ಕೆ ಸೇರಿದವರಾಗಿದ್ದು, ಇತರೆ ಶೇ. ೩೦.೮೩ರಷ್ಟು ಹಿಂದುಳಿದ ಜಾತಿಗೆ ಸೇರಿರುತ್ತಾರೆ. ಉಳಿದ ಶೇ. ೧೬.೬೭ರಷ್ಟು ಸಾಮಾನ್ಯ ಜಾತಿಗೆ ಸೇರಿದವರಿದ್ದಾರೆ. ಹೆಚ್ಚಿನ ಸಂಖ್ಯೆಯಲ್ಲಿರುವ ಪರಿಶಿಷ್ಟ ಜಾತಿಗೆ ಸೇರಿದವರಿರುತ್ತಾರೆ. ಹಿಂದುಳಿದ ಕೂಡ್ಲಿಗಿ ಪಟ್ಟಣ ಪಂಚಾಯಿತಿಯಲ್ಲಿ ಶೇ. ೪೨.೫೦ರಷ್ಟು ಹಾಗೂ ಸಾಪೇಕ್ಷವಾಗಿ ಮುಂದುವರಿದ ಹೊಸಪೇಟೆ ನಗರಸಭೆಯಲ್ಲಿ ಶೇ. ೩೫ರಷ್ಟು ಕುಟುಂಬಗಳು ಪರಿಶಿಷ್ಟ ಜಾತಿಯಿಂದ ಸಂದರ್ಶಿತಗೊಂಡಿರುತ್ತಾರೆ. ಅತಿಹೆಚ್ಚು ಬಡವರು ಪರಿಶಿಷ್ಟ ಜಾತಿಯಲ್ಲಿ ಮತ್ತು ಇತರೆ ವರ್ಗದಲ್ಲಿದ್ದಾರೆ. ಆದರೂ ಪರಿಶಿಷ್ಟರ ಪ್ರಮಾಣ ಹೆಚ್ಚಾಗಿದ್ದರೂ ಪರಿಶಿಷ್ಟರ ಮತ್ತು ಹಿಂದುಳಿದ ವರ್ಗದ ಕುಟುಂಬಗಳು ಮಧ್ಯಮ ಸ್ಥಿತಿಯಲ್ಲಿದ್ದುಕೊಂಡು ಯಾವ ಅಭಿವೃದ್ಧಿಯನ್ನು ಕಾಣದೆ ಸರ್ಕಾರ ನೀಡುವ ಸೌಲಭ್ಯಗಳ ಮೇಲೆ ಅವಲಂಬನೆಯಾಗಿರುವುದರ ಜೊತೆಗೆ ಅಂತಹ ಸೌಲಭ್ಯಗಳನ್ನು ಪಡೆಯದೆ ವಂಚಿತರಾಗಿ ಅತ್ಯಂತ ಕೆಳಮಟ್ಟದ ಜೀವನವನ್ನು ಸಾಗಿಸುತ್ತಿರುವುದನ್ನು ಹೊಸಪೇಟೆ ನಗರಸಭೆಗಿಂತ ಹಿಂದುಳಿದ ಪಟ್ಟಣ ಪಂಚಾಯಿತಿಯಲ್ಲಿ ಹೆಚ್ಚಿನ ರೀತಿಯಲ್ಲಿ ನೋಡಬಹುದಾಗಿದೆ.

ಈ ನಿಟ್ಟಿನಲ್ಲಿ ಸರಿಯಾದ ಹಂತಗಳಲ್ಲಿ ಫಲಾನುಭವಿಗಳನ್ನು ಆರಿಸಿ ಅವರಿಗೆ ಸಿಗಬೇಕಾದ ಸೌಲಭ್ಯಗಳನ್ನು ಪೂರಕವಾಗಿ ತಲುಪುವಂತೆ ಮಾಡಬೇಕಾದ ಕರ್ತವ್ಯ ಚುನಾಯಿತಗೊಂಡವರ ಮೇಲೆ ಇದೆ ಎಂದು ಹೇಳಲಾಗುತ್ತದೆ. ಹಾಗಾಗಿ ಚುನಾಯಿತ ಪ್ರತಿನಿಧಿಗಳಿಗೆ ವ್ಯವಸ್ಥಿತವಾದ ಶಿಕ್ಷಣ, ಹೊಸ ರೀತಿಯಾದ ಕೌಶಲ್ಯಗಳ ಬಗ್ಗೆ ತರಬೇತಿ ನೀಡಬೇಕಾದ ಅವಶ್ಯಕತೆಯಿದೆ ಎಂದು ಹೇಳಲಾಗುತ್ತದೆ.

**ವಯೋಮಿತಿ**

| ವಯೋಮಿತಿ | | ಕೂಡ್ಲಿಗಿ | | ಹೊಸಪೇಟೆ | |
|---|---|---|---|---|---|
| ವಯಸ್ಸು | ೨೧-೩೦ | ೮ | ೧೦.೦೦ | ೧೫ | ೧೨.೫ |
| | ೩೧-೪೦ | ೨೨ | ೨೭.೫ | ೪೧ | ೩೪.೧೭ |
| | ೪೧-೫೦ | ೫೦ | ೬೨.೫ | ೬೪ | ೫೩.೩೩ |
| | ಒಟ್ಟು | ೮೦ | ೧೦೦ | ೧೨೦ | ೧೦೦ |

**ಮೂಲ: ಕ್ಷೇತ್ರ ಕಾರ್ಯದ ಮಾಹಿತಿ**

ನಗರವಾರು ಸಂದರ್ಶನ ಮಾಡಿದ ಕುಟುಂಬಗಳು ಯಾವ ವಯಸ್ಸಿನವರು ಎಂದು ವಿವರಿಸಲಾಗಿದೆ. ಪುರುಷ ಮತ್ತು ಮಹಿಳೆಯರ ವಯೋಮಿತಿಯವರು ಭಾಗವಹಿಸಿದ್ದಾರೆ. ಕೂಡ್ಲಿಗಿ ಪಟ್ಟಣ ಪಂಚಾಯಿತಿಯಲ್ಲಿ ಶೇ. ೧೦ರಷ್ಟು ಕುಟುಂಬಗಳು ೨೧ರಿಂದ ೩೦ ವಯೋಮಿತಿಯವರಾಗಿದ್ದಾರೆ. ಅದೇ ಪ್ರಕಾರ ಶೇ. ೨೭.೫೬ರಷ್ಟು ಕುಟುಂಬಗಳು ೩೧ರಿಂದ ೪೦ ವಯೋಮಿತಿಯವರಾಗಿದ್ದಾರೆ. ಉಳಿದ ಶೇ. ೬೨.೫೦ರಷ್ಟು ಕುಟುಂಬಗಳು ೪೧ ರಿಂದ ೫೦ ವಯೋಮಿತಿಯವರಾಗಿದ್ದಾರೆ. ಹಾಗೂ ಹೊಸಪೇಟೆ ನಗರಸಭೆಯಲ್ಲಿ ಶೇ.೧೨.೫೦ರಷ್ಟು ಕುಟುಂಬಗಳು ೨೧ರಿಂದ ೩೦ ವಯೋಮಿತಿಯವರಾಗಿದ್ದಾರೆ. ಅದೇ ಪ್ರಕಾರ ಶೇ.೩೪.೧೭ರಷ್ಟು ಕುಟುಂಬಗಳು ೩೧ರಿಂದ ೪೦ ವಯೋಮಿತಿಯವರಾಗಿದ್ದಾರೆ. ಉಳಿದ ಶೇ. ೫೩.೩೩ರಷ್ಟು ಕುಟುಂಬಗಳು ೪೧ ರಿಂದ ೫೦ ವಯೋಮಿತಿಯವರಾಗಿದ್ದಾರೆ. ಆದರೆ ಎರಡು ನಗರದ ಸ್ಥಳೀಯ ಸಂಸ್ಥೆಗಳಲ್ಲಿ (ನಗರ ಸಭೆ, ಪಟ್ಟಣ ಪಂಚಾಯಿತಿ) ೫೦ ವರ್ಷಕ್ಕಿಂತ ಹೆಚ್ಚಿನ ವಯೋಮಿತಿಯ ಕುಟುಂಬದವರು ಇಲ್ಲದಿರುವುದು ಅಧ್ಯಯನದಿಂದ ತಿಳಿದುಬರುತ್ತದೆ. ಇಲ್ಲಿ ಮುಖ್ಯವಾಗಿ ಗಮನಿಸಬೇಕಾಗಿರುವ ಅಂಶವೆಂದರೆ ಕೂಡ್ಲಿಗಿ ಪಟ್ಟಣ ಪಂಚಾಯಿತಿಯಲ್ಲಿ ಶೇ. ೬೨.೫೬ರಷ್ಟು ಕುಟುಂಬಗಳು ಹಾಗೂ ಹೊಸಪೇಟೆ ನಗರ ಸಭೆಯಲ್ಲಿ ಶೇ. ೫೩.೩೩ರಷ್ಟು ಕುಟುಂಬಗಳು ೪೧ರಿಂದ ೫೦ ವಯೋಮಿತಿಯ ಪ್ರಮಾಣ ಹೆಚ್ಚು ಹುಮ್ಮಸ್ಸಿನಿಂದ ಸಂದರ್ಶಿತರಾಗುವ ಜೊತೆಗೆ ಸ್ಥಳೀಯ ಸಂಸ್ಥೆಗಳಲ್ಲಿ ಹೆಚ್ಚು-ಹೆಚ್ಚಾಗಿ ಭಾಗವಹಿಸುತ್ತಿದ್ದಾರೆಂದು ತಿಳಿದುಬರುತ್ತದೆ. ನಗರ ಸ್ಥಳೀಯ ಸಂಸ್ಥೆಗಳ ರಾಜಕೀಯದ ಮೂಲಕ ಜನರು ತಮ್ಮ ಸಮಸ್ಯೆಗಳನ್ನು ಹೇಳಿಕೊಳ್ಳುವುದರರೊಂದಿಗೆ ವಾರ್ಡಿನ ಅಭಿವೃದ್ಧಿಯಲ್ಲಿ ಸ್ಥಳೀಯ ಸಂಸ್ಥೆಗಳು ಮಹತ್ತರ ಪಾತ್ರವಹಿಸುತ್ತವೆ ಎಂದು ಹೇಳಬಹುದಾಗಿದೆ.

**ಲಿಂಗವಾರು ಪ್ರಾತಿನಿಧ್ಯ**

| ಲಿಂಗ | | ಕೂಡ್ಲಿಗಿ | | ಹೊಸಪೇಟೆ | |
|---|---|---|---|---|---|
| ಲಿಂಗ | ಗಂಡು | ೬೭ | ೮೩.೭೫ | ೧೦೭ | ೮೯.೧೭ |
| | ಹೆಣ್ಣು | ೧೩ | ೧೬.೨೫ | ೧೩ | ೧೦.೮೩ |
| | ಒಟ್ಟು | ೮೦ | ೧೦೦ | ೧೨೦ | ೧೦೦ |

**ಮೂಲ: ಕ್ಷೇತ್ರ ಕಾರ್ಯದ ಮಾಹಿತಿ**

ಎರಡು ನಗರ ಸ್ಥಳೀಯ ಸಂಸ್ಥೆಗಳ ಸಂದರ್ಶಿತಗೊಂಡ ಎರಡು ನಗರಗಳ ಲಿಂಗದ ವಿವರವನ್ನು ಕೋಷ್ಟಕದಲ್ಲಿ ನೀಡಲಾಗಿದೆ. ಕೂಡ್ಲಿಗಿ ಪಟ್ಟಣ ಪಂಚಾಯಿತಿಯಲ್ಲಿ ಶೇ. ೮೩.೭೫ರಷ್ಟು ಕುಟುಂಬಗಳ ಗಂಡಸರು ಉಳಿದ ಶೇ. ೧೬.೨೫ರಷ್ಟು ಕುಟುಂಬಗಳಲ್ಲಿ ಮಹಿಳೆಯರನ್ನು ಸಂದರ್ಶನ ಮಾಡಲಾಗಿದೆ ಹಾಗೂ ಹೊಸಪೇಟೆ ನಗರ ಸಭೆಯಲ್ಲಿ ಶೇ. ೮೯.೧೭ರಷ್ಟು ಕುಟುಂಬಗಳ ಗಂಡಸರನ್ನು ಉಳಿದ ಶೇ. ೧೦.೮೩ರಷ್ಟು ಮಹಿಳೆಯರನ್ನು ಸಂದರ್ಶನ ಮಾಡಲಾಗಿದೆ. ತೀರಾ ಹಿಂದುಳಿದ ಕೂಡ್ಲಿಗಿ ಪಟ್ಟಣ ಪಂಚಾಯಿತಿಯಲ್ಲಿ ಶೇ. ೮೩.೭೫ರಷ್ಟು ಕುಟುಂಬದ ಗಂಡಸರಿಗಿಂತ ಮತ್ತು ಸಾಪೇಕ್ಷವಾಗಿ ಅಭಿವೃದ್ಧಿ ಹೊಂದಿದ ಹೊಸಪೇಟೆ ನಗರಸಭೆಯ ಶೇ. ೮೯.೧೭ರಷ್ಟು ಕುಟುಂಬದ ಗಂಡಸರು ಹೆಚ್ಚಿನ ಪ್ರಮಾಣದಲ್ಲಿ ಸಂದರ್ಶಿತರಾಗಿರುವುದು ತಿಳಿದುಬರುತ್ತದೆ. ಮೇಲಿನ ಅಂಶಗಳಿಂದ ತಿಳಿದು ಬರುವ ಅಂಶವೆಂದರೆ, ಹೊಸಪೇಟೆ ನಗರಸಭೆ ಮತ್ತು ಕೂಡ್ಲಿಗಿ ಪಟ್ಟಣ ಪಂಚಾಯಿತಿಯಲ್ಲಿ ಸಹ ಸ್ಥಳೀಯ ರಾಜಕಾರಣದ ಬಗ್ಗೆ ಅರಿವು ಮತ್ತು ಭಾಗವಹಿಸುವಿಕೆಯಲ್ಲಿ ಗಂಡಸರೇ ಹೆಚ್ಚಾಗಿ ಪಾಲ್ಗೋಳ್ಳುವುದನ್ನು ನೋಡಬಹುದಾಗಿದೆ. ಅದರಲ್ಲಿ ಮುಂದುವರಿದ ಹೊಸಪೇಟೆ ನಗರಸಭೆ ಕುಟುಂಬಗಳ ಗಂಡಸರು ಹಿಂದೂಳಿದ ಪಟ್ಟಣ ಪಂಚಾಯಿತಿ ಕುಟುಂಬದ ಗಂಡಸರಿಗಿಂತ ಹೆಚ್ಚಿನ ಪ್ರಮಾಣದಲ್ಲಿ ಭಾಗವಹಿಸುವುದನ್ನು ನೋಡಬಹುದಾಗಿದೆ. ಹಾಗಾಗಿ, ಕುಟುಂಬದ ಮಹಿಳೆಯರು ಸ್ಥಳೀಯ ರಾಜಕಾರಣದಲ್ಲಿ ಹೆಚ್ಚು-ಹೆಚ್ಚು ಅರಿವು ಹೊಂದುವುದರ ಜೊತೆಗೆ ಭಾಗವಹಿಸುವ ಮೂಲಕ ತಮ್ಮ ಸಮಸ್ಯೆಗಳಿಗೆ ಪರಿಹಾರವನ್ನು ಸ್ವಂತಃ ಕಂಡುಕೊಳ್ಳುವುದರ ಮೂಲಕ ಮಹಿಳಾ ಸಬಲೀಕರಣವನ್ನು ಮಾಡಬಹುದಾಗಿದೆ ಎಂದು ಕಂಡುಕೊಳ್ಳಲಾಗಿದೆ.

**ಶೈಕ್ಷಣಿಕ ವಿವರ**

| ಶೈಕ್ಷಣಿಕ ವಿವರ | | ಕೂಡ್ಲಿಗಿ | | ಹೊಸಪೇಟೆ | |
|---|---|---|---|---|---|
| ವಿದ್ಯಾರ್ಹತೆ | ಅನಕ್ಷರಸ್ಥರು | ೧೫ | ೧೮.೭೫ | ೨೧ | ೧೭.೫ |
| | ಪ್ರಾಥಮಿಕ ಶಿಕ್ಷಣ | ೧೯ | ೨೩.೭೫ | ೧೫ | ೧೨.೫ |
| | ಪ್ರೌಢ ಶಿಕ್ಷಣ | ೧೭ | ೨೧.೨೫ | ೫೨ | ೪೩.೩೩ |
| | ಪದವಿ ಪೂರ್ವ | ೧೬ | ೨೦.೦೦ | ೧೯ | ೧೫.೮೩ |
| | ಪದವಿ | ೧೩ | ೧೬.೨೫ | ೧೩ | ೧೦.೮೩ |
| | ಒಟ್ಟು | ೮೦ | ೧೦೦ | ೧೨೦ | ೧೦೦ |

ಮೂಲ: ಕ್ಷೇತ್ರ ಕಾರ್ಯದ ಮಾಹಿತಿ

ಕೂಡ್ಲಿಗಿ ಪಟ್ಟಣ ಪಂಚಾಯಿತಿಯಲ್ಲಿ ಶೇ. ೨೩.೭೫ರಷ್ಟು ಕುಟುಂಬಗಳು ಪ್ರಾಥಮಿಕ ಶಿಕ್ಷಣವನ್ನು ಹೊಂದಿರುತ್ತಾರೆ. ಅದೇ ಪ್ರಕಾರ ಶೇ. ೨೧.೨೫ರಷ್ಟು ಪ್ರೌಢ ಶಿಕ್ಷಣವನ್ನು ಹೊಂದಿರುತ್ತಾರೆ. ಶೇ. ೧೬.೨೫ರಷ್ಟು ಕುಟುಂಬಗಳು ಪದವಿ ಶಿಕ್ಷಣವನ್ನು ಹೊಂದಿರುತ್ತಾರೆ. ಉಳಿದ ಶೇ. ೧೮.೭೫ರಷ್ಟು ಕುಟುಂಬಗಳು ಅನಕ್ಷರಸ್ಥರ ಕುಟುಂಬಗಳನ್ನು ಸಂದರ್ಶಿಸಲಾಯಿತು ಹಾಗೂ ಹೊಸಪೇಟೆ ನಗರ ಸಭೆಯಲ್ಲಿ ಶೇ. ೧೨.೫೦ರಷ್ಟು ಕುಟುಂಬಗಳು ಪ್ರಾಥಮಿಕ ಶಿಕ್ಷಣವನ್ನು ಹೊಂದಿರುತ್ತಾರೆ. ಅದೇ ಪ್ರಕಾರ ಶೇ. ೪೩.೩೩ರಷ್ಟು ಕುಟುಂಬಗಳು ಪ್ರೌಢಶಿಕ್ಷಣವನ್ನು ಹೊಂದಿರುತ್ತಾರೆ. ಇತರ ಶೇ. ೧೫.೮೩ರಷ್ಟು ಕುಟುಂಬಗಳು ಪದವಿ ಪೂರ್ವ ಶಿಕ್ಷಣವನ್ನು ಹೊಂದಿರುತ್ತಾರೆ. ಅದರಂತೆ, ಶೇ.

೧೦.೮೩ರಷ್ಟು ಕುಟುಂಬಗಳು ಪದವಿ ಶಿಕ್ಷಣವನ್ನು ಹೊಂದಿರುತ್ತಾರೆ. ಉಳಿದ ಶೇ. ೧೭.೫೦ರಷ್ಟು ಕುಟುಂಬಗಳು ಮಾತ್ರ ಅನಕ್ಷರಸ್ಥರನ್ನು ಸಂದರ್ಶಿಸಲಾಯಿತು. ತೀರಾ ಹಿಂದುಳಿದ ಕೂಡ್ಲಿಗಿ ಪಟ್ಟಣ ಪಂಚಾಯಿತಿಯ ಕುಟುಂಬಗಳಿಗಿಂತ ಸಾಪೇಕ್ಷವಾಗಿ ಮುಂದುವರಿದ ಹೊಸಪೇಟೆ ನಗರಸಭೆಯ ಕುಟುಂಬಗಳಲ್ಲಿ ಅನಕ್ಷರಸ್ಥರಾಗಿದ್ದರೂ ನಾವು ಕೇಳಿದ ಪ್ರಶ್ನೆಗಳಿಗೆ ಸಮರ್ಥವಾದ ಉತ್ತರವನ್ನು ಕೊಟ್ಟಿರುವುದನ್ನು ನೋಡಿದರೆ, ನಗರಸಭೆಯಲ್ಲಿರುವ ಕುಟುಂಬಗಳು ವಿದ್ಯಾವಂತರಾಗಿದ್ದರಿಂದ ನಗರ ಸ್ಥಳೀಯ ಸಂಸ್ಥೆಯ ವ್ಯವಸ್ಥೆಯನ್ನು ಅರ್ಥಮಾಡಿಕೊಳ್ಳಲು ಸಮರ್ಥರಾಗಿದ್ದಾರೆ. ಆದರೆ ಪಟ್ಟಣ ಪಂಚಾಯಿತಿಯ ಕುಟುಂಬಗಳು ಇಂತಹ ಜ್ಞಾನದ ಕೊರತೆಯಿರುವುದು ಅಧ್ಯಯನದಲ್ಲಿ ತಿಳಿದುಬರುತ್ತದೆ. ಅಂದಹಾಗೆ, ಇವರು ಹೆಚ್ಚು-ಹೆಚ್ಚಾಗಿ ವಾರ್ಡಿನ ಸಭೆ, ಚರ್ಚೆ, ಸಂಪರ್ಕ, ಆಡಳಿತದ ಬಗ್ಗೆ ಅರಿವುನ್ನು ಹೊಂದಲು ಶಿಕ್ಷಣದ ಅವಶ್ಯಕತೆ ಇದೆ ಎಂದು ಹೇಳಬಹುದು.

**ಕುಟುಂಬದ ಯಜಮಾನಿಕೆ**

| ಯಜಮಾನಿಕೆ | | ಕೂಡ್ಲಿಗಿ | | ಹೊಸಪೇಟೆ | |
|---|---|---|---|---|---|
| ಕುಟುಂಬದ ಯಜಮಾನಿಕೆ | ಪುರುಷರು | ೬೫ | ೮೧.೨೫ | ೧೧೪ | ೮೦.೦೦ |
| | ಮಹಿಳೆಯರು | ೧೫ | ೧೮.೭೫ | ೨೪ | ೨೦.೦೦ |
| | ಒಟ್ಟು | ೮೦ | ೧೦೦ | ೧೨೦ | ೧೦೦ |

ಮೂಲ: ಕ್ಷೇತ್ರ ಕಾರ್ಯದ ಮಾಹಿತಿ

ಕೂಡ್ಲಿಗಿ ಪಟ್ಟಣ ಪಂಚಾಯಿತಿಯಲ್ಲಿ ಶೇ.೮೧.೨೫ರಷ್ಟು ಪುರುಷ ಕುಟುಂಬದ ಯಜಮಾನಿಕೆಯನ್ನು ಮಾಡುತ್ತಿದ್ದು, ಉಳಿದ ಶೇ. ೧೮.೭೫ರಷ್ಟು ಮಹಿಳೆಯರು ಕುಟುಂಬದ ಯಜಮಾನಿಕೆಯನ್ನು ಮಾಡುತ್ತಿದ್ದಾರೆ ಎಂದು ಗೊತ್ತಾಗುತ್ತದೆ ಹಾಗೂ ಹೊಸಪೇಟೆ ನಗರಸಭೆಯಲ್ಲಿ ಶೇ. ೮೦ರಷ್ಟು ಪುರುಷರು ಕುಟುಂಬದ ಯಜಮಾನಿಕೆಯನ್ನು ಮಾಡುತ್ತಿದ್ದು, ಉಳಿದ ಶೇ. ೨೦ರಷ್ಟು ಮಹಿಳೆಯರು ತಮ್ಮ ಕುಟುಂಬದ ಯಜಮಾನಿಕೆಯನ್ನು ಮಾಡುತ್ತಿದ್ದಾರೆ ಎಂದು ತಿಳಿದುಬರುತ್ತದೆ. ತೀರಾ ಹಿಂದುಳಿದ ಕೂಡ್ಲಿಗಿ ಪಟ್ಟಣ ಪಂಚಾಯಿತಿಯಲ್ಲಿ ಮಹಿಳಾ ಕುಟುಂಬದವರಿಗಿಂತ ಸಾಪೇಕ್ಷವಾಗಿ ಮುಂದುವರಿದ ಹೊಸಪೇಟೆ ನಗರಸಭೆಯ ಮಹಿಳಾ ಕುಟುಂಬದವರು ಹೆಚ್ಚಾಗಿ ತಮ್ಮ ಕುಟುಂಬದ ಯಜಮಾನಿಕೆಯನ್ನು ಮಾಡುತ್ತಿರುವುದು ತಿಳಿದು ಬರುತ್ತದೆ. ನಗರಸಭೆಯಲ್ಲಿ ಮಹಿಳೆಯರ ಕುಟುಂಬ ನಿರ್ವಹಣೆಯನ್ನು ಸಮರ್ಥವಾಗಿ ನಡೆಸಿಕೊಂಡು ಹೋಗಲು ಹೆಚ್ಚಾಗಿ ಕಂಡು ಬಂದಿದೆ. ಪಟ್ಟಣ ಪಂಚಾಯಿತಿಯಲ್ಲಿ ಮಹಿಳೆಯರು ಅದರಲ್ಲಿ ವಿಫಲವಾಗಿ ಹೆಚ್ಚಿನ ರೀತಿಯಲ್ಲಿ ಸಮಾಜದಲ್ಲಿ ತೊಡಗಿಸಿಕೊಳ್ಳುವುದರಲ್ಲಿ ಸಫಲವಾಗದೆ ಇರುವುದು ಸಹ ಹಿಂದುಳಿಯಲಿಕ್ಕೆ ಒಂದು ಕಾರಣ ಎನ್ನಬಹುದು. ಹಾಗಾಗಿ ಮಹಿಳೆಯರು ಆರಂಭದಲ್ಲಿಯೇ ಹೆಚ್ಚಿನ ರೀತಿಯಲ್ಲಿ ತೀರ್ಮಾನಗಳನ್ನು ತೆಗೆದುಕೊಂಡಾಗ ಅವರು ಸ್ಥಳೀಯ ರಾಜಕೀಯದಲ್ಲಿ ಹೆಚ್ಚು ಹೆಚ್ಚು ಭಾಗವಹಿಸುವಂತೆ ಅವಕಾಶಗಳು ಸಿಗುತ್ತವೆ ಇಂತಹ ಬೆಳವಣಿಗೆಯಿಂದ ಸ್ಥಳೀಯ ಸಂಸ್ಥೆಗಳನ್ನು ಸಬಲೀಕರಣವನ್ನಾಗಿ ಮಾಡಬಹುದಾಗಿದೆ ಎಂದು ತಿಳಿಯಲಾಗಿದೆ.

**ಕುಟುಂಬಗಳ ಉದ್ಯೋಗದ ವಿವರ**

| ಉದ್ಯೋಗದ ವಿವರ | | ಕೂಡ್ಲಿಗಿ | | ಹೊಸಪೇಟೆ | |
|---|---|---|---|---|---|
| ಉದ್ಯೋಗ | ಕೂಲಿ | ೧೭ | ೨೧.೨೫ | ೧೬ | ೧೩.೩೩ |
| | ವ್ಯವಸಾಯ | ೧೪ | ೧೭.೫ | ೨೦ | ೧೬.೬೭ |
| | ಮನೆಗೆಲಸ | ೭ | ೮.೭೫ | ೦೯ | ೦೭.೦೫ |
| | ಸರ್ಕಾರಿ ಉದ್ಯೋಗ | ೧೨ | ೧೫.೦೦ | ೪೧ | ೩೪.೧೭ |
| | ಸಣ್ಣ ವ್ಯಾಪಾರ | ೨೭ | ೩೩.೭೫ | ೨೫ | ೨೦.೮೩ |
| | ಒಟ್ಟು | ೭೭ | ೯೬.೨೫ | ೧೨೦ | ೧೦೦ |

ಮೂಲ: ಕ್ಷೇತ್ರ ಕಾರ್ಯದ ಮಾಹಿತಿ

ಕೂಡ್ಲಿಗಿ ಪಟ್ಟಣ ಪಂಚಾಯಿತಿಯಲ್ಲಿ ಶೇ. ೨೧.೨೫ರಷ್ಟು ಕುಟುಂಬಗಳು ಕೂಲಿಯಿಂದ ತಮ್ಮ ಜೀವನ ಮಾಡುತ್ತಿದ್ದಾರೆ. ಅದೇ ಪ್ರಕಾರ ಶೇ. ೧೭.೫ರಷ್ಟು ಕುಟುಂಬಗಳು ವ್ಯವಸಾಯವನ್ನು ಆಧರಿಸಿದ್ದಾರೆ. ಶೇ. ೮.೭೫ ರಷ್ಟು ಕುಟುಂಬಗಳು ಮತ್ತೊಬ್ಬರ ಮನೆಗೆ ಹೋಗಿ ಮನೆಗೆಲಸವನ್ನು ಮಾಡಿಕೊಂಡು ಜೀವನ ನಡೆಸುತ್ತಿದ್ದಾರೆ. ಇತರೆ ಶೇ.೧೫ರಷ್ಟು ಕುಟುಂಬಗಳು ಸರ್ಕಾರಿ ಉದ್ಯೋಗದ ಮೇಲೆ ಆಧಾರಿತರಾಗಿದ್ದಾರೆ. ಉಳಿದ ಶೇ. ೩೩.೭೫ರಷ್ಟು ಕುಟುಂಬಗಳು ತಮ್ಮ ಜೀವನವನ್ನು ಸಣ್ಣ ವ್ಯಾಪಾರದ ಮೇಲೆ ಅವಲಂಬಿತರಾಗಿದ್ದಾರೆ ಹಾಗೂ ಹೊಸಪೇಟೆ ನಗರಸಭೆಯಲ್ಲಿ ಶೇ. ೧೩.೩೩ರಷ್ಟು ಕುಟುಂಬಗಳು ಕೂಲಿ ಮೇಲೆ ಆಧಾರಿತರಾಗಿದ್ದಾರೆ. ಅದೇ ಪ್ರಕಾರ ಶೇ. ೧೬.೬೭ರಷ್ಟು ಕುಟುಂಬಗಳು ತಮ್ಮ ಜೀವನವನ್ನು ವ್ಯವಸಾಯದಿಂದ ನಡೆಸಿಕೊಂಡು ಹೋಗುತ್ತಿದ್ದಾರೆ. ಹಾಗೆಯೇ ಶೇ. ೭.೦೫ರಷ್ಟು ಕುಟುಂಬಗಳು ಮನೆಗೆಲಸದ ಮೇಲೆ ಅವಲಂಬಿತರಾಗಿದ್ದಾರೆ. ಇತರ ಶೇ. ೩೪.೧೭ರಷ್ಟು ಕುಟುಂಬಗಳು ಸರ್ಕಾರಿ ಉದ್ಯೋಗದ ಮೇಲೆ ಆಧಾರಿತರಾಗಿದ್ದಾರೆ. ಉಳಿದ ಶೇ. ೨೦.೮೩ರಷ್ಟು ಕುಟುಂಬಗಳು ಸಣ್ಣ ವ್ಯಾಪಾರದಲ್ಲಿ ತಮ್ಮ ಜೀವನವನ್ನು ನಡೆಸಿಕೊಂಡು ಹೋಗುತ್ತಿರುವುದು ಅಧ್ಯಯದಿಂದ ತಿಳಿದು ಬರುತ್ತದೆ. ತೀರಾ ಹಿಂದುಳಿದ ಕೂಡ್ಲಿಗಿ ಪಟ್ಟಣ ಪಂಚಾಯಿತಿಯ ಕುಟುಂಬಗಳಲ್ಲಿ ಸರ್ಕಾರಿ ಉದ್ಯೋಗಕ್ಕಿಂತ ಸಾಪೇಕ್ಷ ಮುಂದುವರಿದ ಹೊಸಪೇಟೆ ನಗರಸಭೆಯ ಕುಟುಂಬಗಳಲ್ಲಿ ಸರ್ಕಾರಿ ಉದ್ಯೋಗಿಗಳ ಪ್ರಮಾಣ ಹೆಚ್ಚಾಗಿರುವುದು ಕಂಡುಬರುತ್ತದೆ. ಆದರೆ ಕೂಡ್ಲಿಗಿಯಲ್ಲಿ ಹೆಚ್ಚಿನ ಸಾಕ್ಷರತೆಯ ಕೊರತೆಯಿಂದ ಹೆಚ್ಚು-ಹೆಚ್ಚು ಸರ್ಕಾರದ ಹುದ್ದೆಗಳಲ್ಲಿ ಭಾಗವಹಿಸುವುದರಲ್ಲಿ ವಿಫಲವಾಗಿರುವುದರಿಂದ ಹಿಂದುಳಿದಿದೆ ಎನ್ನಬಹುದು. ಹೆಚ್ಚು ಅಭಿವೃದ್ಧಿಯನ್ನು ಕಾಣುವುದಕ್ಕೆ ಉದ್ಯೋಗದ ಅವಶ್ಯಕತೆಯು ಒಂದು. ಆದ್ದರಿಂದ ಹೆಚ್ಚು-ಹೆಚ್ಚು ಅಕ್ಷರವನ್ನು ಕಲಿಯುವುದರೊಂದಿಗೆ ಸರ್ಕಾರಿ ಉದ್ಯೋಗವನ್ನು ಪಡೆಯುವ ಅಗತ್ಯವಿದೆ ಎಂದು ಹೇಳಬಹುದಾಗಿದೆ.

**ವರಮಾನ(ಮಾಸಿಕ)**

| ಆದಾಯ | | ಕೂಡ್ಲಿಗಿ | | ಹೊಸಪೇಟೆ | |
|---|---|---|---|---|---|
| ವರಮಾನ | ೧೦೦೦-೫೦೦೦ | ೮ | ೧೦.೦೦ | ೧೫ | ೧೨.೫ |
| | ೫೦೦೧-೧೦೦೦೦ | ೩೩ | ೪೧.೨೫ | ೩೯ | ೩೨.೫ |
| | ೧೦೦೦೧-೨೦೦೦೦ | ೩೨ | ೪೦.೦೦ | ೪೯ | ೪೦.೮೩ |
| | ೨೦೦೦೧-೩೫೦೦೦ | ೬ | ೭.೫ | ೬ | ೫.೦೦ |
| | ೩೫೦೦೧ ಮೇಲ್ಪಟ್ಟು | ೧ | ೧.೨೫ | ೧೧ | ೯.೧೭ |
| | ಒಟ್ಟು | ೮೦ | ೧೦೦ | ೧೨೦ | ೧೦೦ |

ಮೂಲ: ಕ್ಷೇತ್ರ ಕಾರ್ಯದ ಮಾಹಿತಿ

ವರಮಾನದ ವಿವರ ಕುರಿತು ಕೂಡ್ಲಿಗಿ ಪಟ್ಟಣ ಪಂಚಾಯಿತಿಯಲ್ಲಿ ಶೇ. ೧೦ರಷ್ಟು ಕುಟುಂಬಗಳು ೧೦೦೦ರಿಂದ ೫೦೦೦ ವರಮಾನ ಹೊಂದಿದವರಾಗಿದ್ದಾರೆ. ಅದೇ ಪ್ರಕಾರ ಶೇ. ೪೧.೨೫ರಷ್ಟು ಕುಟುಂಬಗಳು ೫೦೦೧ರಿಂದ ೧೦೦೦೦ ವರಮಾನ ಹೊಂದಿದವರಾಗಿದ್ದಾರೆ. ಕೆಲವು ಶೇ. ೪೦ರಷ್ಟು ಕುಟುಂಬಗಳು ೧೦,೦೦೧ರಿಂದ ೨೦,೦೦೧ ವರಮಾನ ಮತ್ತು ಶೇ. ೭.೫೦ರಷ್ಟು ಕುಟುಂಬಗಳು ೨೦,೦೦೧ರಿಂದ ೩೫,೦೦೦ ವರಮಾನ ಹೊಂದಿದವರಾಗಿದ್ದಾರೆ. ಉಳಿದ ಶೇ. ೧.೨೫ರಷ್ಟು ಕುಟುಂಬಗಳು ೩೫,೦೦೦ ಮೇಲ್ಪಟ್ಟು ವರಮಾನ ಹೊಂದಿರುವವರಾಗಿದ್ದಾರೆ. ಹೊಸಪೇಟೆ ನಗರಸಭೆಯಲ್ಲಿ ಶೇ. ೧೨.೫೦ರಷ್ಟು ಕುಟುಂಬಗಳು ೧೦೦೦ರಿಂದ ೫೦೦೦ ವರಮಾನ, ಅದೇ ಪ್ರಕಾರ ಶೇ. ೩೨.೫೦ರಷ್ಟು ಕುಟುಂಬಗಳು ೫,೦೦೧ರಿಂದ ೧೦,೦೦೦ ವರಮಾನ, ಶೇ. ೪೦.೮೩ರಷ್ಟು ಕುಟುಂಬಗಳು ೧೦,೦೦೧ರಿಂದ ೨೦,೦೦೦ ವರಮಾನ ಹೊಂದಿದ್ದಾರೆ ಮತ್ತು ಶೇ. ೫ರಷ್ಟು ಕುಟುಂಬಗಳು ೨೦,೦೦೧ರಿಂದ ೩೫೦೦೦ ವರಮಾನ ಹೊಂದಿದ್ದಾರೆ. ಉಳಿದ ಶೇ. ೯.೧೭ರಷ್ಟು ಕುಟುಂಬಗಳು ೩೫,೦೦೦ರಷ್ಟು ವರಮಾನವನ್ನು ಹೊಂದಿರುವುದು ತಿಳಿದುಬರುತ್ತದೆ. ತೀರಾ ಹಿಂದುಳಿದ ಪಟ್ಟಣ ಪಂಚಾಯಿತಿಯ ಕುಟುಂಬಗಳಿಗಿಂತ ಸಾಪೇಕ್ಷವಾಗಿ ಮುಂದುವರಿದ ನಗರಸಭೆಯ ಕುಟುಂಬಗಳು ಹೆಚ್ಚಿನ ವರಮಾನ ಹೊಂದಿದವರ ಪ್ರಮಾಣ ಹೆಚ್ಚಾಗಿರುವುದು ಅಧ್ಯಯನದಿಂದ ಕಂಡು ಬಂದಿದೆ. ಆದರೆ ಕೂಡ್ಲಿಗಿಯಲ್ಲಿ ಆ ಪ್ರಮಾಣ ಕೆಳಮಟ್ಟದಾಗಿದೆ ಎಂದು ಹೇಳಬಹುದಾಗಿದೆ. ಇಲ್ಲಿ ಗಮನಿಸಬೇಕಾದ ಅಂಶವೆಂದರೆ ವರಮಾನದ ಏರಿಕೆಯಿಲ್ಲದೆ ಅಭಿವೃದ್ಧಿಯನ್ನು ಸಾಧಿಸುವುದು ಸಾಧ್ಯವಿಲ್ಲ. ಇದು ಇವೆರಡು ನಗರ ಸ್ಥಳೀಯ ಸಂಸ್ಥೆಗಳಿಗೆ ಅತ್ಯಂತ ಸೂಕ್ಷ್ಮವಾಗಿ ಅನ್ವಯವಾಗುತ್ತದೆ. ಹೆಚ್ಚು ವರಮಾನ ಹೊಂದುವುದರೊಂದಿಗೆ ಅಭಿವೃದ್ಧಿಯನ್ನು ಸಾಧಿಸಬಹುದಾಗಿದೆ. ಆದರೆ ಹೆಚ್ಚಿನ ವರಮಾನವಿಲ್ಲದೆ ಅಭಿವೃದ್ಧಿಯು ಸಾಧ್ಯವಿಲ್ಲ. ವರಮಾನವು ಅಭಿವೃದ್ಧಿಯ ಸಾಧನ. ಅದು ಅಭಿವೃದ್ಧಿಗೆ ಅಗತ್ಯ. ಉತ್ತಮ ಜೀವನ ನಿರ್ವಹಣೆಗಾಗಿ ವರಮಾನ ಅಗತ್ಯವಿದೆ ಎಂದು ಕಂಡುಬರುತ್ತದೆ. ಹಾಗಾಗಿ, ಹಿಂದುಳಿದ ಪಟ್ಟಣ ಪಂಚಾಯಿತಿಯು ವರಮಾನವನ್ನು ಹೆಚ್ಚಾಗಿ ವೃದ್ಧಿಸಿಕೊಳ್ಳುವುದರ ಮೂಲಕ ಅಭಿವೃದ್ಧಿ ಕಾಣುವ ಅಗತ್ಯವಿದೆ ಎಂದು ಹೇಳಬಹುದಾಗಿದೆ.

**ಕುಟುಂಬಗಳ ವಸತಿ ವಿವರ**

| ವಸತಿ ವಿವರ | | ಕೂಡ್ಲಿಗಿ | | ಹೊಸಪೇಟೆ | |
|---|---|---|---|---|---|
| ವಾಸಿಸುವ ಮನೆ | ಸ್ವಂತ | ೧೫ | ೧೮.೭೫ | ೯೩ | ೭೭.೫ |
| | ಬಾಡಿಗೆ | ೬೪ | ೮೦.೦೦ | ೨೨ | ೧೮.೩೩ |
| | ಯೋಜನೆ ಮನೆ | ೧ | ೧.೨೫ | ೫ | ೪.೧೭ |
| | ಒಟ್ಟು | ೮೦ | ೧೦೦ | ೧೨೦ | ೧೦೦ |

ಮೂಲ: ಕ್ಷೇತ್ರ ಕಾರ್ಯದ ಮಾಹಿತಿ

ನಗರವಾರು ಸಂದರ್ಶನದಲ್ಲಿ ಕೂಡ್ಲಿಗಿ ಪಟ್ಟಣ ಪಂಚಾಯಿತಿಯಲ್ಲಿ ಶೇ. ೧೮.೭೫ರಷ್ಟು ಕುಟುಂಬಗಳು ಸ್ವಂತ ಮನೆಯನ್ನು ಹೊಂದಿದವರಾಗಿದ್ದಾರೆ. ಅದೇ ಪ್ರಕಾರ ಶೇ. ೮೦ರಷ್ಟು ಕುಟುಂಬಗಳು ಬಾಡಿಗೆ ಮನೆಯಲ್ಲಿ ವಾಸಿಸುತ್ತಿದ್ದೇವೆ ಎಂದು ತಿಳಿಸಿದರು. ಉಳಿದ ಶೇ. ೧.೨೫ರಷ್ಟು

ಕುಟುಂಬಗಳು ಯೋಜನೆಯಡಿಯಲ್ಲಿ ಮನೆಯನ್ನು ನಿರ್ಮಿಸಿಕೊಂಡು ವಾಸ ಮಾಡುವುದಾಗಿದೆ ಎಂದು ಹೇಳಿಕೊಂಡಿದ್ದಾರೆ. ಹಾಗೂ ಹೊಸಪೇಟೆ ನಗರಸಭೆಯಲ್ಲಿ ಶೇ. ೭೭.೫೦ರಷ್ಟು ಕುಟುಂಬಗಳು ಸ್ವಂತ ಮನೆಯನ್ನು ಹೊಂದಿರುವುದು ಕಂಡುಬಂದಿದೆ. ಅದೇ ಪ್ರಕಾರ ಶೇ. ೧೮.೩೩ರಷ್ಟು ಕುಟುಂಬಗಳು ಬಾಡಿಗೆ ಮನೆಯನ್ನು ಅವಲಂಬಿಸಿರುವುದು ತಿಳಿದುಬಂದಿತು. ಉಳಿದ ಶೇ. ೪.೧೭ರಷ್ಟು ಕುಟುಂಬಗಳು ಸ್ವಂತ ಮನೆಯಿಲ್ಲದೆ ಯೋಜನೆಯ ಮನೆ ಮೇಲೆ ಅವಲಂಬಿಸಿರುವುದು ಕಂಡುಬಂದಿತು. ಪಟ್ಟಣ ಪಂಚಾಯಿತಿಯ ಕುಟುಂಬಗಳಿಗಿಂತ ಹೊಸಪೇಟೆ ನಗರಸಭೆಯ ಕುಟುಂಬಗಳು ಸ್ವಂತ ಮನೆಯನ್ನು ಕಟ್ಟಿಸಿಕೊಂಡು ಮತ್ತೊಬ್ಬರನ್ನು ಅವಲಂಬಿಸದೇ ವಾಸ ಮಾಡುವವರು ಹೆಚ್ಚಿನ ಪ್ರಮಾಣದಲ್ಲಿ ಇರುವುದು ತಿಳಿದುಬರುತ್ತದೆ. ಆದರೆ, ಪಟ್ಟಣ ಪಂಚಾಯಿತಿಯಲ್ಲಿ ಸ್ವಂತ ಮನೆಯನ್ನು ಕಟ್ಟಿಸಿಕೊಳ್ಳಲು ಆಗದೆ ಹೆಚ್ಚಿನ ಪ್ರಮಾಣದ ಜನರು ಮತ್ತೊಬ್ಬರ ಮನೆಯಲ್ಲಿ (ಬಾಡಿಗೆ) ವಾಸಿಸುವುದು ಕಂಡುಬರುತ್ತದೆ. ಈ ಅಂಶದಿಂದ ತಿಳಿದುಬರುವ ಸಂಗತಿಯೆಂದರೆ ಸಾಪೇಕ್ಷವಾಗಿ ಮುಂದುವರಿದ ಹೊಸಪೇಟೆ ನಗರಸಭೆ ಕುಟುಂಬಗಳಲ್ಲಿ ವರಮಾನ ಮಟ್ಟ ಉತ್ತಮವಾಗಿದ್ದು, ಆ ವರಮಾನದಿಂದ ಮೂಲಭೂತ ಸೌಕರ್ಯಗಳಾದ ವಸತಿಯನ್ನು ನಿರ್ಮಿಸಿಕೊಳ್ಳುವುದರ ಜೊತೆಗೆ ಜನರ ಬದುಕನ್ನು ಸಮೃದ್ಧಗೊಳಿಸುವಲ್ಲಿ ಯಶಸ್ವಿಯಾಗಿರುವುದು ತಿಳಿದುಬರುತ್ತದೆ. ಅದೇ ಪ್ರಕಾರ ಹಿಂದುಳಿದ ಪಟ್ಟಣ ಪಂಚಾಯಿತಿಯಲ್ಲಿ ವರಮಾನ ಮಟ್ಟ ಶೋಚನೀಯವಾಗಿದ್ದು, ಸರ್ಕಾರ ನೀಡುವ ಯೋಜನಾಧಾರಿತ ವಸತಿಗಳನ್ನು ಪಡೆಯುವುದರಲ್ಲಿಯೂ ವಸತಿರಹಿತರು ಪಡೆಯುವುದರಲ್ಲಿ ವಿಫಲಗೊಂಡಿರುವುದು ಅಧ್ಯಯನದಿಂದ ತಿಳಿದು ಬರುತ್ತದೆ. ಹಿಂದುಳಿದ ಪಟ್ಟಣ ಪಂಚಾಯಿತಿಯು ಕನಿಷ್ಠ ಮೂಲಭೂತ ಸೌಲಭ್ಯವನ್ನು ಪಡೆಯದೆ ಜನರ ಜೀವನ ಮಟ್ಟವನ್ನು ಸುಧಾರಿಸುವಲ್ಲಿ ವಿಫಲಗೊಂಡಿದ್ದು, ಹಿಂದುಳಿದಿದೆ ಎನ್ನಬಹುದಾಗಿದೆ. ಈ ಸ್ಥಳೀಯ ಸಂಸ್ಥೆಯ ಚುನಾಯಿತ ಸದಸ್ಯರು ಸರಿಯಾದ ರೀತಿಯಲ್ಲಿ ಪರಿಗಣಿಸಿ ರಾಜ್ಯ ಸರ್ಕಾರಕ್ಕೆ ಬೆಂಬಲಿಸುವುದರೊಂದಿಗೆ ವಿಶೇಷವೆಂದು ಪರಿಗಣಿಸಿ ವಸತಿರಹಿತರಿಗೆ ಅಗತ್ಯ ಕ್ರಮಗಳನ್ನು ತೆಗೆದುಕೊಳ್ಳುವುದರೊಂದಿಗೆ ಜನರ ಉತ್ತಮ ಬದುಕನ್ನು ರೂಪಿಸುವುದರ ಮೂಲಕ ಸ್ಥಳೀಯ ಸಂಸ್ಥೆಯನ್ನು ಅಭಿವೃದ್ಧಿಯನ್ನು ಮಾಡುವ ಅವಶ್ಯಕತೆ ಇದೆ ಎಂದು ಹೇಳಬಹುದಾಗಿದೆ.

**ಕುಟುಂಬದ ಭೂಮಿ ವಿವರ**

| ಭೂಮಿ ವಿವರ | | ಕೂಡ್ಲಿಗಿ | | ಹೊಸಪೇಟೆ | |
|---|---|---|---|---|---|
| ಕುಟುಂಬದ ಭೂಮಿ ವಿವರ | ೦-೧ | ೮ | ೧೦.೦೦ | ೧೫ | ೧೨.೫ |
| | ೨-೪ | ೨೯ | ೩೬.೨೫ | ೨೩ | ೧೯.೧೭ |
| | ೫-೧೦ | ೪ | ೫.೦೦ | ೭೪ | ೬೧.೬೭ |
| | ಇಲ್ಲ | ೩೯ | ೪೮.೭೫ | ೮ | ೬.೬೭ |
| | ಒಟ್ಟು | ೮೦ | ೧೦೦ | ೧೨೦ | ೧೦೦ |

**ಮೂಲ: ಕ್ಷೇತ್ರ ಕಾರ್ಯದ ಮಾಹಿತಿ**

ನಗರವಾರು ಅಧ್ಯಯನದಲ್ಲಿ ಕೂಡ್ಲಿಗಿ ಪಟ್ಟಣ ಪಂಚಾಯಿತಿಯಲ್ಲಿ ಶೇ. ೧೦ರಷ್ಟು ಕುಟುಂಬಗಳು ೦-೧ ಎಕರೆ ಭೂಮಿಯನ್ನು ಹೊಂದಿರುತ್ತಾರೆ. ಅದೇ ಪ್ರಕಾರ ಶೇ. ೩೬.೨೫ರಷ್ಟು ಕುಟುಂಬಗಳು ೨ರಿಂದ ೪ ಎಕರೆ ಭೂಮಿಯನ್ನು ಹೊಂದಿದ್ದಾರೆ. ಇತರೆ ಶೇ. ೫ರಷ್ಟು ಕುಟುಂಬಗಳು ೫ರಿಂದ

೧೦ ಎಕರೆ ಭೂಮಿಯನ್ನು ಹೊಂದಿರುವುದು ತಿಳಿದುಬಂದಿತು. ಉಳಿದ ಶೇ. ೪೮.೭೫ರಷ್ಟು ಕುಟುಂಬಗಳು ತಮ್ಮ ಜೀವನ ನಿರ್ವಹಣೆಗಾಗಿ ಯಾವುದೇ ಭೂಮಿಯ ಪ್ರಮಾಣವನ್ನು ಹೊಂದದೆ ಮತ್ತೊಬ್ಬರ ಮೇಲೆ ಅವಲಂಬಿತರಾಗಿರುವುದು ತಿಳಿದುಬಂದಿತು. ಹಾಗೂ ಹೊಸಪೇಟೆ ನಗರಸಭೆಯಲ್ಲಿ ಶೇ. ೧೨.೫೦ರಷ್ಟು ಕುಟುಂಬಗಳು ಕೇವಲ ೧ ಎಕರೆ ಭೂಮಿಯನ್ನು ಹೊಂದಿದ್ದಾರೆ. ಅದೇ ಪ್ರಕಾರ ಶೇ. ೧೯.೧೭ರಷ್ಟು ಕುಟುಂಬಗಳು ೨ರಿಂದ ೪ ಎಕರೆ ಭೂಮಿಯ ಮೇಲೆ ಅವಲಂಬಿತರಾಗಿದ್ದಾರೆ. ಇತರ ಶೇ. ೬೧.೬೭ರಷ್ಟು ಕುಟುಂಬಗಳು ೫ರಿಂದ ೧೦ ಎಕರೆ ಭೂಮಿಯನ್ನು ಹೊಂದಿರುವುದು ತಿಳಿದುಬಂದಿತು. ಉಳಿದ ಶೇ. ೬.೬೭ರಷ್ಟು ಕುಟುಂಬಗಳು ಯಾವುದೇ ಭೂಮಿಯ ಪ್ರಮಾಣ ಇರದಿರುವುದು ಅಧ್ಯಯನದಿಂದ ತಿಳಿದು ಬಂದಿದೆ. ಒಟ್ಟಾರೆ ತೀರಾ ಹಿಂದುಳಿದ ಕೂಡ್ಲಿಗಿ ಪಟ್ಟಣ ಪಂಚಾಯಿತಿಯ ಕುಟುಂಬಗಳಿಗಿಂತ ಸಾಪೇಕ್ಷವಾಗಿ ಮುಂದುವರಿದ ಹೊಸಪೇಟೆ ನಗರಸಭೆಯ ಕುಟುಂಬಗಳು ಹೆಚ್ಚಿನ ಸಂಖ್ಯೆಯಲ್ಲಿ ಭೂಮಿಯನ್ನು ಹೊಂದಿರುವುದು ತಿಳಿದುಬರುತ್ತದೆ. ಹೊಸಪೇಟೆಯಲ್ಲಿ ಕೃಷಿ ಅವಲಂಬನೆ ಸಾಪೇಕ್ಷವಾಗಿ ಅಧಿಕವಾಗಿದೆ. ಕೂಡ್ಲಿಗಿಯಲ್ಲಿ ಕೃಷಿ ಅವಲಂಬಿತರಲ್ಲಿ ಭೂರಹಿತ ಕೂಲಿಕಾರರ ಪ್ರಮಾಣ ಅಧಿಕವಾಗಿದೆ. ಹೊಸಪೇಟೆಯಲ್ಲಿ ಶೇ. ೬.೬೭ರಷ್ಟಿದ್ದರೆ ಕೂಡ್ಲಿಗಿ ಪಟ್ಟಣ ಪಂಚಾಯಿತಿಯಲ್ಲಿ ಅದರ ಪ್ರಮಾಣ ಶೇ. ೪೮.೭೫ರಷ್ಟಿದೆ. ಈ ಹೆಚ್ಚಿನ ಪ್ರಮಾಣವನ್ನು ಬಡತನಕ್ಕೆ ಕಾರಣವೆಂದು ತಿಳಿದುಕೊಳ್ಳಬಹುದು. ಈ ರೀತಿಯಾಗಿ ಭೂರಹಿತ ಕೂಲಿಕಾರರು ತಮ್ಮ ಹಸಿವನ್ನು ನೀಗಿಸಿಕೊಳ್ಳಲು ಕೂಲಿ ಮಾಡುತ್ತಿದ್ದಾರೆ. ಸಾಮಾನ್ಯವಾಗಿ ಭೂರಹಿತ ಕೂಲಿಕಾರರಲ್ಲಿ ಮಹಿಳೆಯರ ಪಾತ್ರ ಹೆಚ್ಚಿರುವುದು ಅಧ್ಯಯನದಲ್ಲಿ ತಿಳಿದುಬಂದಿದೆ. ಇದು ಬಡತನದ ತೀವ್ರತೆಯನ್ನು ಸೂಚಿಸುತ್ತದೆ. ಇದರಿಂದ ಕೂಡ್ಲಿಗಿಯಲ್ಲಿ ಹೆಚ್ಚಿನ ಪ್ರಮಾಣದಲ್ಲಿರುವುದರಿಂದ ಹಿಂದುಳಿಯಲು ಕಾರಣವಾಗಿದೆ ಎನ್ನಬಹುದು. ಇದರಿಂದ ತಿಳಿದುಬರುವ ಸಂಗತಿಯೆಂದರೆ ಮುಂದುವರಿದ ಹೊಸಪೇಟೆಯಲ್ಲಿ ನೀರಾವರಿ ಪ್ರದೇಶವನ್ನು ಹೊಂದಿದ್ದು ಸ್ವಂತಃ ಕೃಷಿಯಲ್ಲಿ ನಿರತರಾಗಿ ವರಮಾನದಿಂದ ಜನರ ಬದುಕು ಸಮೃದ್ಧವಾಗುತ್ತಿರುವುದು ತೀವ್ರಗತಿಯಲ್ಲಿದ್ದರೆ ಹಿಂದುಳಿದ ಕೂಡ್ಲಿಗಿ ಪಟ್ಟಣ ಪಂಚಾಯಿತಿಯಲ್ಲಿ ಒಣಭೂಮಿಯನ್ನು ಹೆಚ್ಚಿನ ಪ್ರಮಾಣದಲ್ಲಿದ್ದು ಭೂರಹಿತರೆ ಹೆಚ್ಚಾಗಿರುವುದರಿಂದ ತಮ್ಮ ಜೀವನವನ್ನು ಸಾಗಿಸಲು ಕೂಲಿಯನ್ನು ಆಶ್ರಯಿಸಿರುವುದರಿಂದ ಉತ್ತಮ ಜೀವನದಿಂದ ವಂಚಿತರಾಗಿದ್ದರಿಂದ ಹಿಂದುಳಿಯಲಿಕ್ಕೆ ಕಾರಣವಾಗಿದೆ ಎಂದು ಹೇಳಬಹುದಾಗಿದೆ. ಈ ಹಿನ್ನೆಲೆಯಲ್ಲಿ ನಗರ ಸ್ಥಳೀಯ ಸಂಸ್ಥೆಗಳ ಮೂಲಕ ಹಿಂದುಳಿದ ಪಟ್ಟಣ ಪಂಚಾಯಿತಿಯ ವಾರ್ಡಿನ ಅಭಿವೃದ್ಧಿಯನ್ನು ಮಾಡುವ ಅಗತ್ಯವಿದೆ ಎಂದು ತಿಳಿದುಕೊಳ್ಳಲಾಗಿದೆ.

**೫.೨. ನಗರವಾರು ಸಂದರ್ಶನ ಮಾಡಿದ ಕುಟುಂಬಗಳ ಅರಿವು ಮತ್ತು ಭಾಗವಹಿಸುವಿಕೆ ಚುನಾಯಿತಗೊಂಡವರ ಕುರಿತು**

| ಅರಿವು ಮತ್ತು ಭಾಗವಹಿಸುವಿಕೆ | ವಿವರಗಳು | ಕೂಡ್ಲಿಗಿ ಪಟ್ಟಣ ಕುಟುಂಬಗಳು | ಪಂಚಾಯಿತಿ ಶೇಕಡವಾರು | ಹೊಸಪೇಟೆ ಕುಟುಂಬಗಳು | ನಗರ ಸಭೆ ಶೇಕಡವಾರು |
|---|---|---|---|---|---|
| ಈಗ ಯಾರು ಚುನಾಯಿತರಾಗಿದ್ದಾರೆ | ಗೊತ್ತಿದೆ | ೩೫ | ೪೩.೭೫ | ೭೭ | ೬೪.೧೭ |
| | ಗೊತ್ತಿಲ್ಲಾ | ೪೫ | ೫೬.೨೫ | ೪೩ | ೩೫.೮೩ |
| | ಒಟ್ಟು | ೮೦ | ೧೦೦ | ೧೨೦ | ೧೦೦ |

**ಮೂಲ: ಕ್ಷೇತ್ರ ಕಾರ್ಯದ ಮಾಹಿತಿ**

ನಗರವಾರು ಚುನಾಯಿತರಾದವರ ವಿವರಗಳನ್ನು ತೋರಿಸಲಾಗಿದೆ. ಕೂಡ್ಲಿಗಿ ಪಟ್ಟಣ ಪಂಚಾಯಿತಿಯಲ್ಲಿ ಶೇ. ೪೩.೭೫ರಷ್ಟು ಕುಟುಂಬಗಳು ಯಾರು ಚುನಾಯಿತರಾಗಿದ್ದಾರೆ ಎಂಬುದರ ಬಗ್ಗೆ ಅರಿವನ್ನು ಹೊಂದಿ ರಾಜಕೀಯದಲ್ಲಿ ಭಾಗವಹಿಸುವುದು ತಿಳಿದುಬಂದಿದೆ. ಅದೇ ಪ್ರಕಾರ ಉಳಿದ ಶೇ. ೫೬.೨೫ರಷ್ಟು ಕುಟುಂಬಗಳಿಗೆ ಯಾರು ಚುನಾಯಿತರಾಗಿದ್ದಾರೆ ಎಂಬುದು ಅವರಿಗೆ ತಿಳಿಯದೇ ಅರಿವಿನ ಕೊರತೆ ಇರುವುದು ಕಂಡುಬಂದಿತು ಹಾಗೂ ಹೊಸಪೇಟೆ ನಗರಸಭೆಯಲ್ಲಿ ಶೇ. ೬೪.೧೭ರಷ್ಟು ಕುಟುಂಬಗಳು ಚುನಾಯಿತರಾದವರ ಬಗ್ಗೆ ಅರಿವನ್ನು ಹೊಂದಿದ್ದಾರೆ. ಅದೇ ಪ್ರಕಾರ ಉಳಿದ ಶೇ. ೩೫.೮೩ರಷ್ಟು ಕುಟುಂಬಗಳಲ್ಲಿ ಅರಿವಿನ ಕೊರತೆ ಸಾಪೇಕ್ಷವಾಗಿ ತಿಳಿದುಬಂದಿತು. ಒಟ್ಟಾರೆ ತೀರಾ ಹಿಂದುಳಿದ ಕೂಡ್ಲಿಗಿ ಪಟ್ಟಣ ಪಂಚಾಯಿತಿಯ ಕುಟುಂಬಗಳಿಗಿಂತ ಸಾಪೇಕ್ಷವಾಗಿ ಮುಂದುವರಿದ ಹೊಸಪೇಟೆ ನಗರದ ಕುಟುಂಬಗಳಿಗೆ ಹೆಚ್ಚಿನ ಪ್ರಮಾಣದಲ್ಲಿ ಚುನಾಯಿತರಾಗಿರುವುದರ ಬಗ್ಗೆ ಅರಿವು ಹೊಂದುವುದರ ಜೊತೆಗೆ ರಾಜಕೀಯದಲ್ಲಿ ಭಾಗವಹಿಸುತ್ತಿರುವುದು ತಿಳಿದುಬಂದಿದೆ. ಈ ಅಂಶದಿಂದ ತಿಳಿದುಬರುವ ಸಂಗತಿಯೆಂದರೆ ಚುನಾಯಿತಗೊಂಡಿರುವವರ ಬಗ್ಗೆ ಅರಿವು ಮತ್ತು ಭಾಗವಹಿಸುವಿಕೆಯಲ್ಲಿ ತೀರಾ ಹಿಂದುಳಿದ ಕೂಡ್ಲಿಗಿ ಪಟ್ಟಣ ಪಂಚಾಯಿತಿಯ ಕುಟುಂಬಗಳಿಗಿಂತ ಮುಂದುವರಿದ ಹೊಸಪೇಟೆ ನಗರಸಭೆಯ ಕುಟುಂಬಗಳು ಹೆಚ್ಚಿನ ಪ್ರಮಾಣದಲ್ಲಿ ಇರುವುದು ತಿಳಿದುಬರುತ್ತದೆ. ಅಂದರೆ, ಹೆಚ್ಚಿನ ಜನರು ಹಿಂದುಳಿದ ಪಟ್ಟಣ ಪಂಚಾಯಿತಿಯಲ್ಲಿ ಕೃಷಿ ಅವಲಂಬನೆ, ಕೂಲಿ ಕಾರ್ಮಿಕರು, ಅಕ್ಷರದಿಂದ ವಂಚಿತರಾದವರು ಹೆಚ್ಚಿನ ಪ್ರಮಾಣದಲ್ಲಿರುವುದರಿಂದ ಅವರಿಗೆ ಮತದಾನದ ಸಮಯ ಬಂದಾಗ ಹೋಗಿ ಮತವನ್ನು ಚಲಾಯಿಸಿ ಬರುತ್ತೇವೆ. ಮತ್ತೆ ಯಾವ ಸಮಯದಲ್ಲಿ ನಮಗೆ ಪ್ರತಿನಿಧಿಗಳ ಬಗ್ಗೆ ಹೆಚ್ಚಿನ ಮಾಹಿತಿ ದೊರೆಯುವುದಿಲ್ಲ. ಇದರಿಂದ ಈ ಸ್ಥಳೀಯ ಸಂಸ್ಥೆಯ ಜನರು ನಗರದಲ್ಲಿ ಇಂತಹ ವರ್ಗದ ಜನ ತೀವ್ರ ತಾರತಮ್ಯ ಎದುರಿಸುತ್ತಿರುವುದು ತಿಳಿದುಬಂದಿದೆ. ಹಾಗಾಗಿ, ಇಂತಹ ಸವಾಲುಗಳಿಂದ ವಾರ್ಡು ಅಭಿವೃದ್ಧಿಯಾಗದೆ ಹಿಂದುಳಿದಿದೆ ಎಂದು ತಿಳಿಯಬೇಕಾಗಿದೆ. ಆದ್ದರಿಂದ ಹಿಂದುಳಿದ ಪಟ್ಟಣ ಪಂಚಾಯಿತಿಯ ಚುನಾಯಿತ ಸದಸ್ಯರು ವಾರ್ಡಿನ ಜನರಿಗೆ ಹೆಚ್ಚಿನ ರೀತಿಯಲ್ಲಿ ಸ್ಥಳೀಯ ರಾಜಕೀಯದ ಬಗ್ಗೆ ಅರಿವು ಮೂಡುಸುವುದರ ಜೊತೆಗೆ ಅಭಿವೃದ್ಧಿಯಲ್ಲಿ ಭಾಗವಹಿಸುವಂತಹ ತರಬೇತಿಯನ್ನು ನೀಡುವಂತಹ ಅಗತ್ಯವಿದೆ ಎಂದು ಹೇಳಬಹುದಾಗಿದೆ.

**ನಿಮಗೆ ರಾಜಕೀಯ ನಾಯಕನ ಸಂಪರ್ಕದ ವಿವರ**

| ನಿಮಗೆ ರಾಜಕೀಯ ನಾಯಕನ ಸಂಪರ್ಕದ ಇದಿಯಾ | | ಕೂಡ್ಲಿಗಿ | | ಹೊಸಪೇಟೆ | |
|---|---|---|---|---|---|
| | ಇದೆ | ೩೪ | ೪೨.೫ | ೭೩ | ೬೦.೮೩ |
| | ಇಲ್ಲ | ೪೬ | ೫೭.೫ | ೪೭ | ೩೯.೧೭ |
| | **ಒಟ್ಟು** | ೮೦ | ೧೦೦ | ೧೨೦ | ೧೦೦ |

ನಗರವಾರು ಅಧ್ಯನದಲ್ಲಿ ಕೂಡ್ಲಿಗಿ ಪಟ್ಟಣ ಪಂಚಾಯಿತಿಯಲ್ಲಿ ಶೇ. ೪೨.೫ರಷ್ಟು ಕುಟುಂಬಗಳು ಸ್ಥಳೀಯ ರಾಜಕೀಯ ನಾಯಕನ ಸಂಪರ್ಕವನ್ನು ಹೊಂದಿರುವುದು ತಿಳಿಸಿರುತ್ತಾರೆ. ಅದೇ ಪ್ರಕಾರ ಉಳಿದ ಶೇ. ೫೭.೫ರಷ್ಟು ಕುಟುಂಬಗಳು ಯಾವ ರಾಜಕೀಯ ನಾಯಕನ ಸಂಪರ್ಕವಿಲ್ಲದಿರುವುದು

ತಿಳಿದುಬಂದಿತು. ಹಾಗೂ ಹೊಸಪೇಟೆ ನಗರಸಭೆಯಲ್ಲಿ ಶೇ. ೬೦.೮೩ರಷ್ಟು ಕುಟುಂಬಗಳು ತಕ್ಕಮಟ್ಟಿನಲ್ಲಿ ಸ್ಥಳೀಯ ರಾಜಕೀಯ ನಾಯಕನ ಸಂಪರ್ಕವಿರುವುದು ತಿಳಿಸಿರುತ್ತಾರೆ. ಅದರಂತೆ ಹೊಸಪೇಟೆ ನಗರಸಭೆ ಕುಟುಂಬಗಳು ಶೇ. ೩೯.೧೭ರಷ್ಟು ಕುಟುಂಬಗಳು ರಾಜಕೀಯ ನಾಯಕನ ಸಂಪರ್ಕವಿಲ್ಲದಿರುವುದಾಗಿ ಹೇಳಿಕೊಂಡಿರುತ್ತಾರೆ. ಒಟ್ಟಾರೆಯಾಗಿ ತೀರಾ ಹಿಂದುಳಿದ ಕೂಡ್ಲಿಗಿ ಪಟ್ಟಣ ಪಂಚಾಯಿತಿಯಲ್ಲಿನ ಕುಟುಂಬಗಳಿಗಿಂತ ಸಾಪೇಕ್ಷವಾಗಿ ಮುಂದುವರಿದ ಹೊಸಪೇಟೆ ನಗರಸಭೆಯಲ್ಲಿನ ಕುಟುಂಬಗಳು ಹೆಚ್ಚಿನ ಪ್ರಮಾಣದಲ್ಲಿ ಸ್ಥಳೀಯ ರಾಜಕೀಯ ನಾಯಕನ ಸಂಪರ್ಕವನ್ನು ಹೊಂದಿದವರಾಗಿದ್ದಾರೆ. ಕೂಡ್ಲಿಗಿಯಲ್ಲಿ ತೀರಾ ಹಿಂದುಳಿಯಲು ಕಾರಣವೆಂದರೆ ಶಿಕ್ಷಣದಿಂದ ವಂಚಿತರಾಗಿದ್ದುಕೊಂಡು ಕೃಷಿಯ ಮೇಲೆ ಅವಲಂಬೆಯಾಗಿದ್ದು ಅವರಿಗೆ ತಮ್ಮ ಜೀವನವನ್ನು ನಿರ್ವಹಣೆ ನಡಸಲಿಕ್ಕೆ ಕೂಲಿಯಾಳುಗಳಾಗಿ ಮತ್ತೂಬ್ಬರ ಮೇಲೆ ಅವಲಂಬನೆಯಾಗಿ ದುಡಿಯುವಲ್ಲೇ ಹೆಚ್ಚಿನ ಪ್ರಮಾಣದಲ್ಲಿ ಸಮಯ ವ್ಯಯಮಾಡುವುದರಿಂದ ನಾಯಕನ ಸಂಪರ್ಕ ಇಲ್ಲದಿರುವುದರಿಂದ ಸ್ಥಳೀಯ ರಾಜಕೀಯ ನಾಯಕನ ಮತ್ತು ನಗರ ಕುಟುಂಬಗಳ ನಡುವೆ ಹೆಚ್ಚಿನ ಪ್ರಮಾಣದಲ್ಲಿ ಸಂಪರ್ಕದ ಅಂತರವಿರುವುದರಿಂದ ನಗರವು ಹಿಂದುಳಿಯಲಿಕ್ಕೆ ಕಾರಣವೆಂದು ಹೇಳಬಹುದಾಗಿದೆ. ಸರ್ಕಾರವು ಸ್ಥಳೀಯ ಚುನಾಯಿತ ಪ್ರತಿನಿಧಿಗಳಿಗೆ ನಿಯಮಿತವಾಗಿ ಹಾಗಾಗ ವಾರ್ಡುಗಳಿಗೆ ಭೇಟಿ ನೀಡುತ್ತಾ ವಾರ್ಡಿನ ಜನರೊಂದಿಗೆ ಪಾಲ್ಗೊಂಡು ಅವರ ಸಮಸ್ಯೆಗಳನ್ನು ಅರಿವುವ ಮೂಲಕ ಹಿಂದುಳಿದ ಪಟ್ಟಣ ಪಂಚಾಯಿತಿಯನ್ನು ಅಭಿವೃದ್ಧಿಗೊಳಿಸುವಂತಹ ಇಚ್ಚಾಶಕ್ತಿಯನ್ನು ಹೊಂದಿ ಹೆಚ್ಚು-ಹೆಚ್ಚು ಸ್ಥಳೀಯ ಅಭಿವೃದ್ಧಿಗೆ ಪೂರಕವಾದ ಉತ್ತಮ ಕಾರ್ಯಕ್ರಮಗಳನ್ನು ಹಾಕಿಕೊಳ್ಳುವುದರ ಮೂಲಕ ಸ್ಥಳೀಯ ಸಂಸ್ಥೆಯಲ್ಲಿ ಭಾಗವಹಿಸುವ ಅವಶ್ಯಕತೆಯಿದೆ ಎಂದು ಹೇಳಬಹುದಾಗಿದೆ.

**ನಿಮ್ಮ ರಾಜಕೀಯ ಪ್ರತಿನಿಧಿ ವಾರ್ಡ್‌ಗೆ ಭೇಟಿ ನೀಡುವುದರ ಹಿನ್ನೆಲೆ**

| **ವಾರ್ಡಿಗೆ ಭೇಟಿ ನೀಡುವುದರ ಕುರಿತು** | | **ಕೂಡ್ಲಿಗಿ** | | **ಹೊಸಪೇಟೆ** | |
|---|---|---|---|---|---|
| ನಿಮ್ಮ ರಾಜಕೀಯ ಪ್ರತಿನಿದಿ ವಾರ್ಡಗೆ ಭೇಟಿ ನೀಡುತ್ತಾರೆಯೇ | ನೀಡುತ್ತಾನೆ | ೨೪ | ೩೦.೦೦ | ೬೯ | ೫೭.೫ |
| | ನೀಡಲ್ಲ | ೫೬ | ೭೦.೦೦ | ೫೧ | ೪೨.೫ |
| | **ಒಟ್ಟು** | ೮೦ | ೧೦೦ | ೧೨೦ | ೧೦೦ |

**ಮೂಲ: ಕ್ಷೇತ್ರ ಕಾರ್ಯದ ಮಾಹಿತಿ**

ಚುನಾಯಿತ ಪ್ರತಿನಿಧಿಯು ವಾರ್ಡ್‌ಗೆ ಭೇಟಿ ನೀಡುವ ಕುರಿತ ವಿವರಗಳನ್ನು ತೋರಿಸಲಾಗಿದೆ. ಕೂಡ್ಲಿಗಿ ಪಟ್ಟಣ ಪಂಚಾಯಿತಿಯಲ್ಲಿ ಶೇ. ೩೦ರಷ್ಟು ಕುಟುಂಬಗಳು ಪ್ರತಿನಿಧಿಯು ವಾರ್ಡ್‌ಗೆ ಭೇಟಿ ನೀಡುತ್ತಾರೆ ಎಂದು ತಿಳಿಸಿರುವರು. ಉಳಿದ ಶೇ. ೭೦ರಷ್ಟು ಕುಟುಂಬಗಳು ವಾರ್ಡ್‌ಗೆ ಪ್ರತಿನಿಧಿಗಳು ಭೇಟಿ ನೀಡುವುದಿಲ್ಲ ಎಂದು ಹೇಳಿಕೊಂಡಿರುತ್ತಾರೆ. ಹಾಗೂ ಹೊಸಪೇಟೆ ನಗರಸಭೆಯಲ್ಲಿ ಶೇ. ೫೭.೫೦ರಷ್ಟು ಕುಟುಂಬಗಳು ಪ್ರತಿನಿಧಿಗಳು ವಾರ್ಡ್‌ಗೆ ಭೇಟಿ ನೀಡುತ್ತಾರೆ ಎಂದು ಹೇಳಿಕೊಂಡಿದ್ದಾರೆ. ಉಳಿದ ಶೇ. ೪೨.೫೦ರಷ್ಟು ಕುಟುಂಬಗಳ ಪ್ರಕಾರ ಪ್ರತಿನಿಧಿಗಳು ವಾರ್ಡಿಗೆ ಭೇಟಿ ನೀಡುವುದಿಲ್ಲ ಎಂದಿರುತ್ತಾರೆ. ಒಟ್ಟಾರೆಯಾಗಿ ತೀರಾ ಹಿಂದುಳಿದ ಕೂಡ್ಲಿಗಿ ಪಟ್ಟಣ ಪಂಚಾಯಿತಿಯ ಕುಟುಂಬಗಳ

ವಾರ್ಡಿಗಿಂತ ಮುಂದುವರಿದ ಹೊಸಪೇಟೆ ನಗರಸಭೆಯಲ್ಲಿನ ಕುಟುಂಬಗಳಿರುವ ವಾರ್ಡಿಗೆ ಚುನಾಯಿತ ಪ್ರತಿನಿಧಿಗಳು ಹೆಚ್ಚಿನ ಪ್ರಮಾಣದಲ್ಲಿ ಭೇಟಿ ನೀಡುತ್ತಿರುವುದು ಕಂಡುಬಂದಿದೆ. ಆದರೆ ಇದರ ಪ್ರಮಾಣ ಕೂಡ್ಲಿಗಿ ಪಟ್ಟಣ ಪಂಚಾಯಿತಿಯಲ್ಲಿ ಕೆಳಮಟ್ಟದಲ್ಲಿರುವುದು ತಿಳಿದುಬರುತ್ತದೆ. ಇದರಿಂದ ತಿಳಿಯಬಹುದಾದ ಸಂಗತಿಯೆಂದರೆ ಹೊಸಪೇಟೆ ನಗರಸಭೆಯ ಸದಸ್ಯರಲ್ಲಿ ಹೆಚ್ಚಿನ ಸಾಕ್ಷರತೆಯನ್ನು ಪಡೆದಿದ್ದು, ವಾರ್ಡಿನ ಅಭಿವೃದ್ಧಿಯ ಬಗ್ಗೆ ಆಸಕ್ತಿಯನ್ನು ತೋರಿಸುತ್ತಾರೆ ಮತ್ತು ತಮ್ಮ ವಾರ್ಡಿನ ಜನರ ಬಗ್ಗೆ ಹೆಚ್ಚಿನ ಕಾಳಜಿ ವಹಿಸುತ್ತಿರುವುದು ಕಂಡು ಬಂದಿದೆ. ಆದರೆ ಕೂಡ್ಲಿಗಿ ಪಟ್ಟಣ ಪಂಚಾಯಿತಿಯ ಹೆಚ್ಚಿನ ಸಂಖ್ಯೆಯ ಚುನಾಯಿತ ಸದಸ್ಯರು ಸರಿಯಾದ ಆಡಳಿತ ಅನುಭವ ಹೊಂದದೆ ಮತ್ತು ಕೆಲವು ಸದಸ್ಯರು ಶ್ರೀಮಂತ ವರ್ಗದಿಂದ ಬಂದವರಾಗಿದ್ದು ವಾರ್ಡಿನ ಜನರ ಸಮಸ್ಯೆಗಳ ಬಗ್ಗೆ ಸಂಪೂರ್ಣ ಅರಿವು ಹೊಂದದೆ ವಾರ್ಡಿನ ಬೇಟಿಯಲ್ಲಿ ವಿಫಲಗೊಂಡಿದ್ದು ಪಟ್ಟಣ ಪಂಚಾಯಿತಿಯು ಹಿಂದುಳಿಯಲಿಕ್ಕೆ ಕಾರಣವಾಗಿದೆ ಎನ್ನಬಹುದಾಗಿದೆ. ಆದ್ದರಿಂದ ಹಿಂದುಳಿದ ಪಟ್ಟಣ ಪಂಚಾಯಿತಿಯ ಚುನಾಯಿತ ಸದಸ್ಯರು ಆಡಳಿತದ ಬಗ್ಗೆ ಹೆಚ್ಚಿನ ರೀತಿಯಲ್ಲಿ ತರಬೇತಿಯನ್ನು ಪಡೆಯುವುದರ ಮೂಲಕ ವಾರ್ಡಿಗೆ ನಿಯಮಿತವಾದ ಭೇಟಿಯನ್ನು ನೀಡುವುದರ ಮೂಲಕ ಅಭಿವೃದ್ಧಿಗೊಳಿಸುವ ಅಗತ್ಯವಿದೆ ಎಂದು ತಿಳಿಯಬಹುದಾಗಿದೆ.

**ಹೌದಾದರೆ ಯಾವ ಸಮಯದಲ್ಲಿ ಭೇಟಿ ನೀಡುತ್ತಾರೆ**

| **ಭೇಟಿ ನೀಡುವುದರ ವಿವರ** | | **ಕೂಡ್ಲಿಗಿ** | | **ಹೊಸಪೇಟೆ** | |
|---|---|---|---|---|---|
| ಹೌದಾದರೆ ಯಾವ ಸಮಯದಲ್ಲಿ ಭೇಟಿ ನೀಡುತ್ತಾರೆ. | ತಿಂಗಳು | ೫ | ೬.೨೫ | ೨೦ | ೧೬.೬೬ |
| | ಮುಖನೇ ನೋಡಿಲ್ಲಾ | ೮ | ೧೦.೦೦ | ೨೭ | ೨೨.೫ |
| | ಆವಾಗವಾಗ ಗಂಡ ಬೇಟಿ ನೀಡುತ್ತಾನೆ | ೧೧ | ೧೩.೭೫ | ೨೨ | ೧೮.೩೩ |
| | **ಒಟ್ಟು** | **೨೪** | **೩೦** | **೬೯** | **೫೭.೪೯** |

**ಮೂಲ: ಕ್ಷೇತ್ರ ಕಾರ್ಯದ ಮಾಹಿತಿ**

ನಗರವಾರು ಅಧ್ಯಾಯನದಲ್ಲಿ ಕೂಡ್ಲಿಗಿ ಪಟ್ಟಣ ಪಂಚಾಯಿತಿಯಲ್ಲಿ ಶೇ. ೬.೨೫ರಷ್ಟು ಕುಟುಂಬಗಳು ಮಾತ್ರ ತಿಂಗಳಿಗೊಮ್ಮೆ ಭೇಟಿ ನೀಡುತ್ತಾರೆ ಎಂದು ತಿಳಿಸಿರುತ್ತಾರೆ. ಅದೇ ಪ್ರಕಾರ ಶೇ. ೧೦ರಷ್ಟು ಕುಟುಂಬಗಳು ವಾರ್ಡಿಗೆ ಭೇಟಿ ಕೊಡುತ್ತಾರೆ ಎಂದು ಕೇಳಿದ್ದೇವೆ ವಿನಃ ಅವರ ಮುಖವನ್ನು ನೋಡಿಲ್ಲ ಎಂದು ತಿಳಿಸಿರುತ್ತಾರೆ. ಉಳಿದ ಶೇ. ೧೩.೭೫ರಷ್ಟು ಕುಟುಂಬಗಳು ಚುನಾಯಿತ ಸದಸ್ಯರ ವಾರ್ಡಿಗೆ ಭೇಟಿಯನ್ನು ಆಗಾಗ ನೀಡುತ್ತಾರೆ ಎಂದು ವಲ್ಲದಮನಸ್ಸಿನಿಂದ ತಮ್ಮ ಅಭಿಪ್ರಾಯಗಳನ್ನು ತಿಳಿಸಿರುವುದು ಅಧ್ಯಯದಿಂದ ತಿಳಿದು ಬರುತ್ತದೆ. ಹಾಗೂ ಹೊಸಪೇಟೆ ನಗರ ಸಭೆಯಲ್ಲಿ ಶೇ. ೧೬.೬೬ರಷ್ಟು ಕುಟುಂಬಗಳು ತಿಂಗಳಿಗೊಮ್ಮೆ ವಾರ್ಡಿಗೆ ಭೇಟಿ ನೀಡುತ್ತಾರೆ ಎಂದು ತಿಳಿಸಿರುತ್ತಾರೆ. ಅದೇ ಪ್ರಕಾರ ಶೇ. ೨೨.೫೦ರಷ್ಟು ಕುಟುಂಬಗಳು ತಮ್ಮ ವಾರ್ಡಿಗೆ ಭೇಟಿ ನೀಡಿದ್ದಾರೆ ಎಂದು ಬೇರೊಬ್ಬರ ಬಾಯಿಯಿಂದ ಕೇಳಿದ್ದೇವೆ ಆದರೆ ಅವರ ಮುಖವನ್ನೇ ನೋಡಿಲ್ಲ ಎಂದು ತಿಳಿಸಿರುತ್ತಾರೆ. ಉಳಿದ ಶೇ. ೧೮.೩೩ರಷ್ಟು ಕುಟುಂಬಗಳು ಚುನಾಯಿತ ಸದಸ್ಯರು

ವಾರ್ಡಿಗೆ ಅಪರೂಪಕ್ಕೊಮ್ಮೆ ಬಂದು ಭೇಟಿ ಕೊಡುತ್ತಾರೆ ಎಂದು ತಿಳಿದುಬಂದಿದೆ. ಒಟ್ಟಾರೆಯಾಗಿ ತೀರಾ ಹಿಂದುಳಿದ ಕೂಡ್ಲಿಗಿ ಪಟ್ಟಣ ಪಂಚಾಯಿತಿಯ ಕುಟುಂಬಗಳ ಸದಸ್ಯರಿಗಿಂತ ಸಾಪೇಕ್ಷವಾಗಿ ಮುಂದುವರಿದ ಹೊಸಪೇಟೆ ನಗರಸಭೆಯ ಕುಟುಂಬಗಳಿಗೆ ವಾರ್ಡಿನ ಸದಸ್ಯರು ತಿಂಗಳಿಗೊಮ್ಮೆ ಭೇಟಿ ನೀಡುವುದರಲ್ಲಿ ಹೆಚ್ಚಿನ ಪ್ರಮಾಣದಲ್ಲಿದ್ದು ಹಾಗೂ ಎರಡು ನಗರಗಳ ಚುನಾಯಿತ ಸದಸ್ಯರು ವಾರ್ಡಿಗೆ ಬೇಡಿ ನೀಡದೇ ಇರುವುದರಲ್ಲಿ ಸರಿಸುಮಾರು ಸಮನಾಗಿರುವುದು ಕಂಡುಬರುತ್ತದೆ. ಇಲ್ಲಿ ಗಮನಿಸುವ ಸಂಗತಿಯೆಂದರೆ ಹೊಸಪೇಟೆ ನಗರಸಭೆಯ ಕುಟುಂಬಗಳು ರಾಜಕೀಯ ನಾಯಕನ ಸಂಪರ್ಕ ಉತ್ತಮ ಸ್ಥಿತಿಯಲ್ಲಿದ್ದು, ಆದರೆ ಕೂಡ್ಲಿಗಿ ಪಟ್ಟಣ ಪಂಚಾಯಿತಿಯ ಕುಟುಂಬಗಳು ರಾಜಕೀಯ ನಾಯಕನ ಸಂಪರ್ಕ ಕೆಳಮಟ್ಟದ್ದಾಗಿದೆ. ಆದರೆ ಇವೆರಡೂ ಸ್ಥಳೀಯ ಸಂಸ್ಥೆಗಳಲ್ಲಿ ಚುನಾಯಿತ ಸದಸ್ಯರ ಭೇಟಿಯು ಭಿನ್ನವಾಗಿದ್ದು ನಗರಸಭೆಯು ಭೇಟಿ ನೀಡುವುದನ್ನು ಹೆಚ್ಚಾಗಿ ಪರಿಗಣಿಸದ ಸಂಸ್ಥೆಗಳಿಂದಲೇ ಹೆಚ್ಚಿನ ಕೆಲಸ ಕಾರ್ಯಗಳನ್ನು ಮಾಡಿಸಿಕೊಳ್ಳುವುದರೊಂದಿಗೆ ನಗರಸಭೆಯಿಂದ ಅಭಿವೃದ್ಧಿಯನ್ನು ಮಾಡುವುದರ ಮೂಲಕ ಮುಂದುವರಿದಿದೆ ಎಂದು ಹೇಳಬಹುದಾಗಿದೆ. ಆದರೆ ಪಟ್ಟಣ ಪಂಚಾಯಿತಿಯಲ್ಲಿ ಅಭಿವೃದ್ಧಿಯ ಒಂದು ಸಾಧನವಾದ ವಾರ್ಡಿಗೆ ಚುನಾಯಿತ ಸದಸ್ಯರು ನಿಯಮಿತವಾಗಿ ಭೇಟಿ ಮಾಡದೆ ಮತ್ತು ರಾಜಕೀಯ ನಾಯಕನೊಂದಿಗೆ ಉತ್ತಮ ಸಂಪರ್ಕ ಕೊರತೆಯನ್ನು ಅನುಭವಿಸುತ್ತಾ ಅಭಿವೃದ್ಧಿಯನ್ನು ಸಾಧಿಸಿಕೊಳ್ಳುವಲ್ಲಿ ವಿಫಲವಾಗಿರುವುದು ಹಿಂದುಳಿಯಲಿಕ್ಕೆ ಕಾರಣ ಎಂದು ಹೇಳಬಹುದಾಗಿದೆ. ಹಾಗಾಗಿ, ಹಿಂದುಳಿದ ಪಟ್ಟಣ ಪಂಚಾಯಿತಿ ಸದಸ್ಯರು ನಿಯಮಿತವಾಗಿ ವಾರ್ಡಿಗೆ ಭೇಟಿ ನೀಡದೇ ವಾರ್ಡಿನ ಅಭಿವೃದ್ಧಿಯನ್ನು ಮಾಡುವ ರಾಜಕೀಯ ಇಚ್ಛಾಶಕ್ತಿಯನ್ನು ರೂಢಿಸಿಕೊಳ್ಳುವ ಅಗತ್ಯವಿದೆ ಎಂಬ ಅಂಶವನ್ನು ಹೇಳಬಹುದಾಗಿದೆ.

**ನಿಮ್ಮ ಕುಟುಂಬದ ಸದಸ್ಯರು ಹಿಂದೆ/ಈಗ ಈ ಕೆಳಗಿನವುಗಳಲ್ಲಿ ಯಾವುದಾದರೂ ಹುದ್ದೆ ಹೊಂದಿರುವುದರ ಹಿನ್ನೆಲೆ**

| **ಕುಟುಂಬದ ಸದಸ್ಯರು ಹುದ್ದೆ ಹೊಂದಿರುವುರದ ಬಗ್ಗೆ** | | **ಕೂಡ್ಲಿಗಿ** | | **ಹೊಸಪೇಟೆ** | |
|---|---|---|---|---|---|
| ನಿಮ್ಮ ಕುಟುಂಬದ ಸದಸ್ಯರು ಹಿಂದೆ/ಈಗ ಈ ಕೆಳಗಿನವುಗಳಲ್ಲಿ ಯಾವೂದಾದರೂ ಹುದ್ದೆ ಹೊಂದಿದ್ದರಾ | ನಗರ ಸಭೆ | ೦ | ೦.೦೦ | ೨ | ೧.೬೭ |
| | ಪಟ್ಟಣ ಪಂಚಾಯಿತಿ | ೮ | ೧೦.೦೦ | ೦ | ೦ |
| | ಇಲ್ಲ | ೭೨ | ೯೦.೦೦ | ೧೧೨ | ೯೩.೩೩ |
| | **ಒಟ್ಟು** | ೮೦ | ೧೦೦ | ೧೧೪ | ೯೫ |

**ಮೂಲ: ಕ್ಷೇತ್ರ ಕಾರ್ಯದ ಮಾಹಿತಿ**

ನಗರವಾರು ಸಂದರ್ಶನದಲ್ಲಿ ಕೂಡ್ಲಿಗಿ ಪಟ್ಟಣ ಪಂಚಾಯಿತಿಯಲ್ಲಿ ಶೇ. ೧೦ರಷ್ಟು ಕುಟುಂಬದವರು ಹಿಂದೆ ಸ್ಥಳೀಯ ಸಂಸ್ಥೆಯ ಸದಸ್ಯರಾಗಿದ್ದರು ಎಂದು ತಿಳಿಸಿರುತ್ತಾರೆ. ಉಳಿದ ಶೇ. ೯೦ರಷ್ಟು ಕುಟುಂಬಗಳಲ್ಲಿ ಯಾವ ಸದಸ್ಯ ಸ್ಥಾನವನ್ನು ಹೊಂದಿರುವುದಿಲ್ಲ ಎಂದು ತಿಳಿಸಿರುತ್ತಾರೆ. ಹಾಗೂ

ಹೊಸಪೇಟೆ ನಗರಸಭೆಯಲ್ಲಿ ಶೇ. ೨ರಷ್ಟು ಕುಟುಂಬಗಳಲ್ಲಿ ಹಿಂದೆ ನಗರಸಭೆಯ ಸದಸ್ಯರಾಗಿದ್ದರು ಎಂದು ತಿಳಿಸಿರುತ್ತಾರೆ. ಉಳಿದ ಶೇ. ೯೩.೩೩ರಷ್ಟು ಕುಟುಂಬಗಳಲ್ಲಿ ಯಾವ ಸದಸ್ಯ ಸ್ಥಾನವನ್ನು ಹೊಂದಿರುವುದಿಲ್ಲ ಎಂದು ತಿಳಿಸಿರುತ್ತಾರೆ. ಒಟ್ಟಾರೆಯಾಗಿ ತೀರಾ ಹಿಂದುಳಿದ ಕೂಡ್ಲಿಗಿ ಪಟ್ಟಣ ಪಂಚಾಯಿತಿಯ ಕುಟುಂಬಗಳು ಸಾಪೇಕ್ಷವಾಗಿ ಮುಂದುವರಿದ ನಗರಸಭೆಯ ಕುಟುಂಬಗಳಿಗಿಂತ ಹೆಚ್ಚಿನ ಪ್ರಮಾಣದಲ್ಲಿ ಸ್ಥಳೀಯ ಸಂಸ್ಥೆಯ ಸದಸ್ಯರಾಗಿರುವುದು ತಿಳಿದುಬರುತ್ತದೆ. ಇಲ್ಲಿ ಗಮನಿಸುವ ಸಂಗತಿಯೆಂದರೆ ಕೂಡ್ಲಿಗಿ ಪಟ್ಟಣ ಪಂಚಾಯಿತಿಯಲ್ಲಿ ಸ್ಥಳೀಯ ನಾಯಕರಲ್ಲಿ ಅನುಭವದ ಪ್ರಮಾಣ ಹೆಚ್ಚಿದ್ದರೂ ಸಮರ್ಥ ರೀತಿಯಲ್ಲಿ ಅಭಿವೃದ್ಧಿಯ ಕನಿಷ್ಠ ಮೂಲಭೂತ ಸೌಲಭ್ಯಗಳನ್ನು ಒದಗಿಸಿಕೊಡುವುದರಲ್ಲಿ ವಿಫಲವಾಗಿರುವುದರಿಂದ ಹಿಂದುಳಿಯಲಿಕ್ಕೆ ಕಾರಣವಾಗಿದೆ ಎಂದು ತಿಳಿದು ಬಂದಿದೆ. ಆದರೆ ಹೊಸಪೇಟೆ ನಗರಸಭೆಯಲ್ಲಿ ಅನುಭವದ ಪ್ರಮಾಣದಲ್ಲಿ ಕೆಳಮಟ್ಟದ ಸದಸ್ಯರ ಸ್ಥಾನವನ್ನು ಹೊಂದಿದ್ದರೂ ಕುಟುಂಬಗಳು ಸ್ಥಳಿಯ ರಾಜಕೀಯದ ಬಗ್ಗೆ ಹೆಚ್ಚಿನ ಅರಿವಿನಿಂದ ಕೂಡಿನ ಅಭಿವೃದ್ಧಿಯಲ್ಲಿ ಪಾಲ್ಗೋಳ್ಳುವುದರಿಂದ ಮುಂದುವರಿಯಲಿಕ್ಕೆ ಸಾಧ್ಯವಾಗಿದೆ ಎಂದು ತಿಳಿಯಬಹುದಾಗಿದೆ. ಹಾಗಾಗಿ, ಹಿಂದುಳಿದ ಪಟ್ಟಣ ಪಂಚಾಯಿತಿಯು ಹೆಚ್ಚು-ಹೆಚ್ಚು ಸಾಕ್ಷರತೆಯನ್ನು ಪಡೆಯುವುದರ ಮೂಲಕ ರಾಜಕೀಯದ ಬಗ್ಗೆ ಅರಿವುನ್ನು ಹೊಂದುವುದರ ಮೂಲಕ ಸ್ಥಳೀಯ ಸಂಸ್ಥೆಗಳಲ್ಲಿ ಭಾಗವಹಿಸುವುದರೊಂದಿಗೆ ಅಭಿವೃದ್ಧಿಯನ್ನು ಸಾಧಿಸಿಕೊಳ್ಳುವ ಅವಶ್ಯಕತೆವಿದೆ ಎಂದು ಹೇಳಲಾಗಿದೆ.

**ನಿಮ್ಮ ಮನೆಯಲ್ಲಿ ಇರುವ ಒಟ್ಟು ಮತದಾರರ ಪ್ರಮಾಣ**

| **ಮತದಾರರ ಪ್ರಮಾಣ** | | **ಕೂಡ್ಲಿಗಿ** | | **ಹೊಸಪೇಟೆ** | |
|---|---|---|---|---|---|
| ನಿಮ್ಮ ಮನೆಯಲ್ಲಿ | ೧-೩ | ೨೬ | ೩೨.೫ | ೩೪ | ೨೮.೩೩ |
| ಇರುವ ಒಟ್ಟು | ೪-೬ | ೫೦ | ೬೨.೫ | ೭೫ | ೬೨.೫ |
| ಮತದಾರರು ಎಷ್ಟು | ೭-೧೦ | ೪ | ೫.೦೦ | ೧೧ | ೯.೧೭ |
| | **ಒಟ್ಟು** | **೮೦** | **೧೦೦** | **೧೨೦** | **೧೦೦** |

**ಮೂಲ: ಕ್ಷೇತ್ರ ಕಾರ್ಯದ ಮಾಹಿತಿ**

ನಗರ ಕಟುಂಬ ಮತದಾರರ ವಿವರಗಳನ್ನು ಈ ಕೆಳಗಿನಂತೆ ತೋರಿಸಲಾಗಿದೆ. ಕೂಡ್ಲಿಗಿ ಪಟ್ಟಣ ಪಂಚಾಯಿತಿಯಲ್ಲಿ ಶೇ. ೩೨.೫೦ರಷ್ಟು ಕುಟುಂಬಗಳು ೧ರಿಂದ ೩ರವರೆಗಿನ ಮತದಾರರನ್ನು ಹೊಂದಿರುವುದು ತಿಳಿದುಬಂದಿದೆ. ಅದೇ ಪ್ರಕಾರ ಶೇ. ೬೨.೫ರಷ್ಟು ಕುಟುಂಬಗಳು ೪ರಿಂದ ೬ರವರೆಗಿನ ಮತದಾರರು ಮನೆಯಲ್ಲಿರುವುದನ್ನು ಕಂಡುಕೊಳ್ಳಲಾಗಿದೆ. ಹಾಗೂ ಹೊಸಪೇಟೆ ನಗರಸಭೆಯಲ್ಲಿ ಶೇ. ೨೮.೩೩ರಷ್ಟು ಕುಟುಂಬಗಳು ೭ರಿಂದ ೧೦ರವರೆಗಿನ ಮನೆಯಲ್ಲಿ ಮತದಾರರ ಇರುವಿಕೆಯು ತಿಳಿದು ಬಂದಿದೆ. ಅದೇ ಪ್ರಕಾರ ಶೇ. ೬೨.೫೦ರಷ್ಟು ಕುಟುಂಬಗಳು ಮತದಾರರನ್ನು ಹೊಂದಿದೆ ಎನ್ನಬಹುದು. ಉಳಿದ ಶೇ. ೯.೧೭ರಷ್ಟು ಕುಟುಂಬಗಳು ೭ರಿಂದ ೧೦ರವರೆಗಿನ ಮತದಾರರು ಮನೆಯಲ್ಲಿರುವುದಾಗಿದೆ ಎಂದು ಹೇಳಿಕೊಂಡಿದ್ದಾರೆ. ತೀರಾ ಹಿಂದುಳಿದ ಕೂಡ್ಲಿಗಿ ಪಟ್ಟಣ ಪಂಚಾಯಿತಿಯಲ್ಲಿನ ಕುಟುಂಬಗಳು ಸಾಪೇಕ್ಷವಾಗಿ ಮುಂದುವರಿದ ನಗರಸಭೆಯಲ್ಲಿನ ಕುಟುಂಬಗಳಿಗಿಂತ ಹೆಚ್ಚಿನ ಪ್ರಮಾಣದಲ್ಲಿ ಒಂದು ಕುಟುಂಬದಲ್ಲಿ ಕಡಿಮೆ ಸಂಖ್ಯೆಯ ಮತದಾರರು

ವಾಸವಾಗಿರುವುದು ತಿಳಿದುಬರುತ್ತದೆ. ಇಲ್ಲಿ ಗಮನಿಸುವ ಸಂಗತಿಯೆಂದರೆ ಹಿಂದುಳಿದ ಪಟ್ಟಣ ಪಂಚಾಯಿತಿಯಲ್ಲಿ ಕುಟುಂಬದ ಪ್ರಮಾಣ ಚಿಕ್ಕದಿದ್ದರೂ ಉತ್ತಮ ಜೀವನ ನಿರ್ವಹಣೆಯಲ್ಲಿ ವಿಫಲವಾಗಿದ್ದುದರಿಂದ ಅವರಲ್ಲಿ ಇರುವ ಜೀವನ ನಿರ್ವಹಣೆಯ ಕೊರತೆ, ಅನಕ್ಷರತೆ, ಮತ್ತು ವರಮಾನದ ಇಳಿಕೆಯಲ್ಲಿ ಕುಟುಂಬವನ್ನು ನಿರ್ವಹಿಸುವುದೇ ಇರುವುದು ಹಿಂದುಳಿಯಲಿಕ್ಕೆ ಕಾರಣವಾಗಿದೆ ಎಂದು ಹೇಳಬಹುದಾಗಿದೆ. ಹೊಸಪೇಟೆ ನಗರಸಭೆಯಲ್ಲಿ ಮೇಲಿನ ಅಂಶಗಳಿಂದ ಉತ್ತೇಜನಗೊಳ್ಳುವುದರ ಮೂಲಕ ಅಭಿವೃದ್ಧಿ ಹೊಂದಲು ಸಹಾಯಕವಾಗಿದೆ ಎನ್ನಬಹುದಾಗಿದೆ. ಹಾಗಾಗಿ, ಹಿಂದುಳಿದ ಪಟ್ಟಣ ಪಂಚಾಯಿತಿಯು ಮುಂದುವರಿಯಲು ಮೇಲಿನ ಎಲ್ಲಾ ಅಂಶಗಳ ಮೂಲಕ ಅಭಿವೃದ್ಧಿಯನ್ನು ಕಂಡುಕೊಳ್ಳುವ ಅವಶ್ಯಕತೆ ಇದೆ ಎಂದು ಹೇಳಬದುದಾಗಿದೆ.

**ಎಷ್ಟು ವರ್ಷಗಳಿಂದ ಈ ಪಟ್ಟಣದಲ್ಲಿ ನೆಲೆಸಿರುವುದರ ಕುರಿತು**

| ವಾಸಿಸುವವರ ವಿವರ | | ಕೂಡ್ಲಿಗಿ | | ಹೊಸಪೇಟೆ | |
|---|---|---|---|---|---|
| ಎಷ್ಟು ವರ್ಷಗಳಿಂದ ಈ ಪಟ್ಟಣದಲ್ಲಿ ವಾಸವಾಗಿದ್ದೀರಿ | ೫ ವರ್ಷ | ೧ | ೧.೨೫ | ೧೦ | ೮.೩೩ |
| | ೧೦ ವರ್ಷ | ೩ | ೩.೭೫ | ೫ | ೪.೧೭ |
| | ೨೦ ವರ್ಷ | ೧೨ | ೧೫.೦೦ | ೬೬ | ೫೫.೦೦ |
| | ಹುಟ್ಟಿನಿಂದ | ೬೪ | ೮೧.೨೫ | ೩೯ | ೩೨.೫ |
| | ಒಟ್ಟು | ೮೦ | ೧೦೦ | ೧೨೦ | ೧೦೦ |

**ಮೂಲ: ಕ್ಷೇತ್ರ ಕಾರ್ಯದ ಮಾಹಿತಿ**

ನಗರವಾರು ಕ್ಷೇತ್ರಧ್ಯಾಯನದಿಂದ ಕೂಡ್ಲಿಗಿ ಪಟ್ಟಣ ಪಂಚಾಯಿತಿಯಲ್ಲಿ ಶೇ. ೧.೨೫ರಷ್ಟು ಕುಟುಂಬಗಳು ೫ ವರ್ಷದಿಂದ ಈ ಪಟ್ಟಣದಲ್ಲಿ ವಾಸವಾಗಿದ್ದೇವೆ ಎಂದು ತಿಳಿದು ಬಂದಿದೆ. ಅದೇ ಪ್ರಕಾರ ಶೇ. ೩.೭೫ರಷ್ಟು ಕುಟುಂಬಗಳು ೧೦ ವರ್ಷಗಳಿಂದ ಇಲ್ಲಿಯೇ ವಾಸವಾಗಿದ್ದೇವೆ ಎಂದಿರುವರು. ಇತರೆ ಶೇ. ೧೫ರಷ್ಟು ಕುಟುಂಬಗಳು ಪಟ್ಟಣ ಪಂಚಾಯಿತಿಯ ವ್ಯಾಪ್ತಿಯಲ್ಲಿ ೨೦ ವರ್ಷದಿಂದ ಜೀವನ ಮಾಡುತ್ತಿರುವುದು ತಿಳಿದು ಬಂದಿರುತ್ತದೆ. ಉಳಿದ ಶೇ. ೮೧.೨೫ರಷ್ಟು ಕುಟುಂಬಗಳು ಹುಟ್ಟಿನಿಂದ ಕೂಡ್ಲಿಗಿ ಪಟ್ಟಣದಲ್ಲಿ ವಾಸವಾಗಿರುವುದು ಎಂದು ಹೇಳಿಕೊಂಡಿರುವುದು ನೋಡಬಹುದಾಗಿದೆ. ಹಾಗೂ ಹೊಸಪೇಟೆ ನಗರಸಭೆಯಲ್ಲಿ ಶೇ. ೮.೩೩ರಷ್ಟು ಕುಟುಂಬಗಳು ೫ ವರ್ಷದಿಂದಲೂ ಇಲ್ಲಿ ವಾಸವಾಗಿರುತ್ತೇವೆ ಎಂದು ಹೇಳಿರುತ್ತಾರೆ. ಅದೇ ಪ್ರಕಾರ ಶೇ. ೪.೧೭ರಷ್ಟು ಕುಟುಂಬಗಳು ೧೦ವರ್ಷದಿಂದ ನಗರಸಭೆಯ ವ್ಯಾಪ್ತಿಯಲ್ಲಿ ಜೀವನ ನಡೆಸುತ್ತಿದ್ದಾರೆ ಎಂದು ತಿಳಿಸಿರುತ್ತಾರೆ. ಇತರೆ ಶೇ. ೫೫ರಷ್ಟು ಕುಟುಂಬಗಳು ೨೦ವರ್ಷಗಳಿಂದಲೂ ಹೊಸಪೇಟೆ ನಗರಸಭೆ ವ್ಯಾಪ್ತಿಯಲ್ಲಿಯೇ ವಾಸವಾಗಿರುವುದು ಎಂದು ತಿಳಿಸಿರುತ್ತಾರೆ. ಉಳಿದ ಶೇ. ೩೨.೫ರಷ್ಟು ಕುಟುಂಬಗಳು ತಮ್ಮ ಜೀವನವನ್ನು ಹುಟ್ಟಿನಿಂದಲೂ ಇಲ್ಲೇ ಇರುವುದಾಗಿ ತಿಳಿಸಿರುತ್ತಾರೆ. ಒಟ್ಟಾರೆ ತೀರಾ ಹಿಂದುಳಿದ ಕೂಡ್ಲಿಗಿ ಪಟ್ಟಣ ಪಂಚಾಯಿತಿ ಕುಟುಂಬಗಳಿಗಿಂತ ಮುಂದುವರಿದ ಹೊಸಪೇಟೆ ನಗರಸಭೆಯ ಕುಟುಂಬಗಳಲ್ಲಿ ಹುಟ್ಟಿನಿಂದ ನಗರದಲ್ಲಿ ವಾಸವಾಗಿರುವವರ ಸಂಖ್ಯೆಯು ಕಡಿಮೆ ಪ್ರಮಾಣದಲ್ಲಿರುವುದು ಅಧ್ಯಯನದಿಂದ ತಿಳಿದು ಬಂದಿದೆ. ಆದರೆ ಹಿಂದುಳಿದ ಪಟ್ಟಣ ಪಂಚಾಯಿತಿಯಲ್ಲಿ ತುಂಬಾ ವರ್ಷಗಳಿಂದ ಹುಟ್ಟಿನಿಂದ ಸ್ಥಳೀಯ ವ್ಯಾಪ್ತಿಯಲ್ಲಿದ್ದರೂ ಸ್ಥಳೀಯ ಚುನಾಯಿತ ಸದಸ್ಯರೊಂದಿಗೆ

ಉತ್ತಮ ಸಂಬಂಧದ ನಿರ್ಮಾಣದಲ್ಲಿಯೂ ವಿಫಲ, ಸಮರ್ಥವಾಗಿ ಯೋಜನೆಗಳ ಅನುಷ್ಠಾನವಾಗದಿರುವುದು, ವಾರ್ಡಿನ ಜನತೆಯಲ್ಲಿ ಸ್ಥಳೀಯ ರಾಜಕೀಯ ಅರಿವಿನ ಕೊರತೆ, ಜನರು ಆಡಳಿತದಲ್ಲಿ ಭಾಗವಹಿಸದೆ ಇರುವುದು, ಅಭಿವೃದ್ಧಿ ಯೋಜನೆಗಳ ಅನುಷ್ಠಾನದಲ್ಲಿ ಹಿಂದುಳಿದಿರುವುದರಿಂದಾಗಿ ಒಟ್ಟಾರೆ, ಪಟ್ಟಣ ಪಂಚಾಯಿತಿಯು ಮೇಲಿನ ಅಂಶಗಳಿಂದ ತೀರಾ ಹಿಂದುಳಿದಿದೆ ಎನ್ನಬಹುದಾಗಿದೆ. ಅಂತೆಯೇ, ನಗರಸಭೆಯಲ್ಲಿ ಮೇಲಿನ ಅಂಶಗಳನ್ನು ಸಮರ್ಥವಾಗಿ ನಿಗದಿತ ಅವಧಿಯಲ್ಲಿ ಬಳಸಿಕೊಂಡು ಹಾಗೂ ಸ್ಥಳೀಯ ಸಂಸ್ಥೆಗಳ ಬಗ್ಗೆ ಅರಿವು ಗಳಿಸುವುದರ ಜೊತೆಗೆ ಹೆಚ್ಚು-ಹೆಚ್ಚಾಗಿ ಭಾಗವಹಿಸಿರುವುದು ಗಮನಾರ್ಹ ಅಂಶವಾಗಿದೆ. ತೀರಾ ಹಿಂದುಳಿದ ಪಟ್ಟಣ ಪಂಚಾಯಿತಿಯು ಯೋಜನೆಗಳ ಕುರಿತಾಗಿ ಸರ್ಕಾರದ ನೀತಿ ನಿಯಮಾವಳಿ, ಇಲಾಖೆಯ ಮಾರ್ಗದರ್ಶನದಲ್ಲಿ ಕ್ರಿಯಾಯೋಜನೆಯನ್ನು ಸಿದ್ಧಪಡಿಸಿ, ಸಮರ್ಪಕವಾಗಿ ಜಾರಿಗೊಳಿಸಿದಲ್ಲಿ ಯಾವುದೇ ಕಾರ್ಯವನ್ನು ಸಮರ್ಥವಾಗಿ ಅನುಷ್ಠಾನಗೊಳಿಸುವ ಮೂಲಕ ಹಿಂದುಳಿದ ಸ್ಥಳೀಯ ಸಂಸ್ಥೆಯನ್ನು ಅಭಿವೃದ್ಧಿಯನ್ನು ಮಾಡಲು ಸಾಧ್ಯ ಎಂದು ಹೇಳಬಹುದಾಗಿದೆ. ಆದ್ದರಿಂದ, ಬೃಹತ್ ನಗರಗಳ ಅಭಿವೃದ್ಧಿಗೆ ರೂಪಿಸಿದ ಒಂದು ಪ್ರಮುಖ ಯೋಜನೆ ಸಣ್ಣ-ಸಣ್ಣ ನಗರಗಳ ಅಭಿವೃದ್ಧಿಗೆ ಮಾದರಿ ಆಗಬೇಕಾದ ಅಗತ್ಯವಿದೆ ಎಂದು ಹೇಳಬಹುದಾಗಿದೆ.

**ಕಳೆದ ನಗರಸಭೆ/ ಪಟ್ಟಣ ಪಂಚಾಯಿತಿ ಚುನಾವಣೆಯಲ್ಲಿ ಮತ ಚಲಾಯಿಸುವುದರ ವಿವರ**

| **ಮತ ಚಲಾಯಿಸುವುದರ ಕುರಿತು** | | **ಕೂಡ್ಲಿಗಿ** | | **ಹೊಸಪೇಟೆ** | |
|---|---|---|---|---|---|
| ಕಳೆದನಗರಸಭೆ/ಪಟ್ಟಣ ಪಂಚಾಯಿತಿ ಚುನಾವಣೆಯಲ್ಲಿ ಮತ ಚಲಾಯಿಸಿದ್ದಿರಾ | ಚಲಾಯಿಸಿದ್ದೇವೆ | ೭೨ | ೯೦.೦೦ | ೧೦೬ | ೮೮.೩೩ |
| | ಇಲ್ಲ | ೮ | ೧೦.೦೦ | ೧೪ | ೧೧.೬೭ |
| | **ಒಟ್ಟು** | **೮೦** | **೧೦೦** | **೧೨೦** | **೧೦೦** |

**ಮೂಲ: ಕ್ಷೇತ್ರ ಕಾರ್ಯದ ಮಾಹಿತಿ**

ಎರಡು ನಗರ ಸ್ಥಳೀಯ ಸಂಸ್ಥೆಗಳಲ್ಲಿ ಕೂಡ್ಲಿಗಿ ಪಟ್ಟಣ ಪಂಚಾಯಿತಿಯಲ್ಲಿ ಶೇ. ೯೦ರಷ್ಟು ಕುಟುಂಬಗಳು ಪಟ್ಟಣ ಪಂಚಾಯಿತಿಯ ಚುನಾವಣೆಯಲ್ಲಿ ಮತದಾನ ಚಲಾಯಿಸಿದ್ದೇವೆ ಎಂದು ತಿಳಿಸಿರುತ್ತಾರೆ. ಉಳಿದ ಶೇ. ೧೦ರಷ್ಟು ಕುಟುಂಬಗಳು ಪಟ್ಟಣ ಪಂಚಾಯಿತಿ ಚುನಾವಣೆಯಲ್ಲಿ ಯಾವುದೇ ಕಾರಣವನ್ನು ಹೇಳಿಕೊಳ್ಳದೇ ಮತ ಚಲಾಯಿಸಿರುವುದಿಲ್ಲ ಎಂದು ಹೇಳಿದ್ದಾರೆ. ಹಾಗೂ ಹೊಸಪೇಟೆ ನಗರಸಭೆಯಲ್ಲಿ ಶೇ. ೮೮.೩೩ರಷ್ಟು ಕುಟುಂಬಗಳು ನಗರಸಭೆಗೆ ಮತ ಚಲಾಯಿಸಿದ್ದೇವೆ ಎಂದು ತಿಳಿಸಿರುತ್ತಾರೆ. ಉಳಿದ ಶೇ. ೧೧.೬೭ರಷ್ಟು ಕುಟುಂಬಗಳು ನಗರಸಭೆಗೆ ಯಾವ ಮತ ಚಲಾಯಿಸಿರುವುದಿಲ್ಲ ಎಂದು ಹೇಳಿಕೊಂಡಿರುತ್ತಾರೆ. ಒಟ್ಟಾರೆ, ತೀರಾ ಹಿಂದುಳಿದ ಪಟ್ಟಣ ಪಂಚಾಯಿತಿ ಚುನಾವಣೆಯಲ್ಲಿ ಮತ ಚಲಾವಣೆಯು ಹೆಚ್ಚಿನ ಪ್ರಮಾಣದಲ್ಲಿರುವುದು ಕಂಡು ಬಂದಿದೆ. ಸಾಪೇಕ್ಷವಾಗಿ ಮುಂದುವರಿದ ನಗರಸಭೆ ವ್ಯಾಪ್ತಿಯ ಕುಟುಂಬಗಳ ಮತ ಚಲಾವಣೆ ಕಡಿಮೆ ಪ್ರಮಾಣದಲ್ಲಿರುತ್ತದೆ. ಆದರೆ ಇಲ್ಲಿ ಗಮನಿಸಬೇಕಾದ ಸಂಗತಿಯೆಂದರೆ ಹಿಂದುಳಿದ ಪಟ್ಟಣ ಪಂಚಾಯಿತಿಯಲ್ಲಿ ಹೆಚ್ಚಿನ ಪ್ರಮಾಣದಲ್ಲಿ ಮತಚಲಾಯಿಸಿದ್ದರೂ ಪಕ್ಷಗಳ ಭಿನ್ನಾಭಿಪ್ರಾಯದಿಂದ ಅಭಿವೃದ್ಧಿ ಕಾರ್ಯಗಳು ಸರಿಯಾದ ರೀತಿಯಲ್ಲಿ ಅನುಷ್ಠಾನಗೊಳ್ಳದೇ ಇರುವುದರಿಂದ ಹಾಗೂ ಸ್ಥಳೀಯ ಜನರು ಹೆಚ್ಚಿನ

ರೀತಿಯಲ್ಲಿ ಅಭಿವೃದ್ಧಿ ಕಾರ್ಯಕ್ರಮಗಳಲ್ಲಿ ಭಾಗವಹಿಸದೇ ಇರುವುದ್ದರಿಂದ ಪಟ್ಟಣ ಪಂಚಾಯಿತಿಯು ಹಿಂದುಳಿದಿದೆ ಎನ್ನಬಹುದಾಗಿದೆ. ಅಲ್ಲದೇ, ಮುಂದುವರಿದ ನಗರಸಭೆಯಲ್ಲಿ ಬಹುಮತ ಪಕ್ಷದ ಅಸ್ತಿತ್ವದಲ್ಲಿದ್ದರೂ ರಾಜಕೀಯ ಪಕ್ಷಗಳ ಮಧ್ಯೆ ಉತ್ತಮ ಸಂಬಂಧವಿದ್ದು ಹಾಗೂ ವಾರ್ಡಿನ ಜನರು ನಿಯಮಿತವಾಗಿ ಯೋಜನೆಗಳ ಅನುಷ್ಠಾನದಲ್ಲಿ ಹೆಚ್ಚಾಗಿ ಭಾಗವಹಿಸುವುದರ ಮೂಲಕ ಮುಂದುವರಿದಿದೆ ಎಂದು ಹೇಳಬಹುದಾಗಿದೆ. ನಗರದ ಜನತೆಯಾಗಲಿ ಅಥವಾ ಸದಸ್ಯರಾಗಲಿ ಸ್ಥಳೀಯ ಸಂಸ್ಥೆಯ ಅಭಿವೃದ್ಧಿಯ ನಿಟ್ಟಿನಲ್ಲಿ ಯಾವುದೇ ಭಿನ್ನಭಿಪ್ರಾಯಕ್ಕೆ ಬೆಲೆ ಕೊಡದೆ ಜನತೆಗೆ ಘನತೆಯಿಂದ ಕೂಡಿದ ಬದುಕನ್ನು ನೀಡುವಂತಹದಕ್ಕೆ ಪ್ರಥಮ ಆದ್ಯತೆಯನ್ನು ನೀಡುವುದರ ಮೂಲಕ ನಗರದ ಹಿಂದುಳಿದ ಪಟ್ಟಣ ಪಂಚಾಯಿತಿಯನ್ನು ಸ್ಥಳೀಯ ಸಂಸ್ಥೆಯ ಮೂಲಕ ಅಭಿವೃದ್ಧಿ ನಗರವನ್ನಾಗಿ ಬದಲಾಯಿಸುವ ಅವಶ್ಯಕತೆ ಇದೆ ಎಂದು ಹೇಳಬಹುದಾಗಿದೆ.

**ಸ್ಥಳೀಯ ಸಂಸ್ಥೆಗಳ ಸದಸ್ಯರಾಗಿ ಅಭಿವೃದ್ಧಿಯ ಕಡೆಗೆ ಗಮನಹರಿಸುವ ಕುರಿತು**

| ಅಭಿವೃದ್ಧಿ ಕಡೆಗೆ ಗಮನ | | ಕೂಡ್ಲಿಗಿ | | ಹೊಸಪೇಟೆ | |
|---|---|---|---|---|---|
| ಸ್ಥಳೀಯ ಸಂಸ್ಥೆಗಳ ಸದಸ್ಯರಾಗಿ ಜನರ ಅಭಿವೃದ್ಧಿಗೆ ಶ್ರಮಿಸಬೇಕೆಂದು ಬಯಸುತ್ತೀರಾ | ಹೌದು | ೭೫ | ೯೩.೭೫ | ೯೭ | ೮೦.೮೩ |
| | ಇಲ್ಲ | ೫ | ೬.೨೫ | ೨೩ | ೧೯.೧೭ |
| | **ಒಟ್ಟು** | **೮೦** | **೧೦೦** | **೧೨೦** | **೧೦೦** |

**ಮೂಲ: ಕ್ಷೇತ್ರ ಕಾರ್ಯದ ಮಾಹಿತಿ**

ನಗರ ಸ್ಥಳೀಯ ಸಂಸ್ಥೆಗಳಾದ ಕೂಡ್ಲಿಗಿ ಪಟ್ಟಣ ಪಂಚಾಯಿತಿಯಲ್ಲಿ ಶೇ. ೯೩.೭೫ರಷ್ಟು ಕುಟುಂಬಗಳು ವಾರ್ಡಿನ ಸದಸ್ಯರು ಅಭಿವೃದ್ಧಿಗಾಗಿ ಶ್ರಮಿಸಬೇಕೆಂದು ಬಯಸುತ್ತಾರೆ. ಉಳಿದ ಶೇ. ೬.೨೫ರಷ್ಟು ಕುಟುಂಬಗಳು ವಾರ್ಡಿನ ಸದಸ್ಯರ ವಿರುದ್ಧವಾಗಿ ಹೇಳುತ್ತಾ ಯಾವ ಅಭಿವೃದ್ಧಿಗಾಗಿ ಶ್ರಮಿಸುವ ಅಗತ್ಯವಿಲ್ಲ ಎಂದು ತಿಳಿಸಿರುವುದು ಕಂಡು ಬಂದಿದೆ. ಹಾಗೂ ಹೊಸಪೇಟೆ ನಗರಸಭೆಯಲ್ಲಿ ಶೇ. ೮೦.೮೩ರಷ್ಟು ಕುಟುಂಬಗಳು ವಾರ್ಡಿನ ಸದಸ್ಯರು ತಮ್ಮ ಅಭಿವೃದ್ಧಿಗಾಗಿ ಶ್ರಮಿಸಬೇಕೆಂದು ಹೇಳಿಕೊಂಡಿರುತ್ತಾರೆ. ಉಳಿದ ಶೇ. ೧೯.೧೭ರಷ್ಟು ಕುಟುಂಬಗಳು ಯಾವ ಅಭಿವೃದ್ಧಿಗಾಗಿ ಅವರು ಶ್ರಮವಹಿಸುವ ಅವಶ್ಯಕತೆ ಇರುವುದಿಲ್ಲ ಎಂದು ತಿಳಿಸಿರುತ್ತಾರೆ ಕಂಡು ಬಂದಿದೆ. ಒಟ್ಟಾರೆ ತೀರಾ ಹಿಂದುಳಿದ ಕೂಡ್ಲಿಗಿ ಪಟ್ಟಣ ಪಂಚಾಯಿತಿಯ ಕುಟುಂಬಗಳು ತಮ್ಮ ನಿತ್ಯ ಜೀವನದಲ್ಲಿ ಸಣ್ಣ ವ್ಯಾಪಾರ, ಕೃಷಿ, ಭೂರಹಿತ ಕೃಷಿ ಕೂಲಿಗಾರರು, ಪೌರಕಾರ್ಮಿಕರು ಇತ್ಯಾದಿಗಳಲ್ಲಿ ತೊಡಗಿಕೊಂಡಿರುವುದನ್ನು ನೋಡಬಹುದಾಗಿದೆ. ಕೂಡ್ಲಿಗಿ ನಗರ ಕೇಂದ್ರದಲ್ಲಿ ಪ್ರಮುಖ ಅಭಿವೃದ್ಧಿ ಸಾಧನಗಳಾದ ಆರೋಗ್ಯಕ್ಕೆ ಸಂಬಂಧಪಟ್ಟ ಸೌಲಭ್ಯಗಳಿಲ್ಲದೆ, ಉತ್ತಮ ರಸ್ತೆ ಸಂಪರ್ಕಗಳಿಲ್ಲದೆ, ಸರಿಯಾದ ಚರಂಡಿ ವ್ಯವಸ್ಥೆಯಿಲ್ಲದೆ ಮತ್ತು ನೈರ್ಮಲೀಕರಣ ಕೊರತೆಯಿಂದ ವಾರ್ಡಿನ ಜನತೆಯು ಅನಾರೋಗ್ಯಕ್ಕೆ ತುತ್ತಾಗುವುದರಿಂದ ನಗರದಿಂದ ಮತ್ತೊಂದು ನಗರಕ್ಕೆ ಚಿಕಿತ್ಸೆಗಾಗಿ ಹೋಗುವುದರಿಂದ ಪಟ್ಟಣ ಪಂಚಾಯಿತಿಯಲ್ಲಿ ಕನಿಷ್ಠ ಮೂಲಭೂತ ಸೌಲಭ್ಯಗಳಿಲ್ಲದಿರುವುದರಿಂದ ಕೂಡ್ಲಿಗಿ ಪಟ್ಟಣ ಪಂಚಾಯಿತಿಯು ಹಿಂದುಳಿದಿದೆ ಎನ್ನಲಾಗಿದೆ. ಸಾಪೇಕ್ಷವಾಗಿ ನಗರಸಭೆ ಇವುಗಳನ್ನು ಸಮರ್ಥವಾಗಿ

ಪಡೆಯುವುದರಲ್ಲಿ ಯಶಸ್ವಿಯಾಗಿದ್ದು ಉತ್ತಮ ಜೀವನಮಟ್ಟವನ್ನು ಹೊಂದಿರುವುದರಿಂದ ಮುಂದುವರಿದ ಸ್ಥಳಿಯ ಸಂಸ್ಥೆಯಾಗಿದೆ ಎಂದು ಹೇಳಬಹುದಾಗಿದೆ. ಹಾಗಾಗಿ, ಹಿಂದುಳಿದ ಪಟ್ಟಣ ಪಂಚಾಯಿತಿಯ ಚುನಾಯಿತ ಸದಸ್ಯರು  ವಾರ್ಡಿನ ಸಮಸ್ಯೆಗಳು, ತೊಂದರೆಗಳು ಹೀಗೆ ಹಲವು ರೀತಿಯಲ್ಲಿ ಆತಂಕಗಳು ಇದ್ದವು. ಇವೆಲ್ಲವುಗಳಿಗೆ ಪೂರಕವಾದ ಕಾರ್ಯಯೋಜನೆಗಳು ಮತ್ತು ಸಮರ್ಪಕ ಅನುಷ್ಠಾನದ ಮೂಲಕ ಸದಸ್ಯರು ಅಭಿವೃದ್ಧಿಗಾಗಿ ಶ್ರಮಿಸುವ ಅಗತ್ಯವಿದೆ ಅಭಿಪ್ರಾಯವನ್ನು ವ್ಯಕ್ತಪಡಿಸಬಹುದಾಗಿದೆ.

**ಹೌದಾದರೆ, ಯಾವ ಅಭಿವೃದ್ಧಿ ಬಯಸುತ್ತೀರಾ**

| ಅಭಿವೃದ್ಧಿಯ ಕಡೆಗೆ ಆಸಕ್ತಿ | | ಕೂಡ್ಲಿಗಿ | | ಹೊಸಪೇಟೆ | |
|---|---|---|---|---|---|
| ಹೌದಾದರೆ ಯಾವ ಅಭಿವೃದ್ಧಿ ಬಯಸುತ್ತೀರಾ | ಮೂಲಭೂತ ಸೌಲಭ್ಯ ಮತ್ತು ಆರೋಗ್ಯ | ೩೨ | ೪೦.೦೦ | ೧೯ | ೧೫.೮೩ |
| | ಶಿಕ್ಷಣ, ಆರೋಗ್ಯ | ೨೩ | ೨೮.೭೫ | ೬ | ೫.೦೦ |
| | ಮೂಲಭೂತ ಸೌಲಭ್ಯ | ೨೫ | ೩೧.೨೫ | ೯೫ | ೭೯.೧೭ |
| | ಒಟ್ಟು | ೮೦ | ೧೦೦ | ೧೨೦ | ೧೦೦ |

**ಮೂಲ: ಕ್ಷೇತ್ರ ಕಾರ್ಯದ ಮಾಹಿತಿ**

ನಗರ ಸ್ಥಳೀಯ ಸಂಸ್ಥೆಗಳ ಮೂಲಕ ಅಭಿವೃದ್ಧಿಯನ್ನು ಸಾಧಿಸುವಲ್ಲಿ ಕೂಡ್ಲಿಗಿ ಪಟ್ಟಣ ಪಂಚಾಯಿತಿಯಲ್ಲಿ ಶೇ. ೪೦ರಷ್ಟು ಕುಟುಂಬಗಳು ಮೂಲಭೂತ ಸೌಲಭ್ಯ ಮತ್ತು ಆರೋಗ್ಯಕ್ಕೆ ಸಂಬಂಧಿಸಿದಂತೆ ಅಭಿವೃದ್ಧಿಯನ್ನು ಸಾಧಿಸಬೇಕಾಗುತ್ತದೆ ಎಂದು ತಿಳಿಸಿರುವುದು ತಿಳಿದು ಬಂದಿದೆ. ಅದೇ ಪ್ರಕಾರ ಶೇ. ೨೮.೭೫ರಷ್ಟು ಕುಟುಂಬಗಳು ಶಿಕ್ಷಣ ಮತ್ತು ಆರೋಗ್ಯಕ್ಕೆ ಸಂಬಂಧಪಟ್ಟ ಅಭಿವೃದ್ಧಿಯಾಗಬೇಕಾಗಿದೆ ಎಂದು ಹೇಳಿಕೊಂಡಿರುತ್ತಾರೆ. ಉಳಿದ ಶೇ. ೩೧.೨೫ರಷ್ಟು ಕುಟುಂಬಗಳು ತಮ್ಮ ಅಭಿವೃದ್ಧಿಯು ಕನಿಷ್ಟ ಮೂಲಭೂತ ಸೌಲಭ್ಯಗಳನ್ನು ಒದಗಿಸಿದರೆ ಸಾಕು ಎನ್ನುವ ಅಭಿಪ್ರಾಯವನ್ನು ವ್ಯಕ್ತಪಡಿಸಿರುವುದು ತಿಳಿದು ಬಂದಿದೆ. ಹಾಗೂ ಹೊಸಪೇಟೆ ನಗರಸಭೆಯಲ್ಲಿ ಶೇ. ೧೫.೮೩ರಷ್ಟು ಕುಟುಂಬಗಳು ಮೂಲಭೂತ ಸೌಲಭ್ಯಗಳು ಮತ್ತು ಆರೋಗ್ಯದ ಬಗ್ಗೆ ಕಾಳಜಿವಹಿಸಿ ಅಭಿವೃದ್ಧಿಗಾಗಿ ಶ್ರಮವಹಿಸಬೇಕಾಗಿರುತ್ತದೆ ಎಂದಿದ್ದಾರೆ. ಅದೇ ಪ್ರಕಾರ ಶೇ. ೫ರಷ್ಟು ಕುಟುಂಬಗಳು ಶಿಕ್ಷಣ ಮತ್ತು ಆರೋಗ್ಯಕ್ಕೆ ಸಂಬಂಧಪಟ್ಟ ಅಭಿವೃದ್ಧಿಯಾಗಬೇಕಾಗಿದೆ ಎಂದು ತಿಳಿಸಿರುತ್ತಾರೆ. ಉಳಿದ ಶೇ. ೭೯.೧೭ರಷ್ಟು ಕುಟುಂಬಗಳು ಕನಿಷ್ಟ ಮೂಲಭೂತ ಸೌಲಭ್ಯಗಳನ್ನು ಒದಗಿಸಿದರೆ ಸಾಕು ಎಂಬ ಅನಿಸಿಕೆಯನ್ನು ಹೇಳಿಕೊಂಡಿದ್ದಾರೆ. ತೀರಾ ಹಿಂದುಳಿದ ಪಟ್ಟಣ ಪಂಚಾಯಿತಿ ಕುಟುಂಬಗಳಿಗಿಂತ ಸಾಪೇಕ್ಷವಾಗಿ ಮುಂದುವರಿದ ಹೊಸಪೇಟೆ ನಗರಸಭೆಯ ಕುಟುಂಬಗಳು ಕನಿಷ್ಠ ಮೂಲಭೂತ ಸೌಲಭ್ಯಗಳ ಬೇಡಿಕೆಯ ಪ್ರಮಾಣ ಹೆಚ್ಚಿನ ಪ್ರಮಾಣದಲ್ಲಿರುವುದು ಕಂಡು ಬಂದಿದೆ. ಆದರೆ ಪಟ್ಟಣ ಪಂಚಾಯಿತಿಯಲ್ಲಿ ಕನಿಷ್ಠ ಮೂಲಭೂತ ಸೌಲಭ್ಯಗಳ ಜೊತೆಗೆ ಪ್ರಮುಖ ಮೂಲಭೂತ ಸೌಲಭ್ಯಗಳ ಬೇಡಿಕೆಯನ್ನು ಕಂಡು ಬಂದಿದೆ.  ಒಟ್ಟಾರೆಯಾಗಿ ವಿಶ್ಲೇಷಣೆಯಿಂದ ತಿಳಿದು ಬರುವ ಅಂಶವೆಂದರೆ ಸರ್ಕಾರದಿಂದ ವಿವಿಧ ಯೋಜನೆಗಳಡಿಯಲ್ಲಿ ಬರುವ ಪಟ್ಟಣ ಪಂಚಾಯಿತಿಗೆ ನಾಗರಿಕ ಮೂಲಭೂತ

ಸೌಲಭ್ಯಗಳು, ಆರೋಗ್ಯ, ಶಿಕ್ಷಣ, ಉದ್ಯೋಗಕ್ಕಾಗಿ ಇದ್ದರು ಅವುಗಳು ಸಮರ್ಪಕವಾದ ರೀತಿಯಲ್ಲಿ ಅನುಷ್ಠಾನಗೊಳ್ಳದೆ ಅವಕಾಶ ವಂಚಿತರಾಗಿ ಕನಿಷ್ಟ ಮೂಲಭೂತ ಸೌಲಭ್ಯವಿಲ್ಲದೇ, ಆರೋಗ್ಯ ಕೇಂದ್ರಗಳಿದ್ದರೂ ಅವು ಸರಿಯಾದ ರೀತಿಯಲ್ಲಿ ಕಾರ್ಯನಿರ್ವಹಿಸದೇ ನಗರ ಜೀವನವು ಕೆಳಮಟ್ಟದಲ್ಲಿರುವುದರಿಂದ ತೀರಾ ಹಿಂದುಳಿದಿದೆ ಎನ್ನಬಹುದಾಗಿದೆ. ನಗರಸಭೆ ವ್ಯಾಪ್ತಿಯ ಕುಟುಂಬಗಳು ವರಮಾನದ ಏರಿಕೆಯಿಂದಾಗಿಯೇ ಶಿಕ್ಷಣ ಸಂಬಂಧಿ ಮತ್ತು ಆರೋಗ್ಯ ಸಂಬಂಧಿ ಸಂಗತಿಗಳಿಂದ ಉತ್ತಮ ಬದುಕು ಸಮೃದ್ಧವಾಗಿರುವುದು ಕಂಡುಬರುತ್ತದೆ. ಆದರೆ ಕನಿಷ್ಟ ಮೂಲಭೂತ ಸೌಲಭ್ಯದ ತಕ್ಕಮಟ್ಟಿನ ಅಭಿವೃದ್ಧಿಯನ್ನು ಕಂಡಿರುವುದು ತಿಳಿದುಬರುತ್ತದೆ. ತೀರಾ ಹಿಂದುಳಿದ ಪಟ್ಟಣ ಪಂಚಾಯಿತಿಯಲ್ಲಿ ಮೂಲಭೂತವಾಗಿ ಸೌಲಭ್ಯಗಳು ಅವಶ್ಯಕತೆಗಳನ್ನು ಹೆಚ್ಚಿಸುವುದರೊಂದಿಗೆ ಶಿಕ್ಷಣ ಸಂಬಂಧಿ ಕಾರ್ಯಕ್ರಮಗಳನ್ನು ಪ್ರೋತ್ಸಾಹಿಸುವ ಅಗತ್ಯವಿದೆ ಎಂದು ಹೇಳಬಹುದಾಗಿದೆ.

**ಕುಟುಂಬದ ಸದಸ್ಯರು ಚುನಾವಣಾ ಪ್ರಚಾರ ಕುರಿತು**

| ಚುನಾವಣಾ ಪ್ರಚಾರ | | ಕೂಡ್ಲಿಗಿ | | ಹೊಸಪೇಟೆ | |
|---|---|---|---|---|---|
| ಕುಟಂಬದ ಸದಸ್ಯರು ಚುನಾವಣೆ ಪ್ರಚಾರ ಮಾಡುತ್ತಾರೆಯೆ | ಹೌದು | ೧೭ | ೨೧.೨೫ | ೧೫ | ೧೨.೫ |
| | ಇಲ್ಲ | ೬೩ | ೭೮.೭೫ | ೧೦೫ | ೮೭.೫ |
| | **ಒಟ್ಟು** | ೮೦ | ೧೦೦ | ೧೨೦ | ೧೦೦ |

**ಮೂಲ: ಕ್ಷೇತ್ರ ಕಾರ್ಯದ ಮಾಹಿತಿ**

ನಗರದ ಜನತೆ ಸ್ಥಳೀಯ ರಾಜಕೀಯದ ಚುನಾವಣೆ ಪ್ರಚಾರದಲ್ಲಿ ಕೂಡ್ಲಿಗಿ ಪಟ್ಟಣ ಪಂಚಾಯಿತಿಯಲ್ಲಿ ಶೇ. ೨೧.೨೫ರಷ್ಟು ಕುಟುಂಬಗಳು ಚುನಾವಣಾ ಪ್ರಚಾರದಲ್ಲಿ ಭಾಗವಹಿಸುತ್ತಾರೆ ಎಂದು ತಿಳಿದು ಬಂದಿದೆ. ಉಳಿದ ಶೇ. ೭೮.೭೫ರಷ್ಟು ಕುಟುಂಬಗಳು ಚುನಾವಣಾ ಪ್ರಚಾರದಲ್ಲಿ ಭಾಗವಹಿಸುವುದಿಲ್ಲ ಎಂದು ಹೇಳಿಕೊಂಡಿರುತ್ತಾರೆ. ಹಾಗೂ ಹೊಸಪೇಟೆ ನಗರಸಭೆಯಲ್ಲಿ ಶೇ. ೧೨.೫೦ರಷ್ಟು ಕುಟುಂಬಗಳು ಚುನಾವಣಾ ಪ್ರಚಾರದಲ್ಲಿ ಭಾಗವಹಿಸುತ್ತೇವೆ ಎಂದು ತಿಳಿಸಿರುತ್ತಾರೆ. ಉಳಿದ ಶೇ. ೮೭.೫೦ರಷ್ಟು ಕುಟುಂಬಗಳು ಚುನಾವಣಾ ಪ್ರಚಾರದಲ್ಲಿ ಭಾಗವಹಿಸುವುದಿಲ್ಲ ಎಂದು ಹೇಳಿಕೊಂಡಿರುತ್ತಾರೆ. ಒಟ್ಟಾರೆ ತೀರಾ ಹಿಂದುಳಿದ ಪಟ್ಟಣ ಪಂಚಾಯಿತಿಯಲ್ಲಿನ ಕುಟುಂಬಗಳು ಸಾಪೇಕ್ಷವಾಗಿ ಮುಂದುವರಿದ ಹೊಸಪೇಟೆ ನಗರಸಭೆಯಲ್ಲಿನ ಕುಟುಂಬಗಳಿಗಿಂತ ಚುನಾವಣಾ ಪ್ರಚಾರದಲ್ಲಿ ಹೆಚ್ಚಿನ ಪ್ರಮಾಣದಲ್ಲಿ ಭಾಗವಹಿಸುತ್ತಿರುವುದು ಕಂಡುಬಂದಿದೆ. ಇದರಿಂದ ತಿಳಿದುಬರುವ ಸಂಗತಿಯೆಂದರೆ ಜನಪ್ರತಿನಿಧಿಗಳನ್ನು ರಾಜಕೀಯ ರಂಗದಲ್ಲಿ ಮುಂಚೂಣಿಗೆ ತರುವಲ್ಲಿ ಸಾರ್ವಜನಿಕರ ಬೆಂಬಲವು ಹೆಚ್ಚಾಗಿದ್ದರೂ ಆದರೂ ಕೂಡ್ಲಿಗಿ ಪಟ್ಟಣ ಪಂಚಾಯಿತಿಯು ಹಿಂದುಳಿಯಲು ಚುನಾಯಿತ ಪ್ರತಿನಿಧಿಗಳು ವಿವಿಧ ಪಕ್ಷಗಳಿಂದ ಬಂದವರಾಗಿದ್ದು ಇದಕ್ಕೆ ಅವರಲ್ಲಿ ಭಿನ್ನಭಿಪ್ರಾಯಗಳಿದ್ದು, ರಾಜಕೀಯ ಇಚ್ಛಾಶಕ್ತಿಯ ಕೊರತೆ, ಕ್ರೀಯಾಶೀಲ ನಾಯಕತ್ವದ ಕೊರತೆ ಜೊತೆಗೆ ಅವರ ಕೆಲಸ ಕಾರ್ಯಗಳಿಗೆ ಸದಾ ಬೆಂಬಲ ನೀಡಿ ಪ್ರೋತ್ಸಾಹಿಸುವಂತಹ ವಾರ್ಡಿನ ಜನತೆ ಮತ್ತು ಅಧಿಕಾರಿಗಳ ಸಹಕಾರದ ಕೊರತೆಯಿಂದ ಹಿಂದುಳಿದಿದೆ ಎನ್ನಬಹುದಾಗಿದೆ. ಆದರೆ ಹೊಸಪೇಟೆ ನಗರಸಭೆಯಲ್ಲಿ ಪಕ್ಷವು ಬಹುಮತದಿಂದ ಕೂಡಿದ್ದು, ಇದಕ್ಕೆ ಸ್ಥಳೀಯ ಸಂಸ್ಥೆಯ ಅಧಿಕಾರಿಯವರ ಕ್ರೀಯಾಶೀಲ

ನಾಯಕತ್ವ, ಜೊತೆಗೆ ಅವರ ಕೆಲಸಗಳಿಗೆ ಸದಾ ಬೆಂಬಲ ನೀಡಿ ತಮ್ಮ ಕರ್ತವ್ಯವೆಂದು ಚುನಾಯಿತ ಸದಸ್ಯರು ಅಭಿವೃದ್ಧಿ ಕಾರ್ಯಗಳಲ್ಲಿ ಪಾಲ್ಗೊಳ್ಳುವುದರಿಂದ ನಗರಸಭೆಯು ಮುಂದುವರಿದಿದೆ ಎಂದು ತಿಳಿದು ಬಂದಿದೆ. ಹಿಂದುಳಿದ ಕೂಡ್ಲಿಗಿ ಪಟ್ಟಣ ಪಂಚಾಯಿತಿಯಲ್ಲಿ ವಾರ್ಡಿನ ಜನತೆ ಸ್ಥಳೀಯ ರಾಜಕೀಯದಲ್ಲಿ ಭಾಗವಹಿಸುವುದನ್ನು ಪ್ರೋತ್ಸಾಹಿಸುತ್ತಾ ಚುನಾಯಿತ ಪ್ರತಿನಿಧಿಗಳು ಜನರನ್ನು ಒಳಗೊಳ್ಳುವ ಅಭಿವೃದ್ಧಿ ಕೆಲಸ-ಕಾರ್ಯಗಳನ್ನು ಹೆಚ್ಚಿನ ಪ್ರಮಾಣದಲ್ಲಿ ಮಾಡುವುದರಿಂದ ಹಿಂದುಳಿದ ಸಂಸ್ಥೆಯು ಮುಂದುವರಿಯಲು ಸಾಧ್ಯವಾಗುತ್ತದೆ ಎಂದು ಹೇಳಲಾಗುತ್ತದೆ.

**ಚುನಾವಣೆ ಪ್ರಚಾರದಲ್ಲಿ ಯಾರು ಭಾಗವಹಿಸುವುದರ ವಿವರ**

| ಪ್ರಚಾರದಲ್ಲಿ ಭಾಗವಹಿಸುವುದರ ವಿವರ | | ಕೂಡ್ಲಿಗಿ | | ಹೊಸಪೇಟೆ | |
|---|---|---|---|---|---|
| ಹೌದಾದರೆ ಯಾರು | ಗಂಡು | ೧೪ | ೧೭.೫ | ೧೧ | ೯.೧೬ |
| | ಮಹಿಳೆ | ೩ | ೩.೭೫ | ೪ | ೩.೩೩ |
| | **ಒಟ್ಟು** | ೧೭ | ೨೧.೨೫ | ೧೫ | ೧೨.೫ |

**ಮೂಲ: ಕ್ಷೇತ್ರ ಕಾರ್ಯದ ಮಾಹಿತಿ**

ನಗರ ಚುನಾವಣೆ ಪ್ರಚಾರದಲ್ಲಿ ಕೂಡ್ಲಿಗಿ ಪಟ್ಟಣ ಪಂಚಾಯಿತಿಯಲ್ಲಿ ಶೇ. ೧೭.೫ರಷ್ಟು ಕುಟುಂಬಗಳಲ್ಲಿ ಚುನಾವಣಾ ಪ್ರಚಾರದಲ್ಲಿ ಗಂಡು ಮಕ್ಕಳು ಭಾಗವಹಿಸುವುದು ತಿಳಿದುಬಂದಿದೆ. ಉಳಿದ ಶೇ. ೩.೭೫ರಷ್ಟು ಕುಟುಂಬಗಳು ಚುನಾವಣಾ ಪ್ರಚಾರದಲ್ಲಿ ಹೆಂಗಸರು ಭಾಗವಹಿಸುತ್ತಿರುವುದು ಅಧ್ಯಯನದಿಂದ ತಿಳಿದು ಬಂದಿದೆ. ಹಾಗೂ ಹೊಸಪೇಟೆ ನಗರಸಭೆಯಲ್ಲಿ ಶೇ. ೯.೧೬ರಷ್ಟು ಕುಟುಂಬಗಳು ಚುನಾವಣಾ ಪ್ರಚಾರದಲ್ಲಿ ಗಂಡಸರು ಭಾಗವಹಿಸುವುದು ತಿಳಿದುಬಂದಿದೆ. ಉಳಿದ ಶೇ. ೩.೩೩ರಷ್ಟು ಕುಟುಂಬಗಳಲ್ಲಿ ಚುನಾವಣಾ ಪ್ರಚಾರವನ್ನು ಹೆಂಗಸರು ಕೈಗೊಂಡಿರುವುದು ಕ್ಷೇತ್ರಧ್ಯಾಯನದಿಂದ ತಿಳಿದು ಬಂದಿದೆ. ಒಟ್ಟಾರೆ ಹಿಂದುಳಿದ ಕೂಡ್ಲಿಗಿ ಪಟ್ಟಣ ಪಂಚಾಯಿತಿಯ ಕುಟುಂಬಗಳು ಸಾಪೇಕ್ಷವಾಗಿ ಮುಂದುವರಿದ ಹೊಸಪೇಟೆ ನಗರಸಭೆಯ ಕುಟುಂಬಗಳಿಗಿಂತ ಹೆಚ್ಚಿನ ಪ್ರಮಾಣದಲ್ಲಿ ಗಂಡಸರು ಚುನಾವಣಾ ಪ್ರಚಾರ ಮಾಡುವುದರಲ್ಲಿ ಭಾಗವಹಿಸಿರುವುದು ತಿಳಿದು ಬಂದಿದೆ. ಇಲ್ಲಿ ಗಮನಿಸುವ ಅಂಶವೆಂದರೆ ರಾಜಕೀಯ ಭಾಗವಹಿಸುವಿಕೆಯಲ್ಲಿ ಹೆಣ್ಣು ಮತ್ತು ಗಂಡು ಮುಂದುವರಿದ ನಗರಸಭೆಯಲ್ಲಿ ಕೆಳಮಟ್ಟದಲ್ಲಿದ್ದು, ಅದು ಹಿಂದುಳಿದ ಪಟ್ಟಣ ಪಂಚಾಯಿತಿಯಲ್ಲಿ ಹೆಚ್ಚಿನ ಪ್ರಮಾಣದಲ್ಲಿರುವುದು ಅಧ್ಯಯನದಿಂದ ತಿಳಿದುಬಂದಿದೆ. ಆದರೆ ಪಟ್ಟಣ ಪಂಚಾಯಿತಿಯಲ್ಲಿ ಸ್ಥಳೀಯ ರಾಜಕೀಯದಲ್ಲಿ ಹೆಚ್ಚಾಗಿ ಅನಿವಾರ್ಯ ಕಾರಣಗಳಿಂದ ಭಾಗವಹಿಸಿದರೂ ಅಭಿವೃದ್ಧಿಯಿಂದ ವಂಚಿತಗೊಂಡಿರುವುದರಿಂದ ಹಿಂದುಳಿದಿದೆ ಎನ್ನಬಹುದಾಗಿದೆ. ಆದರೆ ಎರಡು ನಗರ ಸ್ಥಳೀಯ ಸಂಸ್ಥೆಗಳಲ್ಲಿ ಮಹಿಳೆಯರು ಸ್ಥಳೀಯ ರಾಜಕೀಯದಲ್ಲಿ ಹೆಚ್ಚಾಗಿ ಭಾಗವಹಿಸುವಂತೆ ಪ್ರೋತ್ಸಾಹಿಸುವುದರ ಮೂಲಕ ಮಹಿಳಾ ಸಬಲೀಕರಣದ ಜೊತೆಗೆ ನಿಯಮಿತವಾಗಿ ಕಾರ್ಯಕ್ರಮಗಳ ಅನುಷ್ಠಾನದಿಂದಾಗಿ ನಿಜಕ್ಕು ಹಿಂದುಳಿದ ಪಟ್ಟಣ ಪಂಚಾಯಿತಿ ಪ್ರದೇಶದ ಜನರ ರೈತರ ಕೃಷಿ ಕಾರ್ಮಿಕರ ಬದುಕನ್ನು ಸುಧಾರಿಸುವುದರ ಜೊತೆಗೆ ಅವರ ಬದುಕಿನ ದಿಕ್ಕನ್ನು ಬದಲಾಯಿಸುವ ತುರ್ತು ಅವಶ್ಯಕತೆಯಿದೆ ಎಂದು ಹೇಳಬಹುದಾಗಿದೆ.

**ನಗರದಲ್ಲಿ ಸ್ಥಳೀಯ ಸಂಸ್ಥೆಗಳಿರುವುದರಿಂದ ಏನಾದರೂ ಪ್ರಯೋಜನದ ಹಿನ್ನೆಲೆ**

| ಸ್ಥಳೀಯ ಸಂಸ್ಥೆಗಳಿಂದ ಪ್ರಯೋಜನದ ಹಿನ್ನೆಲೆ | | ಕೂಡ್ಲಿಗಿ | | ಹೊಸಪೇಟೆ | |
|---|---|---|---|---|---|
| ನಿಮ್ಮ ನಗರದಲ್ಲಿ ಸ್ಥಳೀಯ ಸಂಸ್ಥೆಗಳಿರುವುದರಿಂದ ಏನಾದರೂ ಪ್ರಯೋಜನವಿದೆಯೇ | ಪ್ರಯೋಜನವಿದೆ. | ೪೧ | ೫೧.೨೫ | ೭೪ | ೬೧.೬೭ |
| | ಇಲ್ಲ | ೩೨ | ೪೦.೦೦ | ೨೭ | ೨೨.೫ |
| | ಯಾವುದೇ ಉತ್ತರವಿಲ್ಲ | ೭ | ೮.೭೫ | ೧೯ | ೧೫.೮೩ |
| | ಒಟ್ಟು | ೮೦ | ೧೦೦ | ೧೨೦ | ೧೦೦ |

**ಮೂಲ: ಕ್ಷೇತ್ರ ಕಾರ್ಯದ ಮಾಹಿತಿ**

ನಗರ ಸ್ಥಳೀಯ ಸಂಸ್ಥೆಗಳು ಇರುವುದರ ಹಿನ್ನೆಲೆಯಲ್ಲಿ ಕೂಡ್ಲಿಗಿ ಪಟ್ಟಣ ಪಂಚಾಯಿತಿಯಲ್ಲಿ ಶೇ. ೫೧.೨೫ರಷ್ಟು ಕುಟುಂಬಗಳು ಪಟ್ಟಣ ಪಂಚಾಯಿತಿಯಾಗಿರುವುದರಿಂದ ಪ್ರಯೋಜನವಾಗಿದೆ ಎಂದು ತಿಳಿಸಿರುತ್ತಾರೆ. ಅದೇ ಪ್ರಕಾರ ಶೇ. ೪೦ರಷ್ಟು ಕುಟುಂಬಗಳು ಯಾವ ಪ್ರಯೋಜನ ಇಲ್ಲ ಎಂದಿರುತ್ತಾರೆ. ಉಳಿದ ಶೇ. ೮.೭೫ರಷ್ಟು ಕುಟುಂಬಗಳು ಪಟ್ಟಣ ಪಂಚಾಯಿತಿಯ ಪ್ರಯೋಜನ ಬಗ್ಗೆ ಯಾವುದೇ ಉತ್ತರವನ್ನು ಕೊಟ್ಟಿರುವುದಿಲ್ಲ. ಹಾಗೂ ಹೊಸಪೇಟೆ ನಗರಸಭೆಯಲ್ಲಿ ಶೇ. ೬೧.೬೭ರಷ್ಟು ಕುಟುಂಬಗಳು ನಗರಸಭೆಯ ಕುರಿತು ಪ್ರಯೋಜನವಿದೆ ಎಂದು ಹೇಳಿಕೊಂಡಿರುತ್ತಾರೆ. ಅದೇ ಪ್ರಕಾರ ಶೇ. ೨೨.೫೦ರಷ್ಟು ಕುಟುಂಬಗಳು ನಗರಸಭೆಯಿಂದ ಯಾವ ಪ್ರಯೋಜನವಿಲ್ಲ ಎಂದು ತಿಳಿಸಿರುತ್ತಾರೆ. ಉಳಿದ ಶೇ. ೧೫.೮೩ರಷ್ಟು ನಗರಸಭೆ ಪ್ರಯೋಜನ ಬಗ್ಗೆ ಉತ್ತರವನ್ನು ನೀಡದೇ ಇರುವುದು ಅಧ್ಯಯನದಿಂದ ತಿಳಿದು ಬಂದಿದೆ. ಒಟ್ಟಾರೆ ತೀರಾ ಹಿಂದುಳಿದ ಕೂಡ್ಲಿಗಿ ಪಟ್ಟಣ ಪಂಚಾಯಿತಿಯ ಕುಟುಂಬಗಳಿಗಿಂತ ಸಾಪೇಕ್ಷವಾಗಿ ಅಭಿವೃದ್ಧಿ ಹೊಂದಿದ ಹೊಸಪೇಟೆ ನಗರಸಭೆಯ ಕುಟುಂಬಗಳು ಸ್ಥಳೀಯ ಸಂಸ್ಥೆಯ ಪ್ರಯೋಜನವನ್ನು ಪಡೆಯುತ್ತಾ ಹೆಚ್ಚಿನ ಪ್ರಮಾಣದಲ್ಲಿ ಸಕಾರಾತ್ಮಕವಾದ ಹೇಳಿಕೆಯನ್ನು ನೀಡಿರುವುದು ಕಂಡು ಬಂದಿದೆ. ಅಲ್ಲದೇ, ಪಟ್ಟಣ ಪಂಚಾಯಿತಿಯು ಹಲವು ರೀತಿಯ ಸವಾಲುಗಳನ್ನು ಎದುರಿಸುತ್ತಾ ಬಂದಿದ್ದು, ಅದರಲ್ಲಿ ಸರ್ಕಾರದ ಅನುದಾನವನ್ನು ಸಮರ್ಪಕವಾಗಿ ಬಳಸಿಕೊಳ್ಳದೆ ಸ್ಥಳೀಯ ಸಂಸ್ಥೆಗೆ ಅಗತ್ಯವಿರುವ ಪಟ್ಟಣ ಪಂಚಾಯಿತಿಯ ಕಟ್ಟಡ, ಸಾರ್ವಜನಿಕರು ಜನಪ್ರತಿನಿಧಿಗಳು ಭೇಟಿ ಮಾಡಲು ಉತ್ತಮ ಸೌಕರ್ಯ ಒದಗಿಸದೆ ಇರುವುದು, ತಾಂತ್ರಿಕ ಸಿಬ್ಬಂದಿ ಆಪರೇಟರ್ ನೇಮಕ ಮಾಡಿಕೊಳ್ಳದೇ ಇರುವುದು, ಚುನಾಯಿತ ಪ್ರತಿನಿಧಿಗಳು ಕುಳಿತುಕೊಳ್ಳಲು ಕೊಠಡಿ ಮತ್ತು ಸಭಾಂಗಣ ನಿರ್ಮಿಸದೆ ಇರುವುದರಿಂದ ಹಾಗೂ ಅಭಿವೃದ್ಧಿ ಕಾರ್ಯಗಳನ್ನು ಅನುಷ್ಠಾನಗೊಳಿಸದೆ ಇರುವುದು ಇಂತಹ ಹಲವಾರು ತೊಂದರೆಗಳನ್ನು ಶಾಶ್ವತವಾಗಿ ಬಗೆಹರಿಸದೆ ಇರುವುದರಿಂದ ಹಿಂದುಳಿಯಲಿಕ್ಕೆ ಕಾರಣವಾಗಿದೆ ಎಂದು ಹೇಳಬಹುದಾಗಿದೆ. ಆದ್ದರಿಂದ ಸ್ಥಳೀಯ ಜನರು ನಗರ ಸ್ಥಳೀಯ ಸಂಸ್ಥೆಗಳ ಆಡಳಿತದಿಂದ ಬೇಸತ್ತು ಗ್ರಾಮಪಂಚಾಯಿತಿಯ ಅವಶ್ಯಕತೆಯನ್ನು ಉತ್ತಮ ಎಂದು ಹೇಳಿಕೊಳ್ಳುವುದರ ಮೂಲಕ ಗ್ರಾಮ ಪಂಚಾಯಿತಿಯನ್ನು ಪ್ರೋತ್ಸಾಹಿಸಿರುವುದು ಅಧ್ಯಯನದಿಂದ ತಿಳಿದು ಬಂದಿದೆ. ಹಾಗಾಗಿ, ನಗರ ಜನತೆಗೆ ಉತ್ತಮ ಸೌಲಭ್ಯಗಳನ್ನು ಒದಗಿಸಿಕೊಡುವುದರೊಂದಿಗೆ ನಗರದ ಮಹತ್ವವನ್ನು ಸಾರಿ ಹೇಳುವ ಅಗತ್ಯವಿದೆ ಎಂದು ಹೇಳಬಹುದಾಗಿದೆ.

**ಕೋಷ್ಟಕ ೫.೩.**

**ವಾರ್ಡುವಾರು ಸಂದರ್ಶನ ಮಾಡಿದ ಕುಟುಂಬಗಳ ವ್ಯಕ್ತಪಡಿಸಿದ ನಗರ ಸಮಸ್ಯೆ ಕುರಿತು**

| ಸಮಸ್ಯೆಗಳನ್ನು ನಗರ ಸ್ಥಳೀಯ ಸಂಸ್ಥೆಯು ಬಗೆಹರಿಸಿರುವುದರ ವಿವರ | | | | | |
|---|---|---|---|---|---|
| ನಗರ ಸಮಸ್ಯೆಗಳು | ವಿವರಗಳು | ಕೂಡ್ಲಿಗಿ | | ಹೊಸಪೇಟೆ | |
| | | ಪಟ್ಟಣ ಪಂಚಾಯಿತಿ | | ನಗರ ಸಭೆ | |
| | | ಕುಟುಂಬಗಳು | ಶೇಕಡವಾರು | ಕುಟುಂಬಗಳು | ಶೇಕಡವಾರು |
| ಸಮಸ್ಯೆಗಳನ್ನು ನಗರ ಸರ್ಕಾರ ಬಗೆಹರಿಸಿದೆಯಾ | ಪರಿಹರಿಸಿದೆ | ೩ | ೩.೭೫ | ೪೪ | ೩೬.೬೭ |
| | ಸ್ವಲ್ಪ ಮಟ್ಟಿಗೆ | ೨೨ | ೨೭.೫ | ೬೮ | ೫೬.೬೭ |
| | ಇಲ್ಲ | ೫೫ | ೬೮.೭೫ | ೮ | ೬.೬೭ |
| | ಒಟ್ಟು | ೮೦ | ೧೦೦ | ೧೨೦ | ೧೦೦ |

**ಮೂಲ: ಕ್ಷೇತ್ರ ಕಾರ್ಯದ ಮಾಹಿತಿ**

ಎರಡು ನಗರ ಸ್ಥಳೀಯ ಸಂಸ್ಥೆಗಳಾದ ಕೂಡ್ಲಿಗಿ ಪಟ್ಟಣ ಪಂಚಾಯಿತಿಯಲ್ಲಿ ಶೇ. ೩.೭೫ರಷ್ಟು ಕುಟುಂಬಗಳು ತಮ್ಮ ಸಮಸ್ಯೆಗಳಿಗೆ ಪಟ್ಟಣ ಪಂಚಾಯಿತಿ ಪರಿಹರಿಸಿದೆ ಎಂದು ತಿಳಿಸಿರುತ್ತಾರೆ. ಅದೇ ರೀತಿಯಾಗಿ ಶೇ. ೨೭.೫ರಷ್ಟು ಕುಟುಂಬಗಳು ತಮ್ಮ ಸಮಸ್ಯೆಗಳಿಗೆ ಸ್ವಲ್ಪಮಟ್ಟಿಗೆ ಪರಿಹಾರ ದೊರಕಿದೆ ಎಂದು ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾರೆ. ಉಳಿದ ಶೇ. ೬೮.೭೫ರಷ್ಟು ಕುಟುಂಬಗಳು ತಮ್ಮ ಸಮಸ್ಯೆಗೆ ಯಾವ ಪ್ರತಿಕ್ರಿಯೆಯನ್ನು ನೀಡದೆ ತಮ್ಮ ಆಡಳಿತದಲ್ಲಿ ನಿರತರಾಗಿರುವುದು ಕಂಡುಬಂದಿದೆ. ಹಾಗೂ ಹೊಸಪೇಟೆ ನಗರಸಭೆಯಲ್ಲಿ ಶೇ. ೩೬.೬೭ರಷ್ಟು ಕುಟುಂಬಗಳ ಸಮಸ್ಯೆಗಳನ್ನು ಪರಿಹರಿಸಿರುವುದು ಕಂಡು ಬಂದಿದೆ. ಉಳಿದ ಶೇ. ೫೬.೬೭ರಷ್ಟು ಕುಟುಂಬಗಳಿಗೆ ನಗರ ಜನತೆಯ ಸಮಸ್ಯೆಗಳಿಗೆ ಸ್ವಲ್ಪಮಟ್ಟಿಗೆ ವಾರ್ಡಿನ ಜನರ ಸಮಸ್ಯೆಗಳಿಗೆ ಸ್ಪಂದಿಸಿರುವುದು ಕಂಡು ಬಂದಿದೆ. ಹಾಗೆಯೇ ಶೇ. ೬.೬೭ರಷ್ಟು ಕುಟುಂಬಗಳು ನಗರ ಜನತೆಯ ಸಮಸ್ಯೆಗೆ ಸ್ಥಳೀಯ ಸಂಸ್ಥೆಯು ಸ್ಪಂದಿಸದಿರುವುದು ಅಧ್ಯಯನದಿಂದ ಕಂಡು ಬಂದಿದೆ. ಒಟ್ಟಾರೇ ವಿಶ್ಲೇಷಣೆಯಿಂದ ತಿಳಿದು ಬರುವ ಸಂಗತಿಯೆಂದರೆ ವಾರ್ಡಿನ ಜನರ ಸಮಸ್ಯೆಗಳಿಗೆ ಸ್ಥಳೀಯ ಸಂಸ್ಥೆಯು ಬಗೆಹರಿಸದಿರುವುದರ ಪ್ರಮಾಣವು ತೀರಾ ಹಿಂದುಳಿದ ಪಟ್ಟಣ ಪಂಚಾಯಿತಿಯ ಕುಟುಂಬಗಳಿಗಿಂತ ಸಾಪೇಕ್ಷವಾಗಿ ಮುಂದುವರಿದ ಹೊಸಪೇಟೆ ನಗರಸಭೆಯು ಕುಟುಂಬಗಳನ್ನು ಪರಿಗಣನೆಗೆ ತೆಗೆದುಕೊಂಡು ಹೆಚ್ಚಿನ ಪ್ರಮಾಣದಲ್ಲಿ ಬಗೆಹರಿಸಿರುವುದು ಕ್ಷೇತ್ರಧ್ಯಾನದಿಂದ ತಿಳಿದು ಬಂದಿದೆ. ಅಂದರೆ ಪಟ್ಟಣ ಪಂಚಾಯಿತಿಯು ಹಿಂದುಳಿಯಲು ಜನರು ಹೆಚ್ಚು-ಹೆಚ್ಚಾಗಿ ಸ್ಥಳೀಯ ಸಂಸ್ಥೆಗಳ ಅಭಿವೃದ್ಧಿ ಕಾರ್ಯದಲ್ಲಿ ಅರಿವುನ್ನು ಹೊಂದದೇ ಮತ್ತು ಭಾಗವಹಿಸದೇ ಇರುವುದು ಹೆಚ್ಚಿನ ಪ್ರಮಾಣದಲ್ಲಿರುವುದರಿಂದ ಸಮಸ್ಯೆಗಳಿಗೆ ಪರಿಹಾರ ಕಾಣದೆ ಹಿಂದುಳಿದಿದೆ ಎನ್ನಬಹುದಾಗಿದೆ. ಎರಡೂ ನಗರ ಸ್ಥಳೀಯ ಸಂಸ್ಥೆಗಳಲ್ಲಿಯೂ ನಗರ ಸಮಸ್ಯೆ ಕುರಿತಂತೆ ಕೊರತೆ ಸರಿಸುಮಾರು ಪ್ರಮಾಣದಲ್ಲಿದ್ದು, ಅದರ ಪ್ರಮಾಣದ ತೀವ್ರತೆ ಕೂಡ್ಲಿಗಿ ಪಟ್ಟಣ ಪಂಚಾಯಿತಿಯಲ್ಲಿ ಹೆಚ್ಚಿರುವುದು ಅಧ್ಯಯನದಿಂದ ಗುರುತಿಸಬಹುದಾಗಿದೆ. ಇದರಿಂದ ತಿಳಿಯುವ ಸಂಗತಿಯೆಂದರೆ ನಗರಸಭೆಗಿಂತಲೂ ಪಟ್ಟಣ ಪಂಚಾಯಿತಿಯ ನಗರ ಸಮಸ್ಯೆಗಳು

ಅಧಿಕವಿರುವುದು ತಿಳಿದು ಬಂದಿದೆ. ಒಟ್ಟಾರೆಯಾಗಿ, ಹಿಂದುಳಿದ ಪಟ್ಟಣ ಪಂಚಾಯಿತಿಯ ಸಿಬ್ಬಂದಿಗಳು, ಜನಪ್ರತಿನಿಧಿಗಳು ಹಾಗೂ ವಾರ್ಡಿನ ಜನತೆ ಸಾಂಘಿಕ ಮನೋಭಾವನೆಯಿಂದ ಪೂರಕ ಸಮಸ್ಯೆಗಳಿಗೆ ಪರಿಹರಿಸುವ ಅವಶ್ಯಕತೆಯಿದೆ ಎಂದು ಹೇಳಬಹುದಾಗಿದೆ.

| **ಸಮಸ್ಯೆಗಳಿಗೆ ಕಾರಣಗಳು** | | **ಕೂಡ್ಲಿಗಿ** | | **ಹೊಸಪೇಟೆ** | |
|---|---|---|---|---|---|
| ಇಲ್ಲ ಅನ್ನುವುದಕ್ಕೆ ಕಾರಣಗಳು | ನಿರ್ವಹಣಾ ಸಮಸ್ಯೆ, ಪ್ರತಿನಿಧಿಗಳ ಸಮಸ್ಯೆ, ಭ್ರಷ್ಟಚಾರದ ಸಮಸ್ಯೆ, ಅನುದಾನದ ಸಮಸ್ಯೆ | ೫೦ | ೬೨.೫ | ೧೮ | ೧೫.೦೦ |
| | ನಿರ್ವಹಣಾ ಸಮಸ್ಯೆ, ಭ್ರಸ್ಟಚಾರದ ಸಮಸ್ಯೆ | ೨೭ | ೩೩.೭೫ | ೯೪ | ೭೮.೩೩ |
| | **ಒಟ್ಟು** | **೭೭** | **೯೬.೨೫** | **೧೧೨** | **೯೩.೩೩** |

**ಮೂಲ: ಕ್ಷೇತ್ರ ಕಾರ್ಯದ ಮಾಹಿತಿ**

ನಗರವಾರು ಸಮಸ್ಯೆಗಳಿಗೆ ಕಾರಣಗಳ ವಿವರವನ್ನು ತೋರಿಸಲಾಗಿದೆ. ಕೂಡ್ಲಿಗಿ ಪಟ್ಟಣ ಪಂಚಾಯಿತಿಯಲ್ಲಿ ಶೇ. ೬೨.೫೦ರಷ್ಟು ಕುಟುಂಬಗಳು ತಮ್ಮ ಸಮಸ್ಯೆಯನ್ನು ಬಗೆಹರಿಸದಿರುವುದಕ್ಕೆ ನಿರ್ವಹಣಾ ಸಮಸ್ಯೆ, ಪ್ರತಿನಿಧಿಗಳ ಸಮಸ್ಯೆ, ಭ್ರಷ್ಟಚಾರದ ಸಮಸ್ಯೆ ಮತ್ತು ಅನುದಾನದ ಸಮಸ್ಯೆ ಎಂದು ಹಲವಾರು ಕಾರಣಗಳನ್ನು ತಿಳಿದುಕೊಳ್ಳಲಾಗಿದೆ. ಉಳಿದ ಶೇ. ೩೩.೭೫ರಷ್ಟು ಕುಟುಂಬಗಳು ಚುನಾಯಿತ ಸದಸ್ಯರು ತಮ್ಮ ಸಮಸ್ಯೆಗಳನ್ನು ಬಗೆಹರಿಸದಿರುವುದಕ್ಕೆ ನಿರ್ವಹಣಾ ಸಮಸ್ಯೆ ಮತ್ತು ಭ್ರಷ್ಟಚಾರದ ಸಮಸ್ಯೆಯೆಂಬಂತೆ ಕೆಲವು ಕಾರಣಗಳನ್ನು ನೀಡುತ್ತಿರುವುದು ಕಂಡು ಬಂದಿದೆ. ಹಾಗೂ ಹೊಸಪೇಟೆ ನಗರಸಭೆಯಲ್ಲಿ ಶೇ. ೧೫ರಷ್ಟು ಕುಟುಂಬಗಳು ಪ್ರತಿನಿಧಿಗಳ ನಿರ್ವಹಣಾ ಸಮಸ್ಯೆ, ಭ್ರಷ್ಟಚಾರದ ಮತ್ತು ಅನುದಾನದ ಸಮಸ್ಯೆಗಳನ್ನು ಹೇಳಿಕೊಂಡಿರುವುದು ತಿಳಿದು ಬರುತ್ತದೆ. ಉಳಿದ ಶೇ. ೭೮.೩೩ರಷ್ಟು ಕುಟುಂಬಗಳು ಸ್ಥಳೀಯ ಜನರ ಕನಿಷ್ಟ ಸಮಸ್ಯೆಗಳನ್ನು ಪರಿಹರಿಸದಿರುವುದನ್ನು ನಿರ್ವಹಣಾ ಸಮಸ್ಯೆ ಮತ್ತು ಭ್ರಷ್ಟಚಾರದ ಕಾರಣಗಳನ್ನು ತಿಳಿಸಿರುತ್ತಾರೆ. ಒಟ್ಟಾರೆ ನಗರ ಜನರು ತಮಗೆ ಯಾವುದಾದರೂ ಸಮಸ್ಯೆಯು ಎದುರಾದಾಗ ಮಾತ್ರ ಅದರ ಬಗ್ಗೆ ಪ್ರತಿಕ್ರಿಯಿಸುತ್ತಾರೆ. ಅಂದರೆ ನಿರ್ವಹಣಾ ಸಮಸ್ಯೆಯಿಂದ ಪ್ರತಿನಿಧಿಗಳು ಸರಿಯಾದ ಆಡಳಿತವನ್ನು ನೀಡದಿರುವುದು ಅಧ್ಯಯನದಿಂದ ಕಂಡು ಬಂದಿದೆ.

ಮೇಲಿನ ಅಂಶಗಳನ್ನು ಗಮನಿಸಿದಾಗ ನಗರ ಸ್ಥಳೀಯ ಸಂಸ್ಥೆಗಳ ಚುನಾಯಿತ ಸದಸ್ಯರು ಮತ್ತು ವಾರ್ಡಿನ ಜನರು ಪರಸ್ಪರದಿಂದ ಅಭಿವೃದ್ಧಿ ಕಾರ್ಯಕ್ರಮಗಳಲ್ಲಿ ಸಕ್ರಿಯವಾಗಿ ಭಾಗವಹಿಸುವುದರೊಂದಿಗೆ ಸ್ಥಳಿಯ ಸಂಸ್ಥೆಗಳ ಮೂಲಕ ನಗರ ಅಭಿವೃದ್ಧಿಯನ್ನು ಕಾಣಬಹುದಾಗಿದೆ. ನಗರ ಸ್ಥಳೀಯ ಮಟ್ಟದಲ್ಲಿ ಉತ್ತಮ ಜೀವನ ಮಟ್ಟದಿಂದ ವಂಚಿತಗೊಂಡಿರುವವರಿಗೆ ಸರ್ಕಾರದಿಂದ ಹಲವಾರು ಕಾರ್ಯಕ್ರಮಗಳ ಮೂಲಕ ನಗರ ಜನತೆಯು ಮೂಲಭೂತ ಸೌಲಭ್ಯಗಳನ್ನು ಪಡೆಯುವುದರ ಜೊತೆಗೆ ಘನತೆಯಿಂದ ಬದುಕುವ ಅವಕಾಶವನ್ನು ಕಲ್ಪಿಸಿಕೊಟ್ಟಿದೆ. ಹಾಗಾಗಿ, ಈ ಸೇವಾ

ಸೌಲಭ್ಯವನ್ನು ಜನಸಾಮಾನ್ಯರಿಗೆ ನೀಡಬೇಕಾದ ಜವಾಬ್ದಾರಿ ನಗರ ಚುನಾಯಿತ ಪ್ರತಿನಿಧಿಗಳ ಮೇಲಿದೆ. ಇವುಗಳ ಸಮರ್ಥವಾದ ಬಳಕೆಯಲ್ಲಿ ಸಾಪೇಕ್ಷವಾಗಿ ಮುಂದುವರಿದ ನಗರಸಭೆ ಕುಟುಂಬಗಳಿಗಿಂತಲೂ ತೀರಾ ಹಿಂದುಳಿದ ಪಟ್ಟಣ ಪಂಚಾಯಿತಿಯ ಕುಟುಂಬಗಳು ಪಡೆದುಕೊಳ್ಳುವುದರಲ್ಲಿ ಹೆಚ್ಚಿನ ಪ್ರಮಾಣದಲ್ಲಿ ಉಪಯೋಗ ಪಡೆದುಕೊಳ್ಳದೇ ಹಿಂದುಳಿದಿರುವಿಕೆಗೆ ಕಾರಣವಾಗಿದೆ ಎನ್ನಬಹುದು. ಈ ನಿಟ್ಟಿನಲ್ಲಿ ಹಿಂದುಳಿದ ಪಟ್ಟಣ ಪಂಚಾಯಿತಿಯಲ್ಲಿ ಸರ್ಕಾರದಿಂದ ಬರುವ ವಿವಿಧ ಯೋಜನೆಗಳಡಿಯಲ್ಲಿ ಅಭಿವೃದ್ಧಿ ಕಾರ್ಯಕ್ರಮಗಳ ಬಗ್ಗೆ ಅರಿವು ಮತ್ತು ಅದರಲ್ಲಿ ಭಾಗವಹಿಸುವಂತೆ ಪ್ರೇರೇಪಿಸುತ್ತಾ ಅಭಿವೃದ್ಧಿ ನಿರ್ಮಾಣ ಮಾಡುವ ಗುರಿಯನ್ನು ಹೊಂದುವ ಅವಶ್ಯಕತೆ ಇದೆ ಎಂದು ತಿಳಿಯಲಾಗಿದೆ.

**ನಗರ ಕುಟುಂಬಗಳು ಎದುರಿಸುತ್ತಿರುವ ಮೂಲಭೂತ ಅವಶ್ಯಕತೆಗಳು**

| **ಮೂಲಭೂತ ಅವಶ್ಯಕತೆಗಳು** | | **ಕೂಡ್ಲಿಗಿ** | | **ಹೊಸಪೇಟೆ** | |
|---|---|---|---|---|---|
| ನಗರ ಕುಟುಂಬಗಳು ಎದುರಿಸುತ್ತಿರುವ ಮೂಲಭೂತ ಅವಶ್ಯಕತೆಗಳು | ವಸತಿ,ರಸ್ತೆ,ನೈರ್ಮಲ್ಯ | ೭ | ೮.೭೫ | ೧೫ | ೧೨.೫ |
| | ನೈರ್ಮಲ್ಯ,ರಸ್ತೆ, ಕುಡಿಯುವ ನೀರು. | ೧೦ | ೧೨.೫ | ೪೫ | ೩೭.೫ |
| | ರಸ್ತೆ, ನೈರ್ಮಲ್ಯ, ಆರೋಗ್ಯ | ೧೨ | ೧೫ | ೯ | ೭.೫ |
| | ಶಿಕ್ಷಣ, ವಸತಿ, ನೈರ್ಮಲೀಕರಣ, ಆರೋಗ್ಯ | ೩೦ | ೩೭.೫ | ೨೩ | ೧೯.೧೭ |
| | ಶಿಕ್ಷಣ,ವಸತಿ,ನೀರು, ನೈರ್ಮಲೀಕರಣ, ಆರೋಗ್ಯ | ೧೮ | ೨೨.೫ | ೨೦ | ೧೬.೬೭ |
| | **ಒಟ್ಟು** | **೭೭** | **೯೬.೨೫** | **೧೧೨** | **೯೩.೩೩** |

**ಮೂಲ: ಕ್ಷೇತ್ರ ಕಾರ್ಯದ ಮಾಹಿತಿ**

ನಗರವಾರು ಮೂಲಭೂತ ಅವಶ್ಯಕತೆಗಳ ವಿವರವನ್ನು ನೀಡಲಾಗಿದೆ. ಕೂಡ್ಲಿಗಿ ಪಟ್ಟಣ ಪಂಚಾಯಿತಿಯಲ್ಲಿ ಶೇ. ೮.೭೫ರಷ್ಟು ಕುಟುಂಬಗಳು ವಸತಿ, ರಸ್ತೆ ಮತ್ತು ನೈರ್ಮಲ್ಯಕ್ಕೆ ಸಂಬಂಧಿಸಿದ ಮೂಲಭೂತ ಅವಶ್ಯಕತೆಗಳ ಕೊರತೆಯನ್ನು ಎದುರಿಸುತ್ತಿರುವುದು ತಿಳಿದು ಬಂದಿದೆ. ಅದರಂತೆ ಶೇ. ೧೨.೫ರಷ್ಟು ಕುಟುಂಬಗಳು ನೈರ್ಮಲ್ಯ, ರಸ್ತೆ, ಕುಡಿಯುವ ನೀರು ಸಂಬಂಧಿಸಿದ ಅಗತ್ಯತೆಗಳು ಇಲ್ಲದೆ ಜೀವನ ಸಾಗಿಸುತ್ತಿರುವುದು ತಿಳಿದು ಬಂದಿದೆ. ಇತರೆ ಶೇ. ೧೫ರಷ್ಟು ಕುಟುಂಬಗಳು ರಸ್ತೆ, ನೈರ್ಮಲ್ಯ ಮತ್ತು ಆರೋಗ್ಯಕ್ಕೆ ಸಂಬಂಧಿಸಿದಂತೆ ಕನಿಷ್ಟ ಮೂಲಭೂತ ಸೌಲಭ್ಯಗಳಿಲ್ಲದಿರುವುದು ಕಂಡು ಬರುತ್ತದೆ. ಶೇ. ೩೭.೫ರಷ್ಟು ಕುಟುಂಬಗಳು ಶಿಕ್ಷಣ, ವಸತಿ, ನೈರ್ಮಲ್ಯೀಕರಣ ಮತ್ತು ಆರೋಗ್ಯಕ್ಕೆ ಸಂಬಂಧಿಸಿದಂತೆ ಯಾವ ಪ್ರಯೋಜನವು ಒದಗಿಸಿಲ್ಲ ಎಂದು ಅಭಿಪ್ರಾಯವನ್ನು

ವ್ಯಕ್ತಪಡಿಸಿರುವುದನ್ನು ನೋಡಬಹುದಾಗಿದೆ. ಉಳಿದ ಶೇ. ೨೨.೫೦ರಷ್ಟು ಕುಟುಂಬಗಳು ಶಿಕ್ಷಣ, ವಸತಿ, ಕುಡಿಯುವ ನೀರು, ನೈರ್ಮಲ್ಯೀಕರಣ ಮತ್ತು ಆರೋಗ್ಯದ ಸೌಲಭ್ಯಗಳನ್ನು ವಾರ್ಡಿನ ಜನರು ಪಡೆಯುವುದರಲ್ಲಿ ವಿಫಲವಾಗಿರುವುದು ಕಂಡು ಬಂದಿದೆ. ಹಾಗೂ ಹೊಸಪೇಟೆ ನಗರಸಭೆಯಲ್ಲಿ ಶೇ. ೧೨.೫೦ರಷ್ಟು ಕುಟುಂಬಗಳು ವಸತಿ, ರಸ್ತೆ ಮತ್ತು ನೈರ್ಮಲ್ಯಕ್ಕೆ ಸಂಬಂಧಿಸಿದ ಸೌಲಭ್ಯಗಳು ದೊರಕದಿರುವುದು ತಿಳಿದು ಬಂದಿದೆ. ಅದರಂತೆ ಶೇ. ೩೭.೫೦ರಷ್ಟು ಕುಟುಂಬಗಳು ನೈರ್ಮಲ್ಯ, ರಸ್ತೆ ಮತ್ತು ಕುಡಿಯುವ ನೀರು ಮುಂತಾದ ಸೌಲಭ್ಯಗಳನ್ನು ಚುನಾಯಿತ ಸದಸ್ಯರು ನೀಡುವುದರಲ್ಲಿ ವಿಫಲಗೊಂಡಿರುವುದು ತಿಳಿದು ಬಂದಿದೆ. ಇತರೆ ಶೇ. ೭.೫೬ರಷ್ಟು ಕುಟುಂಬಗಳು ತಮ್ಮ ಅಗತ್ಯ ಸೌಲಭ್ಯಗಳಾದ ರಸ್ತೆ, ನೈರ್ಮಲ್ಯ ಮತ್ತು ಆರೋಗ್ಯಕ್ಕೆ ಸಂಬಂಧಿಸಿದ ಸೌಲಭ್ಯಗಳು ಲಭ್ಯವಿಲ್ಲದಿರುವುದು ಕಂಡು ಬಂದಿದೆ. ಅಂತೆಯೇ ಶೇ. ೧೯.೧೭ರಷ್ಟು ಕುಟುಂಬಗಳು ಶಿಕ್ಷಣ, ವಸತಿ, ನೈರ್ಮಲ್ಯೀಕರಣ ಮತ್ತು ಆರೋಗ್ಯದ ಸವಲತ್ತುಗಳೂ ನಗರ ಜನತೆಗೆ ದೊರಕಿರುವುದಿಲ್ಲ ಎಂದು ಹೇಳಿಕೊಂಡಿದ್ದಾರೆ. ಉಳಿದ ಶೇ. ೧೬.೬೭ರಷ್ಟು ಕುಟುಂಬಗಳು ಶಿಕ್ಷಣ, ವಸತಿ, ಕುಡಿಯುವ ನೀರು, ನೈರ್ಮಲೀಕರಣ ಮತ್ತು ಆರೋಗ್ಯದ ಸವಲತ್ತುಗಳು ನಗರ ಜನತೆಗೆ ದೊರಕಿರುವುದಿಲ್ಲ ಎಂದು ತಿಳಿದು ಬಂದಿದೆ. ಒಟ್ಟಾರೆಯಾಗಿ ಈ ವಿಶ್ಲೇಷಣೆಯಿಂದ ತಿಳಿದು ಬರುವ ಸಂಗತಿಯೆಂದರೆ ಸರಿಸುಮಾರು ಹೆಚ್ಚು-ಕಡಿಮೆ ಎರಡು ನಗರ ಸ್ಥಳೀಯ ಸಂಸ್ಥೆಗಳಲ್ಲಿ ತೀರಾ ಹಿಂದುಳಿದ ಪಟ್ಟಣ ಪಂಚಾಯಿತಿಯಲ್ಲಿ ಕನಿಷ್ಠ ಮೂಲಭೂತ ಸೌಕರ್ಯಗಳ ಲಭ್ಯತೆ ಇಲ್ಲದಿರುವುದು ಅಧ್ಯಯನದಿಂದ ತಿಳಿದು ಬಂದಿದೆ. ಆದರೆ ಸಾಪೇಕ್ಷವಾಗಿ ಅಭಿವೃದ್ಧಿ ಹೊಂದಿದ ನಗರಸಭೆಯಲ್ಲಿ ಪ್ರಮುಖವಾದ ಮೂಲಭೂತ ಸೌಲಭ್ಯಗಳ ಕೊರತೆ ಕಾಣದೆ ತಕ್ಕ ಮಟ್ಟಿಗೆ ಕನಿಷ್ಠ ಮೂಲಭೂತ ಸೌಲಭ್ಯಗಳು ಕೊರತೆಯಿರುವುದು ತಿಳಿದು ಬಂದಿದೆ. ಒಟ್ಟು ಚುನಾಯಿತ ಸದಸ್ಯರಲ್ಲಿ ರಾಜಕೀಯ ಇಚ್ಛಾಶಕ್ತಿಯ ಕೊರತೆಯು, ಮತ್ತು ಸರ್ಕಾರದಿಂದ ಬಂದ ಅನುದಾನವನ್ನು ಯೋಜನೆಗಳ ಫಲಾನುಭವಿಗಳಿಗೆ ಒದಗಿಸುವುದರ ಬದಲಾಗಿ ವೈಯಕ್ತಿಕ ಶೌಚಾಲಯವನ್ನು ನಿರ್ಮಿಸಿಕೊಡುವುದರ ಜೊತೆಗೆ ವಸತಿ ಯೋಜನೆಗೆ ಫಲಾನುಭವಿಗಳ ಆಯ್ಕೆಯಲ್ಲಿ ವಾರ್ಡಿನ ಜನರ ಹತ್ತಿರ ಚುನಾಯಿತ ಸದಸ್ಯರು ಹಣ ಪಡೆಯುದರ ಮೂಲಕ ಸೌಲಭ್ಯಗಳನ್ನು ಒದಗಿಸಿಕೊಡುತ್ತಾರೆ ಎಂದು ಅಧ್ಯಯನದಿಂದ ತಿಳಿದು ಬಂದಿದೆ. ಇಲ್ಲದಿದ್ದರೆ ಬೇಜವಾಬ್ದಾರಿತನದಿಂದ ತಮ್ಮ ಕರ್ತವ್ಯ ನಿರ್ವಹಿಸುವುದರಲ್ಲಿ ನೆಪಗಳನ್ನು ಹೇಳುತ್ತಾರೆ ಎಂಬ ಅಂಶವು ಕಂಡುಬಂದಿದೆ.

ಒಟ್ಟಾರೆ ಇದನ್ನು ಗಮನಿಸಿದಾಗ ನಗರ ಜನರು ತಮ್ಮ ವಾರ್ಡಿನಲ್ಲಿರುವ ಸಮಸ್ಯೆಗಳ ಬಗ್ಗೆ ಪರಿಹಾರವನ್ನು ಬಯಸದಿರುವುದು ಮೇಲಿನ ಅಂಶಗಳಿಂದ ತಿಳಿದುಕೊಳ್ಳಬಹುದಾಗಿದೆ. ಆದ್ದರಿಂದ ನಗರ ಜನರ ಸಮಸ್ಯೆಗಳನ್ನು ಬಗೆಹರಿಸುವಂತಹ ಸಮರ್ಥ ಸೇವೆಗಳಿಲ್ಲದಿರುವುದು ಪಟ್ಟಣ ಪಂಚಾಯಿತಿಯು ತೀರಾ ಹಿಂದುಳಿಯಲಿಕ್ಕೆ ಕಾರಣವಾಗಿದೆ ಎಂದು ಹೇಳಬಹುದಾಗಿದೆ. ಅಂದರೆ ನಗರ ಜನತೆಯು ಮೂಲಭೂತ ಸೌಲಭ್ಯಗಳ ಅವಶ್ಯಕತೆಗಳ ಕುರಿತು ಫಲಾನುಭವಿಗಳು ನೀಡಿದ ಅಭಿಪ್ರಾಯಗಳು ವಾಸ್ತವತೆಯಿಂದ ಕೂಡಿದ್ದಾಗಿದೆ. ಈ ನಿಟ್ಟಿನಲ್ಲಿ ಸ್ಥಳೀಯ ಚುನಾಯಿತ ಸದಸ್ಯರು ಸ್ಥಳೀಯ ರಾಜಕೀಯದಲ್ಲಿ ಜನರ ಸೇವೆ ಜನಾರ್ಧನ ಸೇವೆ ಎಂದು ಭಾವಿಸಿ ಹಿಂದುಳಿದ ವಾರ್ಡಿನ ಉದ್ಧಾರಕ್ಕಾಗಿ ದುಡಿಯುವ ಇಚ್ಛಾಶಕ್ತಿಯನ್ನು ಬೆಳೆಸಿಕೊಳ್ಳುವ ಅವಶ್ಯಕತೆ ಇರುವುದು ಅಧ್ಯಯನಗಳಿಂದ ತಿಳಿದು ಬಂದಿದೆ.

### ೫.೪. ನಗರ ಕುಟುಂಬಗಳು ಪ್ರತಿನಿಧಿಯನ್ನು ಆಯ್ಕೆ ಮಾಡುವಾಗ ಪರಿಗಣಿಸಿರುವ ಅಂಶಗಳು

| ಪರಿಗಣಿಸಿರುವ ಅಂಶಗಳು | ಕೂಡ್ಲಿಗಿ ಪಟ್ಟಣಪಂಚಾಯಿತಿ | | ಹೊಸಪೇಟೆ ನಗರ ಸಭೆ | |
|---|---|---|---|---|
| | ಸಂಖ್ಯೆಗಳು | ಶೇಕಡವಾರು | ಸಂಖ್ಯೆಗಳು | ಶೇಕಡವಾರು |
| ವ್ಯಕ್ತಿ, ಜಾತಿ | ೩೯ | ೪೮.೭೫ | ೧೩ | ೧೦.೮೩ |
| ಯೋಗ್ಯ ವ್ಯಕ್ತಿನಾ ಎಂದು ಮತ್ತು ಅಭಿವೃದ್ಧಿ | ೧೮ | ೨೨.೫ | ೭೮ | ೬೫.೦೦ |
| ವಾರ್ಡಿನ ಜನರೊಂದಿಗೆ ಇದ್ದ ಒಳ್ಳೆ ಸಂಬಂಧವಾಗಿರುತ್ತದೆ. | ೧೧ | ೧೩.೭೫ | ೨೪ | ೨೦.೦೦ |
| ವ್ಯಕ್ತಿ ಮತ್ತು ಹಣ | ೧೨ | ೧೫.೦೦ | ೫ | ೪.೧೭ |
| **ಒಟ್ಟು** | ೮೦ | ೧೦೦.೦೦ | ೧೨೦ | ೧೦೦ |

**ಮೂಲ: ಕ್ಷೇತ್ರ ಕಾರ್ಯದ ಮಾಹಿತಿ**

ನಗರವಾರು ಪ್ರತಿನಿಧಿಗಳ ಪ್ರಕ್ರೀಯೆಯಲ್ಲಿ ಕೂಡ್ಲಿಗಿ ಪಟ್ಟಣ ಪಂಚಾಯಿತಿಯಲ್ಲಿ ಶೇ. ೪೮.೭೫ರಷ್ಟು ಕುಟುಂಬಗಳು ತಮ್ಮ ವಾರ್ಡಿನ ಚುನಾಯಿತ ಸದಸ್ಯನನ್ನು ಆಯ್ಕೆ ಮಾಡುವಾಗ ಜಾತಿ ಎಷ್ಟು ಪ್ರಭಾವದಿಂದ ಚುನಾಯಿಸಲಾಗುತ್ತದೆ. ಅದರಂತೆ ಶೇ. ೨೨.೫ರಷ್ಟು ಕುಟುಂಬಗಳು ತಮ್ಮ ವಾರ್ಡ್‌ಗಳ ಸದಸ್ಯರನ್ನು ಚುನಾಯಿಸುವಾಗ 'ಜನಸೇವೆ' ಅಂದರೆ ಜನರ ಸಾಮಾಜಿಕ ಮತ್ತು ಆರ್ಥಿಕ ತೊಂದರೆಗಳನ್ನು ಪರಿಹಾರ ಮಾಡಿ ಉತ್ತಮ ಜೀವನಮಟ್ಟದಿಂದ ಅಭಿವೃದ್ಧಿ ಮಾಡಲು ಯೋಗ್ಯ ವ್ಯಕ್ತಿಯನ್ನು ಆಯ್ಕೆ ಮಾಡುತ್ತೇವೆ ಎಂದು ತಿಳಿದುಬಂದಿದೆ. ಕೆಲವು ಶೇ. ೧೩.೭೫ರಷ್ಟು ಕುಟುಂಬಗಳು ಸಹ ತಮ್ಮ ವಾರ್ಡಿನ ಸದಸ್ಯರನ್ನು ಚುನಾಯಿಸಲು ಸ್ಥಳೀಯ ಜನರೊಂದಿಗೆ ಇರುವ ಸಂಬಂಧದ ಆಧಾರದಿಂದ ಸದಸ್ಯರನ್ನು ಚುನಾಯಿಸಲಾಗಿದೆ ಎಂದು ತಿಳಿಸಿರುತ್ತಾರೆ. ಹಾಗೆಯೇ ಉಳಿದ ಶೇ. ೧೫ರಷ್ಟು ಕುಟುಂಬಗಳು ಚುನಾಯಿತನಾಗುವ ಯಾವ ವ್ಯಕ್ತಿಯು ಹಣದ ಆಮಿಷದಿಂದ ಗೆಲ್ಲಲು ಸಹಾಯಕವಾಯಿತೆ ಎಂದು ಮುಕ್ತ ಚರ್ಚೆಯ ಸಂದರ್ಭದಲ್ಲಿ ಮಾಹಿತಿಯನ್ನು ಪಡೆದು ಹಣದ ಮೂಲಕ ಸದಸ್ಯನನ್ನು ಚುನಾಯಿಸುವ ಅಂಶವನ್ನು ತಿಳಿದು ಬಂದಿದೆ. ಮತ್ತು ಹೊಸಪೇಟೆ ನಗರಸಭೆಯ ಶೇ. ೧೦.೮೩ರಷ್ಟು ಕುಟುಂಬಗಳು ತಮ್ಮ ವಾರ್ಡಿನ ಸದಸ್ಯರನ್ನು ಆಯ್ಕೆ ಮಾಡುವಾಗ ಅಭ್ಯರ್ಥಿಯನ್ನು ತಮ್ಮ ಜಾತಿಯವನು ಆದರೆ ಅವನನ್ನು ಚುನಾಯಿಸಲಾಗುತ್ತದೆ ಎಂದು ನಿಖರವಾಗಿ ಹೇಳದೆ ತಿಳಿಸಿರುತ್ತಾರೆ. ಅದರಂತೆ ಶೇ. ೬೫ರಷ್ಟು ಕುಟುಂಬಗಳು ಪ್ರಜಾಪ್ರಭುತ್ವದ ಆದ್ಯ ಕರ್ತವ್ಯ ಜನಸೇವೆ. ಅಂದರೆ ಮಾನವನು ಉತ್ತಮ ಜೀವನ ನಡೆಸಲು ಬೇಕಾಗಿರುವ ಆರೋಗ್ಯ, ಶಿಕ್ಷಣ, ನೈರ್ಮಲೀಕರಣ ಮತ್ತು ಕನಿಷ್ಠ ಮೂಲಭೂತ ಸೌಲಭ್ಯಗಳನ್ನು ಒದಗಿಸುವುದರೊಂದಿಗೆ ಯಾರು ಅಭಿವೃದ್ಧಿಯ ಪರಿಕಲ್ಪನೆಯನ್ನು ಮನಗಂಡಿರುವಂತಹ ಯೋಗ್ಯ ವ್ಯಕ್ತಿ ಎಂಬ ಅಂಶವನ್ನು ಪರಿಗಣಿಸಿ ಸದಸ್ಯರನ್ನು ಚುನಾಯಿಸಲಾಗುತ್ತದೆ ಎಂದು ತಿಳಿಸಿರುತ್ತಾರೆ. ಇತರೆ ಶೇ. ೨೦ರಷ್ಟು ಕುಟುಂಬಗಳು

ವಾರ್ಡಿನಲ್ಲಿರುವ ಜನರೊಂದಿಗೆ ಬೆರೆತು ಈ ಮೊದಲು ಸಾಮಾಜಿಕ ಸೇವೆಯ ಕಾರ್ಯದಲ್ಲಿ ತೊಡಗಿರುವಂತಹ ಒಳ್ಳೆಯ ಸಂಬಂಧ ಹೊಂದಿದವರನ್ನು ತಮ್ಮ ಅಭ್ಯರ್ಥಿಯೆಂದು ಚುನಾಯಿಸುವಾಗ ಪರಿಗಣಿಸಲಾಗುತ್ತದೆ ಎಂದು ಹೇಳಿಕೊಂಡಿರುತ್ತಾರೆ. ಉಳಿದ ಶೇ. ೪.೧೭ರಷ್ಟು ಕುಟುಂಬಗಳು ತಮ್ಮ ಸದಸ್ಯನನ್ನು ಚುನಾಯಿಸುವಾಗ ಕ್ಷೇತ್ರದ ಮುಖಂಡರಿಂದ ಹಲವಾರು ಸಮಸ್ಯೆಗಳಿಗೆ ಹಣದ ರೂಪದಲ್ಲಿ ನಮಗೆ ಸಹಾಯ ಮಾಡಿರುತ್ತಾರೆ. ಅಂತಹ ಪಕ್ಷದಲ್ಲಿ ಆ ವ್ಯಕ್ತಿಯು ಸೂಚಿಸಿದಂತೆ ಅಭ್ಯರ್ಥಿಯನ್ನು ಚುನಾಯಿಸುವಾಗ ಪರಿಗಣಿಸಲಾಗುತ್ತದೆ ಎಂದು ಅಧ್ಯಯನದಿಂದ ತಿಳಿದು ಬಂದಿದೆ. ಒಟ್ಟಾರೆ ಅಭಿವೃದ್ಧಿ ಹೊಂದಿದ ಹೊಸಪೇಟೆ ನಗರಸಭೆ ಕುಟುಂಬಗಳಿಗಿಂತ ತೀರಾ ಹಿಂದುಳಿದಿರುವ ಪಟ್ಟಣ ಪಂಚಾಯಿತಿ ವ್ಯಾಪ್ತಿಯ ಕುಟುಂಬಗಳು ವಾರ್ಡಿನ ಜನರ ಗುಣಮಟ್ಟ ಜೀವನವನ್ನು ರೂಪಿಸುವಂತಹ ಅಭ್ಯರ್ಥಿಗಳ ಅಯ್ಕೆಯಲಿ ವಿಫಲವಾಗಿರುವುದು ಕಂಡುಬಂದಿದೆ. ಪಟ್ಟಣ ಪಂಚಾಯಿತಿಯ ಸ್ಥಳೀಯ ಜನರು ತಮ್ಮ ಅಭ್ಯರ್ಥಿಗಳನ್ನು ಚುನಾಯಿಸಲು ಹೆಚ್ಚಾಗಿ ವ್ಯಕ್ತಿ-ಜಾತಿಯ ಪ್ರತಿನಿಧಿಗಳನ್ನು ಚುನಾಯಿಸುವುದರಿಂದ ಸ್ಥಳೀಯ ರಾಜಕೀಯದ ಬಗ್ಗೆ ಅನುಭವ ಮತ್ತು ಸಮರ್ಥ ನಾಯಕನ ಆಯ್ಕೆಯಲ್ಲಿ ವಿಫಲಗೊಂಡಿರುವುದರ ಫಲವಾಗಿ ಕೂಡ್ಲಿಗಿ ಪಟ್ಟಣ ಪಂಚಾಯಿತಿಯು ಹಿಂದುಳಿದಿದೆ ಎನ್ನಬಹುದು. ಆದ್ದರಿಂದ ರಾಜ್ಯ ಸರ್ಕಾರಗಳು ನಗರಗಳ ಮಹತ್ವವನ್ನು ಮನಗಂಡು ಅವುಗಳನ್ನು ಆಡಳಿತಾತ್ಮಕವಾಗಿ ಮತ್ತು ಆರ್ಥಿಕವಾಗಿ ಬಲಪಡಿಸಲು ಅವಶ್ಯಕವಾದ ಹೆಚ್ಚು-ಹೆಚ್ಚು ಕ್ರಮಗಳನ್ನು ಕೈಗೊಳ್ಳಬೇಕು. ನಗರಗಳು ಮಾನವ ಸಂಪನ್ಮೂಲ ಅಭಿವೃದ್ಧಿಯ ಕೇಂದ್ರಗಳಾಗುವ ಮುಂದಾಲೋಚನೆಯನ್ನು ಮಾಡಬೇಕೇ ಹೊರತು ಅವು ಕೆಲವೇ ಕೆಲವರ ಸಂಪತ್ತಿನ ಕೋಶಗಳಂತೆ ಆಗಬಾರದು ಎಂಬ ಅಂಶವನ್ನು ತಿಳಿದುಕೊಳ್ಳಬಹುದಾಗಿದೆ.

**೫.೫. ನಗರ ಕುಟುಂಬಗಳನ್ನು ಸಂದರ್ಶಿಸಿದಾಗ ರಾಜಕೀಯ ಪಕ್ಷದ ಬೆಂಬಲ ಮತ್ತು ಯಾವ ಪಕ್ಷ ಅಧಿಕಾರದಲ್ಲಿರಬೇಕೆಂಬ ಬಗ್ಗೆ ಅಭಿಪ್ರಾಯಗಳು**

**ಸಾಮಾನ್ಯವಾಗಿ ಕುಟುಂಬದ ಸದಸ್ಯರು ಯಾವ ಪಕ್ಷವನ್ನು ಬೆಂಬಲಿಸುತ್ತಾರೆ**

| ರಾಜಕೀಯ ಪಕ್ಷದ ಬಗ್ಗೆ ಅಭಿಪ್ರಾಯಗಳು | ವಿವರಗಳು | ಕೂಡ್ಲಿಗಿ ಪಟ್ಟಣಪಂಚಾಯಿತಿ | | ಹೊಸಪೇಟೆ ನಗರ ಸಭೆ | |
|---|---|---|---|---|---|
| | | ಸಂಖ್ಯೆಗಳು | ಶೇಕಡವಾರು | ಸಂಖ್ಯೆಗಳು | ಶೇಕಡವಾರು |
| ಸಾಮಾನ್ಯವಾಗಿ ಕುಟುಂಬದ ಸದಸ್ಯರು ಯಾವ ಪಕ್ಷವನ್ನ ಬೆಂಬಲಿಸುತ್ತೀರಾ | ಕಾಂಗ್ರೇಸ್ | ೧೦ | ೧೨.೫ | ೩೩ | ೨೭.೫ |
| | ಬಿಜೆಪಿ | ೧೬ | ೨೦.೦೦ | ೫೧ | ೪೨.೫ |
| | ಜೆಡಿಎಸ್ | ೮ | ೧೦.೦೦ | ೮ | ೬.೬೭ |
| | ಬಿಎಸ್ಆರ್ | ೯ | ೧೧.೨೫ | ೧೫ | ೧೨.೫ |
| | ಇಂಡಿಪೆಡೆಂಟ್ | ೩೭ | ೪೬.೨೫ | ೧೩ | ೧೦.೮೩ |
| | **ಒಟ್ಟು** | **೮೦** | **೧೦೦** | **೧೨೦** | **೧೦೦** |

**ಮೂಲ: ಕ್ಷೇತ್ರ ಕಾರ್ಯದ ಮಾಹಿತಿ**

ಕುಟುಂಬವು ಯಾವ ಪಕ್ಷವನ್ನು ಬೆಂಬಲಿಸುತ್ತಾರೆ ಎಂಬ ವಿವರಗಳನ್ನು ಕೋಷ್ಟಕ–೫೧ರಲ್ಲಿ ನೀಡಲಾಗಿದೆ. ಕೂಡ್ಲಿಗಿ ಪಟ್ಟಣ ಪಂಚಾಯಿತಿಯಲ್ಲಿ ಶೇ. ೧೨.೫ರಷ್ಟು ಕುಟುಂಬಗಳು ಸ್ಥಳೀಯ ಮಟ್ಟದಲ್ಲಿ ಕಾಂಗ್ರೆಸ್ ಪಕ್ಷವನ್ನು ಬೆಂಬಲಿಸುತ್ತೇವೆ ಎಂದು ತಿಳಿಸಿರುತ್ತಾರೆ. ಅದರಂತೆ ಶೇ. ೨೦ರಷ್ಟು ಕುಟುಂಬಗಳು ಬಿಜೆಪಿಗೆ ಬೆಂಬಲ ಕೊಡುತ್ತೇವೆ ಎಂದು ಅಭಿಪ್ರಾಯ ವ್ಯಕ್ತಪಡಿಸಿರುತ್ತಾರೆ. ಇತರೆ ಶೇ.೧೦ರಷ್ಟು ಮಾತ್ರ ಜೆಡಿಎಸ್ ಪಕ್ಷವನ್ನು ಬೆಂಬಲಿಸಲಾಗುತ್ತದೆ ಎಂದು ತಿಳಿಸಿರುತ್ತಾರೆ. ಹಾಗೆಯೇ ಶೇ. ೧೧.೨೫ರಷ್ಟು ಕುಟುಂಬಗಳು ಸ್ವತಂತ್ರ ಪಕ್ಷವಾದ ಬಿಎಸ್‌ಆರ್ ಪಾರ್ಟಿಗೆ ಮತ ನೀಡಲಾಗುತ್ತದೆ ಎಂದು ತಿಳಿಸಿರುತ್ತಾರೆ. ಉಳಿದ ಶೇ. ೪೬.೨೫ರಷ್ಟು ಕುಟುಂಬಗಳು ಸ್ವತಂತ್ರ(ಗಾಳಿಪಟ) ಪಕ್ಷವನ್ನು ಬೆಂಬಲಿಸಲಾಗುತ್ತದೆ ಎಂದು ತಿಳಿಸಿರುತ್ತಾರೆ. ಹಾಗೆಯೇ ಹೊಸಪೇಟೆ ನಗರಸಭೆಯಲ್ಲಿ ಶೇ. ೨೭.೫ರಷ್ಟು ಕುಟುಂಬಗಳು ಕಾಂಗ್ರೆಸ್ ಪಕ್ಷವನ್ನು ಬೆಂಬಲಿಸುವುದಾಗಿ ಹೇಳಿಕೊಂಡಿದ್ದಾರೆ. ಅದರಂತೆ ಶೇ. ೪೨.೫ರಷ್ಟು ಕುಟುಂಬಗಳು ತಮ್ಮ ವಾರ್ಡಿನ ಜನರು ರಾಷ್ಟ್ರೀಯ ಪಕ್ಷವಾದ ಬಿಜೆಪಿ ಪಕ್ಷವನ್ನು ಬೆಂಬಲಿಸಲಾಗಿದೆ ಎಂದು ತಮ್ಮ ಅಭಿಪ್ರಾಯ ವ್ಯಕ್ತಪಡಿಸಿರುತ್ತಾರೆ. ಇತರೆ ಶೇ. ೬.೬೭ರಷ್ಟು ಕುಟುಂಬಗಳು ಪ್ರಾದೇಶಿಕ ಪಕ್ಷಕ್ಕೆ ಬೆಂಬಲವನ್ನು ಸೂಚಿಸಿರುವುದು ತಿಳಿಸಿರುತ್ತಾರೆ. ಹಾಗೆಯೇ ಶೇ. ೧೨.೫ರಷ್ಟು ಕುಟುಂಬಗಳು ಸ್ವತಂತ್ರ ಪಕ್ಷವಾಗಿದ್ದ ಬಿಎಸ್‌ಆರ್ ಪಾರ್ಟಿಗೆ ಬೆಂಬಲಿಸಿರುವುದು ತಿಳಿದು ಬಂದಿದೆ. ಉಳಿದ ಶೇ. ೧೦.೮೩ರಷ್ಟು ಕುಟುಂಬಗಳು ಮತ್ತೊಂದು ಸ್ವತಂತ್ರ ಪಕ್ಷವಾಗಿದ್ದ ಗಾಳಿಪಟ ಚಿಹ್ನೆಯನ್ನು ಹೊಂದಿದಕ್ಕೆ ಬೆಂಬಲವನ್ನು ಸೂಚಿಸಿರುವುದು ತಿಳಿದು ಬರುತ್ತದೆ. ಒಟ್ಟಾರೆಯಾಗಿ ಈ ವಿಶ್ಲೇಷಣೆಯಿಂದ ಗಮನಿಸುವ ಅಂಶವೆಂದರೆ, ಅಭಿವೃದ್ಧಿ ಹೊಂದಿದ ಹೊಸಪೇಟೆ ನಗರಸಭೆ ವ್ಯಾಪ್ತಿಯ ಕುಟುಂಬಗಳಿಗಿಂತ ತೀರಾ ಹಿಂದುಳಿದ ಕೂಡ್ಲಿಗಿ ಪಟ್ಟಣ ಪಂಚಾಯಿತಿಯ ಕುಟುಂಬಗಳು ಹೆಚ್ಚಾಗಿ ರಾಷ್ಟ್ರೀಯ ಪಕ್ಷವನ್ನು ಬೆಂಬಲಿಸದೇ ಸ್ವತಂತ್ರ ಪಕ್ಷಕ್ಕೆ ಬೆಂಬಲಿಸಿರುವುದು ತಿಳಿದು ಬಂದಿದೆ. ಈ ನಿಟ್ಟಿನಲ್ಲಿ ಕೂಡ್ಲಿಗಿ ಪಟ್ಟಣ ಪಂಚಾಯಿತಿ ವ್ಯಾಪ್ತಿಯು ಒಣಭೂಮಿ ಪ್ರದೇಶವನ್ನು ಹೊಂದಿದ್ದು, ವರಮಾನ, ಅನಕ್ಷರತೆ ಮತ್ತು ಆರೋಗ್ಯ ಪ್ರಮಾಣದಲ್ಲಿ ಕೆಳಮಟ್ಟದಲ್ಲಿದ್ದು, ಸದಸ್ಯರು ಸ್ಥಳೀಯ ಜನರ ಜೀವನಮಟ್ಟವನ್ನು ಸುಧಾರಿಸುವುದರಲ್ಲಿ ವಿಫಲವಾಗಿದ್ದರಿಂದ ವಾರ್ಡಿನ ಜನತೆ ಸ್ವತಂತ್ರ ಪಕ್ಷವನ್ನು ಬೆಂಬಲಿಸಿ ಪಕ್ಷದ ನಾಯಕನು ಸ್ಥಳೀಯನಾಗಿದ್ದು, ಸ್ಥಳೀಯ ಜನರ ಸಮಸ್ಯೆಗಳಿಗೆ ಸಮರ್ಥವಾಗಿ ಸ್ಪಂದಿಸುತ್ತಾ ಹೆಚ್ಚು ಜನರ ಬೆಂಬಲ ಮತ್ತು ಬಹಳ ವರ್ಷಗಳಿಂದ ರಾಜಕೀಯದಲ್ಲಿದ್ದ ಅನುಭವವಿರುವುದರಿಂದ ಸ್ಥಳೀಯ ಸಂಸ್ಥೆಯ ಮೂಲಕ ಆಗದ ಕೆಲಸಗಳಿಗೆ ಇವರಿಂದ ಸ್ಥಳೀಯ ಸಮಸ್ಯೆಗಳು ಬಗೆಹರಿಸುತ್ತಾರೆ ಎಂಬ ಅಂಶವು ಗಮನಾರ್ಹವಾದದ್ದು. ಆದರೂ ಈ ಒಂದು ಫಲಿತಾಂಶದಿಂದ ಯಾವ ಪ್ರಯೋಜನ ಪಡೆಯದೆ ಅಂಚಿನಲ್ಲಿರುವವರು ಕನಿಷ್ಠ ಮೂಲಭೂತ ಸೌಲಭ್ಯಗಳಿಲ್ಲದೆ ಅವಕಾಶ ವಂಚಿತರಾಗಿರುವುದರಿಂದ ಹಿಂದುಳಿದ ಪಟ್ಟಣ ಪಂಚಾಯಿತಿಯು ಹಿಂದುಳಿದಿದೆ ಎನ್ನಬಹುದಾಗಿದೆ. ಸ್ಥಳೀಯ ಸಂಸ್ಥೆಗಳ ಚುನಾಯಿತ ಸದಸ್ಯರಿಗೆ ಗುಣಮಟ್ಟದ ತರಬೇತಿಯನ್ನು ಕೊಡುವುದರೊಂದಿಗೆ ಎಲ್ಲಾರನ್ನು ಒಳ್ಳಗೊಳ್ಳುವ ಅಭಿವೃದ್ಧಿ ಕಡೆಗೆ ಗಮನ ನೀಡಬೇಕಾದ ಅಗತ್ಯವಿದೆ ಎಂದು ತಿಳಿಯಬಹುದಾಗಿದೆ.

**ಪಕ್ಷಗಳ ಬೆಂಬಲಿಸುವುದರ ಕುರಿತು**

| ಪಕ್ಷಗಳ ಬೆಂಬಲ | | ಕೂಡ್ಲಿಗಿ | | ಹೊಸಪೇಟೆ | |
|---|---|---|---|---|---|
| ಏಕೆ ಬೆಂಬಲಿಸುತ್ತೀರಾ | ಅದು ಕೆಲಸ ಮಾಡುತ್ತದೆ | ೧೨ | ೧೫.೦೦ | ೭೫ | ೬೨.೫ |
| | ಸಾಂಪ್ರದಾಯಿಕ | ೨೮ | ೩೫.೦೦ | ೧೪ | ೧೧.೬೭ |
| | ಅದು ಕೆಲಸ ಮಾಡುತ್ತೆ ಮತ್ತು ಜಾತಿ | ೪೦ | ೫೦.೦೦ | ೩೧ | ೨೫.೮೩ |
| | **ಒಟ್ಟು** | ೮೦ | ೧೦೦ | ೧೨೦ | ೧೦೦ |

**ಮೂಲ: ಕ್ಷೇತ್ರ ಕಾರ್ಯದ ಮಾಹಿತಿ**

ನಗರ ಪ್ರದೇಶಗಳಾದ ಕೂಡ್ಲಿಗಿ ಪಟ್ಟಣ ಪಂಚಾಯಿತಿ ಮತ್ತು ಹೊಸಪೇಟೆ ನಗರಸಭೆ ವ್ಯಾಪ್ತಿಯ ಕುಟುಂಬಗಳು ಪಕ್ಷಗಳ ಬೆಂಬಲದಿಂದ ಎರಡು ವಾರ್ಡಿನ ಜನರ ಸ್ಥಿತಿಗತಿಯನ್ನು ತಿಳಿಯಬಹುದಾಗಿದೆ. ಮುಂದುವರಿದ ಮತ್ತು ಹಿಂದುಳಿದ ಸ್ಥಳೀಯ ಸಂಸ್ಥೆಗಳ ನಡುವಿನ ಭಿನ್ನತೆಯನ್ನು ಎರಡು ಸ್ಥಳೀಯ ಸಂಸ್ಥೆಗಳಿಂದ ತಿಳಿಯಲಾಗಿದೆ. ಅಂದರೆ ಕೂಡ್ಲಿಗಿ ಪಟ್ಟಣ ಪಂಚಾಯಿತಿಯಲ್ಲಿ ಶೇ. ೧೫ರಷ್ಟು ಕುಟುಂಬಗಳು ಅದು ಕೆಲಸ ಮಾಡುತ್ತದೆ ಎಂದು ತಿಳಿಸಿ ಅದಕ್ಕಾಗಿ ನಾವು ಬೆಂಬಲಿಸಲಾಗಿದೆ ಎಂದು ತಿಳಿಸಿರುತ್ತಾರೆ. ಅದರಂತೆ ಶೇ. ೩೫ರಷ್ಟು ಕುಟುಂಬಗಳು ಅದು ಕೆಲಸವನ್ನು ಮಾಡುವುದರೊಂದಿಗೆ ನಾವು ಸಾಂಪ್ರದಾಯಿಕವಾಗಿ ಬೆಂಬಲಿಸುತ್ತಾ ಬಂದಿದ್ದೇವೆ ಎಂದು ಹೇಳಿರುತ್ತಾರೆ. ಉಳಿದ ಶೇ. ೫೦ರಷ್ಟು ಕುಟುಂಬಗಳು ವಾರ್ಡಿಗೆ ನಿಲ್ಲುವ ವ್ಯಕ್ತಿ ಉತ್ತಮ ಜನರ ಸಂಪರ್ಕದಲ್ಲಿದ್ದುಕೊಂಡು ಯೋಗ್ಯ ವ್ಯಕ್ತಿಯಾಗಿದ್ದು ಹಾಗೂ ಅವನು ನಮ್ಮ ಜಾತಿಯವನಾಗಿರುವುದರಿಂದ ಬೆಂಬಲಿಸಲಾಗಿದೆ ಎಂದು ಅವಲೋಕನಾ ವಿಧಾನದಿಂದ ತಿಳಿದು ಬಂದಿದೆ. ಹಾಗೆಯೇ ಹೊಸಪೇಟೆ ನಗರಸಭೆಯಲ್ಲಿ ಶೇ. ೬೨.೫ರಷ್ಟು ಕುಟುಂಬಗಳು ಪಕ್ಷವು ಉತ್ತಮವಾದ ರೀತಿಯಲ್ಲಿ ವಾರ್ಡಿನ ಜನರಿಗಾಗಿ ಕೆಲಸ ಮಾಡುತ್ತದೆ ಎಂದು ಬೆಂಬಲಿಸಿರುವುದಾಗಿ ತಿಳಿಸಿರುತ್ತಾರೆ. ಅದರಂತೆ ಶೇ. ೧೧.೬೭ರಷ್ಟು ಕುಟುಂಬಗಳು ಪಕ್ಷವನ್ನು ಸಾಂಪ್ರದಾಯಿಕವಾಗಿ ಬೆಂಬಲಿಸುತ್ತಾ ಬಂದಿದ್ದೇವೆ ಎಂದು ಹೇಳಿರುತ್ತಾರೆ. ಉಳಿದ ಶೇ. ೨೫.೮೩ರಷ್ಟು ಕುಟುಂಬಗಳು ಪಕ್ಷದಲ್ಲಿ ನಮ್ಮ ಜಾತಿಯವನು ನಿಂತಿದ್ದಾನೆ ಮತ್ತು ಅವನು ವಾರ್ಡಿನ ಅಭಿವೃದ್ಧಿಗಾಗಿ ಶ್ರಮಿಸುತ್ತಾನೆ ಹಾಗಾಗಿ ಬೆಂಬಲಿಸಿದ್ದೇವೆ ಎಂದು ತಿಳಿದು ಬಂದಿದೆ. ಒಟ್ಟಾರೆ ಅಭಿವೃದ್ಧಿ ಹೊಂದಿದ ನಗರಸಭೆಯ ಕುಟುಂಬಗಳಿಗಿಂತ ತೀರಾ ಹಿಂದುಳಿದ ಪಟ್ಟಣ ಪಂಚಾಯಿತಿಯ ಕುಟುಂಬಗಳು ಜಾತಿಯ ಕಾರಣದಿಂದ ವ್ಯಕ್ತಿಯನ್ನು ಬೆಂಬಲಿಸುವುದು ಹೆಚ್ಚಿರುವುದು ತಿಳಿದುಬಂದಿದೆ. ಆದರೆ ನಗರಸಭೆಯಲ್ಲಿ ಜಾತಿ ವ್ಯಕ್ತಿಗೆ ತಕ್ಕಮಟ್ಟಿಗೆ ಬೆಂಬಲಿಸಿರುವುದರ ಜೊತೆಗೆ ವ್ಯಕ್ತಿಯು ವಾರ್ಡಿನ ಜನರ ಸಮಸ್ಯೆಗಳು, ಅಭಿವೃದ್ಧಿಯ ಬಗ್ಗೆ, ಹೆಚ್ಚಿನ ಅನುಭವ ಹೊಂದಿದವನಿಗೆ ಹೆಚ್ಚಾಗಿ ಬೆಂಬಲಿಸುವುದಾಗಿ ಎಂದು ಅಧ್ಯಯನದಿಂದ ತಿಳಿದು ಬಂದಿದೆ. ಇಲ್ಲಿ ಗಮನಿಸುವ ಅಂಶವೆಂದರೆ ತೀರಾ ಹಿಂದುಳಿದ ಪಟ್ಟಣ ಪಂಚಾಯಿತಿಯಲ್ಲಿ ಜಾತಿ ಮತ್ತು ಹೆಚ್ಚಿನ ಜನರ ಸಂಪರ್ಕ ಹೊಂದಿದ ವ್ಯಕ್ತಿಯನ್ನು ಬೆಂಬಲಿಸುವುದರಿಂದ ವಾರ್ಡಿನ ಅಭಿವೃದ್ಧಿ ಸಾಧಿಸಲಾಗದೆ ಹಿಂದುಳಿದಿದೆ ಎಂದು ಹೇಳಬಹುದಾಗಿದೆ.

ಈ ನಿಟ್ಟಿನಲ್ಲಿ ಹಿಂದುಳಿದ ಪಟ್ಟಣ ಪಂಚಾಯಿತಿಯಲ್ಲಿ ಚುನಾಯಿತರನ್ನು ಬೆಂಬಲಿಸುವಂತಹ ಗುಣಮಟ್ಟದ ತರಬೇತಿಯನ್ನು ಕೊಡಿಸುವ ಅಗತ್ಯವಿದೆ ಎಂದು ಹೇಳಬಹುದಾಗಿದೆ.

**ಯಾವ ಪಕ್ಷ ಅಧಿಕಾರಕ್ಕೆ ಬಂದರೆ ಒಳಿತು**

| ಯಾವ ಪಕ್ಷ ಅಧಿಕಾರಕ್ಕೆ ಬಂದರೆ ಒಳಿತು | | ಕೂಡ್ಲಿಗಿ | | ಹೊಸಪೇಟೆ | |
|---|---|---|---|---|---|
| ಯಾವ ಪಕ್ಷ ಅಧಿಕಾರಕ್ಕೆ ಬಂದರೆ ಒಳಿತಾಗಬಹುದು | ಕಾಂಗ್ರೇಸ್ | ೬ | ೭.೫ | ೧೯ | ೧೫.೮೩ |
| | ಬಿಜೆಪಿ | ೧೦ | ೧೨.೫ | ೭೯ | ೬೫.೮೩ |
| | ಜೆಡಿಎಸ್ | ೪ | ೫.೦೦ | ೨ | ೧.೬೭ |
| | ಬಿ.ಎಸ್.ಆರ್ | ೧೯ | ೨೩.೭೫ | ೬ | ೫.೦೦ |
| | ಯಾರು ಮಾಡಲ್ಲ | ೪೧ | ೫೧.೨೫ | ೧೪ | ೧೧.೬೭ |
| | **ಒಟ್ಟು** | **೮೦** | **೧೦೦** | **೧೨೦** | **೧೦೦** |

**ಮೂಲ: ಕ್ಷೇತ್ರ ಕಾರ್ಯದ ಮಾಹಿತಿ**

ಸ್ಥಳೀಯ ಸಂಸ್ಥೆಯ ಅಧಿಕಾರ ನಿರ್ವಹಿಸಲು ಯಾವ ಪಕ್ಷದ ಅಗತ್ಯವಿದೆ ಎಂಬ ವಿವರಗಳನ್ನು ನೀಡಲಾಗಿದೆ. ಕೂಡ್ಲಿಗಿ ಪಟ್ಟಣ ಪಂಚಾಯಿತಿಯ ಶೇ. ೭.೫ರಷ್ಟು ಕುಟುಂಬಗಳು ಕಾಂಗ್ರೆಸ್ ಪಕ್ಷ ಬಂದರೆ ಒಳಿತಾಗುತ್ತದೆ ಎಂದು ತಿಳಿಸಿರುತ್ತಾರೆ. ಅದರಂತೆ ಶೇ. ೧೨.೫ರಷ್ಟು ಕುಟುಂಬಗಳು ನಮಗೆ ಬಿಜೆಪಿ ಪಕ್ಷ ಅಧಿಕಾರಕ್ಕೆ ಬಂದರೆ ಒಳಿತಾಗುತ್ತದೆ ಎಂದು ತಿಳಿಸಿರುತ್ತಾರೆ. ಇತರೆ ಶೇ. ೫ರಷ್ಟು ಕುಟುಂಬಗಳು ಜೆಡಿಎಸ್ ಪಕ್ಷದ ಪರವಾಗಿ ಇದ್ದು ಆ ಪಕ್ಷ ಸ್ಥಳೀಯ ಮಟ್ಟದಲ್ಲಿ ಬಂದರೆ ಒಳಿತಾಗುತ್ತದೆ ಎಂದು ತಿಳಿಸಿರುತ್ತಾರೆ. ಉಳಿದ ಶೇ.೨೩.೭೫ರಷ್ಟು ಕುಟುಂಬಗಳು ಸ್ವತಂತ್ರ ಪಕ್ಷವಾದ ಬಿಎಸ್ಆರ್ ಪಕ್ಷವನ್ನು ಸೂಚಿಸುತ್ತಾ ಅದು ಬಂದರೆ ನಮ್ಮ ಸ್ಥಳೀಯ ಸಂಸ್ಥೆಗೆ(ಪಟ್ಟಣ ಪಂಚಾಯಿತಿ) ಒಳಿತಾಗುತ್ತದೆ ಎಂದು ತಿಳಿಸಿರುತ್ತಾರೆ. ಅಲ್ಲದೇ ಶೇ.೫೧.೨೫ರಷ್ಟು ಕುಟುಂಬಗಳು ಪಕ್ಷದ ಬಗ್ಗೆ ಅತೃಪ್ತಿಯನ್ನು ಸೂಚಿಸುತ್ತಾ ಅಭಿವೃದ್ಧಿ ಕಾರ್ಯಗಳನ್ನು ಯಾರು ಮಾಡುವುದಿಲ್ಲ ಎಂದು ಅಭಿಪ್ರಾಯವನ್ನು ತಿಳಿಸಿರುತ್ತಾರೆ. ಹಾಗೆಯೇ ಹೊಸಪೇಟೆ ನಗರಸಭೆಯಲ್ಲಿ ಶೇ.೧೫.೮೩ರಷ್ಟು ಕುಟುಂಬಗಳು ಕಾಂಗ್ರೇಸ್ ಪಕ್ಷ ಅಸ್ತಿತ್ವದಲ್ಲಿದ್ದರೆ ಒಳಿತಾಗುವುದು ಎಂದು ತಿಳಿಸಿರುತ್ತಾರೆ. ಅದರಂತೆ ಶೇ. ೬೫.೮೩ರಷ್ಟು ಕುಟುಂಬಗಳು ಬಿಜೆಪಿ ಪಕ್ಷದಿಂದ ಒಳಿತಾಗುತ್ತದೆ ಎಂದು ತಿಳಿಸಿರುತ್ತಾರೆ. ಇತರೆ ಶೇ. ೧.೬೭ರಷ್ಟು ಕುಟುಂಬಗಳು ಜೆಡಿಎಸ್ ಪಕ್ಷ ಅಧಿಕಾರಕ್ಕೆ ಬಂದರೆ ಮಾತ್ರ ಒಳಿತಾಗುವುದು ಎಂದು ತಿಳಿಸಿರುತ್ತಾರೆ. ಉಳಿದ ಶೇ.೬ರಷ್ಟು ಕುಟುಂಬಗಳು ಸ್ವತಂತ್ರ ಪಕ್ಷವನ್ನು ಬೆಂಬಲಿಸಿದರೆ ಒಳಿತು ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿರುತ್ತಾರೆ. ಅಲ್ಲದೇ ಶೇ.೧೧.೬೭ರಷ್ಟು ಕುಟುಂಬಗಳು ಇಲ್ಲಿ ಯಾವ ಪಕ್ಷಗಳು ಕೆಲಸ ಮಾಡುವುದಿಲ್ಲ ಎಂದು ಹೇಳಿಕೊಂಡಿರುತ್ತಾರೆ. ಒಟ್ಟಾರೆ ಸಾಪೇಕ್ಷವಾಗಿ ಅಭಿವೃದ್ಧಿ ಹೊಂದಿದ ನಗರಸಭೆಯ ಕುಟುಂಬಗಳಿಗಿಂತ ತೀರಾ ಹಿಂದುಳಿದ ಪಟ್ಟಣ ಪಂಚಾಯಿತಿಯ ಕುಟುಂಬಗಳು ನಗರ ಸ್ಥಳೀಯ ಸಂಸ್ಥೆಗಳ ಬಗ್ಗೆ ಅತೃಪ್ತಿಯನ್ನು ಸೂಚಿಸುತ್ತಾ ತಮ್ಮ ವಾರ್ಡಿನ ಸ್ಥಿತಿಗತಿಯ ಬಗ್ಗೆ ಅನಿವಾರ್ಯವಾಗಿ ಬೇಸರದಿಂದ ಅಭಿಪ್ರಾಯವನ್ನು ಕೊಟ್ಟಿರುವುದು ಕಂಡುಬರುತ್ತದೆ. ಇಲ್ಲಿ ಗಮನಿಸಬೇಕಾದ ಸಂಗತಿಯೆಂದರೆ ಡಾ.ನಂಜುಂಡಪ್ಪ ವರದಿ ಪ್ರಕಾರ ಹೊಸಪೇಟೆ ನಗರಸಭೆಯ

ದುಃಸ್ಥಿತಿಯ ಮಟ್ಟಕ್ಕಿಂತ ಕೂಡ್ಲಿಗಿ ಪಟ್ಟಣ ಪಂಚಾಯಿತಿಯ ದುಃಸ್ಥಿತಿಯ ಮಟ್ಟ ಹೆಚ್ಚಾಗಿರುವುದು ಕಂಡು ಬಂದಿದೆ. ಆದರೆ ಹೊಸಪೇಟೆ ನಗರಸಭೆಯಲ್ಲಿ ವರಮಾನದಲ್ಲಿ ಉತ್ತಮ ಸ್ಥಿತಿಯಲ್ಲಿದ್ದು, ಕೂಡ್ಲಿಗಿ ಪಟ್ಟಣ ಪಂಚಾಯಿತಿಯಲ್ಲಿ ವರಮಾನವು ಉತ್ತಮವಾಗಿರದೆ ಕನಿಷ್ಠ ಮೂಲಭೂತ ಸೌಲಭ್ಯಗಳು ಸಿಗದೇ ಸ್ಥಳೀಯ ಸಂಸ್ಥೆಗಳ ಬಗ್ಗೆ ಅತೃಪ್ತಿಯನ್ನು ಹೊಂದಿರುವುದರ ಪರಿಣಾಮವಾಗಿ ಆಡಳಿತದ ವಿಫಲತೆಯಿಂದ ಹಿಂದುಳಿದಿದೆ ಎಂದು ಕಂಡು ಬಂದಿದೆ. ವರಮಾನವು ಸಹಿತ ಕನಿಷ್ಠ ಮೂಲಭೂತ ಸೌಲಭ್ಯಗಳನ್ನು ಪಡೆಯುವುದರಲ್ಲಿ ಒಂದು ಉತ್ತಮ ಜೀವನಮಟ್ಟದ ಸಾಧನವಾಗಿದೆ ಎಂದು ಸ್ಪಷ್ಟವಾಗಿ ತಿಳಿದು ಬಂದಿದೆ. ಹಾಗಾಗಿ ವರಮಾನ ವೃದ್ಧಿಗೆ ಬೇಕಾದ ಸಂಗತಿಗಳನ್ನು ಹೆಚ್ಚಿಸುವ ಅಗತ್ಯವಿದೆ ಎಂದು ಕಂಡುಕೊಳ್ಳಲಾಗಿದೆ.

**ಕೋಷ್ಟಕ ೫.೬. ನಗರವಾರು ಸಂದರ್ಶನ ಮಾಡಿದ ಕುಟುಂಬಗಳು ವ್ಯಕ್ತಪಡಿಸಿದ ಕುಡಿಯುವ ನೀರಿನ ಬಗ್ಗೆ ಅಭಿಪ್ರಾಯಗಳು**

**ನೀರು ಸರಬರಾಜು ವ್ಯವಸ್ಥೆಯ ಕುರಿತು**

| ಕುಡಿಯುವ ನೀರು ವಿವರ | ವಿವರಗಳು | ಕೂಡ್ಲಿಗಿ ಪಟ್ಟಣಪಂಚಾಯಿತಿ | | ಹೊಸಪೇಟೆ ನಗರ ಸಭೆ | |
|---|---|---|---|---|---|
| | | ಕುಟುಂಬಗಳು | ಶೇಕಡವಾರು | ಕುಟುಂಬಗಳು | ಶೇಕಡವಾರು |
| ನೀರು ಸರಬುರಾಜು ವ್ಯವಸ್ಥೆ ಇದೆಯಾ | ಇದೆ | ೮೦ | ೧೦೦.೦೦ | ೯೭ | ೮೦.೮೩ |
| | ಇಲ್ಲ | ೦ | ೦.೦೦ | ೨೩ | ೧೯.೧೭ |
| | **ಒಟ್ಟು** | **೮೦** | **೧೦೦** | **೧೨೦** | **೧೦೦** |

**ಮೂಲ: ಕ್ಷೇತ್ರ ಕಾರ್ಯದ ಮಾಹಿತಿ**

ನೀರು ಸರಬರಾಜು ವ್ಯವಸ್ಥೆಯ ವಿವರಗಳನ್ನು ಕೆಳಗಿನಂತೆ ತೋರಿಸಲಾಗಿದೆ. ಕೂಡ್ಲಿಗಿ ಪಟ್ಟಣ ಪಂಚಾಯಿತಿಯಲ್ಲಿ ಶೇ. ೧೦೦ರಷ್ಟು ಕುಟುಂಬಗಳು ನೀರಿನ ವ್ಯವಸ್ಥೆಯನ್ನು ಹೊಂದಿದ್ದೇವೆ ಎಂದು ತಿಳಿಸಿರುತ್ತಾರೆ ಹಾಗೂ ಹೊಸಪೇಟೆ ನಗರಸಭೆಯಲ್ಲಿ ಶೇ. ೮೦.೮೩ರಷ್ಟು ಕುಟುಂಬಗಳು ನೀರಿನ ವ್ಯವಸ್ಥೆಯನ್ನು ಪಡೆದಿದ್ದೇವೆ ಎಂದು ಹೇಳಿಕೊಂಡಿದ್ದಾರೆ. ಉಳಿದ ಶೇ. ೧೯.೧೭ರಷ್ಟು ಕುಟುಂಬಗಳು ನೀರಿನ ವ್ಯವಸ್ಥೆಯ ಸಂಪರ್ಕ ಹೊಂದಿರುವುದಿಲ್ಲ ಎಂದು ತಿಳಿಸಿರುತ್ತಾರೆ. ಒಟ್ಟಾರೆ ತೀರಾ ಹಿಂದುಳಿದ ಕೂಡ್ಲಿಗಿ ಪಟ್ಟಣ ಪಂಚಾಯಿತಿ ಕುಟುಂಬಗಳಿಗಿಂತ ಮುಂದುವರಿದ ನಗರಸಭೆಯ ಕುಟುಂಬಗಳಿಗೆ ನೀರಿನ ಪೂರೈಕೆಯ ಕೊರತೆಯನ್ನು ಕಾಣಬಹುದಾಗಿದೆ. ಅಂದರೆ ಹೊಸಪೇಟೆ ನಗರಸಭೆಯಲ್ಲಿ ನೀರಿನ ಕೊರತೆಯು ಕಂಡುಬಂದಿರುವುದು ಎರಡು ವಾರ್ಡಿನಲ್ಲಿ ಮಾತ್ರ ಕಾರಣ ಪರಿಶಿಷ್ಟರ, ಕೂಲಿ-ಕಾರ್ಮಿಕರ, ಹಿಂದುಳಿದ ವರ್ಗದ ಕುಟುಂಬಗಳು ಹೆಚ್ಚು ಇದ್ದು, ಈ ಕುಟುಂಬಗಳು ಆರ್ಥಿಕವಾಗಿ ದುರ್ಬಲರಾಗಿದ್ದು, ಸರ್ಕಾರದ ಸೌಲಭ್ಯಗಳಿಗೆ ಹೆಚ್ಚು ಅವಲಂಬಿತರಾಗಿದ್ದಾರೆ. ಒಟ್ಟಾರೆಯಾಗಿ ತುಂಗಭದ್ರಾ ನದಿಯು ಪಕ್ಕದಲ್ಲಿದ್ದರೂ ಕುಡಿಯುವ ನೀರಿನ ಸಮಸ್ಯೆಯನ್ನು ಎದುರಿಸುತ್ತಿದ್ದಾರೆ. ಆದರೂ ತೀರಾ ಹಿಂದುಳಿದ ಪಟ್ಟಣ ಪಂಚಾಯಿತಿಗಿಂತ ಮುಂದುವರಿದ ನಗರಸಭೆಯಲ್ಲಿ ನೀರಿನ ಸಮರ್ಪಕ ಪೂರೈಕೆ, ದುರಸ್ತಿ ಕಾರ್ಯಗಳಲ್ಲಿ ವಿಳಂಬವಾಗದೇ ಇದರ

ನಿರ್ವಹಣೆಯನ್ನು ಜವಾಬ್ದಾರಿಯುತವಾಗಿ ಮಾಡಿಕೊಂಡು ಹೋಗುವುದರೊಂದಿಗೆ ಮಾನವ ಮೂಲಭೂತ ಸೌಲಭ್ಯಗಳನ್ನು ಈಡೇರಿಸುವಲ್ಲಿ ಯಶಸ್ವಿಯಾಗಿದೆ ಎಂದು ವಾರ್ಡಿನವರು ಅಭಿಪ್ರಾಯವನ್ನು ತಿಳಿಸಿರುತ್ತಾರೆ. ಆದರೆ ತೀರಾ ಹಿಂದುಳಿದ ಪಟ್ಟಣ ಪಂಚಾಯಿತಿಗಿಂತಲೂ ಮುಂದುವರಿದ ನಗರಸಭೆಯ ವಾರ್ಡಿನ ಜನರು ಸಮರ್ಪಕವಾಗಿ ನೀರಿನ ಸೌಲಭ್ಯದ ಬಳಕೆಯ ಅರಿವನ್ನು ಹೆಚ್ಚು ಹೊಂದಿದ್ದು, ಇದರಿಂದ ತೀರಾ ಹಿಂದುಳಿದ ಪಟ್ಟಣ ಪಂಚಾಯಿತಿಯಲ್ಲಿ ಅರಿವಿನ ತೀವ್ರ ಕೊರತೆಯನ್ನು ಅನುಭವಿಸುತ್ತಿರುವುದು ತಿಳಿದುಬಂದಿದೆ. ಎರಡು ನಗರ ಸ್ಥಳೀಯ ಸಂಸ್ಥೆಗಳು ಕನಿಷ್ಠ ಮೂಲಭೂತ ಸೌಲಭ್ಯಗಳನ್ನು ಪೂರೈಸುವುದರಲ್ಲಿ ತಾರತಮ್ಯ ಮಾಡದೆ ನಿಯಮಿತವಾಗಿ ಕುಡಿಯುವ ನೀರಿನ ನಿರ್ವಹಣೆಯನ್ನು ಮಾಡುವ ಅವಶ್ಯಕತೆ ಇದೆಯೆಂದು ತಿಳಿಯಬಹುದಾಗಿದೆ.

**ನೀರನ್ನು ಪೂರೈಸುವ ಸಮಯದ ವಿವರ**

| ಕುಡಿಯುವ ನೀರು ಪೂರೈಸುವ ವಿವರ | | ಕೂಡ್ಲಿಗಿ | | ಹೊಸಪೇಟೆ | |
|---|---|---|---|---|---|
| ಒಂದು ವೇಳೆ ಇದೆ ಎಂದಾದರೆ ಎಷ್ಟು ಸಮಯ ಬಿಡುತ್ತಾರೆ | ದಿನಾಲು | ೫ | ೬.೨೫ | ೯ | ೭.೫ |
| | ದಿನ ಬಿಟ್ಟು ದಿನ | ೨೯ | ೩೬.೨೫ | ೬೮ | ೫೬.೬೭ |
| | ೩ ದಿನಕ್ಕೊಮ್ಮೆ | ೪೫ | ೫೬.೨೫ | ೨೦ | ೧೬.೬೭ |
| | **ಒಟ್ಟು** | **೭೯** | **೯೮.೭೫** | **೯೭** | **೮೦.೮೪** |

**ಮೂಲ: ಕ್ಷೇತ್ರ ಕಾರ್ಯದ ಮಾಹಿತಿ**

ನಗರ ಕುಡಿಯುವ ನೀರು ಪೂರೈಕೆ ಮತ್ತು ಸಮರ್ಥ ನಿರ್ವಹಣೆಯು ನಗರ ಸ್ಥಳೀಯ ಸಂಸ್ಥೆಗಳ ನಾಗರಿಕ ಜವಾಬ್ದಾರಿಯಾಗಿದೆ. ಕೂಡ್ಲಿಗಿ ಪಟ್ಟಣ ಪಂಚಾಯಿತಿಯ ಶೇ. ೬.೨೫ರಷ್ಟು ಕುಟುಂಬಗಳು ಪ್ರತಿ ದಿನ ಬಿಡುತ್ತಾರೆ ಎಂದು ತಿಳಿಸಿರುತ್ತಾರೆ. ಅದರಂತೆ ಶೇ. ೩೬.೨೫ರಷ್ಟು ಕುಟುಂಬಗಳು ಕುಡಿಯುವ ನೀರಿನ ಪೂರೈಕೆಯನ್ನು ದಿನ ಬಿಟ್ಟು ದಿನ ಪೂರೈಸುತ್ತಾರೆ ಎಂದು ಹೇಳಿರುತ್ತಾರೆ. ಉಳಿದ ಶೇ.೫೬.೨೫ರಷ್ಟು ಕುಟುಂಬಗಳು ನೀರಿನ ಪೂರೈಕೆಯನ್ನು ಮೂರು ದಿನಕ್ಕೊಮ್ಮೆ ನೀರಿನ ಲಭ್ಯತೆಯನ್ನು ಪಡೆಯುತ್ತಿದ್ದೇವೆ ಎಂದು ಹೇಳಿಕೊಂಡಿರುತ್ತಾರೆ ಹಾಗೂ ಹೊಸಪೇಟೆ ನಗರಸಭೆಯ ಶೇ.೭.೫ರಷ್ಟು ಕುಟುಂಬಗಳು ತಮಗೆ ನೀರಿನ ಪೂರೈಕೆಯು ದಿನಾಲು ಬಂದಿರುವ ಸಂಗತಿಯನ್ನು ಹೇಳಿರುತ್ತಾರೆ. ಅದರಂತೆ ಶೇ. ೫೬.೬೭ರಷ್ಟು ಕುಟುಂಬಗಳು ದಿನ ಬಿಟ್ಟು ದಿನ ಎಂದು ತಮ್ಮ ಹೇಳಿಕೆಯನ್ನು ನೀಡಿರುವುದು ಕಂಡುಬಂದಿದೆ. ಉಳಿದ ಶೇ.೧೬.೬೭ರಷ್ಟು ಕುಟುಂಬಗಳು ಮಾತ್ರ ತಮ್ಮ ನೀರಿನ ಲಭ್ಯತೆಯು ಮೂರು ದಿನಕ್ಕೊಮ್ಮೆ ಎಂದು ತಿಳಿಸಿರುತ್ತಾರೆ. ಒಟ್ಟಾರೆಯಾಗಿ ಸಾಪೇಕ್ಷವಾಗಿ ಮುಂದುವರಿದ ನಗರಸಭೆಗಿಂತಲೂ ತೀರಾ ಹಿಂದುಳಿದ ಕೂಡ್ಲಿಗಿ ಪಟ್ಟಣ ಪಂಚಾಯಿತಿಯ ಕುಟುಂಬಗಳು ಕುಡಿಯುವ ನೀರಿನ ಪೂರೈಕೆಯ ಬಗ್ಗೆ ವಾರ್ಡಿನ ಜನರು ಅತೃಪ್ತಿಯನ್ನು ಸೂಚಿಸಿದ್ದಾರೆ. ಅತೃಪ್ತಿ ಸೂಚಿಸಿದ ಕುಟುಂಬಗಳಲ್ಲಿ ಪಟ್ಟಣ ಪಂಚಾಯಿತಿಯ ನಗರ ಕೇಂದ್ರಿತ ಕುಟುಂಬಗಳನ್ನು ಹೊರತುಪಡಿಸಿ ಹಾಗೂ ನಗರಸಭೆಯಲ್ಲಿ ಸಹ ಪಟ್ಟಣ ಕೇಂದ್ರಿತ ಪ್ರದೇಶಗಳನ್ನು ಬಿಟ್ಟು ಕಾರಿಗನೂರು, ಕೊಂಡನಾಯಕನಹಳ್ಳಿಯವರಾಗಿದ್ದಾರೆ. ವಾರ್ಡಿನ ಜನರ ಅಭಿಪ್ರಾಯವನ್ನು ನೋಡಿದಾಗ ಪರಿಶಿಷ್ಟರು, ಹಿಂದುಳಿದವರು ಮತ್ತು ಕೂಲಿ ಕಾರ್ಮಿಕರಾದವರು ಹೆಚ್ಚು ಅತೃಪ್ತಿಯನ್ನು ಸೂಚಿಸಿರುವುದು ಅಧ್ಯಯನದಿಂದ ತಿಳಿದು ಬಂದಿದೆ. ಹೊಸಪೇಟೆ ನೀರಾವರಿ

ಪ್ರದೇಶವಾಗಿದ್ದು, ನದಿಯ ಪಕ್ಕದಲ್ಲಿ ವಾರ್ಡ್‌ಗಳಿದ್ದು ನೀರು ಪಕ್ಕಕ್ಕೆ ಹರಿದರೂ ಸಹ ನಮಗೆ ಕುಡಿಯುವುದಕ್ಕೆ ಸಮರ್ಪಕ ನೀರು ದೊರೆತಿಲ್ಲ ಎಂದು ವಾರ್ಡಿನವರು ಅತೃಪ್ತಿಯನ್ನು ಸೂಚಿಸಿದ್ದಾರೆ.

ಒಟ್ಟಾರೆ ನಗರ ಸ್ಥಳೀಯ ಸಂಸ್ಥೆಗಳ ಕೇಂದ್ರ ಸ್ಥಳವಾದ ಕೂಡ್ಲಿಗಿ (ಪಟ್ಟಣ ಪಂಚಾಯಿತಿ), ಹೊಸಪೇಟೆ (ನಗರಸಭೆ) ಹೊರತುಪಡಿಸಿ ಉಳಿದ ಎಲ್ಲಾ ವಾರ್ಡ್‌ಗಳಲ್ಲಿ ಕುಡಿಯುವ ನೀರು ತಕ್ಕಮಟ್ಟಿಗೆ ಪೂರೈಕೆ ಚೆನ್ನಾಗಿದೆ. ಆದರೆ ದುರಸ್ತಿ ಮತ್ತು ನಿರ್ವಹಣಾ ಕಾರ್ಯಗಳು ಸ್ಥಳೀಯ ಸಂಸ್ಥೆಯ ವ್ಯಾಪ್ತಿಯಲ್ಲಿ ಬರುವ ಎಲ್ಲಾ ವಾರ್ಡ್‌ಗಳಲ್ಲಿಯೂ ಸರಿಯಿಲ್ಲದಿರುವದರ ಹಿನ್ನೆಲೆಯಲ್ಲಿ ಕೂಡ್ಲಿಗಿ ಪಟ್ಟಣ ಪಂಚಾಯಿತಿಯು ಹಿಂದುಳಿದಿದ್ದು ನಗರಸಭೆಯು ಸಾಪೇಕ್ಷವಾಗಿ ಅಭಿವೃದ್ಧಿಯನ್ನು ಹೊಂದಿರುವುದಾಗಿ ತಿಳಿದು ಬಂದಿದೆ. ಇದಕ್ಕೆ ಹೆಚ್ಚಿನ ರೀತಿಯಲ್ಲಿ ಇಲಾಖೆಯ ಮೂಲಕ ತರಬೇತಿಯನ್ನು ಕೊಡಿಸುವುದರೊಂದಿಗೆ ಉತ್ತಮ ಸೇವಾ ಮನೋಭಾವನೆಯನ್ನು ಬೆಳೆಸಿಕೊಳ್ಳುವ ಅವಶ್ಯಕತೆಯಿದೆ ತಿಳಿಯಬಹುದಾಗಿದೆ.

**ನೀರಿನ ಗುಣಮಟ್ಟ ಹೇಗಿದೆ**

| ನೀರಿನ ಗುಣಮಟ್ಟ | | ಕೂಡ್ಲಿಗಿ | | ಹೊಸಪೇಟೆ | |
|---|---|---|---|---|---|
| ನೀರಿನ ಗುಣಮಟ್ಟ ಹೇಗಿದೆ | ಉತ್ತಮ | ೩೧ | ೩೮.೭೫ | ೩೫ | ೨೯.೧೭ |
| | ಉತ್ತಮವಾಗಿಲ್ಲ | ೪೯ | ೬೧.೨೫ | ೮೫ | ೭೦.೮೩ |
| | **ಒಟ್ಟು** | ೮೦ | ೧೦೦ | ೧೨೦ | ೧೦೦ |

**ಮೂಲ: ಕ್ಷೇತ್ರ ಕಾರ್ಯದ ಮಾಹಿತಿ**

ಕ್ಷೇತ್ರ ಅಧ್ಯಯನದ ಮೂಲಕ ನಡೆಸಿದ ಕುಟುಂಬದ ಸಮೀಕ್ಷೆ ಪ್ರಕಾರ ಕೂಡ್ಲಿಗಿ ಪಟ್ಟಣ ಪಂಚಾಯಿತಿ ಮತ್ತು ಹೊಸಪೇಟೆ ನಗರಸಭೆಯ ಕುಟುಂಬಗಳ ಸಮೀಕ್ಷೆಯಿಂದ ನೀರಿನ ಗುಣಮಟ್ಟ ಬಗ್ಗೆ ಕಂಡುಬಂದ ಜನರ ಅರಿವಿನ ಪ್ರಮಾಣವನ್ನು ಕೋಷ್ಟಕ–೬ರಲ್ಲಿ ತೋರಿಸಲಾಗಿದೆ. ರಾಜ್ಯ ಹಣಕಾಸು ಯೋಜನೆಯಡಿಯಲ್ಲಿ ಮಿನಿಟ್ಯಾಂಕ್‌ಗಳ ಮತ್ತು ಸಾರ್ವಜನಿಕ ನಳ ಮೂಲಕ ನೀರು ಪೂರೈಕೆ ಮಾಡಲಾಗುತ್ತದೆ. ವಾರ್ಡ್‌ವಾರು ನೀರು ಪೂರೈಕೆಯನ್ನು ನೋಡಿದಾಗ ಕೂಡ್ಲಿಗಿ ಪಟ್ಟಣ ಪಂಚಾಯಿತಿ ಶೇ. ೩೮.೭೫ರಷ್ಟು ಕುಟುಂಬಗಳು ಕುಡಿಯುವ ನೀರಿನ ಪೂರೈಕೆಯ ಸ್ಥಿತಿ ಉತ್ತಮವಾಗಿದೆ ಎಂದಿರುವರು. ಕೊಳವೆ ಬಾವಿಗಳ ವ್ಯವಸ್ಥೆ ಇದ್ದು, ನೀರಿನ ಗುಣಮಟ್ಟ ಸಹ ಕುಡಿಯುವುದಕ್ಕೆ ಯೋಗ್ಯವಾಗಿದೆ ಎಂದು ತಿಳಿಸಿರುತ್ತಾರೆ. ಅದರಂತೆ ಉಳಿದ ಶೇ. ೬೧.೨೫ರಷ್ಟು ಕುಟುಂಬಗಳು ಕುಡಿಯುವ ನೀರಿನ ಪೂರೈಕೆಯ ಕುರಿತು ವಾರ್ಡಿನ ಜನರು ಅತೃಪ್ತಿಯನ್ನು ಸೂಚಿಸಿದ್ದಾರೆ. ಮಿನಿಟ್ಯಾಂಕ್ ಮತ್ತು ಸಾರ್ವಜನಿಕ ನಳಗಳ ಮೂಲಕ ಕುಡಿಯುವ ನೀರಿನ ಪೂರೈಕೆ ಮಾಡಲಾಗಿದೆ. ಆದರೆ ಈ ಯೋಜನೆಯಡಿಯಲ್ಲಿ ಕೈಗೊಂಡ ಕಾಮಗಾರಿಗಳು ಕಳಪೆಯಿಂದಾಗಿದ್ದು, ಮೂರು ದಿನಕ್ಕೊಮ್ಮೆ ನೀರು ಲಭ್ಯವಿದ್ದು, ಈ ಯೋಜನೆಯ ಬಗ್ಗೆ ವಾರ್ಡಿನ ಜನರು ಹೆಚ್ಚು ಅತೃಪ್ತಿಯನ್ನು ಸೂಚಿಸಿದ್ದಾರೆ. ಹಾಗೂ ಹೊಸಪೇಟೆ ನಗರಸಭೆಯ ಶೇ. ೨೯.೧೭ರಷ್ಟು ಕುಟುಂಬಗಳು ಮಾತ್ರ ನೀರಿನ ಪೂರೈಕೆಯನ್ನು ಉತ್ತಮವಾಗಿದೆ ಎಂದು ಅಭಿಪ್ರಾಯವನ್ನು ಸೂಚಿಸಿದ್ದಾರೆ. ಅದರಂತೆ ಉಳಿದ ಶೇ. ೭೦.೮೩ರಷ್ಟು ಕುಟುಂಬಗಳು ಬೋರ್‌ವೆಲ್, ಮೋಟಾರ್ ಸುಡುವುದು, ನೀರಿನ

ಟ್ಯಾಂಕ್ ಇದ್ದು, ಅದು ಉದ್ಘಾಟನೆಯನ್ನು ಮಾಡದಿರುವುದು ಮತ್ತು ಅದರ ದುರಸ್ತಿ ಕಾರ್ಯದಲ್ಲಿ ಆಗುವ ವಿಳಂಬದಿಂದ ಕನಿಷ್ಠ ನೀರು ಕೂಡ ಪೂರೈಕೆಯಾಗುತ್ತಿಲ್ಲ ಎಂಬ ಅಂಶವು ತಿಳಿದು ಬಂದಿದೆ. ವಿಶ್ವಬ್ಯಾಂಕ್ ಯೋಜನೆಯ ಸಮಿತಿ ಇದ್ದು ಸಮಸ್ಯೆ ಬಗ್ಗೆ ಅದು ಯಾವುದೇ ಕಾಳಜಿಯನ್ನು ವಹಿಸಿಲ್ಲ. ನಗರಸಭೆಯು ಆ ಸಮಸ್ಯೆಗಳನ್ನು ಪರಿಹರಿಸಿ ವಾರ್ಡಿನ ಜನರಿಗೆ ಸಮರ್ಪಕ ಕುಡಿಯುವ ನೀರು ಪೂರೈಕೆ ಮಾಡಬೇಕಿತ್ತು.

ಆದರೆ ಅದು ಕೂಡ ಆ ಕಡೆ ವಿಶೇಷ ಗಮನಹರಿಸದೆ ಇರುವುದು ತಿಳಿದುಬಂದಿದೆ. ಆದರೂ ಕುಡಿಯುವ ನೀರು ಪೂರೈಕೆ ಸರಿಯಾಗಿಲ್ಲದಿರುವುದು ಅಧ್ಯಯನದಿಂದ ತಿಳಿದು ಬಂದಿದೆ. ಒಟ್ಟಾರೆ ಸ್ಥಳೀಯ ಸಂಸ್ಥೆಗಳಲ್ಲಿ ವಿಶ್ವಬ್ಯಾಂಕಿನ ಯೋಜನೆ ಅನುಷ್ಠಾನಗೊಂಡಿದ್ದರೂ ಕನಿಷ್ಠ ತಲಾ ನೀರು ದೊರೆಯುತ್ತಿಲ್ಲ. ಇಲ್ಲಿ ತಿಳಿದುಬರುವ ಸಂಗತಿಯೆಂದರೆ ತೀರಾ ಹಿಂದುಳಿದ ಕೂಡ್ಲಿಗಿ ಪಟ್ಟಣ ಪಂಚಾಯಿತಿಯ ಕುಟುಂಬಗಳು ಮುಂದುವರಿದ ನಗರಸಭೆಯ ಕುಟುಂಬಗಳಿಗಿಂತಲೂ ನೀರಿನ ಗುಣಮಟ್ಟವು ಹೆಚ್ಚು ಉತ್ತಮವಾಗಿಲ್ಲದಿರುವುದು ಕಂಡು ಬಂದಿದೆ. ಈ ನಿಟ್ಟಿನಲ್ಲಿ ಯೋಗ್ಯಮಟ್ಟದ ನೀರನ್ನು ಪೊರೈಸುವುದರಲ್ಲಿ ಹಿಂದುಳಿದ ಮತ್ತು ಮುಂದುವರೆದ ನಗರ ಸ್ಥಳೀಯ ಸಂಸ್ಥೆಗಳು ಹೆಚ್ಚಿನ ರೀತಿಯಲ್ಲಿ ಶ್ರಮವಹಿಸಬೇಕಾದ ಅವಶ್ಯಕತೆಯಿದೆ ಎಂದು ತಿಳಿಯಬಹುದಾಗಿದೆ.

**ನೀರು ಯಾವ ಮೂಲದಿಂದ ಪೂರೈಕೆಯಾಗುತ್ತದೆ**

| ನೀರಿನ ಪೂರೈಕೆ | ವಿವರಗಳು | ಕೂಡ್ಲಿಗಿ | | ಹೊಸಪೇಟೆ | |
|---|---|---|---|---|---|
| ನೀರು ಯಾವ ಮೂಲದಿಂದ ಪೊರೈಸುತ್ತಾರೆ | ಸಾರ್ವಜನಿಕ ನಳ, ಮಿನಿ ಟ್ಯಾಂಕ್ | ೩೬ | ೪೫.೦೦ | ೧೮ | ೧೫.೦೦ |
| | ಸ್ವಂತ ನಳ | ೩೮ | ೪೭.೫ | ೯೭ | ೮೦.೮೩ |
| | ಸ್ವಂತ ಕೊಳವೆಬಾವಿ | ೬ | ೭.೫ | ೫ | ೪.೧೭ |
| | ಒಟ್ಟು | ೮೦ | ೧೦೦ | ೧೨೦ | ೧೦೦ |

**ಮೂಲ: ಕ್ಷೇತ್ರ ಕಾರ್ಯದ ಮಾಹಿತಿ**

ನಗರಸಭೆ ಮತ್ತು ಪಟ್ಟಣ ಪಂಚಾಯಿತಿ ವ್ಯಾಪ್ತಿಯ ವಾರ್ಡ್‌ವಾರು ರಾಜ್ಯ ಹಣಕಾಸು ಯೋಜನೆಯಡಿಯಲ್ಲಿ ನೀರು ಪೂರೈಕೆಯನ್ನು ನಿರ್ವಹಿಸಲಾಗುತ್ತದೆ. ಕೂಡ್ಲಿಗಿ ಪಟ್ಟಣ ಪಂಚಾಯಿತಿಯ ಶೇ. ೪೫ರಷ್ಟು ಕುಟುಂಬಗಳು ಮಿನಿಟ್ಯಾಂಕ್‌ಗಳ ಮತ್ತು ಸಾರ್ವಜನಿಕ ನಳಗಳ ಮೂಲಕ ಕುಡಿಯುವ ನೀರು ಪೂರೈಸಲಾಗುತ್ತದೆ. ಅದರಂತೆ ಶೇ. ೪೭.೫ರಷ್ಟು ಕುಟುಂಬಗಳು ತಮ್ಮ ಕುಡಿಯುವ ನೀರನ್ನು ಸ್ವಂತ ಕೊಳವೆ ಬಾವಿಯನ್ನು ಹೊಂದಿರುವುದರೊಂದಿಗೆ ನೀರಿನ ಲಭ್ಯತೆಯನ್ನು ಮಾಡಿಕೊಂಡಿದ್ದಾರೆ ಹಾಗೂ ಹೊಸಪೇಟೆ ನಗರಸಭೆಯಲ್ಲಿ ಶೇ. ೧೫ರಷ್ಟು ಕುಟುಂಬಗಳು ತಮ್ಮ ನೀರಿಗಾಗಿ ಸಾರ್ವಜನಿಕ ನಳ ಮತ್ತು ಮಿನಿಟ್ಯಾಂಕ್‌ಗಳ ಮೂಲಕ ಪೂರೈಸಿಕೊಂಡಿರುವುದು ತಿಳಿದು ಬಂದಿದೆ. ಅದರಂತೆ ಶೇ. ೮೦.೮೩ರಷ್ಟು ಕುಟುಂಬಗಳು ತಮ್ಮ ನೀರಿನ ಲಭ್ಯತೆಯನ್ನು ಸ್ವಂತ ನಳವನ್ನು ಹೊಂದಿಕೊಳ್ಳುವುದರ ಮೂಲಕ ನೀರು ಪೂರೈಸಿಕೊಂಡಿರುವುದು ತಿಳಿದುಬಂದಿದೆ. ಉಳಿದ ಶೇ. ೪.೧೭ರಷ್ಟು ಕುಟುಂಬಗಳು ಸ್ವಂತ ನಳ ನಿರ್ಮಿಸಿಕೊಳ್ಳುವುದರೊಂದಿಗೆ ಕುಡಿಯುವ

ನೀರು ಪೂರೈಕೆಯಾಗುತ್ತಿರುವುದು ತಿಳಿದು ಬಂದಿದೆ. ಒಟ್ಟಾರೆ ತೀರಾ ಹಿಂದುಳಿದ ಪಟ್ಟಣ ಪಂಚಾಯಿತಿ ವ್ಯಾಪ್ತಿಯ ಕುಟುಂಬಗಳೂ ಅಭಿವೃದ್ಧಿ ಹೊಂದಿದ ನಗರಸಭೆಯಲ್ಲಿಯೂ ಸರಿಸುಮಾರು ಸಮ ಪ್ರಮಾಣದಲ್ಲಿ ನೀರು ಪೂರೈಕೆಯ ವಿಧಾನಗಳನ್ನು ಅಳವಡಿಸಿಕೊಂಡಿರುವುದು ತಿಳಿದುಬಂದಿದೆ. ಆದರೆ ಕೂಡ್ಲಿಗಿ ಪಟ್ಟಣ ಪಂಚಾಯಿತಿಗಿಂತಲೂ ಹೊಸಪೇಟೆ ನಗರಸಭೆಯು ಇವುಗಳನ್ನು ಸಮರ್ಥವಾಗಿ ಬಳಸಿಕೊಳ್ಳುವುದರಲ್ಲಿ ಹೆಚ್ಚು ಭಾಗವಹಿಸಿರುವುದು ತಿಳಿದುಬಂದಿದೆ. ಅಂತೆಯೇ ಕೂಡ್ಲಿಗಿ ಪಟ್ಟಣ ಪಂಚಾಯಿತಿಯು ಅದರ ದಕ್ಷವಾಗಿ ಬಳಸಿಕೊಳ್ಳುವುದರಲ್ಲಿ ವಿಫಲಗೊಂಡಿದ್ದು ಅದು ಹಿಂದುಳಿಯಲಿಕ್ಕೆ ಒಂದು ಕಾರಣವಾಗಿದೆ ಎಂದು ತಿಳಿಯಬಹುದಾಗಿದೆ.

**ನೀರಿನ ಸಂಪರ್ಕ ಎಲ್ಲಿದೆ**

| **ಸಂಪರ್ಕದ ವಿವರ** | | **ಕೂಡ್ಲಿಗಿ** | | **ಹೊಸಪೇಟೆ** | |
|---|---|---|---|---|---|
| ನೀರಿನ ಸಂಪರ್ಕ ಎಲ್ಲಿದೆ | ಹೊರಗಿದೆ | ೭೦ | ೮೭.೫ | ೨೩ | ೧೯.೧೭ |
| | ಒಳಗಿದೆ | ೧೦ | ೧೨.೫ | ೯೭ | ೮೦.೮೩ |
| | **ಒಟ್ಟು** | ೮೦ | ೧೦೦ | ೧೨೦ | ೧೦೦ |

**ಮೂಲ: ಕ್ಷೇತ್ರ ಕಾರ್ಯದ ಮಾಹಿತಿ**

ನಗರವಾರು ಅಧ್ಯಯನದಲ್ಲಿ ಕೂಡ್ಲಿಗಿ ಪಟ್ಟಣ ಪಂಚಾಯಿತಿಯ ಶೇ. ೮೭.೫ರಷ್ಟು ಕುಟುಂಬಗಳು ತಮಗೆ ಹೊರಗಿನಿಂದ ನೀರಿನ ಪೂರೈಕೆಯನ್ನು ಮಾಡಿಕೊಂಡಿದ್ದೇವೆ ಎಂದು ತಿಳಿಸಿರುತ್ತಾರೆ. ಅದರಂತೆ ಉಳಿದ ಶೇ. ೧೨.೫ರಷ್ಟು ಕುಟುಂಬಗಳು ಒಳಗೆ ನೀರಿನ ಪೂರೈಕೆಯನ್ನು ಹೊಂದಿರುವುದನ್ನು ಹೇಳಿರುವರು ಮತ್ತು ಹೊಸಪೇಟೆ ನಗರಸಭೆಯ ಶೇ. ೧೯.೧೭ರಷ್ಟು ಕುಟುಂಬಗಳು ನೀರಿನ ಲಭ್ಯತೆಯನ್ನು ಹೊರಗಡೆ ಕಲ್ಪಿಸಿಕೊಂಡಿರುವುದಾಗಿದೆ ಎಂದು ತಿಳಿದು ಬಂದಿದೆ. ಅದರಂತೆ ಉಳಿದ ಶೇ. ೮೦.೮೩ರಷ್ಟು ಕುಟುಂಬಗಳು ಒಳಗೆ ನೀರಿನ ಪೂರೈಕೆಯನ್ನು ಮಾಡಿಕೊಂಡಿರುವುದು ಕಂಡು ಬಂದಿದೆ. ಒಟ್ಟಾರೆ ರಾಜ್ಯ ಹಣಕಾಸು ಯೋಜನೆಯಡಿಯಲ್ಲಿ ನಗರ ಕೇಂದ್ರಗಳಲ್ಲಿ ಕೊಳವೆ ಬಾವಿ ಇದ್ದು, ಇದರ ಮೂಲಕ ನೀರಿನ ಟ್ಯಾಂಕ್‌ಗಳಲ್ಲಿ ನೀರು ಸಂಗ್ರಹಿಸಿ, ಮಿನಿ ಟ್ಯಾಂಕ್‌ಗಳ ಮತ್ತು ಸಾರ್ವಜನಿಕ ನಳಗಳ ಮೂಲಕ ನೀರು ಪೂರೈಸಲಾಗುತ್ತಿದೆ. ಒಟ್ಟು ಸ್ಥಳೀಯ ಸಂಸ್ಥೆಗಳ ವ್ಯಾಪ್ತಿಯಲ್ಲಿ ಹಲವು ಮಿನಿ ಟ್ಯಾಂಕ್‌ಗಳಿದ್ದು ಪ್ರತಿದಿನ, ಎರಡು ದಿನಕ್ಕೊಮ್ಮೆ ಅಥವಾ ಕೆಲವು ಕಡೆ ಮೂರು ದಿನಗಳಿಗೊಮ್ಮೆ ಕುಡಿಯುವ ನೀರನ್ನು ಪೂರೈಕೆ ಮಾಡಲಾಗುತ್ತಿದೆ. ಇಲ್ಲಿ ಗಮನಿಸುವ ಸಂಗತಿಯೆಂದರೆ ಸ್ಥಳೀಯ ಸಂಸ್ಥೆಗಳ ವ್ಯಾಪ್ತಿಯಲ್ಲಿ ಕೆಲವು ಕಾಲ ಅಂತರ್ಜಲ ಮತ್ತು ನೀರಿನ ಗುಣಮಟ್ಟದ ಕೊರತೆ ಉಂಟಾಗುತ್ತಿದೆ. ವಿಶೇಷವೆಂದರೆ ಇವೆರೆಡೂ ನಗರ ಸ್ಥಳೀಯ ಸಂಸ್ಥೆಗಳಲ್ಲಿ ಸರಿಸುಮಾರು ನೀರಿನ ಪೂರೈಕೆಯ ಸಮಸ್ಯೆಯು ಒಂದೇ ಪ್ರಮಾಣದಲ್ಲಿರುವುದು ಕಂಡುಬಂದಿದೆ. ಕುಡಿಯುವ ನೀರಿಗಾಗಿ ಸಾಪೇಕ್ಷವಾಗಿ ಮುಂದುವರಿದ ನಗರಸಭೆ ಕುಟುಂಬಗಳಿಗಿಂತಲೂ ತೀರಾ ಹಿಂದುಳಿದ ಕೂಡ್ಲಿಗಿ ಪಟ್ಟಣ ಪಂಚಾಯಿತಿ ಕುಟುಂಬಗಳ ಜನರು ಹೆಚ್ಚು ಪರದಾಡುವ ಸ್ಥಿತಿ ಬಂದಿರುವುದು ತಿಳಿದು ಬಂದಿದೆ. ಕಾರಣ ಒಣಭೂಮಿಯನ್ನು ಹೆಚ್ಚಾಗಿ ಹೊಂದಿರುವುದರಿಂದ ಇಲ್ಲಿ ಹೆಚ್ಚು ಕೂಲಿ ಕಾರ್ಮಿಕರು, ಹಿಂದುಳಿದ ವರ್ಗಗಳು ಹಾಗೂ ಆರ್ಥಿಕವಾಗಿ ದುರ್ಬಲರಾಗಿದ್ದು ಕೂಡ್ಲಿಗಿ ಪಟ್ಟಣ

ಪಂಚಾಯಿತಿಯು ಹಿಂದುಳಿದಿದೆ ಎನ್ನಬಹುದಾಗಿದೆ. ಹಾಗಾಗಿ ಸರ್ಕಾರದಿಂದ ಬರುವ ಅನುದಾನದಿಂದ ನಗರ ಇಲ್ಲಾ ಮನೆಗಳ ಬಾಗಿಲಿಗೆ ನಿಯಮಿತವಾದ ನೀರು ಸರಬುರಾಜು ಮಾಡುವ ಗುರಿಯನ್ನು ಹೊಂದುವ ಮೂಲಕ ಹಿಂದುಳಿದ ಸ್ಥಳೀಯ ಸಂಸ್ಥೆಯನ್ನು ಅಭಿವೃದ್ಧಿ ಸ್ಥಳೀಯ ಸಂಸ್ಥೆಯನ್ನಾಗಿ ಮಾಡುವ ಅವಶ್ಯಕತೆಯಿದೆ ಎನ್ನಬಹುದಾಗಿದೆ.

**ನೀರು ಹೊರಗಿದ್ದರೆ, ನಿಮ್ಮ ಮನೆಯಿಂದ ನೀರಿನ ಜಾಗಕ್ಕೆ ಎಷ್ಟು ದೂರ ಇದೆ**

| ನೀರಿನ ಜಾಗದ ದೂರ | | ಕೂಡ್ಲಿಗಿ | | ಹೊಸಪೇಟೆ | |
|---|---|---|---|---|---|
| ಹೊರಗಿದ್ದರೆ, ನಿಮ್ಮ ಮನೆಯಿಂದ ನೀರಿನ ಜಾಗಕ್ಕೆ ಎಷ್ಟು ದೂರ ಇದೆ | ೫೦ಮೀ | ೭ | ೮.೭೫ | ೪೩ | ೩೫.೮೩ |
| | ೧೦೦ಮೀ | ೮ | ೧೦.೦೦ | ೨೧ | ೧೭.೫ |
| | ಮತ್ತೊಂದು ವಾರ್ಡಿಗೆ ಹೋಗಿ | ೫೫ | ೬೮.೭೫ | ೩೩ | ೨೭.೫ |
| | ಒಟ್ಟು | ೭೦ | ೮೭.೫ | ೯೭ | ೮೦.೮೩ |

**ಮೂಲ: ಕ್ಷೇತ್ರ ಕಾರ್ಯದ ಮಾಹಿತಿ**

ನಗರ ಪ್ರದೇಶದಲ್ಲಿನ ಕೂಡ್ಲಿಗಿ ಪಟ್ಟಣ ಪಂಚಾಯಿತಿಯ ಶೇ. ೮.೭೫ರಷ್ಟು ಕುಟುಂಬಗಳು ಕುಡಿಯುವ ನೀರಿಗಾಗಿ ಐವತ್ತು ಮೀಟರ್ ದೂರ ಹೋಗಿ ತರಬೇಕು ಎಂದು ತಿಳಿಸಿರುತ್ತಾರೆ. ಅದರಂತೆ ಶೇ. ೧೦ರಷ್ಟು ಕುಟುಂಬಗಳು ನೂರು ಮೀಟರ್ ದೂರ ಹೋಗಿ ಕುಡಿಯುವ ನೀರನ್ನು ತರಲಾಗುತ್ತದೆ ಎಂದು ತಿಳಿಸಿರುತ್ತಾರೆ. ಉಳಿದ ಶೇ. ೬೮.೭೫ರಷ್ಟು ಕುಟುಂಬಗಳು ತಮ್ಮ ನೀರಿನ ದಾಹವನ್ನು ನೀಗಿಸಿಕೊಳ್ಳಲು ಮತ್ತೊಂದು ವಾರ್ಡಿಗೆ ಹೋಗಿ ಕುಡಿಯುವ ನೀರನ್ನು ಪೂರೈಕೆ ಮಾಡಿಕೊಳ್ಳಲಾಗುತ್ತದೆ ಎಂದಿದ್ದಾರೆ. ಹೊಸಪೇಟೆ ನಗರಸಭೆಯ ಶೇ. ೩೫.೮೩ರಷ್ಟು ಕುಟುಂಬಗಳು ಕುಡಿಯುವ ನೀರನ್ನು ಐವತ್ತು ಮೀಟರ್ ದೂರ ಕ್ರಮಿಸಿಕೊಂಡು ತರಲಾಗುತ್ತದೆ ಎಂದು ಅಭಿಪ್ರಾಯವನ್ನು ವ್ಯಕ್ತಪಡಿಸಿರುತ್ತಾರೆ. ಅದರಂತೆ ಶೇ.೧೭.೫ರಷ್ಟು ಕುಟುಂಬಗಳು ಸಹ ನೂರು ಮೀಟರ್ ದೂರ ಹೋಗಿ ನೀರು ತರಲಾಗುತ್ತದೆ ಎಂದು ಹೇಳಿರುತ್ತಾರೆ. ಉಳಿದ ಶೇ.೨೭.೫ರಷ್ಟು ಕುಟುಂಬಗಳು ಮಾತ್ರ ಮತ್ತೊಂದು ವಾರ್ಡಿಗೆ ಹೋಗಿ ನೀರಿನ ಸಂಪರ್ಕವನ್ನು ಪಡೆಯುತ್ತಿದ್ದೇವೆ ಎಂದು ಅಧ್ಯಯನದಿಂದ ತಿಳಿದುಬಂದಿದೆ. ಒಟ್ಟಾರೆ ನಗರ ಸ್ಥಳೀಯ ಸಂಸ್ಥೆಗಳ ವ್ಯಾಪ್ತಿಯಲ್ಲಿ ರಾಜ್ಯ ಹಣಕಾಸು ಯೋಜನೆಯಡಿಯಲ್ಲಿ ಎಲ್ಲಾ ವಾರ್ಡುಗಳಿಗೆ ಕೈಪಂಪ್‌ಗಳು, ಸಾರ್ವಜನಿಕ ನಳ, ಕೊಳವೆಬಾವಿ ಮತ್ತು ಮಿನಿಟ್ಯಾಂಕ್‌ಗಳ ಮೂಲಕ ಕುಡಿಯುವ ನೀರಿನ ಪೂರೈಕೆಯನ್ನು ನಿರ್ವಹಿಸಲಾಗುತ್ತಿದೆ. ಪಟ್ಟಣ ಪಂಚಾಯಿತಿ ಮತ್ತು ನಗರಸಭೆಯಲ್ಲಿ ಕೊಳವೆಬಾವಿ ಇದ್ದು, ತುಂಗಭದ್ರಾ ಯೋಜನೆ ಘಟಕಗಳಿದ್ದು ಇದರ ಮೂಲಕ ನೀರಿನ ಟ್ಯಾಂಕ್‌ಗಳಲ್ಲಿ ನೀರು ಸಂಗ್ರಹಿಸಿ, ಮಿನಿಟ್ಯಾಂಕ್‌ಗಳ ಮತ್ತು ಸಾರ್ವಜನಿಕ ನಳಗಳ ಮೂಲಕ ನೀರು ಪೂರೈಸಲಾಗುತ್ತಿದೆ. ಈ ಪ್ರದೇಶ ಒಣಭೂಮಿಯಾಗಿದ್ದು ಇದರ ವ್ಯಾಪ್ತಿಯಲ್ಲಿ ೮ ಕೆರೆಗಳಿದ್ದು, ಇಲ್ಲಿ ಬೋರ್‌ವೆಲ್‌ಗಳಲ್ಲಿ ಅಂತರ್ಜಲ ಕೆಲವು ಕಾಲದವರೆಗೆ ಉತ್ತಮವಾಗಿದೆ. ಸ್ಥಳೀಯ ಸಂಸ್ಥೆಯು ಕುಡಿಯುವ ನೀರಿಗಾಗಿ ಹೆಚ್ಚಿನ ಒತ್ತು ನೀಡಲಾಗಿದೆ ಎಂದು ತಿಳಿದು ಬಂದಿದೆ. ಒಟ್ಟಾರೆಯಾಗಿ, ಗಮನಿಸಬೇಕಾದ ಸಂಗತಿಯೆಂದರೆ ವೈಯಕ್ತಿಕ ನಳಗಳ ವಿವರಗಳನ್ನು

ನೋಡಿದಾಗ ಸಾಪೇಕ್ಷವಾಗಿ ಅಭಿವೃದ್ಧಿ ಹೊಂದಿದ ನಗರಸಭೆಯ ಕುಟುಂಬಗಳಿಗಿಂತಲೂ ತೀರಾ ಹಿಂದುಳಿದ ಪಟ್ಟಣ ಪಂಚಾಯಿತಿಯ ಕುಟುಂಬಗಳು ಕಡಿಮೆ ಇರುವುದು ಕಂಡುಬಂದಿದೆ.

ಆದರೆ ಎರಡು ಸ್ಥಳೀಯ ಸಂಸ್ಥೆಗಳಲ್ಲಿ ವೈಯಕ್ತಿಕ ನಳಗಳನ್ನು ಹೊಂದದೇ ಇರುವುದಕ್ಕೆ ವಿಭಿನ್ನ ಕಾರಣಗಳಿರುತ್ತವೆ. ಅಂದರೆ ಆಡಳಿತ ನಿರ್ವಹಣೆಯ ಕೊರತೆಯಿಂದಾಗಿ, ಕೂಲಿ ಕಾರ್ಮಿಕರಿರುವುದರಿಂದ ಆರ್ಥಿಕವಾಗಿ ದುರ್ಬಲವಾಗಿದ್ದುಕೊಂಡು ವೈಯಕ್ತಿಕ ನಳಗಳನ್ನು ಹೊಂದದೇ ಸಾರ್ವಜನಿಕ ನಳಗಳಿಂದಲೇ ತಮ್ಮ ಕುಡಿಯುವ ನೀರಿನ ಪೂರೈಕೆಯನ್ನು ಮಾಡಿಕೊಂಡಿರುವುದು ತಿಳಿದು ಬಂದಿದೆ. ನಗರ ಸ್ಥಳೀಯ ಸಂಸ್ಥೆಗಳಿಗೆ ಹಲವು ನೀರು ಪೂರೈಕೆ ಯೋಜನೆಗಳಿದ್ದು, ಸರಕಾರದ ನಿಯಮಾವಳಿ ಪ್ರಕಾರ ಸಮರ್ಪಕವಾಗಿ ನೀರು ಪೂರೈಕೆಯಾಗುವ ಹಂತದಲ್ಲಿದೆ. ಆದರೆ ಅದು ದಾಖಲೆಯಲ್ಲಿ ಮಾತ್ರವಿದ್ದು ಯಾವುದೇ ಸಮರ್ಪಕ ನಿರ್ವಹಣೆಯ ಅನುಷ್ಠಾನದಲ್ಲಿ ಇಲ್ಲದಿರುವುದು ತಿಳಿದು ಬಂದಿದೆ. ಒಟ್ಟಾರೆ ನೀರು ಪೂರೈಕೆಯ ಬಗ್ಗೆ ಎಲ್ಲಾ ಜಾತಿಗಳು ತೃಪ್ತಿಕರವೆಂದು ಉತ್ತರಿಸಿದ್ದಾರೆ. ಆದರೆ ನಿರ್ವಹಣೆ ಮತ್ತು ದುರಸ್ತಿ ಕಾರ್ಯದ ಬಗ್ಗೆ ಸ್ಥಳೀಯ ಸಂಸ್ಥೆಗಳು ಹೆಚ್ಚು ವಿಳಂಬ ಮಾಡುತ್ತದೆ ಎಂದು ಸರಿಸುಮಾರು ಎರಡು ಸ್ಥಳೀಯ ಸಂಸ್ಥೆಗಳ ವ್ಯಾಪ್ತಿಯ ಕುಟುಂಬಗಳು ತಮ್ಮ ಅಭಿಪ್ರಾಯ ವ್ಯಕ್ತಪಡಿಸಿರುವುದು ಕಂಡು ಬಂದಿದೆ. ಎರಡು ನಗರ ಸ್ಥಳೀಯ ಸಂಸ್ಥೆಗಳು ನೀರು ಪೊರೈಕೆ ನಿರ್ವಹಣೆಯಲ್ಲಿ ಗುಣಮಟ್ಟದ ಬದಲಾವಣೆಯನ್ನು ತರುವುದರ ಮೂಲಕ ತುರ್ತು ಕಾರ್ಯ ನಿರ್ವಹಿಸಬೇಕಾದ ಅಗತ್ಯತೆಯಿದೆ ಎಂದು ತಿಳಿಯಬಹುದಾಗಿದೆ.

**ನಿಮ್ಮ ಬಳಕೆಗೆ ಸಾಕಷ್ಟು ನೀರು ಪೂರೈಕೆ ಕುರಿತು**

| ಸಾಕಷ್ಟು ನೀರಿನ ಪೂರೈಕೆ | | ಕೂಡ್ಲಿಗಿ | | ಹೊಸಪೇಟೆ | |
|---|---|---|---|---|---|
| ನಿಮಗೆ ಕುಡಿಯುವ | ಆಗುತ್ತೆ | ೭೩ | ೯೧.೨೫ | ೫೪ | ೪೫.೦೦ |
| ಸಾಕಷ್ಟು ನೀರು | ಆಗಲ್ಲಾ | ೭ | ೮.೭೫ | ೬೬ | ೫೫.೦೦ |
| ಪೊರೈಕೆಯಾಗುತ್ತದೆಯಾ | ಒಟ್ಟು | ೮೦ | ೧೦೦ | ೧೨೦ | ೧೦೦ |

**ಮೂಲ: ಕ್ಷೇತ್ರ ಕಾರ್ಯದ ಮಾಹಿತಿ**

ನಗರವಾರು ಸಂದರ್ಶಿಸಿದ ಸ್ಥಳೀಯ ಸಂಸ್ಥೆಗಳಲ್ಲಿ ನೀರು ಸರಬುರಾಜು ಮತ್ತು ನೈರ್ಮಲೀಕರಣ ಯೊಜನೆಯಡಿಯಲ್ಲಿ ಕೂಡ್ಲಿಗಿ ಪಟ್ಟಣ ಪಂಚಾಯಿತಿಯಲ್ಲಿ ಶೇ. ೯೧.೨೫ರಷ್ಟು ಕುಟುಂಬಗಳು ಕುಡಿಯುವ ನೀರಿಗಾಗಿ ಕೈಪಂಪು, ಕೊಳವೆ ಬಾವಿಯಿಂದ ಸಂಗ್ರಹಿಸಿದ ನೀರನ್ನು ಮಿನಿಟ್ಯಾಂಕ್‌ನಿಂದ, ಸಾರ್ವಜನಿಕ ನಳಗಳಿಂದ ಸಾಕಷ್ಟು ನೀರನ್ನು ಪೂರೈಸಲಾಗುತ್ತದೆ ಎಂದು ತಿಳಿಸಿರುವರು. ಅದರಂತೆ ಉಳಿದ ಶೇ. ೮.೭೫ರಷ್ಟು ಕುಟುಂಬಗಳು ಕುಡಿಯುವ ನೀರಿನ ಪೂರೈಕೆಯಲ್ಲಿ ವಿದ್ಯುತ್ ಸಮಸ್ಯೆ ಆದಾಗ ಕೈಪಂಪುಗಳು ಹೆಚ್ಚು ದುರಸ್ತಿಗಳಾಗಿರುತ್ತವೆ ಮತ್ತು ಪಟ್ಟಣ ಪಂಚಾಯಿತಿಯು ಒಣಭೂಮಿ ಪ್ರದೇಶವಾಗಿದ್ದು, ಬೇಸಿಗೆ ಕಾಲದಲ್ಲಿ ಅಂತರ್ಜಲ ಬತ್ತಿ ಹೋಗುವುದರಿಂದ ಅದಕ್ಕೆ ಪರ್ಯಾಯ ವಿಧಾನಗಳಿಲ್ಲದೇ ಕುಡಿಯುವ ನೀರಿನ ಸಮಸ್ಯೆಯು ಎದುರಾಗುತ್ತದೆ ಎಂದು ಸೂಚಿಸಿದ್ದಾರೆ. ಹೊಸಪೇಟೆ ನಗರಸಭೆಯ ಶೇ. ೪೫ರಷ್ಟು ಕುಟುಂಬಗಳು ಸಹ ಕುಡಿಯುವ ನೀರಿಗಾಗಿ ರಾಜ್ಯ ಹಣಕಾಸು ಯೋಜನೆಯಲ್ಲಿ ಹಲವು ಯೋಜನೆಗಳಿದ್ದು, ಅದರಿಂದ ವಾರ್ಡಿನ ಜನರಿಗೆ ಸಾಕಷ್ಟು

ಕುಡಿಯುವ ನೀರನ್ನು ಪೂರೈಸುತ್ತಿದೆ ಎಂದು ತಿಳಿಸಿರುತ್ತಾರೆ. ಅದರಂತೆ ಉಳಿದ ಶೇ. ೫೫ರಷ್ಟು ಕುಟುಂಬಗಳು ವಿದ್ಯುತ್ ಅಭಾವ, ಮೋಟಾರ್ ದುರಸ್ತಿಯಾದಾಗ ಮತ್ತು ಕೆಲವು ವಾರ್ಡಿನಲ್ಲಿ ತುಂಗಭದ್ರಾ ನದಿ ಪಕ್ಕದಲ್ಲಿದ್ದರೂ ನೀರು ಸಿಗದಿರುವ ಸಂಗತಿ ಹೇಳಿಕೊಂಡಿರುವುದು ತಿಳಿದು ಬಂದಿದೆ. ಕುಡಿಯುವ ನೀರು ಪೂರೈಕೆ ಮತ್ತು ನಿರ್ವಹಣೆಯ ಬಗ್ಗೆ ವಾರ್ಡಿನ ಜನರಿಂದ ಅಭಿಪ್ರಾಯವನ್ನು ಸಂಗ್ರಹಿಸಲಾಗಿದೆ. ಸಂದರ್ಶಿತ ಕುಟುಂಬಗಳಲ್ಲಿ ಅಭಿವೃದ್ದಿ ಹೊಂದಿದ ನಗರಸಭೆಯ ಕುಟುಂಬಗಳು ತೀರಾ ಹಿಂದುಳಿದ ಪಟ್ಟಣ ಪಂಚಾಯಿತಿ ಕುಟುಂಬಗಳಿಗಿಂತಲೂ ಕೆಲವು ವಾರ್ಡಿನ ಜನರು ಕುಡಿಯುವ ನೀರಿನ ಪೂರೈಕೆಯ ಬಗ್ಗೆ ಹೆಚ್ಚಿನ ರೀತಿಯಲ್ಲಿ ಅತೃಪ್ತಿ ಹೊಂದಿರುವುದು ತಿಳಿದು ಬಂದಿದೆ. ಒಟ್ಟಾರೆ ನಗರ ಮಿತಿಗಳಿಳಾಚೆ ಯೋಜಿತ ಪ್ರಗತಿಯನ್ನು ಖಾತರಿಪಡಿಸಿಕೊಳ್ಳುವ ನಗರಾಭಿವೃದ್ಧಿ ಪ್ರಾಧಿಕಾರಗಳ ಜವಾಬ್ದಾರಿಯಾದರೂ, ಅನೇಕ ಬಾರಿ ಖಾಸಿಗೀ ಅಭಿವರ್ದಕರು ಮೂಲಭೂತ ಸೌಕರ್ಯ ಒದಗಿಸಲು ಹೆಚ್ಚಿನ ಗಮನ ನೀಡದೇ ಕೇವಲ ವಾಸಿಸುವ ಘಟಕಗಳನ್ನು ಮಾತ್ರ ನಿರ್ಮಿಸುತ್ತಾರೆ. ಮುಂದುವರಿದು, ನಾಗರಿಕ ಪ್ರಾಧಿಕಾರಿಗಳು ಸಿಡಿಪಿಯೊಂದಿಗೆ ಹಣಕಾಸು ಯೋಜನೆ, ನಿರ್ವಹಣೆ ಮತ್ತು ಸಮರ್ಥ ಕಾರ್ಯಗಳ ಅನುಷ್ಠಾನದ ಬಗ್ಗೆ ಹೆಚ್ಚು ಗಮನಹರಿಸಬೇಕಾಗಿದೆ ಎಂದು ಅವಶ್ಯಕತೆಯಿದೆ ಎಂದು ಕಂಡುಕೊಳ್ಳಲಾಗಿದೆ.

**ನಿಮಗೆ ನೀರಿನ ಸಮಸ್ಯೆ ಇದ್ದರೆ, ಸ್ಥಳೀಯ ಸಂಸ್ಥೆಯಿಂದ ಟ್ಯಾಂಕಿನ ಮೂಲಕ ನೀರಿನ ವ್ಯವಸ್ಥೆ ಕುರಿತು**

| ನೀರಿನ ವ್ಯವಸ್ಥೆ ಕುರಿತು | | ಕೂಡ್ಲಿಗಿ | | ಹೊಸಪೇಟೆ | |
|---|---|---|---|---|---|
| ನಿಮಗೆ ನೀರಿನ ಸಮಸ್ಯೆ ಇದ್ದರೆ, ಸ್ಥಳೀಯ ಸಂಸ್ಥೆಯಿಂದ ಟ್ಯಾಂಕನ ಮೂಲಕ ನೀರಿನ ವ್ಯವಸ್ಥೆ ಇದೆಯಾ | ಇದೆ | ೨೬ | ೩೨.೫ | ೬೧ | ೫೦.೮೩ |
| | ಇಲ್ಲಾ | ೫೪ | ೬೭.೫ | ೩೨ | ೨೬.೬೭ |
| | ಒಟ್ಟು | ೮೦ | ೧೦೦ | ೯೩ | ೭೭.೫ |

**ಮೂಲ: ಕ್ಷೇತ್ರ ಕಾರ್ಯದ ಮಾಹಿತಿ**

ಸ್ಥಳೀಯ ಸಂಸ್ಥೆಗಳಲ್ಲಿ ನೀರಿನ ಸಮಸ್ಯೆಗೆ ಪರಿಹಾರದ ವ್ಯವಸ್ಥೆ ನೀಡಲಾಗುತ್ತದೆ ಅದರಂತೆ, ಕೂಡ್ಲಿಗಿ ಪಟ್ಟಣ ಪಂಚಾಯಿತಿಯ ಶೇ. ೩೨.೫ರಷ್ಟು ಕುಟುಂಬಗಳು ತಮಗೆ ವಿದ್ಯುತ್ ಅಭಾವ, ಮೋಟಾರ್ ದುರಸ್ತಿಯಾದಾಗ ಕುಡಿಯುವ ನೀರಿನ ಪೂರೈಕೆಗೆ ರಾಜ್ಯ ಹಣಕಾಸು ಯೋಜನೆಯಡಿಯಲ್ಲಿ ಪಟ್ಟಣ ಪಂಚಾಯಿತಿಯು ಪೂರೈಕೆಯನ್ನು ಮಾಡುತ್ತಿದೆ ಎಂದು ತಿಳಿದು ಬಂದಿದೆ. ಅದರಂತೆ ಉಳಿದ ಶೇ. ೬೭.೫ರಷ್ಟು ಕುಟುಂಬಗಳು ಕುಡಿಯುವ ನೀರಿನ ಸಮಸ್ಯೆಯು ಬಂದಾಗ ಯಾವ ಪರಿಹಾರವನ್ನು ಮಾಡದಿರುವ ಸಂಗತಿಯನ್ನು ತಿಳಿಸಿರುತ್ತವೆ. ಹೊಸಪೇಟೆ ನಗರಸಭೆಯ ಶೇ. ೫೦.೮೩ರಷ್ಟು ಕುಟುಂಬಗಳು ಸಹ ನೀರಿನ ಯೋಜನೆಯಡಿಯಲ್ಲಿ (ಎಸ್‌ಎಫ್‌ಸಿ) ಪರಿಹಾರವನ್ನು ನಗರಸಭೆಯು ಒದಗಿಸುತ್ತದೆ ಎಂದು ಹೇಳಿಕೊಂಡಿರುತ್ತಾರೆ. ಅದರಂತೆ ಉಳಿದ ಶೇ. ೨೬.೬೭ರಷ್ಟು ಕುಟುಂಬಗಳು ತುಂಗಭದ್ರಾ ನದಿಯ ಪಕ್ಕದಲ್ಲಿರುವ ತಮ್ಮ ವಾರ್ಡಿಗೆ ನೀರಿನ ಸಮಸ್ಯೆ ವರ್ಷದಲ್ಲಿ ಇದ್ದೇ ಇರುತ್ತದೆ. ನಮಗೆ ಯಾವ ಪರಿಹಾರವನ್ನು ಮಾಡದೇ ನಾವೇ ವೈಯಕ್ತಿಕವಾಗಿ ನೀರಿನ

ಪೂರೈಕೆಯನ್ನು ಬಿಸ್ಲೆರಿ, ಕೈಪಂಪು, ಮತ್ತೊಂದು ವಾರ್ಡಿಗೆ ಹೋಗಿ, ಟಿಬಿ ಬೋರ್ಡ್‌ನಿಂದ ನೀರಿನ ಸಂಪರ್ಕ ಕಲ್ಪಿಸಿಕೊಂಡು ತಮ್ಮಷ್ಟಕ್ಕೆ ತಾವೇ ಪರಿಹಾರವನ್ನು ಕಂಡುಕೊಂಡಿರುವ ಅಂಶವನ್ನು ಹೇಳಿಕೊಂಡಿರುತ್ತಾರೆ. ಒಟ್ಟಾರೆ ತೀರಾ ಹಿಂದುಳಿದ ಪಟ್ಟಣ ಪಂಚಾಯಿತಿ ಕುಟುಂಬಗಳು ಅಭಿವೃದ್ಧಿ ಹೊಂದಿದ ನಗರಸಭೆಯ ಕುಟುಂಬಗಳ ನೀರಿನ ಪೂರೈಕೆಯಲ್ಲಿ ಸಮಸ್ಯೆಗಳ ವೈಪರಿತ್ಯಗಳಿರುವುದು ಕಂಡು ಬಂದಿದೆ. ಪಟ್ಟಣ ಪಂಚಾಯಿತಿ ವ್ಯಾಪ್ತಿಯಲ್ಲಿಯೂ ನೀರಿನ ಕೊರತೆಯು ಇರುವುದು ಸ್ಪಷ್ಟವಾಗಿದೆ. ಆದರೆ ನಗರಸಭೆಯ ವ್ಯಾಪ್ತಿಯಲ್ಲಿ ನೀರಿನ ಕೊರತೆಯು ೨-೩ ವಾರ್ಡಿನಲ್ಲಿ ಮಾತ್ರ ಇರುವುದು ಸಹ ಸ್ಪಷ್ಟವಾಗಿದೆ. ಇದರ ಬಗ್ಗೆ ಯಾವುದೇ ಕ್ರಮ ತೆಗೆದುಕೊಂಡಿಲ್ಲ. ಆದರೆ ಇವೆರೆಡು ಸ್ಥಳೀಯ ಸಂಸ್ಥೆಗಳಲ್ಲಿ ಹೆಚ್ಚು ಸರ್ಕಾರಿ ಉದ್ಯೋಗ, ಶ್ರೀಮಂತರು, ಮೇಲ್ವರ್ಗದ ಕುಟುಂಗಳಿರುವಲ್ಲಿ ಕುಡಿಯುವ ನೀರಿನ ಸಮಸ್ಯೆಯನ್ನು ಎದರಿಸದಿರುವುದು ಕಂಡು ಬಂದಿದೆ. ಕೂಡ್ಲಿಗಿ ಪಟ್ಟಣ ಪಂಚಾಯಿತಿಯ ಕುಟುಂಬಗಳಿಗಿಂತಲೂ ಮುಂದುವರಿದ ಹೊಸಪೇಟೆ ನಗರಸಭೆಯ ಕುಟುಂಬಗಳು ಹೆಚ್ಚು ಅತೃಪ್ತಿ ಇರುವುದು ತಿಳಿದು ಬಂದಿದೆ. ಸ್ಥಳೀಯ ಸಂಸ್ಥೆಗಳಲ್ಲಿ ಹಲವಾರು ಸಾಮಾನ್ಯ ಸಭೆಯಲ್ಲಿ ಮತ್ತು ವಾರ್ಡಿನ ಜನರು ಹಲವಾರು ಬಾರಿ ಬೇಡಿಕೆ ಸಲ್ಲಿಸಿದ್ದರೂ ಸಮಸ್ಯೆ ಪರಿಹಾರವಾಗಿಲ್ಲ. ಇದಕ್ಕೆ ಮುಖ್ಯ ಕಾರಣ ರಾಜಕೀಯ ಪ್ರೇರಣೆ ಎಂದು ವಾರ್ಡಿನ ಜನರ ಅಭಿಪ್ರಾಯ, ಹಾಗಾಗಿ ಶುದ್ಧ ನೀರು ಪೂರೈಕೆಯು ಶುದ್ಧ ಸಮಾಜದ ನಿರ್ಮಾಣಕ್ಕೆ ನಾಂದಿಯಾಗಿದೆ. ಆದ್ದರಿಂದ, ನಗರ ಸ್ಥಳೀಯ ಚುನಾಯಿತ ಪ್ರತಿನಿಧಿಗಳ ಸಾಮಾರ್ಥ್ಯದ ಕೊರತೆ, ರಾಜ್ಯ ಸರ್ಕಾರ ಅದರಲ್ಲೂ ಕರ್ನಾಟಕವು ನಗರ ಸುಧಾರಣಾ ಕ್ರಮಗಳನ್ನು ಜರುಗಿಸಿದ್ದರೂ, ಅಧಿಕಾರಿಗಳಿಗೆ ಮತ್ತು ಚುನಾಯಿತ ಪ್ರತಿನಿಧಿಗಳಿಗೆ ತರಬೇತಿ ನೀಡುವುದಕ್ಕಾಗಿ ಯುಎಲ್ಬಿಗಳನ್ನು ಬಲಪಡಿಸುವುದರೊಂದಿಗೆ ಕುಡಿಯುವ ನೀರಿಗಾಗಿ ಸಾಕಷ್ಟು ಪ್ರಮಾಣದ ಹಣಕಾಸನ್ನು ಒದಗಿಸುವುದು ಅಗತ್ಯವಿದೆ ಎಂದು ಹೇಳಬಹುದಾಗಿದೆ.

**೫.೭. ನಗರವಾರು ಸಂದರ್ಶನ ಮಾಡಿದ ಕುಟುಂಬಗಳು ವ್ಯಕ್ತಪಡಿಸಿದ ಶಿಕ್ಷಣದ ಬಗ್ಗೆ ಅಭಿಪ್ರಾಯಗಳು**

**ಸ್ಥಳೀಯ ಸಂಸ್ಥೆಗಳ ಸದಸ್ಯರಾಗಿ ಕೆಲಸ ಮಾಡಲು ಶಿಕ್ಷಣದ ಅವಶ್ಯಕತೆಯ ಕುರಿತು**

| ಶಿಕ್ಷಣದ ಬಗ್ಗೆ ಅಭಿಪ್ರಾಯಗಳು ವಿವರ | ವಿವರಗಳು | ಕೂಡ್ಲಿಗಿ ಪಟ್ಟಣಪಂಚಾಯಿತಿ | | ಹೊಸಪೇಟೆ ನಗರ ಸಭೆ | |
|---|---|---|---|---|---|
| | | ಸಂಖ್ಯೆಗಳು | ಶೇಕಡವಾರು | ಸಂಖ್ಯೆಗಳು | ಶೇಕಡವಾರು |
| ಸ್ಥಳೀಯ ಸಂಸ್ಥೆಗಳ ಸದಸ್ಯರಾಗಿ ಕೆಲಸ ಮಾಡಲು ಶಿಕ್ಷಣದ ಅವಶ್ಯಕತೆ ಇದೆಯಾ | ಇದೆ | ೭೧ | ೮೮.೭೫ | ೧೦೯ | ೯೦.೮೩ |
| | ಇಲ್ಲಾ | ೯ | ೧೧.೨೫ | ೧೧ | ೯.೧೭ |
| | ಒಟ್ಟು | ೮೦ | ೧೦೦ | ೧೨೦ | ೧೦೦ |

**ಮೂಲ: ಕ್ಷೇತ್ರ ಕಾರ್ಯದ ಮಾಹಿತಿ**

ಚುನಾಯಿತ ಸದಸ್ಯರಾಗಿ ಆಡಳಿತ ನಿರ್ವಹಿಸುವುದಕ್ಕೆ ಶಿಕ್ಷಣದ ಅಗತ್ಯತೆಯ ಕುರಿತು ವಿವಿಧ ಕುಟುಂಬಗಳ ಅಭಿಪ್ರಾಯಗಳನ್ನು ತೋರಿಸಲಾಗಿದೆ. ಕೂಡ್ಲಿಗಿ ಪಟ್ಟಣ ಪಂಚಾಯಿತಿಯಲ್ಲಿ ಶೇ. ೮೮.೭೫ರಷ್ಟು ಕುಟುಂಬಗಳು ಚುನಾಯಿತ ಸದಸ್ಯರಿಗೆ ಶಿಕ್ಷಣದ ಅವಶ್ಯಕತೆ ಬಗ್ಗೆ ತೃಪ್ತಿಯನ್ನು

ತೋರಿಸಿರುವುದು ತಿಳಿದು ಬಂದಿದೆ. ಅದರಂತೆ ಉಳಿದ ಶೇ. ೧೧.೨೫ರಷ್ಟು ಕುಟುಂಬಗಳು ಆಡಳಿತ ನಿರ್ವಹಣೆಗಾಗಿ ಶಿಕ್ಷಣ ಅವಶ್ಯಕತೆ ಅಗತ್ಯವಿರುವುದಿಲ್ಲ ಎಂದು ಅಭಿಪ್ರಾಯವನ್ನು ವ್ಯಕ್ತಪಡಿಸಿರುತ್ತಾರೆ. ಹಾಗೆಯೇ ಹೊಸಪೇಟೆ ನಗರಸಭೆಯಲ್ಲಿ ಶೇ. ೯೦.೮೩ರಷ್ಟು ಕುಟುಂಬಗಳು ಆಡಳಿತದಲ್ಲಿ ಶಿಕ್ಷಣದ ಪಾತ್ರ ಪ್ರಮುಖವಾಗಿರುತ್ತದೆ ಎಂದು ಶಿಕ್ಷಣದ ಮಹತ್ವದ ಬಗ್ಗೆ ಹೇಳುತ್ತಾ ಚುನಾಯಿತ ಸದಸ್ಯರು ಶಿಕ್ಷಣವನ್ನು ಹೊಂದಿದ್ದಾರೆ ಎಂದು ತಿಳಿದು ಬಂದಿದೆ. ಅದರಂತೆ ಉಳಿದ ಶೇ. ೯.೧೭ರಷ್ಟು ಕುಟುಂಬಗಳು ಆಡಳಿತದಲ್ಲಿ ಶಿಕ್ಷಣದ ಅವಶ್ಯಕತೆ ಇಲ್ಲ ಎಂದು ತಿಳಿಸಿರುತ್ತಾರೆ. ಒಟ್ಟಾರೆ ಸಾಪೇಕ್ಷವಾಗಿ ಅಭಿವೃದ್ಧಿ ಹೊಂದಿದ ನಗರಸಭೆಯ ಕುಟುಂಬಗಳಿಗಿಂತ ತೀರಾ ಹಿಂದುಳಿದ ಪಟ್ಟಣ ಪಂಚಾಯಿತಿಯ ಕುಟುಂಬಗಳು ಚುನಾಯಿತ ಆಡಳಿತದಲ್ಲಿ ಶಿಕ್ಷಣದ ಅವಶ್ಯಕತೆಯ ಕುರಿತು ಅಸಮಾಧಾನ ಹೊಂದಿರುವುದು ತಿಳಿದುಬಂದಿದೆ. ಪಟ್ಟಣ ಪಂಚಾಯಿತಿಯ ಚುನಾಯಿತ ಪ್ರತಿನಿಧಿಗಳಲ್ಲಿ ಹೆಚ್ಚಿನವರು ಶಿಕ್ಷಣವನ್ನು ಪಡೆಯದೆ ಹಾಗೂ ಆರ್ಥಿಕವಾಗಿ ದುರ್ಬಲರಾಗಿದ್ದು ಹೆಚ್ಚು ಕೃಷಿಕ ವರ್ಗಕ್ಕೆ ಸೇರಿದವರಾಗಿದ್ದಾರೆ. ಅವರು ಆಡಳಿತ ನಿರ್ವಹಣೆಯಲ್ಲಿ ಜವಾಬ್ದಾರಿಯುತವಾಗಿ ನಡೆಸಿಕೊಂಡು ಹೋಗದೆ, ವಾರ್ಡಿನ ಜನರು ಉತ್ತಮ ಜೀವನಮಟ್ಟದಿಂದ ವಂಚಿತಗೊಂಡಿರುವುದಕ್ಕೆ ಕಾರಣ ಶಿಕ್ಷಣವು ಒಂದು. ಅಂದರೆ ಅಭಿವೃದ್ಧಿ ಹೊಂದಿದ ನಗರಸಭೆಯಲ್ಲಿ ಚುನಾಯಿತ ಸದಸ್ಯರು ಉತ್ತಮ ಶಿಕ್ಷಣ ಪಡೆದದ್ದು ಅಲ್ಲದೇ ಸ್ಥಳೀಯ ಸಂಸ್ಥೆಯ ಅಭಿವೃದ್ಧಿ ಮಾಡುವಲ್ಲಿ ಸ್ಥಳೀಯ ರಾಜಕೀಯದ ಅರಿವು ಹೊಂದಿರುವುದರಿಂದ ಅಭಿವೃದ್ಧಿ ಹೊಂದಿದೆ ಎಂದು ತಿಳಿದು ಬಂದಿದೆ. ಹಾಗಾಗಿ ಶಿಕ್ಷಣದ ಕೊರತೆ ಒಂದೆಯಾಗಿರದೆ ಅದರ ಜೊತೆಗೆ ನಗರ ಅಭಿವೃದ್ಧಿಯ ಬಗ್ಗೆ ಅರಿವಿನ ಗಂಭೀರತೆಯೇ ಕೂಡ ಕೂಡ್ಲಿಗಿ ಪಟ್ಟಣ ಪಂಚಾಯಿತಿಯು ಹಿಂದುಳಿಯಲು ಕಾರಣವಾಗಿದೆ ಎಂದು ಹೇಳಬಹುದಾಗಿದೆ. ಆದ್ದರಿಂದ, ಹಿಂದುಳಿದ ಪಟ್ಟಣ ಪಂಚಾಯಿತಿ ಚುನಾಯಿತ ಸದಸ್ಯರಿಗೆ ರಾಜಕೀಯ ಭಾಗವಹಿಸುವಿಕೆ ಮತ್ತು ಅರಿವು ಮೂಡಿಸುವಂತಹ ವಿವಿಧ ಕಾರ್ಯಕ್ರಮಗಳ ಮೂಲಕ ಸ್ಥಳೀಯ ಅಭಿವೃದ್ಧಿಯ ಕುರಿತ ತರಬೇತಿಯನ್ನು ಕೊಡಿಸುವುದು ಮೊದಲ ಆದ್ಯತೆಯಾಗುವ ಅವಶ್ಯಕತೆಯಿದೆ ಎಂದು ಹೇಳಲಾಗಿದೆ.

**ಹೌದಾದರೆ ಶಿಕ್ಷಣದ ಅವಶ್ಯಕತೆ ಏಕೆ**

| **ಶಿಕ್ಷಣದ ಅವಶ್ಯಕತೆ** | | **ಕೂಡ್ಲಿಗಿ** | | **ಹೊಸಪೇಟೆ** | |
|---|---|---|---|---|---|
| ಹೌದಾದರೆ ಶಿಕ್ಷಣದ ಅವಶ್ಯಕತೆ | ತೆರಿಗೆ ಸಂಗ್ರಹ, ಅಭಿವೃದ್ಧಿ, ಸಮಸ್ಯೆಗಳ ಅರಿವು, ಆಡಳಿತ ನಿರ್ವಹಣೆ, ಸಮಸ್ಯೆಗಳಿಗೆ ಸ್ಪಂದಿಸಲು | ೧೦ | ೧೨.೫ | ೩೪ | ೨೮.೩೩ |
| | ಅಭಿವೃದ್ಧಿಗಾಗಿ, ಯೋಜನೆಗಳ ಅನುಷ್ಠಾನಕ್ಕಾಗಿ, ಆರೋಗ್ಯದ ಬಗ್ಗೆ ಅರಿವು, ಸಮಸ್ಯೆಗಳಿಗೆ ಸ್ಪಂದಿಸಲು | ೧೦ | ೧೨.೫ | ೨೩ | ೧೯.೧೬ |

| | ಮೂಲಭೂತ ಸೌಲಭ್ಯಗಳನ್ನು (ಕನಿಷ್ಠ) ಒದಗಿಸುವುದರ ಜೊತೆಗೆ ಜನರನ್ನ ಪಾಲ್ಗೊಳ್ಳುವಂತೆ ಮಾಡುವುದು | ೧೮ | ೨೨.೫ | ೩ | ೨.೫ |
|---|---|---|---|---|---|
| | ಸಮಸ್ಯೆಗಳನ್ನ ಅರಿಯುದು, ಮೂಲಭೂತ ಸೌಲಭ್ಯದ ಕೊರತೆಯಿಂದ ಆಗುವ ಸಮಸ್ಯೆಗಳ ಬಗ್ಗೆ ಅರಿವು ಮೂಡಿಸುವುದು ಅಭಿವೃದ್ಧಿ, ಸ್ವಚ್ಛತೆಯ ಪ್ರಜ್ಞೆ, ಸಭೆ ಸಮಾರಂಭಗಳನ್ನು ನಡೆಸಲು ಕಡತಗಳ ಪರಿಶೀಲನೆಗಾಗಿ, ಯೋಜನೆಗಳ ಅನುಷ್ಠಾನಕ್ಕಾಗಿ, ಸಾಮಾಜಿಕ ನ್ಯಾಯಕ್ಕಾಗಿ | ೩೩ | ೪೧.೨೫ | ೪೯ | ೪೦.೮೩ |
| | ಒಟ್ಟು | ೭೧ | ೮೮.೭೫ | ೧೦೯ | ೯೦.೮೩ |

**ಮೂಲ: ಕ್ಷೇತ್ರ ಕಾರ್ಯದ ಮಾಹಿತಿ**

ಸ್ಥಳೀಯ ಸಂಸ್ಥೆಗಳಾದ ಕೂಡ್ಲಿಗಿ ಪಟ್ಟಣ ಪಂಚಾಯಿತಿಯಲ್ಲಿ ಶೇ. ೧೨.೫ರಷ್ಟು ಕುಟುಂಬಗಳು ಚುನಾಯಿತ ಸದಸ್ಯರಿಗೆ ಶಿಕ್ಷಣ ಸೌಲಭ್ಯವು ವಾರ್ಡಿನ ಜನರಿಂದ ನಿಯಮಿತವಾಗಿ ತೆರಿಗೆ ಸಂಗ್ರಹಿಸಲು ಉತ್ತಮ ಜೀವನಕ್ಕಾಗಿ ಬೇಕಾದ ಸೌಲಭ್ಯಗಳನ್ನು ಕೊಡುವುದರೊಂದಿಗೆ ಜವಾಬ್ದಾರಿಯುತವಾದ ಆಡಳಿತ ನಿರ್ವಹಣೆಗಾಗಿ ಅಕ್ಷರದ ಮಹತ್ವ ಬಗ್ಗೆ ತಿಳಿಸಿರುತ್ತಾರೆ. ಅದರಂತೆ ಶೇ. ೧೨.೫ರಷ್ಟು ಕುಟುಂಬಗಳು ಸಹ ಶಿಕ್ಷಣದ ಕುರಿತು ಸರ್ಕಾರದಿಂದ ಬಂದ ಯೋಜನೆಗಳನ್ನು ಅರ್ಹರಿಗೆ ಲಭಿಸುವಂತೆ, ಅಭಿವೃದ್ಧಿಯ ಮೂಲ ಸಾಧನವಾದ ಆರೋಗ್ಯದ ಸಮಸ್ಯೆಗಳಿಗೆ ತುರ್ತು ರೀತಿಯಲ್ಲಿ ಕ್ರಮವಹಿಸಲಿಕ್ಕಾಗಿ ಶಿಕ್ಷಣದ ಪ್ರಾಮುಖ್ಯತೆಯನ್ನು ಭಿನ್ನ ಅಭಿಪ್ರಾಯಗಳನ್ನು ನೀಡಿರುವುದು ಕಂಡು ಬಂದಿದೆ. ಇತರ ಶೇ. ೨೨.೫ರಷ್ಟು ಕುಟುಂಬಗಳು ಕನಿಷ್ಠ ಮೂಲಭೂತ ಸೌಲಭ್ಯಗಳನ್ನು (ಕುಡಿಯುವ ನೀರು, ರಸ್ತೆ, ಚರಂಡಿ, ಬೀದಿದೀಪ ಮತ್ತು ಸ್ವಚ್ಛತೆ) ಸಮರ್ಪಕವಾಗಿ ಒದಗಿಸುವುದರ ಜೊತೆಗೆ ವಾರ್ಡಿನ ಜನತೆ ಸಹ ಅಭಿವೃದ್ಧಿಯಲ್ಲಿ ಭಾಗವಹಿಸುವಂತೆ ಅರಿವು ಮೂಡಿಸುತ್ತಾ ಗುಣಮಟ್ಟದ ಜೀವನಕ್ಕೆ ಪ್ರೇರಣೆಯಾಗುವುದಕ್ಕಾಗಿ ಬೇಕಾಗುತ್ತದೆ ಎಂದು ತಿಳಿಸಿರುತ್ತಾರೆ. ಅಂದರೆ ಉಳಿದ ಶೇ. ೪೧.೨೫ರಷ್ಟು ಕುಟುಂಬಗಳು ಮೂಲಭೂತ ಸೌಲಭ್ಯಗಳ ಕೊರತೆಯಿಂದಾಗಿ ಜನತೆಯ ಮೇಲೆ ಬೀರುವ ದುಷ್ಪರಿಣಾಮಗಳ ಬಗ್ಗೆ ಅರಿವು ಮೂಡಿಸುವುದು, ಸಮಸ್ಯೆಗಳ ಕುರಿತು ಬಡತನ ರೇಖೆಗಿಂತ ಕೆಳಗಿನವರಿಗೆ ಫಲಾನುಭವಿಗಳಾಗಿ ಸೌಲಭ್ಯಗಳನ್ನು ನೀಡುವುದು, ಜವಾಬ್ದಾರಿಯುತವಾಗಿ

ಕಡತಗಳನ್ನು ಆಗಾಗ ಪರಿಶೀಲನೆ ನಡೆಸುವುದಕ್ಕಾಗಿ ಮತ್ತು ಸಾಮಾಜಿಕ ನ್ಯಾಯದಿಂದ ಆಡಳಿತ ನಿರ್ವಹಣೆ ಮಾಡಲಿಕ್ಕೆ ಶಿಕ್ಷಣದ ಪಾತ್ರ ಬಹಳ ಮುಖ್ಯವಾಗಿದೆ ಎಂದು ತಿಳಿಸಿರುತ್ತಾರೆ. ಹಾಗೆಯೇ ಹೊಸಪೇಟೆ ನಗರಸಭೆಯಲ್ಲಿ ಶೇ. ೨೮.೩೩ರಷ್ಟು ಕುಟುಂಬಗಳು ಉತ್ತಮ ಆಡಳಿತದ ನಿರ್ವಹಣೆ (ತೆರಿಗೆ ಸಂಗ್ರಹ, ಸಮಸ್ಯೆಗಳ ಅರಿವು)ಯ ಜೊತೆಗೆ ಸಮಸ್ಯೆಗಳ ಸ್ವರೂಪವನ್ನು ತಿಳಿದು ಅದಕ್ಕೆ ಸಮರ್ಥವಾದ ಪರಿಹಾರ ನೀಡಲು ಅಕ್ಷರದ ಜ್ಞಾನ  ಮತ್ತು ಸ್ಥಳೀಯ ರಾಜಕೀಯದ ಅರಿವು ಮುಖ್ಯವಾಗಿರುತ್ತದೆ ಎಂದು ತಿಳಿದು ಬಂದಿದೆ. ಅದರಂತೆ ಶೇ. ೧೯.೧೬ರಷ್ಟು ಕುಟುಂಬಗಳು ಮಾತ್ರ ಯೋಜನೆಗಳನ್ನು ಸಮರ್ಪಕವಾಗಿ ಜಾರಿಗೊಳಿಸುತ್ತಾ ಆರೋಗ್ಯದ ಬಗ್ಗೆ ಕಾಳಜಿ ವಹಿಸಲು ತರಬೇತಿಗಳನ್ನು ನೀಡಲು ಶಿಕ್ಷಣದ ಅವಶ್ಯಕತೆ ಇದೆ ಎಂದು ತಿಳಿಸಿರುತ್ತಾರೆ. ಇತರೆ ಶೇ. ೨.೫ರಷ್ಟು ಕುಟುಂಬಗಳು ನಗರದ ವ್ಯಾಪ್ತಿಯಲ್ಲಿರುವ ಕನಿಷ್ಠ ಮೂಲಭೂತ ಸೌಲಭ್ಯಗಳನ್ನು ನೀಡಲು ಚುನಾಯಿತ ಸದಸ್ಯರಿಗೆ ಶಿಕ್ಷಣ ಬೇಕಾಗುತ್ತದೆ ಎಂದು ತಿಳಿಸಿರುತ್ತಾರೆ. ಉಳಿದ ಶೇ. ೪೦.೮೩ರಷ್ಟು ಕುಟುಂಬಗಳು ತಮ್ಮದು ಗುಣಮಟ್ಟ ಜೀವನ ಆಗಿರಲು ಸಾಮಾಜಿಕ ನ್ಯಾಯ ಪ್ರಮುಖ ಪಾತ್ರವಹಿಸುತ್ತದೆ. ಅದಕ್ಕೆ ತಳಹದಿಯಾಗಿರುವುದು ಶಿಕ್ಷಣ ಎಂಬ ಸಾಧನ ಹಾಗೂ ಆಡಳಿತಕ್ಕೆ ಸಂಬಂಧಿಸಿದ ಕಡತಗಳ ಪರಿಶೀಲನೆಗಾಗಿ, ವಾರ್ಡಿನ ವ್ಯಾಪ್ತಿಯಲ್ಲಿ ಸ್ವಚ್ಛತೆಯ ಬಗ್ಗೆ ಪ್ರಚಾರ, ತರಬೇತಿ ಮತ್ತು ಅದರಲ್ಲಿ ಭಾಗವಹಿಸುವಂತೆ ಮಾಡಿ ನೈರ್ಮಲೀಕರಣದ ಮೂಲಕ ಆರೋಗ್ಯವಂತ ಬದುಕು ಸೃಷ್ಟಿಸಲು ಶಿಕ್ಷಣವು ಮಹತ್ವವಾಗಿರುತ್ತದೆ ಎಂದು ತಿಳಿಸಿರುತ್ತಾರೆ. ಒಟ್ಟಾರೆ ತೀರಾ ಹಿಂದುಳಿದ ಕೂಡ್ಲಿಗಿ ಪಟ್ಟಣ ಪಂಚಾಯಿತಿಯ ಕುಟುಂಬಗಳು ಸಾಪೇಕ್ಷವಾಗಿ ಮುಂದುವರಿದ ನಗರಸಭೆಯ ಕುಟುಂಬಗಳು ಸಹ ಶಿಕ್ಷಣದ ಮಹತ್ವ ಬಗ್ಗೆ ಹೇಳುತ್ತಾ ಅದರ ಅವಶ್ಯಕತೆಯನ್ನು ಎರಡು ನಗರ ಸ್ಥಳೀಯ ಸಂಸ್ಥೆಗಳು ಭಿನ್ನ ಹೇಳಿಕೆಗಳನ್ನು ಕೊಟ್ಟಿರುವುದು ತಿಳಿದು ಬಂದಿದೆ. ಅಂದರೆ ತೀರಾ ಹಿಂದುಳಿದ ಪಟ್ಟಣ ಪಂಚಾಯಿತಿಯಲ್ಲಿ ಒಣಭೂಮಿ ಪ್ರದೇಶವನ್ನು ಹೆಚ್ಚಾಗಿ ಹೊಂದಿದ್ದು ಆರ್ಥಿಕವಾಗಿ ದುರ್ಬಲರಾಗಿ ಹಲವಾರು ಸಮಸ್ಯೆಗಳ (ಶುದ್ಧ ಕುಡಿಯುವ ನೀರು, ನೈರ್ಮಲೀಕರಣ, ಆರೋಗ್ಯ, ಶಿಕ್ಷಣ, ವರಮಾನ) ಪಟ್ಟಿಯನ್ನು ನೋಡುವುದಾದರೆ ಮುಂದುವರಿದ ನಗರಸಭೆಯಲ್ಲಿ ಕನಿಷ್ಠ ಮೂಲಭೂತ ಸೌಲಭ್ಯಗಳ ಕೊರತೆ ಕನಿಷ್ಠ ಮಟ್ಟದಲ್ಲಿರುವುದು ತಿಳಿದು ಬಂದಿದೆ. ಅಂತೆಯೇ, ಎರಡು ಸ್ಥಳೀಯ ಸಂಸ್ಥೆಗಳಲ್ಲಿ ಪರಿಶಿಷ್ಟರು ವಾಸಿಸುವಲ್ಲಿ ಹೆಚ್ಚಾಗಿ ಸೌಲಭ್ಯಗಳ ಕೊರತೆ ಇರುವುದು ಅದರಲ್ಲಿ ತೀರಾ ಹಿಂದುಳಿದ ಕೂಡ್ಲಿಗಿ ಪಟ್ಟಣ ಪಂಚಾಯಿತಿಯಲ್ಲಿ ಹೆಚ್ಚು ವಂಚಿತರಾಗಿರುವುದು ಅಧ್ಯಯನದಿಂದ ತಿಳಿದು ಬಂದಿದೆ. ಆದ್ದರಿಂದ ಸರ್ಕಾರಿ ಯೋಜನೆಗಳನ್ನು ಹೆಚ್ಚು ತೀರಾ ಹಿಂದುಳಿದ ಹಾಗೂ ನಗರಸಭೆಯ ಕೆಲವು ವಾರ್ಡಿನ ವಂಚಿತ ಸಮುದಾಯಗಳಿಗೆ ಸ್ಥಳೀಯ ಸಂಸ್ಥೆಗಳ ಮೂಲಕ ಸಮರ್ಥವಾದ ರೀತಿಯಲ್ಲಿ ಅನುಷ್ಠಾನಗೊಳಿಸುತ್ತಾ ವಾರ್ಡಿನ ಜನರ ಗುಣಮಟ್ಟದ ಜೀವನವನ್ನು ನಿರ್ಮಿಸುವಲ್ಲಿ ಯಶಸ್ವಿಯಾಗಬೇಕಾದರೆ ನಮಗೆ ಪ್ರಬಲ ರಾಜಕೀಯ ಇಚ್ಛಾಶಕ್ತಿಯ ಅವಶ್ಯಕತೆಯಿದೆ ಎಂದು  ಹೇಳಬಹುದಾಗಿದೆ.

**ಶಿಕ್ಷಣ ಇಲ್ಲವಾದರೆ ಯಾಕೆ**

| **ಶಿಕ್ಷಣ ಇಲ್ಲಾ ಅಂದರೆ ಯಾಕೆ** | | **ಕೂಡ್ಲಿಗಿ** | | **ಹೊಸಪೇಟೆ** | |
|---|---|---|---|---|---|
| ಇಲ್ಲವಾದರೆ | ಶಿಕ್ಷಿತರು ಯಾವುದೇ ಮೂಲ ಅಭಿವೃದ್ಧಿ ಕೆಲಸಗಳನ್ನು ಮಾಡುವುದಿಲ್ಲ | ೬ | ೭.೫ | ೮ | ೬.೬೭ |
| | ಶಿಕ್ಷಿತರು ಉತ್ತಮ ಆಡಳಿತ ನಿರ್ವಹಣೆಯಲ್ಲಿ ಭರವಸೆಯಿಲ್ಲ | ೩ | ೩.೭೫ | ೩ | ೨.೫ |
| | **ಒಟ್ಟು** | ೯ | ೧೧.೨೫ | ೧೧ | ೯.೧೭ |

**ಮೂಲ: ಕ್ಷೇತ್ರ ಕಾರ್ಯದ ಮಾಹಿತಿ**

ನಗರ ಆಡಳಿತ ನಿರ್ವಹಣೆಯಲ್ಲಿ ಅಕ್ಷರ ಜ್ಞಾನದ ಅವಶ್ಯಕತೆಯಿಲ್ಲದರ ಕುರಿತು ಕೂಡ್ಲಿಗಿ ಪಟ್ಟಣ ಪಂಚಾಯಿತಿಯಲ್ಲಿ ಶೇ. ೭.೫ರಷ್ಟು ಕುಟುಂಬಗಳು ಶಿಕ್ಷಣ ಹೊಂದಿದ ಚುನಾಯಿತ ಪ್ರತಿನಿಧಿಯು ಅಭಿವೃದ್ಧಿಯ ಕಡೆಗೆ ಹೆಚ್ಚಾಗಿ ಗಮನಹರಿಸದೇ ಅನುದಾನವನ್ನು ಸ್ವಾರ್ಥಕ್ಕಾಗಿ ಬಳಸಿಕೊಂಡು ವಾರ್ಡಿನ ಜನತೆಯ ಸಮಸ್ಯೆಗಳನ್ನು ದಿಕ್ಕರಿಸುತ್ತಿದ್ದಾರೆ ಎಂದು ತಿಳಿಸಿರುತ್ತಾರೆ. ಅದರಂತೆ ಉಳಿದ ಶೇ. ೩.೭೫ರಷ್ಟು ಕುಟುಂಬಗಳು ತಮ್ಮ ವಾರ್ಡಿನ ಜನತೆಯ ಸ್ಥಿತಿಗತಿಯ ಬಗ್ಗೆ ವಿವರಿಸುತ್ತಾ ಶಿಕ್ಷಿತರು ಉತ್ತಮ ಆಡಳಿತ ನಿರ್ವಹಣೆಯನ್ನು ಮಾಡುತ್ತಾರೆ ಎಂಬ ಭರವಸೆಯಿಲ್ಲ ಏಕೆಂದರೆ ಪ್ರಸ್ತುತ ಹಲವು ಚುನಾಯಿತ ಪ್ರತಿನಿಧಿಗಳು ಭ್ರಷ್ಟಚಾರದಲ್ಲಿ ಮುಳುಗಿ ಜನರನ್ನು ತಿರಸ್ಕರಿಸಿರುವುದು ತಿಳಿದು ಬಂದಿದೆ. ಹಾಗೆಯೇ ಹೊಸಪೇಟೆ ನಗರಸಭೆಯಲ್ಲಿ ಶೇ. ೬.೬೭ರಷ್ಟು ಕುಟುಂಬಗಳು ಚುನಾಯಿತ ಪ್ರತಿನಿಧಿಗಳ ಅಭಿವೃದ್ಧಿಯ ಬಗ್ಗೆ ಬೇಸರವನ್ನು ವ್ಯಕ್ತಪಡಿಸಿರುತ್ತಾರೆ. ಅದರಂತೆ ಉಳಿದ ಶೇ. ೨.೫ರಷ್ಟು ಕುಟುಂಬಗಳು ಶಿಕ್ಷಣ ಪಡೆದ ಚುನಾಯಿತರ ಬಗ್ಗೆ ರಾಜಕೀಯ ವೈಫಲ್ಯದ ಬಗ್ಗೆ ಹೇಳಿಕೊಂಡಿರುವುದು ತಿಳಿದು ಬಂದಿದೆ. ಒಟ್ಟಾರೆ ಅಭಿವೃದ್ಧಿ ಹೊಂದಿದ ನಗರಸಭೆಯ ಕುಟುಂಬಗಳಿಗಿಂತ ತೀರಾ ಹಿಂದುಳಿದ ಪಟ್ಟಣ ಪಂಚಾಯಿತಿ ಕುಟುಂಬಗಳು ತಮ್ಮ ಚುನಾಯಿತ ಸದಸ್ಯರ ಬಗ್ಗೆ ಬೇಸರ ಸೂಚಿಸಿರುವುದು ತಿಳಿದುಬಂದಿದೆ. ಹಾಗಾಗಿ ಪಟ್ಟಣ ಪಂಚಾಯಿತಿಯಲ್ಲಿ ಚುನಾಯಿತ ಸದಸ್ಯರು ಶಿಕ್ಷಣದ ಕೊರತೆ ಮತ್ತು ಸ್ಥಳೀಯ ರಾಜಕೀಯದ ಅರಿವು ಹೊಂದದೆ ಇರುವುದರಿಂದ ಕನಿಷ್ಠ ಮೂಲಭೂತ ಸೌಲಭ್ಯಗಳನ್ನು ಪಡೆಯದೇ ಹಿಂದುಳಿದಿದೆ ಎಂದು ಅಧ್ಯಯನದಿಂದ ತಿಳಿದು ಬಂದಿದೆ. ಆದ್ದರಿಂದ ಅಭಿವೃದ್ಧಿಯ ಮುಖ್ಯ ಸಾಧನವಾದ ಅಕ್ಷರ ಜ್ಞಾನ ಮತ್ತು ಸ್ಥಳೀಯ ರಾಜಕೀಯ ಅರಿವಿನ ಕೊರತೆ ಇರುದರಿಂದ ಉತ್ತಮ ಆಡಳಿತ ನಿರ್ವಹಣೆಯಲ್ಲಿ ವಿಫಲತೆಯನ್ನು ಕಾಣುವುದು ಕ್ಷೇತ್ರಧ್ಯಾನದಿಂದ ತಿಳಿದು ಬಂದಿದೆ.

ಒಟ್ಟಾರೇ ವಿಶ್ಲೇಷಣೆಯಿಂದ ತಿಳಿಯಬಹುದಾದ ಅಂಶವೆಂದರೆ, ಎರಡು ಸ್ಥಳೀಯ ಸಂಸ್ಥೆಗಳಲ್ಲಿ ನಗರಸಭೆಯಲ್ಲಿ ಚುನಾಯಿತ ಸದಸ್ಯರು ಅಕ್ಷರಸ್ಥರಾಗಿದ್ದು ಪಟ್ಟಣ ಪಂಚಾಯಿತಿ ಚುನಾಯಿತ ಸದಸ್ಯರು ಹೆಚ್ಚಾಗಿ ಅನಕ್ಷರಸ್ಥರಾಗಿರುವುದು ಹಾಗೂ ಅರಿವಿನ ಕೊರತೆಯನ್ನು ಅನುಭವಿಸುತ್ತಿರುವುದು ತಿಳಿದು ಬಂದಿದೆ. ವಿದ್ಯಾರ್ಹತೆಯನ್ನು ನಿಗದಿ ಮಾಡಿದರೆ ಯಾರು ಚುನಾವಣೆಗೆ ಸ್ಪರ್ಧಿಸಲು

ಸಾಧ್ಯವೇ ಇಲ್ಲದಂತಾಗುತ್ತದೆ. ಆದರೆ ಕನಿಷ್ಠ ವಿದ್ಯಾರ್ಹತೆ ಮಾಡುವುದು ಸೂಕ್ತವೆನಿಸುತ್ತದೆ. ಏಕೆಂದರೆ, ಯಾವುದೇ ಜನಪ್ರತಿನಿಧಿಗಳಿಗೆ ಇಲ್ಲದ ಬ್ಯಾಂಕ್ ಚೆಕ್‌ಗಳಿಗೆ ಸಹಿ ಮಾಡುವ ಅಧಿಕಾರ ನಗರಸಭೆ ಮತ್ತು ಪಟ್ಟಣ ಪಂಚಾಯಿತಿ ಅಧ್ಯಕ್ಷರಿಗಿದೆ ಮತ್ತು ಹಲವಾರು ಕಾರ್ಯಕ್ರಮಗಳಲ್ಲಿ ಅವ್ಯವಹಾರ ನಡೆದಿರುವುದು ಅಧ್ಯಕ್ಷರಿಗಿರುವ ಅಕ್ಷರ ಜ್ಞಾನದ ಕೊರತೆಯಿಂದಾಗಿ. ಹೀಗಾಗಿ ವಿದ್ಯಾರ್ಹತೆ ಅಗತ್ಯವೆಸುತ್ತದೆ.

**೫.೮. ನಗರವಾರು ಸಂದರ್ಶನ ಮಾಡಿದ ಕುಟುಂಬಗಳು ನೈರ್ಮಲೀಕರಣ ಬಗ್ಗೆ ವ್ಯಕ್ತಪಡಿಸಿದ ಅಭಿಪ್ರಾಯಗಳು**

ನಗರ ಸ್ಥಳೀಯ ಸಂಸ್ಥೆಗಳಲ್ಲಿ (ನಗರ ಸಭೆ, ಪಟ್ಟಣ ಪಂಚಾಯಿತಿ) ಗುಣಮಟ್ಟದ ವಾತಾವರಣ ನಿರ್ಮಾಣಕ್ಕೆ ನಗರಸಭೆ ಮತ್ತು ಪಟ್ಟಣ ಪಂಚಾಯಿತಿಗೆ ಕೆಲವು ನೈರ್ಮಲೀಕರಣಕ್ಕೆ ಸಂಬಂಧಿಸಿದಂತೆ ಹಲವು ಕಾರ್ಯಗಳನ್ನು ನೀಡಲಾಗಿದೆ. ನಗರ ನೈರ್ಮಲೀಕರಣ ಕುರಿತಂತೆ ಕರ್ನಾಟಕ ನಗರಪಾಲಿಕಾ ಕಾಯ್ದೆಯಲ್ಲಿ ನಗರ ಸ್ಥಳೀಯ ಸಂಸ್ಥೆಗಳಿಗೆ ಪ್ರಮುಖ ಕಾರ್ಯಗಳನ್ನು ನಿಗದಿಪಡಿಸಲಾಗಿದೆ. ನಗರಪಾಲಿಕಾ ಕಾಯ್ದೆಯ ಅನ್ವಯ ೩೪೮ನೇ ಪ್ರಕರಣವು ನೈರ್ಮಲೀಕರಣಕ್ಕೆ ಸಂಬಂಧಿಸಿದಂತೆ ನಗರ ಸ್ಥಳೀಯ ಸಂಸ್ಥೆಗಳಿಗೆ ವಹಿಸಲಾಗಿದೆ. ಈ ನಿಗದಿಪಡಿಸಿದ ಪ್ರಮುಖ ಕಾರ್ಯಗಳನ್ನು ಪ್ರತಿ ನಗರಸಭೆ ಮತ್ತು ಪಟ್ಟಣ ಪಂಚಾಯಿತಿಯು ಅನುಷ್ಠಾನಗೊಳಿಸಬೇಕಾಗಿದೆ. ಹೀಗೆ ನಗರ ಸ್ಥಳೀಯ ಸಂಸ್ಥೆಗಳಿಗೆ ನೈರ್ಮಲೀಕರಣ ಮತ್ತು ಅನುಷ್ಠಾನದ ಅಗತ್ಯ ಕಾರ್ಯಗಳನ್ನು ನಗರಸಭೆ ಮತ್ತು ಪಟ್ಟಣ ಪಂಚಾಯಿತಿಗಳಿಗೆ ಕಾಯ್ದೆಯ ಮೂಲಕ ವಹಿಸಲಾಗಿದೆ. ನಗರ ಪ್ರದೇಶದ ಜನರು ಉತ್ತಮ ಜೀವನಮಟ್ಟದಲ್ಲಿ ಇರಲು ಅವರಿಗೆ ಅವಶ್ಯವಾದಂತಹ ಹಲವಾರು ನೈರ್ಮಲೀಕರಣಕ್ಕೆ ಸಂಬಂಧಿಸಿದಂತೆ ಕೇಂದ್ರ ಮತ್ತು ರಾಜ್ಯ ಯೋಜನೆಗಳು ಸ್ಥಳೀಯ ಸಂಸ್ಥೆಗಳಲ್ಲಿ ಚಾಲನೆಯಲ್ಲಿರುವುದು ಕಂಡುಬಂದಿದೆ.

ಸಮಗ್ರ ವಸತಿ ಮತ್ತು ಕೊಳಚೆ ಪ್ರದೇಶ ಅಭಿವೃದ್ಧಿ ಯೋಜನೆಯು ನಗರ ಬಡಜನರ ಮೂಲಭೂತ ಸೌಕರ್ಯ ಯೋಜನೆಯನ್ನು ಅನುಷ್ಠಾನಗೊಳಿಸುತ್ತಿರುವ ನಗರಗಳಾದ ಬೆಂಗಳೂರು ಮತ್ತು ಮೈಸೂರು ನಗರಗಳನ್ನು ಹೊರತುಪಡಿಸಿ ಉಳಿದ ನಗರ/ಪಟ್ಟಣಗಳಲ್ಲಿ ಮನೆಗಳನ್ನು ನಿರ್ಮಾಣ ಮಾಡಲು ಮತ್ತು ಕೊಳಚೆ ಪ್ರದೇಶಗಳನ್ನು ಅಭಿವೃದ್ಧಿಪಡಿಸುವ ಉದ್ದೇಶದಿಂದ ಈ ಯೋಜನೆಯನ್ನು ಘೋಷಣೆ ಮಾಡಲಾಗಿದೆ. ಈ ಯೋಜನೆಯು ಹಿಂದಿನ ಯೋಜನೆಗಳಾದ ವಾಲ್ಮೀಕಿ–ಅಂಬೇಡ್ಕರ್ ಅವಾಸ್ ಯೋಜನೆ ಮತ್ತು ರಾಷ್ಟ್ರೀಯ ಕೊಳಚೆ ಪ್ರದೇಶ ಮತ್ತು ಅಭಿವೃದ್ಧಿ ಯೋಜನೆಗಳನ್ನು ಒಗ್ಗೂಡಿಸಿ ಕೊಳಚೆ ನಿವಾಸಿಗಳಿಗೆ ಸಮಗ್ರವಾಗಿ ವಸತಿ ಮತ್ತು ಮೂಲಭೂತ ಸೌಲಭ್ಯಗಳನ್ನು ಒದಗಿಸಲು ಹಾಗೂ ಕೊಳಚೆ ನಿವಾಸಿಗಳ ಶೋಚನೀಯ ಸ್ಥಿತಿಗಳನ್ನು ನಿವಾರಿಸಲು ಈ ಯೋಜನೆಯನ್ನು ಜಾರಿಗೊಳಿಸಲಾಗಿದೆ ಹಾಗೂ ನಿರ್ಮಲ ನಗರ ಯೋಜನೆಯು ಸಹ ಒಂದು ನಗರ ಮೂಲಸೌಕರ್ಯ ಅಭಿವೃದ್ಧಿ ಯೋಜನೆಯಾಗಿದ್ದು, ಈ ಕಾರ್ಯಕ್ರಮದ ಉದ್ದೇಶವು ನಾಗರಿಕರಿಗೆ ಸ್ವಚ್ಛ ಪರಿಸರ ಕಲ್ಪಿಸುವುದು, ಬಿ.ಪಿ.ಎಲ್. ಕುಟುಂಬಗಳ ಮಹಿಳೆಯರ ಸಬಲೀಕರಣ ಮತ್ತು ಬಡವರನ್ನು ಉದ್ಧಾರ ಮಾಡುವುದು, ಪೌರಾಡಳಿತದಲ್ಲಿ ಪಾರದರ್ಶಕತೆ, ಅಧಿಕಾರಿ ವರ್ಗ ಮತ್ತು ನಾಗರಿಕರ ನಡುವೆ ನೇರ ಸಂಕಲ್ಪ ಕಲ್ಪಿಸುವುದು, ಆದಾಯ ತೆರಿಗೆಗಳ ಬಲವರ್ಧನೆ ಹಾಗೂ ನವೀನ ಮಾದರಿಯ ಲೆಕ್ಕ ಪತ್ರ ನಿರ್ವಹಣೆ ಮತ್ತು ಇ–ಆಡಳಿತ ಈ ಕಾರ್ಯಕ್ರಮದ ಉದ್ದೇಶವಾಗಿದೆ. ಮೂಲತಃ ಒಂದು

ಸಮಗ್ರತಾ ಕಾರ್ಯಕ್ರಮವಾಗಿದ್ದು ನಿರ್ಮಲ ನಗರ ಕಾರ್ಯಕ್ರಮದಲ್ಲಿರುವ ಪ್ರಮುಖ ಕೆಲಸಗಳಾದ ಘನತ್ಯಾಜ್ಯ ವಸ್ತುಗಳ ನಿರ್ವಹಣೆ ಮತ್ತು ನಗರದ ಬಡವರಿಗೆ ಶೌಚಾಲಯ ವ್ಯವಸ್ಥೆ.

**ನಿಮ್ಮ ನಗರದಲ್ಲಿ ಚರಂಡಿ ವ್ಯವಸ್ಥೆ ಕುರಿತು**

| ನೈರ್ಮಲ್ಯಿಕರಣದ | ವಿವರಗಳು | ಕೂಡ್ಲಿಗಿ ಪಟ್ಟಣಪಂಚಾಯಿತಿ | | ಹೊಸಪೇಟೆ ನಗರ ಸಭೆ | |
|---|---|---|---|---|---|
| | | ಸಂಖ್ಯೆಗಳು | ಶೇಕಡವಾರು | ಸಂಖ್ಯೆಗಳು | ಶೇಕಡವಾರು |
| ನಿಮ್ಮ ನಗರದಲ್ಲಿ ಚರಂಡಿ ವ್ಯವಸ್ಥೆ ಇದೆಯಾ | ಇದೆ | ೫೩ | ೬೬.೨೫ | ೧೧೨ | ೯೩.೩೩ |
| | ಇಲ್ಲ | ೨೭ | ೩೩.೭೫ | ೮ | ೬.೬೬ |
| | **ಒಟ್ಟು** | ೮೦ | ೧೦೦ | ೧೨೦ | ೧೦೦ |

**ಮೂಲ: ಕ್ಷೇತ್ರ ಕಾರ್ಯದ ಮಾಹಿತಿ**

ಸಂದರ್ಶನ ನಗರಗಳಾದ ಕೂಡ್ಲಿಗಿ ಪಟ್ಟಣ ಪಂಚಾಯಿತಿಯಲ್ಲಿ ಶೇ. ೬೬.೨೫ರಷ್ಟು ಕುಟುಂಬಗಳು ತಮ್ಮ ವಾರ್ಡಿನ ವ್ಯಾಪ್ತಿಯ ನೈರ್ಮಲೀಕರಣಕ್ಕೆ ರಾಜ್ಯ ಹಣಕಾಸು ಯೋಜನೆಯಡಿ ಒಳ ಚರಂಡಿ ಯೋಜನೆಯನ್ನು ಸಮರ್ಪಕವಾಗಿ ಅನುಷ್ಠಾನಗೊಳಿಸದೆ, ಕೆಲವು ವಾರ್ಡಿನಲ್ಲಿ ಸೀಮೆಂಟ್ ಬಂಡೆ ಹಾಕಿಸುವುದರೊಂದಿಗೆ ತೆರೆದ ಚಂರಡಿ ನಿರ್ಮಾಣ ಮತ್ತು ಮುಚ್ಚಿದ ಚರಂಡಿ ನಿರ್ಮಾಣ ಮಾಡಲಾಗಿದೆ ಎಂದು ತಿಳಿಸಿರುತ್ತಾರೆ. ಉಳಿದ ಶೇ. ೩೩.೭೫ರಷ್ಟು ಕುಟುಂಬಗಳು ತಮ್ಮ ವಾರ್ಡಿನಲ್ಲಿ ಸ್ವಚ್ಛತೆಯ ಒಂದು ಸಾಧನವಾದ ಚರಂಡಿ ನಿರ್ಮಾಣವನ್ನು ಮಾಡದಿರುವುದನ್ನು ನೋಡಿ ಬೇಸರ ವ್ಯಕ್ತಪಡಿಸಿರುವುದು ತಿಳಿದು ಬಂದಿದೆ. ಮತ್ತು ಹೊಸಪೇಟೆ ನಗರಸಭೆಯ ಶೇ. ೯೩.೩೩ರಷ್ಟು ಕುಟುಂಬಗಳು ತಮ್ಮ ವಾರ್ಡಿನಲ್ಲಿ ಚರಂಡಿಗಳನ್ನು ನಿರ್ಮಿಸಲಾಗಿದೆ. ಸ್ಲಂಗಳಲ್ಲಿ ವಾಸಮಾಡುವ ಜನರಲ್ಲಿ ಹೆಚ್ಚಾಗಿ ತೆರೆದ ಚರಂಡಿಗಳಿದ್ದು, ವಾರ್ಡಿನ ಮುಖ್ಯ ರಸ್ತೆಗಳಲ್ಲಿ ಮುಚ್ಚಿದ ಚರಂಡಿಗಳನ್ನು ನಿರ್ಮಿಸಿರುವುದು ತಿಳಿಸಿರುತ್ತಾರೆ. ಅದರಂತೆ ಉಳಿದ ಶೇ. ೬.೬೬ರಷ್ಟು ಕುಟುಂಬಗಳು ತಮ್ಮ ವಾರ್ಡಿನಲ್ಲಿ ಯಾವುದೇ ಚರಂಡಿಯನ್ನು ನಿರ್ಮಿಸದೇ ಹೊಲಸು ನೀರು ಹಾಗೆಯೇ ದಾರಿಯುದ್ದಕ್ಕೂ ಹರಿದು ಹೋಗುತ್ತಾ ವಾರ್ಡಿನ ಜನರಿಗೆ ಚರಂಡಿ ಸೌಲಭ್ಯವಿಲ್ಲದೇ ನೈರ್ಮಲ್ಯದ ಕೊರತೆಯನ್ನು ಎದರಿಸುತ್ತಿದ್ದಾರೆ. ಒಟ್ಟಾರೆಯಾಗಿ ಸಾಪೇಕ್ಷವಾಗಿ ಅಭಿವೃದ್ಧಿ ಹೊಂದಿದ ಹೊಸಪೇಟೆ ನಗರಸಭೆಯ ಕುಟುಂಬಗಳಿಗಿಂತ ತೀರಾ ಹಿಂದುಳಿದ ಕೂಡ್ಲಿಗಿ ಪಟ್ಟಣ ಪಂಚಾಯಿತಿಯ ಕುಟುಂಬಗಳು ಹೆಚ್ಚು ಚರಂಡಿಯನ್ನು ಹೊಂದದೇ ನೈರ್ಮಲೀಕರಣದಿಂದ ವಂಚಿತಗೊಂಡಿದ್ದು ಅಸಮರ್ಪಕ ಶುಚಿತ್ವವು ಹಲವಾರು ರೋಗರುಜಿನಿಗಳಿಗೆ ತುತ್ತಾಗಿರುವುದು ಹಲವಾರು ಅಧ್ಯಯನಗಳಿಂದ ತಿಳಿದು ಬಂದಿದೆ. ಇಲ್ಲಿ ಸೂಕ್ಷ್ಮವಾಗಿ ಗಮನಿಸಬೇಕಾದ ಅಂಶವೆಂದರೆ ಅಭಿವೃದ್ಧಿಯ ಮುಖ್ಯ ಅಂಶವಾದ ಆರೋಗ್ಯದಲ್ಲಿ ಹೆಚ್ಚು ಅಸಮಾಧಾನಗೊಂಡಿರುವುದು ಸೂಚಿಸಿದ್ದಾರೆ. ಹೀಗೆ ಕೂಡ್ಲಿಗಿ ಪಟ್ಟಣ ಪಂಚಾಯಿತಿಯು ಹೆಚ್ಚು ಕುಟುಂಬಗಳು ಚರಂಡಿ ವ್ಯವಸ್ಥೆಯಲ್ಲಿಯೂ ಸಮರ್ಥ ನಿರ್ವಹಣೆಯ ಕೊರತೆಯನ್ನು ಎದುರಿಸುತ್ತಿರುವುದರ ಜೊತೆಗೆ ಹಲವಾರು ಸಾಮಾಜಿಕ ಕಾರಣಗಳಿಂದ ಹಿಂದುಳಿದಿದೆ ಎಂದು ಅಧ್ಯಯನಗಳಿಂದ ತಿಳಿದು ಬಂದಿದೆ. ನೈರ್ಮಲೀಕರಣದ ಬಹುದೊಡ್ಡ ಸಮಸ್ಯೆಯ

ನಿವಾರಣೆಗೆ ಸರ್ಕಾರ ಮತ್ತು ಸರ್ಕಾರೇತರ ಸಂಸ್ಥೆಗಳ ಸಹಭಾಗಿತ್ವದ ದ್ವಿಮುಖ ಯೋಜನೆಯು ಅತ್ಯವಶ್ಯಕ ಎಂದು ಕಾಣಿಸುತ್ತದೆ.

**ಚರಂಡಿ ಸ್ವಚ್ಛತೆ ನಿರ್ವಹಣೆ ಹೇಗಿದೆ**

| **ಚರಂಡಿ ನಿರ್ವಹಣೆಯ ವಿವರ** | | **ಕೂಡ್ಲಿಗಿ** | | **ಹೊಸಪೇಟೆ** | |
|---|---|---|---|---|---|
| ಚರಂಡಿ ಸ್ವಚ್ಛತೆ ನಿರ್ವಹಣೆ ಹೇಗಿದೆ | ಉತ್ತಮ | ೦ | ೦೦.೦೦ | ೮೭ | ೭೨.೫ |
| | ಉತ್ತಮವಾಗಿಲ್ಲ | ೫೩ | ೬೬.೨೫ | ೨೫ | ೨೦.೮೩ |
| | **ಒಟ್ಟು** | **೫೩** | **೬೬.೨೫** | **೧೧೨** | **೯೩.೩೩** |

ಕೂಡ್ಲಿಗಿ ಪಟ್ಟಣ ಪಂಚಾಯಿತಿಯಲ್ಲಿ ಶೇ. ೬೬.೨೫ರಷ್ಟು ಎಲ್ಲಾ ಕುಟುಂಬಗಳು ಚರಂಡಿ ನಿರ್ವಹಣೆಯ ಬಗ್ಗೆ ಬೇಸರ ವ್ಯಕ್ತಪಡಿಸುತ್ತಾ ಉತ್ತಮವಾಗಿರುವುದಿಲ್ಲ ಎಂಬ ಅಂಶವನ್ನು ತಿಳಿಸಿರುತ್ತಾರೆ. ಮತ್ತು ಹೊಸಪೇಟೆ ನಗರಸಭೆಯಲ್ಲಿ ಶೇ. ೭೨.೫ರಷ್ಟು ಕುಟುಂಬಗಳು ಚರಂಡಿಯನ್ನು ನಿರ್ವಹಿಸುವುದರಲ್ಲಿ ಉತ್ತಮ ಎಂಬ ಅಂಶಗಳನ್ನು ತಿಳಿಸಿರುತ್ತಾರೆ. ಅದರಂತೆ ಉಳಿದ ಶೇ. ೨೦.೮೩ರಷ್ಟು ಕುಟುಂಬಗಳು ತಮ್ಮ ವಾರ್ಡಿನಲ್ಲಿ ಚರಂಡಿ ಸ್ವಚ್ಛತೆಯ ಬಗ್ಗೆ ಅತೃಪ್ತವಾದ ಅಂಶಗಳನ್ನು ತಿಳಿಸಿರುವುದು ತಿಳಿದುಬಂದಿದೆ. ಅಂದರೆ ಎರಡು ಸ್ಥಳೀಯ ಸಂಸ್ಥೆಯಲ್ಲಿ ಸೌಲಭ್ಯಗಳು ಒಂದಕ್ಕೊಂದು ಭಿನ್ನವಾಗಿದೆ. ಒಂದು ಸ್ಥಳೀಯ ಸಂಸ್ಥೆಯಲ್ಲಿ ಸೌಲಭ್ಯಗಳು ಅಧಿಕವಿದ್ದರೂ ನಿರ್ವಹಣೆ ಸರಿಯಿರುವುದಿಲ್ಲ ಅಂತೆಯೇ, ಬೇಡಿಕೆ ಇದ್ದರೂ ಕಾರ್ಯಕ್ರಮಗಳ ಸೌಲಭ್ಯಗಳು ಸರಿಯಾಗಿರುವುದಿಲ್ಲ. ಅಭಿವೃದ್ಧಿ ಹೊಂದಿದ ನಗರಸಭೆ ಮತ್ತು ತೀರಾ ಹಿಂದುಳಿದ ಪಟ್ಟಣ ಪಂಚಾಯಿತಿಗೆ ಹೋಲಿಕೆ ಮಾಡಿದಾಗ ಕಾರ್ಯಕ್ರಮಗಳು ಹೆಚ್ಚು ಹಿಂದುಳಿದ ಪ್ರದೇಶದಲ್ಲಿ ಅನುಷ್ಠಾನಗೊಂಡಿರುವುದು ಮತ್ತು ಹೆಚ್ಚು ಹಣ ಬಳಕೆಯಾಗಿರುವುದು ಸ್ಥಳೀಯ ಸಂಸ್ಥೆಯ ಅಧ್ಯಯನದಿಂದ ಕಂಡುಬಂದಿದೆ. ಆದರೂ ಸಹ ಜನತೆಯ ಹೇಳಿಕೆಗಳಲ್ಲಿ ಹೆಚ್ಚು ಅಸಮಾಧಾನವಿರುವುದು ಕಂಡುಬಂದಿದೆ. ಹೀಗೆ ಅಭಿವೃದ್ಧಿ ಹೊಂದಿದ ನಗರಸಭೆಯ ಕುಟುಂಬಗಳಿಗಿಂತ ಹಿಂದುಳಿದ ಪಟ್ಟಣ ಪಂಚಾಯಿತಿಯಲ್ಲಿ ಶುಚಿತ್ವದ ಸ್ಥಿತಿಗತಿಯಿಂದ ಆಧುನೀಕರಣದ ವಿಸ್ತರಣೇ, ಬಡತನದ ಪ್ರಮಾಣ, ಹೆಚ್ಚಿದ ಅನಾರೋಗ್ಯ ಪ್ರಮಾಣ ಮತ್ತು ಶಿಕ್ಷಣದ ಮೇಲೆ ಅವಲಂಬಿಸಿ ಹಿಂದುಳಿಯಲಿಕ್ಕೆ ಕಾರಣವಾಗಿದೆ ಎನ್ನಬಹುದು.

ಒಟ್ಟಾರೆ ಸಾಪೇಕ್ಷವಾಗಿ ಮುಂದುವರಿದ ಹೊಸಪೇಟೆ ನಗರಸಭೆಯ ಕುಟುಂಬಗಳಿಗಿಂತ ತೀರಾ ಹಿಂದುಳಿದ ಪಟ್ಟಣ ಪಂಚಾಯಿತಿಯ ಕುಟುಂಬಗಳು ತಮ್ಮ ವಾರ್ಡಿನಲ್ಲಿರುವ ಚರಂಡಿ ಸ್ವಚ್ಛತೆಯ ಬಗ್ಗೆ ಹೆಚ್ಚು ಅತೃಪ್ತಿಯನ್ನು ಹೊಂದಿರುವುದು ಸಹ ಇಲ್ಲಿ ನೋಡಲಾಗಿದೆ. ನಗರ ಸ್ಥಳೀಯ ಸಂಸ್ಥೆಗಳ ಮೂಲಕ ಅಭಿವೃದ್ಧಿಯ ದೃಷ್ಟಿಯಿಂದ ಕೈಗೊಳ್ಳಬೇಕಾದ ಚರಂಡಿ ಸ್ವಚ್ಛತೆ ನಿರ್ವಹಣೆಯನ್ನು ಜಾರಿಗೊಳಿಸದಿರುವುದು ವಿಷಾದಕರ ಸಂಗತಿಯಾಗಿದೆ. ಹಾಗಾಗಿ ಮೇಲಿನ ವಿಶ್ಲೇಷಣೆಯಿಂದ ಸೂಕ್ಷ್ಮವಾಗಿ ತಿಳಿಯಬಹುದಾದ ಅಂಶವೆಂದರೆ, ಭಾರತದ ನಾಗರಿಕರಲ್ಲಿರುವ ನೈರ್ಮಲ್ಯದ ಕುರಿತಾದ ವಿಷಯಗಳ ಕುರಿತ ವಾಸ್ತವಾಂಶಗಳ ಮೇಲೆ ಬೆಳಕು ಚೆಲ್ಲುವ ಅವಶ್ಯಕತೆ ಇದೆ ಎಂದು ಹೇಳಬಹುದಾಗಿದೆ.

**ಚರಂಡಿಯನ್ನು ಎಷ್ಟು ದಿನಗಳಿಗೊಮ್ಮೆ ಸ್ವಚ್ಛಗೊಳಿಸುವ ಕುರಿತು**

| **ಚರಂಡಿಯನ್ನು ಸ್ವಚ್ಛಗೊಳಿಸುವ ಅವಧಿ** | | **ಕೂಡ್ಲಿಗಿ** | | **ಹೊಸಪೇಟೆ** | |
|---|---|---|---|---|---|
| ಚರಂಡಿಯನ್ನು ಎಷ್ಟು ದಿನಕ್ಕೊಮ್ಮೆ ಸ್ವಚ್ಛತೆ ಗೊಳಿಸಲು ಬರುತ್ತಾರೆ | ತಿಂಗಳಿಗೆ ೧ ಬಾರಿ | ೩೭ | ೪೬.೨೫ | ೨೫ | ೨೦.೮೩ |
| | ತಿಂಗಳಿಗೆ ೨ ಬಾರಿ | ೦ | ೦ | ೮೭ | ೭೨.೫ |
| | ಯಾವಾಗ ಬೇಕ ಆವಾಗ | ೧೬ | ೨೦.೦೦ | ೦ | ೦ |
| | **ಒಟ್ಟು** | ೫೩ | ೬೬.೨೫ | ೧೧೨ | ೯೩.೩೩ |

**ಮೂಲ: ಕ್ಷೇತ್ರ ಕಾರ್ಯದ ಮಾಹಿತಿ**

ಚರಂಡಿ ಸ್ವಚ್ಛತೆಯನ್ನು ಮಾಡಲು ಅವಧಿಯ ವಿವರಗಳನ್ನು ನೀಡಲಾಗಿದೆ. ಕೂಡ್ಲಿಗಿ ಪಟ್ಟಣ ಪಂಚಾಯಿತಿಯಲ್ಲಿ ಶೇ. ೪೬.೨೫ರಷ್ಟು ಕುಟುಂಬಗಳು ತಮ್ಮ ವಾರ್ಡಿನಲ್ಲಿರುವ ಚರಂಡಿಯನ್ನು ಒಂದು ತಿಂಗಳಿಗೊಂದು ಸಾರಿ ಸ್ವಚ್ಛತೆಯನ್ನು ಕೈಗೊಳ್ಳಲಾಗುತ್ತದೆ ಎಂದು ಅತೃಪ್ತಿಯನ್ನು ತಿಳಿಸಿರುತ್ತಾರೆ. ಅದರಂತೆ ಶೇ. ೨೦ರಷ್ಟು ಕುಟುಂಬಗಳು ತಮ್ಮ ವಾರ್ಡ್‌ನಲ್ಲಿ ಮನಸ್ಸಿಗೆ ಬಂದ ಹಾಗೆ ಯಾವಾಗ ಬೇಕೋ ಆಗ ಚರಂಡಿಯ ಸ್ವಚ್ಛತೆಯನ್ನು ಕೈಗೊಳ್ಳುತ್ತಾರೆ ಎಂದು ಅಭಿಪ್ರಾಯವನ್ನು ತಿಳಿಸಿರುತ್ತಾರೆ. ಹಾಗೆಯೇ ಹೊಸಪೇಟೆ ನಗರಸಭೆಯಲ್ಲಿ ಶೇ. ೨೦.೮೩ರಷ್ಟು ಕುಟುಂಬಗಳು ಚರಂಡಿ ಸ್ವಚ್ಛತೆಯ ಬಗ್ಗೆ ತಿಂಗಳಿಗೆ ಒಂದು ಸಾರಿ ಎಂದು ಸಮಾಧಾನಕರ ಸಂಗತಿಯನ್ನು ಹೇಳಿಕೊಂಡಿರುತ್ತಾರೆ. ಅದರಂತೆ ಉಳಿದ ಕೆಲವು ವಾರ್ಡ್‌ಗಳಿಗೆ ಶೇ. ೭೨.೫ರಷ್ಟು ಕುಟುಂಬಗಳು ತಮ್ಮ ವಾರ್ಡಿನಲ್ಲಿ ಚರಂಡಿ ಸ್ವಚ್ಛತೆಯನ್ನು ತಿಂಗಳಿಗೆ ಎರಡು ಬಾರಿ ಬರುತ್ತಾರೆ. ಇದೊಂದು ಉತ್ತಮವಾದ ಅಭಿಪ್ರಾಯವಾಗಿರುತ್ತದೆ. ಇಲ್ಲಿಯೂ ಸಹ ತೀರಾ ಹಿಂದುಳಿದ ಪಟ್ಟಣ ಪಂಚಾಯಿತಿಯ ಕುಟುಂಬಗಳು ಅಭಿವೃದ್ಧಿ ಹೊಂದಿದ ಕುಟುಂಬಗಳಿಗಿಂತ ಸ್ವಚ್ಛತೆಯನ್ನು ಕೈಗೊಳ್ಳುವುದರಲ್ಲಿ ಹಿಂದುಳಿದಿರುವುದು ತಿಳಿದುಬಂದಿದೆ. ಇಲ್ಲಿ ಗಮನಿಸಬೇಕಾದ ಸಂಗತಿಯೆಂದರೆ ಕಳಪೆ ನೈರ್ಮಲ್ಯವು ಹಲವಾರು ಆರ್ಥಿಕ ಮತ್ತು ಸಾಮಾಜಿಕ ಸಮಸ್ಯೆಗಳ ಜೊತೆಗೆ ನಂಟು ಹೊಂದಿದೆ. ಇದರ ಪೈಕಿ ಹಿಂದುಳಿದ ಪಟ್ಟಣ ಪಂಚಾಯಿತಿಯಲ್ಲಿ ನೈರ್ಮಲ್ಯದ ಬಗ್ಗೆ ಕಾಳಜಿ ಹೊಂದದೆ ಆರೋಗ್ಯದ ಸಮಸ್ಯೆಗಳಿಗೆ ಹೆಚ್ಚು ಕಾರಣವಾಗಿರುವುದರಿಂದ ಹಲವಾರು ಅಂಶಗಳಿಂದಲೂ ಹಿಂದುಳಿದಿರುವುದಾಗಿದೆ ಎಂದು ಅಧ್ಯಯನದಿಂದ ತಿಳಿದು ಬಂದಿದೆ. ಹಾಗಾಗಿ, ಶುಚಿತ್ವದ ಮಟ್ಟವನ್ನು ಹೆಚ್ಚಿಸುವ ಮೂಲಕ ಪ್ರತಿಯೊಬ್ಬರಿಗೂ ಅದರಿಂದಾಗುವ ಅನುಕೂಲಗಳ ಬಗ್ಗೆ ಅರಿವು ಮತ್ತು ಸ್ವಚ್ಛತೆಯಲ್ಲಿ ಭಾಗವಹಿಸುವಂತೆ ಮಾಡುವ ತರಬೇತಿ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುವ ಅಗತ್ಯತೆಯಿದೆ ಎಂದು ಅಧ್ಯಯನದ ಮೂಲಕ ಹೇಳಲಾಗಿದೆ.

**ಚರಂಡಿಯಿಂದ ತೆಗೆದ ಕಸವನ್ನು ಎಲ್ಲಿ ಹಾಕುತ್ತಾರೆ**

| ಕಸದ ಸಂಗ್ರಹಣೆ ವಿವರ | | ಕೂಡ್ಲಿಗಿ | | ಹೊಸಪೇಟೆ | |
|---|---|---|---|---|---|
| ಚರಂಡಿಯಿಂದ ತೆಗೆದ | ನಿಗದಿತ ಜಾಗಕ್ಕೆ | ೬ | ೭.೫ | ೯೯ | ೮೨.೫ |
| ಕಸವನ್ನು ಎಲ್ಲಿ | ರಸ್ತೆ ಬದಿಯಲ್ಲಿ | ೪೭ | ೫೮.೭೫ | ೧೩ | ೧೦.೮೩ |
| ಹಾಕುತ್ತಾರೆ | **ಒಟ್ಟು** | ೫೩ | ೬೬.೨೫ | ೧೧೨ | ೯೩.೩೩ |

**ಮೂಲ: ಕ್ಷೇತ್ರ ಕಾರ್ಯದ ಮಾಹಿತಿ**

ನೈರ್ಮಲ್ಯದ ಕುರಿತಾದ ನಗರವಾರು ನೋಡಿದಾಗ ಕೂಡ್ಲಿಗಿ ಪಟ್ಟಣ ಪಂಚಾಯಿತಿಯಲ್ಲಿ ಕೇವಲ ಶೇ.೭.೫ರಷ್ಟು ಕುಟುಂಬಗಳು ಮಾತ್ರ ಚರಂಡಿಯಿಂದ ತೆಗೆದ ಕಸವನ್ನು ನಿಗದಿತ ಜಾಗದಲ್ಲಿ ಹಾಕಲಾಗುತ್ತದೆ ಎಂದು ತಿಳಿಸಿರುತ್ತಾರೆ. ಅದರಂತೆ ಉಳಿದ ಶೇ. ೫೮.೭೫ರಷ್ಟು ಕುಟುಂಬಗಳು ವಾರ್ಡಿನ ಸ್ವಚ್ಛತೆಯ ಬಗ್ಗೆ ಹೇಳುತ್ತಾ ತೆಗೆದ ಕಸವನ್ನು ರಸ್ತೆ ಬದಿಯಲ್ಲೇ ಹಾಕಲಾಗುತ್ತದೆ ಎಂದು ಬೇಸರವನ್ನು ವ್ಯಕ್ತಪಡಿಸಿರುತ್ತಾರೆ. ಹಾಗೆಯೇ ಹೊಸಪೇಟೆ ನಗರಸಭೆಯಲ್ಲಿ ಶೇ. ೮೨.೫ರಷ್ಟು ಕುಟುಂಬಗಳು ಚರಂಡಿಯಿಂದ ತೆಗೆದ ಕಸವನ್ನು ನಿಗದಿತ ಸ್ಥಳದಲ್ಲಿ ಹಾಕಲಾಗುತ್ತದೆ ಎಂದು ತಿಳಿಸಿರುತ್ತಾರೆ. ಅದರಂತೆ ಕೆಲವು ವಾರ್ಡುಗಳಲ್ಲಿ ನೈರ್ಮಲೀಕರಣದಿಂದ ವಂಚನೆಗೆ ಒಳಗಾದ ಶೇ. ೧೦.೮೩ರಷ್ಟು ಕುಟುಂಬಗಳು ತಮ್ಮ ವಾರ್ಡಿನಲ್ಲಿರುವ ಚರಂಡಿಯಿಂದ ತೆಗೆದ ಕಸವನ್ನು ರಸ್ತೆ ಬದಿಯಲ್ಲಿ ಹಾಕಲಾಗುತ್ತದೆ. ಅದನ್ನು ಮುಂದಿನ ಬಾರಿ ಬಂದಾಗ ಮಾತ್ರ ಅದರೊಂದಿಗೆ ತೆಗೆದುಕೊಂಡು ಹೋಗುತ್ತಾರೆ ಎಂದು ಬೇಸರವನ್ನು ಸೂಚಿಸಿರುತ್ತಾರೆ. ಒಟ್ಟಾರೆಯಾಗಿ, ಇಲ್ಲಿ ಗಮನಿಸಬೇಕಾದ ಸಂಗತಿಯೆಂದರೆ ಹಿಂದುಳಿದ ಪಟ್ಟಣ ಪಂಚಾಯಿತಿಯ ಕುಟುಂಬಗಳು ಅಭಿವೃದ್ಧಿ ಕಂಡ ನಗರಸಭೆಯ ಕುಟುಂಬಗಳಿಗಿಂತ ಸ್ವಚ್ಛತೆಯ ಬಗ್ಗೆ ಭಿನ್ನಾಭಿಪ್ರಾಯಗಳನ್ನ ನೀಡುತ್ತಾ ಅತೃಪ್ತಿಯನ್ನು ಸೂಚಿಸಿರುವುದು ಕಂಡುಬಂದಿದೆ. ಪಟ್ಟಣ ಪಂಚಾಯಿತಿಯಲ್ಲಿ ಅಭಿವೃದ್ಧಿಗೆ ಪೂರಕವಾದ ಸ್ವಚ್ಛತಾ ಕಾಮಗಾರಿಗಳಿಗೆ ಹೆಚ್ಚಿನ ಆದ್ಯತೆಯನ್ನು ನೀಡದೆ ಇರುವ ಚರಂಡಿ ಕಾಮಗಾರಿಗಳನ್ನು ಸಮರ್ಥವಾಗಿ ನಿರ್ವಹಿಸದಿರುವುದರಿಂದ ಹಿಂದುಳಿದಿರುವುದಕ್ಕೆ ಕಾರಣವಾಗಿದೆ. ಅಂದರೆ ಅಜ್ಞಾನ ಮತ್ತು ಕಡಿಮೆ ಆದಾಯವು ಜನರನ್ನು ಸೌಲಭ್ಯ ಇಲ್ಲ ಎಂಬ ಶುಚಿತ್ವದ ಗುಂಪಿಗೆ ಸೇರಿಸುವ ಸಾಧ್ಯತೆ ಹೆಚ್ಚಿರುವುದು ಕೂಡ ನಮಗೆ ಕಂಡುಬಂದಿದೆ. ನೈರ್ಮಲ್ಯದ ಯೋಜನೆಗಳು ಸಾರ್ವಜನಿಕ ಆರೋಗ್ಯವೃದ್ಧಿ ಗುರಿಯನ್ನು ಸಾಧಿಸುವಲ್ಲಿ ಅರ್ಥಪೂರ್ಣ ಬದಲಾವಣೆ ತರುವುದಂತೂ ಸ್ಪಷ್ಟ. ಕಳಪೆ ಶುಚಿತ್ವದಿಂದಾಗುವ ಸಾಮಾಜಿಕ ಸಮಸ್ಯೆಗಳ ಕುರಿತು ಅರಿವು ಮೂಡಿಸುವುದು ಮತ್ತು ಸ್ವಚ್ಛತೆಯಲ್ಲಿ ಭಾಗವಹಿಸುವಂತೆ ಪ್ರೇರೇಪಿಸುವ ಅಗತ್ಯವಿರುವುದು ಅಧ್ಯಯದಿಂದ ಕಂಡುಕೊಳ್ಳಲಾಗಿದೆ.

**ನಿಮ್ಮ ಮನೆಯಲ್ಲಿ ಶೌಚಾಲಯದ ವ್ಯವಸ್ಥೆ**

| ಶೌಚಾಲಯದ ವಿವರ | | ಕೂಡ್ಲಿಗಿ | | ಹೊಸಪೇಟೆ | |
|---|---|---|---|---|---|
| ನಿಮ್ಮ ಮನೆಯಲ್ಲಿ | ಇದೆ | ೪೭ | ೫೮.೭೫ | ೯೩ | ೭೭.೫ |
| ಶೌಚಾಲಯದ ವ್ಯವಸ್ಥೆ | ಇಲ್ಲಾ | ೩೩ | ೪೧.೨೫ | ೨೩ | ೧೯.೧೬ |
| ಇದೆಯಾ | **ಒಟ್ಟು** | ೮೦ | ೧೦೦ | ೧೧೬ | ೯೬.೬೬ |

ಶೌಚಾಲಯದ ನಿರ್ಮಾಣದ ಬಗ್ಗೆ ವಿವರದ ಪ್ರಮಾಣವನ್ನು ವಿಶ್ಲೇಷಿಸಲಾಗಿದೆ. ಕೂಡ್ಲಿಗಿ ಪಟ್ಟಣ ಪಂಚಾಯಿತಿಯಲ್ಲಿ ಶೇ. ೨೩.೭೫ರಷ್ಟು ಕುಟುಂಬಗಳು ತಮ್ಮ ಸ್ವಚ್ಛತೆಯ ದೃಷ್ಟಿಯಿಂದ ಶೌಚಾಲಯವನ್ನು ವೈಯಕ್ತಿಕವಾಗಿ ನಿರ್ಮಿಸಿಕೊಂಡಿರುವುದಾಗಿ ಕಂಡು ಬಂದಿದೆ. ಅದರಂತೆ ಉಳಿದ ಶೇ. ೨೬.೨೫ರಷ್ಟು ಕುಟುಂಬ ತಮ್ಮಲ್ಲಿ ವೈಯಕ್ತಿಕವಾಗಿ ಶೌಚಾಲಯಗಳನ್ನು ನಿರ್ಮಿಸಿಕೊಳ್ಳಲಾಗದೆ ಇರುವುದರಿಂದ ಯೋಜನೆಯಡಿಯಲ್ಲಿ ಅನುದಾನವನ್ನು ಪಡೆದು ಶೌಚಾಲಯಗಳ ಸೌಲಭ್ಯವನ್ನು ಹೊಂದಿರುವುದಾಗಿ ತಿಳಿದು ಬಂದಿದೆ. ಹಾಗೆಯೇ ಹೊಸಪೇಟೆ ನಗರಸಭೆಯಲ್ಲಿ ಶೇ. ೫೫.೮೩ರಷ್ಟು ಕುಟುಂಬಗಳು ತಮ್ಮ ಶೌಚಾಲಯದ ಸೌಲಭ್ಯವನ್ನು ವೈಯಕ್ತಿಕವಾಗಿ ನಿರ್ಮಿಸಿಕೊಂಡಿರುವುದಾಗಿ ಸೂಚಿಸಿರುತ್ತಾರೆ. ಅದರಂತೆ ಉಳಿದ ಶೇ. ೯.೧೭ರಷ್ಟು ಕುಟುಂಬಗಳು ಶೌಚಾಲಯ ಸೌಲಭ್ಯವನ್ನು ಯೋಜನೆಯಡಿಯಲ್ಲಿ ಹೊಂದಿರುತ್ತೇವೆ ಎಂದು ಕಂಡುಕೊಳ್ಳಲಾಗಿದೆ. ಇಲ್ಲಿ ಗಮನಿಸುವ ಸಂಗತಿಯೆಂದರೆ ಎರಡು ಸ್ಥಳೀಯ ಸಂಸ್ಥೆಗಳಲ್ಲಿ ಹೆಚ್ಚು ಆದಾಯ, ಅಕ್ಷರವನ್ನು ಕಲಿತವರು ಮತ್ತು ಅತಿ ಹೆಚ್ಚು ನಗರೀಕರಣದಿಂದ ಪ್ರಭಾವದ ಪರಿಣಾಮವಾಗಿ ಶೌಚಾಲಯಕ್ಕೆ ಹೋಗುವ ತೊಂದರೆಯಿಂದ ಸಾಲವನ್ನಾದರೂ ಮಾಡಿ ವೈಯಕ್ತಿಕವಾಗಿ ಶೌಚಾಲಯ ನಿರ್ಮಿಸಿಕೊಂಡಿರುವುದಾಗಿದೆ ಎಂದು ಹೇಳಿಕೊಂಡಿರುವುದು ತಿಳಿದು ಬಂದಿದೆ. ಕಡಿಮೆ ಆದಾಯವನ್ನು ಹೊಂದಿದವರು ಸ್ಥಳೀಯ ಸಂಸ್ಥೆಗಳಿಗೆ ಪ್ರತಿ ದಿನ ಅಡ್ಡಾಡಿ ಯೋಜನೆಗಾಗಿ ಹಣವನ್ನು ಕೊಟ್ಟು ಯೋಜನೆಯಡಿಯಲ್ಲಿ ಶೌಚಾಲಯದ ಸೌಲಭ್ಯ ಹೊಂದಿರುವುದಾಗಿದೆ ಎಂದು ಹೇಳಿಕೊಂಡಿರುವುದು ತಿಳಿದು ಬಂದಿದೆ. ಬಡತನ ರೇಖೆಗಿಂತ ಕೆಳಗಿನ ಕುಟುಂಬಗಳು ಮತ್ತು ವ್ಯವಸಾಯ, ಕೂಲಿ ಕಾರ್ಮಿಕರು ಯೋಜನೆಯ ಲಾಭವನ್ನು ಪಡೆಯದೇ ಶೌಚಾಲಯದಿಂದ ವಂಚಿತಗೊಂಡು ನೈರ್ಮಲ್ಯದ ಸಮಸ್ಯೆಗಳನ್ನು ಎದುರಿಸುತ್ತಿರುವುದು ಕಂಡುಬಂದಿದೆ. ಒಟ್ಟಾರೆ ಅಭಿವೃದ್ಧಿ ಹೊಂದಿದ ಹೊಸಪೇಟೆ ನಗರಸಭೆ ಕಟುಂಬಗಳಿಗಿಂತ ತೀರಾ ಹಿಂದುಳಿದ ಕೂಡ್ಲಿಗಿ ಪಟ್ಟಣ ಪಂಚಾಯಿತಿಯ ಕುಟುಂಬಗಳು ಶೌಚಾಲಯ ಸೌಲಭ್ಯವನ್ನು ಪಡೆಯುವುದರಲ್ಲಿ ಹೆಚ್ಚಾಗಿ ವಿಫಲವಾಗಿರುವುದು ತಿಳಿದು ಬಂದಿದೆ. ಅಂದರೆ ಶೌಚಾಲಯ ಸೌಲಭ್ಯವನ್ನು ಒದಗಿಸಲು ಹೆಚ್ಚಿನ ಪ್ರೋತ್ಸಾಹಧನ ನೀಡಿದ ನಂತರ ಶೌಚಾಲಯ ನಿರ್ಮಿಸಿರುವುದು ತೀರಾ ಕಳಪೆಯಾಗಿರುವುದು ಮೇಲಿನ ಅಂಕಿ-ಅಂಶಗಳನ್ನು ನೋಡಿದಾಗ ತಿಳಿದು ಬಂದಿದೆ. ಒಟ್ಟಾರೆಯಾಗಿ ಈ ವಿಶ್ಲೇಷಣೆಯಿಂದ ಸೂಕ್ಷ್ಮವಾಗಿ ತಿಳಿಯುವ ಅಂಶವೆಂದರೆ ಜನಸಂಖ್ಯೆ ಏರಿಕೆ ಮತ್ತು ನಗರೀಕರಣದ ನಾಗಾಲೋಟವೇ ಶೌಚಾಲಯದಿಂದ ನಗರ ಜನತೆಯು ವಂಚಿತಗೊಂಡು ಮತ್ತು ಅದರ ಫಲಿತಾಂಶವಾಗಿ ಶೌಚಾಲಯವಿಲ್ಲದೇ ನೈರ್ಮಲ್ಯದ ಕೊರತೆಯನ್ನು ಎದುರಿಸುವುದರಿಂದ ನಗರದ ಜನತೆಯ ಮೇಲೆ ವ್ಯತಿರಿಕ್ತ ಪರಿಣಾಮಗಳುಂಟಾಗಿ ಅನಾರೋಗ್ಯಕ್ಕೆ ಕಾರಣವಾಗಿ ಬಡತನದಿಂದ ಯಾವ ಕ್ರಮವನ್ನು ತೆಗೆದುಕೊಳ್ಳದೆ ಇರುವುದರಿಂದ ಪಟ್ಟಣ ಪಂಚಾಯಿತಿಯು ಹಿಂದುಳಿಯಲಿಕ್ಕೆ ಕಾರಣವಾಗಿದೆ ಎಂದು ತಿಳಿಯಲಾಗಿದೆ. ಹಾಗಾಗಿ ಹಿಂದುಳಿದ ಪಟ್ಟಣ ಪಂಚಾಯಿತಿಯೂ ಸಹ ಈ ಅಂಶದಿಂದ ಹೊರತಾಗಿಲ್ಲ. ಆದ್ದರಿಂದ, ಸುಧಾರಿತ ಶೌಚವ್ಯವಸ್ಥೆ ಬಡತನ ನಿವಾರಣೆಯಲ್ಲಿ ಪ್ರಮುಖ ಪಾತ್ರ ವಹಿಸುವುದಲ್ಲದೆ ಎಲ್ಲಾ ಮೂಲಭೂತ ಮಾನವ ಹಕ್ಕುಗಳ ಸಾಧನೆಗೂ ತಳಪಾಯ ಒದಗಿಸುತ್ತದೆ. ಇದರ ಜೊತೆಗೇ, ಸಾಕಷ್ಟು ಪ್ರಮಾಣದ ಹಣಕಾಸನ್ನು ಒದಗಿಸುವ ಅಗತ್ಯವಿದೆ ಎಂದು ಹೇಳಬಹುದಾಗಿದೆ.

**ಇಲ್ಲವಾದರೆ ಶೌಚಾಲಯ ಎಲ್ಲಿಗೆ ಹೋಗುತ್ತೀರಿ**

| **ಶೌಚ ವಿಸರ್ಜನೆಯ ಕುರಿತು** | | **ಕೂಡ್ಲಿಗಿ** | | **ಹೊಸಪೇಟೆ** | |
|---|---|---|---|---|---|
| ಇಲ್ಲವಾದರೆ | ಸಮುದಾಯ | ೧೫ | ೧೮.೭೫ | ೨೩ | ೧೯.೧೬ |
| | ಹೊರಗಡೆ | ೨೫ | ೩೧.೨೫ | ೧೯ | ೧೫.೮೩ |
| | **ಒಟ್ಟು** | **೪೦** | **೫೦** | **೪೨** | **೩೫** |

**ಮೂಲ: ಕ್ಷೇತ್ರ ಕಾರ್ಯದ ಮಾಹಿತಿ**

ಮೂಲಭೂತ ನೈರ್ಮಲ್ಯದ ಸಮಸ್ಯೆಯ ಒಂದು ಭಾಗವಾದ ಶೌಚಾಲಯ ಸೌಲಭ್ಯ ಇಲ್ಲದಿರುವ ಕುಟುಂಬಗಳು ಬಹುತೇಕ ಜನರು ಪರ್ಯಾಯವಾಗಿ ರೂಪಿಸಿಕೊಂಡಿರುವ ವಿವರವನ್ನು ವಿಶ್ಲೇಸಲಾಗಿದೆ. ಕೂಡ್ಲಿಗಿ ಪಟ್ಟಣ ಪಂಚಾಯಿತಿಯಲ್ಲಿ ಶೇ. ೧೮.೭೫ರಷ್ಟು ಕುಟುಂಬಗಳು ವೈಯಕ್ತಿಕವಾಗಿ ಶೌಚಾಲಯವನ್ನು ಬಳಸದಿರುವುದಕ್ಕೆ ಕಾರಣವನ್ನು ಕೊಡುತ್ತಾ ತಾವುಗಳು ಮಲವಿಸರ್ಜನೆಗಾಗಿ ಸಮುದಾಯ ಶೌಚಾಲಯಗಳನ್ನು ಅವಲಂಬಿಸಿರುವುದಾಗಿ ತಿಳಿಸಿರುತ್ತಾರೆ. ಅದರಂತೆ ಉಳಿದ ಶೇ. ೩೧.೨೫ರಷ್ಟು ಕುಟುಂಬಗಳು ತಮ್ಮ ಮನೆಯಲ್ಲಿ ವೈಯಕ್ತಿಕ ಶೌಚಾಲಯವು ನಿರ್ಮಿಸಿಕೊಳ್ಳದಿರುದಕ್ಕೆ ಕಡಿಮೆ ಆದಾಯ, ಸ್ವಚ್ಛತೆ ಬಗ್ಗೆ ಅರಿವು ಇಲ್ಲದಿರುವುದು, ರೈತರಾಗಿರುವುದು, ಕೂಲಿ ಕಾರ್ಮಿಕರಾಗಿರುವುದರಿಂದ ಸಮುದಾಯ ಶೌಚಾಲಯವನ್ನು ಅವಲಂಬಿಸದೆ ಶೌಚವನ್ನು ವಿಸರ್ಜಿಸುವುದಕ್ಕೆ ಬಯಲನ್ನೆ ಆಶ್ರಯಿಸಿದ್ದೇವೆ ಎಂದು ಹೇಳಿಕೊಂಡಿರುತ್ತಾರೆ. ಹಾಗೆಯೇ ಹೊಸಪೇಟೆ ನಗರಸಭೆಯಲ್ಲಿ ಶೇ. ೧೯.೧೬ರಷ್ಟು ಕುಟುಂಬಗಳು ತಮ್ಮ ದಿನನಿತ್ಯದ ಶೌಚ ವಿಸರ್ಜನೆಗಾಗಿ ಸಮುದಾಯ ಶೌಚಾಲಯಗಳನ್ನು ಅವಲಂಬಿಸಿರುತ್ತೇವೆ ಎಂದು ತಿಳಿಸಿರುತ್ತಾರೆ. ಅದರಂತೆ ಉಳಿದ ಶೇ. ೧೫.೮೩ರಷ್ಟು ಕುಟುಂಬಗಳು ಸಹ ಸಮುದಾಯ ಶೌಚಾಲಯಕ್ಕೆ ಹೋಗದಿರುವುದಕ್ಕೆ ಅಧಿಕ ಒತ್ತಡ, ಜಾಗದ ಕೊರತೆ ಎಂಬ ಕಾರಣಗಳನ್ನು ನೀಡುತ್ತಾ ಬಯಲನ್ನೆ ಆಶ್ರಯಿಸಿರುತ್ತೇವೆ ಎಂದು ತಿಳಿಸಿರುತ್ತಾರೆ. ಒಟ್ಟಾರೆ ಸಾಪೇಕ್ಷವಾಗಿ ಅಭಿವೃದ್ಧಿ ಹೊಂದಿದ ನಗರಸಭೆಯ ಕುಟುಂಬಗಳಿಗಿಂತ ತೀರಾ ಹಿಂದುಳಿದ ಕೂಡ್ಲಿಗಿ ಪಟ್ಟಣ ಪಂಚಾಯಿತಿಯ ಕುಟುಂಬಗಳು ವೈಯಕ್ತಿಕವಾಗಿ ಶೌಚಾಲಯವನ್ನು ಹೊಂದದೆ ಸಮುದಾಯ ಶೌಚಾಲಯಗಳ ಮೇಲೆ ಹೆಚ್ಚು ಅವಲಂಬಿತರಾಗಿದ್ದು ಅದರಂತೆ ಸಮುದಾಯ ಶೌಚಾಲಯದ ಜೊತೆಗೆ ಅದರ ಬಗ್ಗೆ ಅತೃಪ್ತ ಮನೋಸ್ಥಿತಿಯನ್ನು ಹೊಂದಿದ್ದು ಹೆಚ್ಚಾಗಿ ಜನತೆ ಬಯಲನ್ನೇ ಅವಲಂಬಿಸಿರುವುದು ಕಂಡು ಬಂದಿದೆ. ಅಂದರೆ ತೀರಾ ಹಿಂದುಳಿದ ಕೂಡ್ಲಿಗಿ ಪಟ್ಟಣ ಪಂಚಾಯಿತಿಯಲ್ಲಿ ಸುಧಾರಿತ ಶೌಚ ವ್ಯವಸ್ಥೆ ಇಲ್ಲದಿರುವುದಕ್ಕೆ ಬಡತನ, ಆರೋಗ್ಯ ಮತ್ತು ಶಿಕ್ಷಣದ ಮೇಲೆ ಪರಿಣಾಮ ಬೀರುವುದರಿಂದ ಆ ಸ್ಥಳೀಯ ಸಂಸ್ಥೆಯು ಹಿಂದುಳಿದಿದೆ ಎನ್ನಬಹುದು. ಇದರ ಜೊತೆಗೆ ಸಾಕಷ್ಟು ಪ್ರಮಾಣದ ಅನುದಾನವಿದ್ದರೂ ಪಟ್ಟಣ ಪಂಚಾಯಿತಿಯಲ್ಲಿ ಶೌಚಾಲಯಗಳು ಉತ್ತಮವಾಗಿ ಅನುಷ್ಠಾನಗೊಂಡಿಲ್ಲ ಎಂದು ಹೇಳಲಾಗಿದೆ. ತೀರಾ ಹಿಂದುಳಿದ ಪ್ರದೇಶವಾಗಿರುವುದರಿಂದ ಶೌಚಾಲಯಗಳ ಅಗತ್ಯತೆ ಹೆಚ್ಚು ಇರುವುದರಿಂದ ಹೆಚ್ಚು ಚುನಾಯಿತ ಪ್ರತಿನಿಧಿಗಳು ರಾಜಕೀಯ ಇಚ್ಛಾಶಕ್ತಿಯಿಂದ ಅನುಷ್ಠಾನಗೊಳಿಸುವುದರ ಅಗತ್ಯತೆ ಇದೆ ಎಂದು ಹೇಳಲಾಗಿದೆ.

**ಸಮುದಾಯದ ಶೌಚಾಲಯದಲ್ಲಿ ಸರಿಯಾದ ನಿರ್ವಹಣೆ ಇದೆಯಾ**

| **ಶೌಚಾಲಯದ ನಿರ್ವಹಣೆ ವಿವರ** | | **ಕೂಡ್ಲಿಗಿ** | | **ಹೊಸಪೇಟೆ** | |
|---|---|---|---|---|---|
| ಸಮುದಾಯ ಶೌಚಾಲಯದಲ್ಲಿ ನಿರ್ವಹಣೆ | ಇದೆ | ೦ | ೦.೦೦ | ೧೪ | ೧೧.೬೬ |
| | ಇಲ್ಲಾ | ೧೫ | ೧೮.೭೫ | ೯ | ೭.೫ |
| | **ಒಟ್ಟು** | ೧೫ | ೧೮.೭೫ | ೧೩ | ೧೦.೮೩ |

**ಮೂಲ: ಕ್ಷೇತ್ರ ಕಾರ್ಯದ ಮಾಹಿತಿ**

ಶೌಚಾಲಯದ ನಿರ್ವಹಣೆಯ ಕುರಿತು ವಿವರವನ್ನು ಕೊಡಲಾಗಿದೆ. ಕೂಡ್ಲಿಗಿ ಪಟ್ಟಣ ಪಂಚಾಯಿತಿಯಲ್ಲಿ ಶೇ. ೧೮.೭೫ರಷ್ಟು ಕುಟುಂಬಗಳು ಮಹಿಳಾ ಸಮುದಾಯ ಶೌಚಾಲಯವನ್ನು ಬಳಕೆ ಮಾಡುತ್ತಿದ್ದು, ಈ ಶೌಚಾಲಯಗಳಿಗೆ ನೀರು, ಫಿಟ್ ಮತ್ತು ಮೇಲ್ಭಾವಣೆ ಸೌಲಭ್ಯಗಳಿಲ್ಲ. ಸುತ್ತಲೂ ಬಂಡೆಗಳಿಂದ ಗೋಡೆಯನ್ನು ನಿರ್ಮಿಸಿದ್ದಾರೆ. ಕೆಲವು ಕಡೆ ನಾಲ್ಕು ಗೋಡೆಗಳು ಇಟ್ಟಿಗೆಯಿಂದ ನಿರ್ಮಿಸಲಾಗಿದೆ ಎಂದು ತಿಳಿದು ಬಂದಿದೆ. ಹಾಗೆಯೇ ಹೊಸಪೇಟೆ ನಗರಸಭೆಯಲ್ಲಿ ಶೇ. ೧೧.೬೬ರಷ್ಟು ಕುಟುಂಬಗಳು ಸಮುದಾಯ ಶೌಚಾಲಯಗಳ ಬಗ್ಗೆ ತೃಪ್ತಿಯನ್ನು ಸೂಚಿಸಿದ್ದಾರೆ. ಅದರಂತೆ ಉಳಿದ ಶೇ. ೭.೫ರಷ್ಟು ಕುಟುಂಬಗಳು ಸಹ ನೈರ್ಮಲ್ಯಕ್ಕೆ ಆದ್ಯತೆಯನ್ನು ನೀಡದೇ ಸಮುದಾಯ ಶೌಚಾಲಯಗಳು ಅಸುರಕ್ಷತೆಯಿಂದ ಕೂಡಿರುವುದಾಗಿವೆ ಎಂದು ಅಧ್ಯಯನದಿಂದ ಕಂಡು ಬಂದಿದೆ. ಒಟ್ಟಾರೆ ಅಭಿವೃದ್ಧಿ ಹೊಂದಿದ ಹೊಸಪೇಟೆ ನಗರಸಭೆಯ ಕುಟುಂಬಗಳಿಗಿಂತ ತೀರಾ ಹಿಂದುಳಿದ ಪಟ್ಟಣ ಪಂಚಾಯಿತಿಯ ಕುಟುಂಬಗಳು ಶೌಚಾಲಯ ಸರಿಯಾದ ನಿರ್ವಹಣೆಯ ಕೊರತೆ ಇರುವುದು ಕಂಡು ಬಂದಿದೆ. ಅಂದರೆ ಹಿಂದುಳಿದ ಪಟ್ಟಣ ಪಂಚಾಯಿತಿಯಲ್ಲಿ ಮತ್ತು ಮುಂದುವರಿದ ಹೊಸಪೇಟೆ ನಗರಸಭೆಯಲ್ಲಿಯೂ ಸಹ ವಿಶೇಷ ಅಗತ್ಯತೆಗಳನ್ನು ಗುರುತಿಸುವುದರೊಂದಿಗೆ ಶೌಚ ವ್ಯವಸ್ಥೆಯನ್ನೊಳಗೊಂಡಂತೆ ಮೂಲ ಸೌಕರ್ಯಗಳನ್ನು ಪಡೆಯುವುದರಲ್ಲಿ ವಿಫಲಗೊಂಡಿದೆ ಎಂದು ಹೇಳಲಾಗಿದೆ. ಹೀಗೆ ಶೌಚಾಲಯದ ಸೌಲಭ್ಯದ ಅಭಾವದ ದುಷ್ಪರಿಣಾಮ ಶೈಕ್ಷಣಿಕ, ಆರೋಗ್ಯದ ಮೇಲೆ ತೀವ್ರವಾಗಿ ಕಂಡುಬಂದಿದೆ. (ತೆರೆದ ಬಯಲಿನಲ್ಲಿ ಮಲವಿಸರ್ಜನೆ ಮಾಡುವುದು ಪ್ರಮುಖ ಆರೋಗ್ಯ ಅಪಾಯಗಳಿಗೆ ಎಡೆಮಾಡಿಕೊಡುತ್ತದೆ). ಹಾಗಾಗಿ ಪಟ್ಟಣ ಪಂಚಾಯಿತಿಯು ಇಂತಹ ಅಂಶಗಳನ್ನು ಎದುರಿಸುವುದರಿಂದ ಹಿಂದುಳಿದಿದೆ ಎನ್ನಬಹುದು. ಇದರಿಂದಾಗಿ ಶೌಚಾಲಯ ಬಳಕೆಯನ್ನು ಹೆಚ್ಚಿಸಬೇಕೆಂದರೆ ನೀರಿನ ಲಭ್ಯತೆಯನ್ನು ಸಕಾರಾತ್ಮಕವಾಗಿ ಉತ್ತಮಪಡಿಸಬೇಕು ಹಾಗೂ ಸಮರ್ಪಕ ನಿರ್ವಹಣೆಯ ಜೊತೆಗೆ ನೈರ್ಮಲೀಕರಣಕ್ಕೆ ಅಗತ್ಯವಾದವುಗಳನ್ನು ಹೆಚ್ಚು ಹೆಚ್ಚಾಗಿ ಪೂರೈಸುವ ಅಗತ್ಯತೆ ಇದೆ ಎಂದು ಹೇಳಲಾಗಿದೆ. ಹೀಗೆ ಎರಡು ನಗರ ಸ್ಥಳೀಯ ಸಂಸ್ಥೆಗಳಲ್ಲಿ ಶೌಚಾಲಯದ ಕಾರ್ಯಕ್ರಮಗಳನ್ನು ಹೋಲಿಕೆಯಾಗಿ ನೋಡಿದಾಗ ಒಂದಕ್ಕೊಂದು ಭಿನ್ನವಾಗಿರುವುದು ತಿಳಿದು ಬಂದಿದೆ.

## ೫.೯. ನಗರವಾರು ಸಂದರ್ಶನ ಮಾಡಿದ ಕುಟುಂಬಗಳ ವ್ಯಕ್ತಪಡಿಸಿದ ತೆರಿಗೆಯ ಬಗ್ಗೆ ಅಭಿಪ್ರಾಯಗಳು

**ತೆರಿಗೆ ಪಾವತಿಸುವುದರ ಕುರಿತು**

| ತೆರಿಗೆಯ ಬಗ್ಗೆ ಅಭಿಪ್ರಾಯಗಳು | ವಿವರಗಳು | ಕೂಡ್ಲಿಗಿ ಪಟ್ಟಣಪಂಚಾಯಿತಿ | | ಹೊಸಪೇಟೆ ನಗರ ಸಭೆ | |
|---|---|---|---|---|---|
| | | ಸಂಖ್ಯೆಗಳು | ಶೇಕಡವಾರು | ಸಂಖ್ಯೆಗಳು | ಶೇಕಡವಾರು |
| ಯಾವ-ಯಾವ ಮೂಲಗಳಿಗೆ ತೆರಿಗೆ ಕಟ್ಟುತ್ತೀರಿ | ವಿದ್ಯುತ್, ನೀರು, ಆಸ್ತಿ | ೪೯ | ೬೧.೨೫ | ೮ | ೬.೬೭ |
| | ನೀರು, ಮಳಿಗೆ, ಆಸ್ತಿ, ವಿದ್ಯುತ್ | ೧೬ | ೨೦.೦೦ | ೩೪ | ೨೮.೩೩ |
| | ವಿದ್ಯುತ್, ಆಸ್ತಿ | ೪ | ೫.೦೦ | ೭ | ೫.೮೩ |
| | ವಿದ್ಯುತ್, ನೀರು, ಆಸ್ತಿ, ಖಾಲಿ ಜಾಗ, (ನಳ) ಇತರೆ | ೬ | ೭.೫ | ೬೩ | ೫೨.೫ |
| | ಆಸ್ತಿ, ನೀರು ಮತ್ತು ವರಮಾನ | ೫ | ೬.೨೫ | ೮ | ೬.೬೭ |
| | **ಒಟ್ಟು** | ೮೦ | ೧೦೦ | ೧೨೦ | ೧೦೦. |

**ಮೂಲ: ಕ್ಷೇತ್ರ ಕಾರ್ಯದ ಮಾಹಿತಿ**

ಎರಡು ಸ್ಥಳೀಯ ಸಂಸ್ಥೆಗಳಲ್ಲಿ ವಾರ್ಡಿನ ಜನತೆ ಯಾವ ಯಾವ ಪ್ರಕಾರಗಳಿಗೆ ತೆರಿಗೆ ಕಟ್ಟುತ್ತಾರೆ ಎಂಬ ಅಂಶಗಳನ್ನು ನೀಡಲಾಗಿದೆ. ಕೂಡ್ಲಿಗಿ ಪಟ್ಟಣ ಪಂಚಾಯಿತಿಯಲ್ಲಿ ಶೇ. ೬೧.೨೫ರಷ್ಟು ಕುಟುಂಬಗಳು ತಮ್ಮ ವಾರ್ಡಿನಲ್ಲಿ ವಿದ್ಯುತ್, ನೀರು ಮತ್ತು ಆಸ್ತಿಗಳಿಗೆ ಸಂಬಂಧಿಸಿದಂತೆ ತೆರಿಗೆಯನ್ನು ಪ್ರತಿ ವರ್ಷದಂತೆ ಪಟ್ಟಣ ಪಂಚಾಯಿತಿಗೆ ಕಟ್ಟುತ್ತೇವೆ ಎಂದು ತಿಳಿಸಿರುತ್ತಾರೆ. ಅದರಂತೆ ಶೇ. ೨೦ರಷ್ಟು ಕುಟುಂಬಗಳು ನೀರು, ವಿದ್ಯುತ್ ಮತ್ತು ಆಸ್ತಿ ಇವನ್ನೆಲ್ಲಾ ಸೇರಿಸಿ ಮನೆ ತೆರಿಗೆ ರೂಪದಲ್ಲಿ ಸಂಗ್ರಹಿಸಿ ಮತ್ತು ಮಳಿಗೆಯ ತೆರಿಗೆಯನ್ನು ಕೂಡ ಕಟ್ಟಲಾಗುತ್ತದೆ ಎಂದು ತಿಳಿಸಿರುತ್ತಾರೆ. ಇತರೆ ಶೇ. ೫೬ರಷ್ಟು ಕುಟುಂಬಗಳು ತಮಗೆ ನೀರಿನ ವ್ಯವಸ್ಥೆಯಿಲ್ಲ. ಹಾಗಾಗಿ ವಿದ್ಯುತ್ ಮತ್ತು ಆಸ್ತಿಯ ತೆರಿಗೆಯನ್ನು ಮಾತ್ರ ಕಟ್ಟುತ್ತೇವೆ ಎಂದು ತಿಳಿಸಿರುತ್ತಾರೆ. ಅಲ್ಲದೇ ಶೇ. ೭.೫ರಷ್ಟು ಕುಟುಂಬಗಳು ವಿದ್ಯುತ್, ನೀರು, ಆಸ್ತಿ ಮತ್ತು ಖಾಲಿ ಸ್ಥಳಕ್ಕೆ ಸಂಬಂಧಿಸಿದಂತೆ ಇವನ್ನೆಲ್ಲಾ ಸೇರಿಸಿ ಮನೆ ತೆರಿಗೆ ಎಂದು ಸಂಗ್ರಹಿಸಿಕೊಂಡು ತೆರಿಗೆಯನ್ನು ಕಟ್ಟಲಾಗುತ್ತದೆ ಎಂದು ಹೇಳಿಕೊಂಡಿರುತ್ತಾರೆ. ಉಳಿದ ಶೇ. ೬.೨೫ರಷ್ಟು ಕುಟುಂಬಗಳು ಉದ್ಯೋಗ ಮಾಡುತ್ತಿದ್ದು, ಸಂಬಳದಿಂದ ಆಗುವ ವರಮಾನದ ಮೇಲೆ, ಆಸ್ತಿ, ವಿದ್ಯುತ್ ಮತ್ತು ನೀರು ಇವುಗಳ ಮೇಲೆ ತೆರಿಗೆಯನ್ನು ಕಟ್ಟಲಾಗುತ್ತದೆ ಎಂದು ತಿಳಿಸಿರುತ್ತಾರೆ. ಹಾಗೆಯೇ ಹೊಸಪೇಟೆ ನಗರಸಭೆಯಲ್ಲಿ ಶೇ. ೬.೬೭ರಷ್ಟು ಕುಟುಂಬಗಳು ನೀರು, ಆಸ್ತಿ ಮತ್ತು ವಿದ್ಯುತ್ ಇವನ್ನೆಲ್ಲಾ ಸೇರಿಸಿ ಮನೆಯ ರೂಪದಲ್ಲಿ ತೆರಿಗೆ ಕಟ್ಟಲಾಗುತ್ತದೆ. ಅದರಂತೆ ಶೇ.

೨೮.೩೩ರಷ್ಟು ಕುಟುಂಬಗಳು ನೀರು, ಮಳಿಗೆ, ಆಸ್ತಿ ಮತ್ತು ವಿದ್ಯುತ್‌ನ ಸೇವೆಗಾಗಿ ತೆರಿಗೆಯನ್ನು ಕಟ್ಟಲಾಗುತ್ತದೆ ಎಂದು ತಿಳಿಸಿರುತ್ತಾರೆ. ಇತರೆ ಶೇ. ೫.೮೩ರಷ್ಟು ಕುಟುಂಬಗಳು ವಿದ್ಯುತ್ ಮತ್ತು ಆಸ್ತಿಯ ಮೇಲೆ ಮಾತ್ರ ತೆರಿಗೆಯನ್ನು ಕಟ್ಟಲಾಗುತ್ತದೆ ಎಂದು ತಿಳಿಸಿರುತ್ತರೆ. ಅಲ್ಲದೇ ಶೇ. ೫೨.೫ರಷ್ಟು ಕುಟುಂಬಗಳು ವಿದ್ಯುತ್, ನೀರು (ನಳ), ಖಾಲಿ ಜಾಗ ಮತ್ತು ಇತರೆ (ಹೋಟೆಲ್, ಅಂಗಡಿ) ಹೀಗೆ ತೆರಿಗೆಯನ್ನು ಕಟ್ಟಲಾಗುತ್ತದೆ ಎಂದು ತಿಳಿಸಿರುತ್ತಾರೆ. ಉಳಿದ ಶೇ. ೬.೨೫ರಷ್ಟು ಕುಟುಂಬಗಳು ಆಸ್ತಿ, ನೀರು ಮತ್ತು ವರಮಾನದ ಮೇಲೆ ತೆರಿಗೆಯನ್ನು ಸಂಗ್ರಹಿಸಿ ಕಟ್ಟಲಾಗುತ್ತದೆ ಎಂದು ಹೇಳಿರುತ್ತಾರೆ. ಒಟ್ಟಾರೆಯಾಗಿ ತೆರಿಗೆಯು ಸ್ಥಳೀಯ ಸಂಪನ್ಮೂಲ ಕ್ರೂಢೀಕರಣದಲ್ಲಿ ಪ್ರಮುಖ ಭಾಗವಾಗಿದೆ ಹಾಗೂ ಅಭಿವೃದ್ಧಿಯಲ್ಲಿ ಜನತೆಯು ಭಾಗವಹಿಸುವಿಕೆಯಿಂದ ಮೂಲಭೂತ ಸೌಲಭ್ಯಗಳನ್ನು ಪೂರೈಸಲಾಗುತ್ತದೆ. ಸಾಪೇಕ್ಷವಾಗಿ ಅಭಿವೃದ್ಧಿ ಹೊಂದಿದ ನಗರಸಭೆಯ ಕುಟುಂಬಗಳಿಗಿಂತ ತೀರಾ ಹಿಂದುಳಿದ ಕೂಡ್ಲಿಗಿ ಪಟ್ಟಣ ಪಂಚಾಯಿತಿಯ ಕುಟುಂಬಗಳಿಗೆ ತೆರಿಗೆ ಸಂಗ್ರಹದಲ್ಲಿ ನೀರು ಸಮರ್ಪಕವಾಗಿ ದೊರೆಯುತ್ತಿರುವುದು ನೀರಿನ ತೆರಿಗೆ ಹೆಚ್ಚಾಗಿರುವುದು ಹಾಗೂ ನಗರಸಭೆಯಲ್ಲಿ ನೀರಿನ ಕೊರತೆಯು ಹೆಚ್ಚಾಗಿದ್ದು ನೀರಿನ ತೆರಿಗೆ ಕನಿಷ್ಠ ಪ್ರಮಾಣದಲ್ಲಿ ಸಂಗ್ರಹವಾಗಿರುವುದು ಅಧ್ಯಯದಿಂದ ತಿಳಿದುಬರುತ್ತದೆ. ಇವೆರೆಡೂ ನಗರ ಸ್ಥಳೀಯ ಸಂಸ್ಥೆಗಳಲ್ಲಿ ಗಮನಿಸಬೇಕಾದ ಸಂಗತಿಯೆಂದರೆ ತೆರಿಗೆ ಕಟ್ಟದೇ ಇರುವಂತ ಬಡಜನ ಯಾರು ಇಲ್ಲ. ಆದರೂ ಸಹ ತೆರಿಗೆಯಿಂದ ತೀರಾ ಹಿಂದುಳಿದ ಕೂಡ್ಲಿಗಿ ಪಟ್ಟಣ ಪಂಚಾಯಿತಿಯಲ್ಲಿ ಕನಿಷ್ಠ ಮೂಲಭೂತ ಸೌಲಭ್ಯಗಳನ್ನು ಪೂರೈಸುವುದರಲ್ಲಿ ವಿಫಲವಾಗಿರುವುದಕ್ಕೆ ಚುನಾಯಿತ ಪ್ರತಿನಿಧಿಗಳ ನಿರಾಸಕ್ತಿಯಿಂದ ಹಿಂದುಳಿದಿದೆ ಎನ್ನಲಾಗಿದೆ. ತೆರಿಗೆ ಪಾವತಿಸುವುದು ಅಭಿವೃದ್ಧಿಯಲ್ಲಿ ಭಾಗವಹಿಸಿದಂತಾಗುತ್ತದೆ. ಹಾಗಾಗಿ ತೆರಿಗೆ ಎಲ್ಲರೂ ಕಟ್ಟುತ್ತಿರುವುದರ ಮೇಲೆ ವಾರ್ಡಿನ ಅಭಿವೃದ್ಧಿಯನ್ನು ಮಾಪನ ಮಾಡುವುದಾದರೆ ವಾರ್ಡಿನ ಜನತೆಯ ಭಾಗವಹಿಸುವಿಕೆ ಉತ್ತಮವಾಗಿದೆ. ಆದರೂ ತೆರಿಗೆ ಸಂಗ್ರಹದಿಂದ ಯಾವುದೇ ಅಭಿವೃದ್ಧಿ ಕೆಲಸಗಳನ್ನು ನಡೆಸದೆ ಇರುವುದರಿಂದ ಹಿಂದುಳಿದಿದೆ ಎನ್ನಬಹುದಾಗಿದೆ. ತೆರಿಗೆಯ ಸಂಗ್ರಹದಿಂದ ಸ್ಥಳೀಯ ಸಮಸ್ಯೆಗಳ ಅರಿವನ್ನು ಕಂಡುಕೊಂಡು ಅಭಿವೃದ್ಧಿಗಾಗಿ ಬಳಸಿಕೊಳ್ಳುವ ರಾಜಕೀಯ ಇಚ್ಛಾಶಕ್ತಿಯ ಅಗತ್ಯವಿದೆ ಎಂದು ಹೇಳಲಾಗಿದೆ.

**ನೀರಿನ ತೆರಿಗೆ ಪ್ರಮಾಣ**

| ನೀರಿನ ತೆರಿಗೆ | | ಕೂಡ್ಲಿಗಿ | | ಹೊಸಪೇಟೆ | |
|---|---|---|---|---|---|
| ನೀರಿನ ತೆರಿಗೆ ಎಷ್ಟಿಂದೆ | ೫೦-೯೦ | ೧೮ | ೨೨.೫ | ೦ | ೦ |
| | ೯೦-೧೨೦ | ೦ | ೦.೦೦ | ೯೧ | ೭೫.೮೩ |
| | ಸಾರ್ವಜನಿಕ ಸೌಲಭ್ಯ | ೬೨ | ೭೭.೫ | ೨೯ | ೨೪.೧೬ |
| | ಒಟ್ಟು | ೮೦ | ೧೦೦ | ೧೨೦ | ೧೦೦ |

**ಮೂಲ: ಕ್ಷೇತ್ರ ಕಾರ್ಯದ ಮಾಹಿತಿ**

ನೀರಿನ ತೆರಿಗೆಯ ಪ್ರಮಾಣದ ವಿವರಗಳನ್ನು ತೋರಿಸಲಾಗಿದೆ. ಕೂಡ್ಲಿಗಿ ಪಟ್ಟಣ ಪಂಚಾಯಿತಿಯಲ್ಲಿ ಶೇ. ೨೨.೫ರಷ್ಟು ಕುಟುಂಬಗಳು ರೂ. ೫೦-೯೦ರವರೆಗೆ ಪ್ರತಿ ವರ್ಷದಂತೆ ಕಟ್ಟಲಾಗುತ್ತದೆ ಎಂದು

ತಿಳಿಸಿರುತ್ತಾರೆ. ಅದರಂತೆ ಶೇ. ೭೭.೫ರಷ್ಟು ಕುಟುಂಬಗಳು ವೈಯಕ್ತಿಕವಾಗಿ ನೀರಿನ ಸಂಪರ್ಕಗಳನ್ನು ಹೊಂದದೇ ಸಾರ್ವಜನಿಕ ಸೌಲಭ್ಯದ ರೂಪದಲ್ಲಿ ನೀರನ್ನು ಪೂರೈಸಿಕೊಳ್ಳುತ್ತಿರುವುದು ತಿಳಿದುಬಂದಿದೆ. ಹಾಗೆಯೇ ಹೊಸಪೇಟೆ ನಗರಸಭೆಯಲ್ಲಿ ಶೇ. ೭೫.೮೩ರಷ್ಟು ಕುಟುಂಬಗಳು ರೂ. ೯೦-೧೨೦ರವರೆಗೆ ನೀರಿನ ತೆರಿಗೆಯನ್ನು ನಿಗದಿ ಮಾಡಲಾಗಿದೆ ಎಂದು ತಿಳಿಸಿರುತ್ತಾರೆ. ಅದರಂತೆ ಶೇ. ೨೪.೧೬ರಷ್ಟು ಕುಟುಂಬಗಳು ನೀರಿನ ಸಂಪರ್ಕಗಳಿಲ್ಲದೇ ಸಾರ್ವಜನಿಕ ಸೌಲಭ್ಯಗಳನ್ನು ಪಡೆದುಕೊಳ್ಳುತ್ತಿರುವುದು ತಿಳಿದುಬಂದಿದೆ. ಒಟ್ಟಾರೆ ತೀರಾ ಹಿಂದುಳಿದ ಪಟ್ಟಣ ಪಂಚಾಯಿತಿ ಮತ್ತು ಅಭಿವೃದ್ಧಿ ಹೊಂದಿದ ನಗರಸಭೆಯ ಕುಟುಂಬಗಳ ಎಲ್ಲಾ ಮನೆಗಳ ತೆರಿಗೆಯ ಪ್ರಮಾಣವನ್ನು ನೋಡಿದಾಗ ಭಿನ್ನವಾಗಿರುವುದು ತಿಳಿಯುತ್ತದೆ. ಸಾಪೇಕ್ಷವಾಗಿ ಮುಂದುವರಿದ ನಗರಸಭೆಯ ಕುಟುಂಬಗಳಿಗಿಂತ ಹಿಂದುಳಿದ ಕೂಡ್ಲಿಗಿ ಪಟ್ಟಣ ಪಂಚಾಯಿತಿಯ ಕುಟುಂಬಗಳಿಗೆ ವಿಧಿಸುವ ನೀರಿನ ತೆರಿಗೆ ಕಡಿಮೆಯಾಗಿದ್ದು, ಸಮರ್ಪಕವಾಗಿ ಸಂಗ್ರಹಿಸುವಲ್ಲಿ ಚುನಾಯಿತ ಸದಸ್ಯರ ಆಡಳಿತದ ವಿಫಲತೆಯಿಂದ ಆದಾಯದ ಕೊರತೆಯಿಂದ ಅಭಿವೃದ್ಧಿಯಾಗದೆ ಹಿಂದುಳಿದಿದೆ ಎನ್ನಲಾಗಿದೆ. ತೆರಿಗೆ ಸಂಗ್ರಹ ಆಗದಿರಲು ಕಾರಣಗಳನ್ನು ಕೇಳುತ್ತಾ ಬಡವರಿಗೂ ಮತ್ತು ಶ್ರೀಮಂತರಿಗೂ ಸಹ ಸಮನಾಗಿ ತೆರಿಗೆ ವಿಧಿಸಲಾಗುತ್ತದೆ. ಅಂದರೆ ಒಣಭೂಮಿ ಪ್ರದೇಶ, ಆರ್ಥಿಕವಾಗಿ ದುರ್ಬಲರು, ಕೃಷಿ ಕೂಲಿಕಾರರು ಮತ್ತು ನಿರುದ್ಯೋಗಿಗಳು ಹೆಚ್ಚಾಗಿದ್ದಾರೆ ಎಂದು ಹೇಳಬಹುದು. ಅಷ್ಟೇ ಅಲ್ಲದೇ ಪಟ್ಟಣ ಕೇಂದ್ರದಿಂದ ವಾರ್ಡ್‌ಗಳು ದೂರವಿದ್ದು, ಕೃಷಿ-ಕೂಲಿಕಾರಿಕೆ ಬಿಟ್ಟು ಬೇರೆ ಉದ್ಯೋಗ ಇಲ್ಲ. ಹಾಗಾಗಿ ತೆರಿಗೆ ಸಂಗ್ರಹಣೆಯು ಅಭಿವೃದ್ಧಿಯ ಒಂದು ಮೂಲವಾಗಿದ್ದರಿಂದ ಅದು ಸರಿಯಾದ ರೀತಿಯಲ್ಲಿ ಸಂಗ್ರಹಣೆಯಾಗದಿರುವುದರಿಂದ ಕನಿಷ್ಠ ಮೂಲಭೂತ ಸೌಲಭ್ಯಗಳನ್ನು ಪಡೆಯದೆ ಹಿಂದುಳಿಯಲಿಕ್ಕೆ ಕಾರಣವಾಗಿದೆ ಎಂದು ಕಂಡುಬರುತ್ತದೆ. ಸರ್ಕಾರದಿಂದ ಬರುವ ಅನುದಾನದಿಂದ ಕನಿಷ್ಠ ಅಭಿವೃದ್ಧಿ ಕಾರ್ಯಗಳನ್ನು ಮಾಡುವ ಇಚ್ಚಾಶಕ್ತಿಯನ್ನು ಬೆಳಸಿಕೊಳ್ಳುವ ಅರಿವು ಮತ್ತು ರಾಜಕೀಯದಲ್ಲಿ ಹೆಚ್ಚಾಗಿ ಭಾಗವಹಿಸುವಂತಹ ತರಬೇತಿ ಕಾರ್ಯಗಾರಗಳನ್ನು ಮಾಡುವ ಅವಶ್ಯಕತೆಯಿದೆ ಎಂದು ಹೇಳಲಾಗಿದೆ.

**ಆಸ್ತಿ ತೆರಿಗೆ ಕುರಿತು**

| ಆಸ್ತಿ ತೆರಿಗೆ | | ಕೂಡ್ಲಿಗಿ | | ಹೊಸಪೇಟೆ | |
|---|---|---|---|---|---|
| ಆಸ್ತಿ ತೆರಿಗೆ ಎಷ್ಟಿದೆ (ಪ್ರತಿ ವರ್ಷ) | ೧೦೦-೧೦೦೦ | ೪೫ | ೫೬.೨೫ | ೨ | ೧.೬೭ |
| | ೧೧೦೦-೨೦೦೦ | ೧೮ | ೨೨.೫೦ | ೧೫ | ೧೨.೫೦ |
| | ೨೦೦೦-೩೦೦೦ | ೦ | ೦.೦೦ | ೬೯ | ೫೭.೫೦ |
| | ೩೧೦೦-೪೦೦೦ | ೨ | ೨.೫ | ೨೨ | ೧೮.೩೩ |
| | ಗೊತ್ತಿಲ್ಲಾ | ೧೫ | ೧೮.೭೫ | ೪ | ೩.೩೩ |
| | **ಒಟ್ಟು** | ೮೦ | ೧೦೦ | ೧೧೨ | ೯೩.೩೩ |

**ಮೂಲ: ಕ್ಷೇತ್ರ ಕಾರ್ಯದ ಮಾಹಿತಿ**

ಹಲವು ಸ್ಥಳೀಯ ಅಂಶಗಳನ್ನು ರೂಪಿಸಿಕೊಂಡು ಆಸ್ತಿ ತೆರಿಗೆಯ ವಿವರಗಳನ್ನು ನೀಡಲಾಗಿದೆ. ಕೂಡ್ಲಿಗಿ ಪಟ್ಟಣ ಪಂಚಾಯಿತಿಯಲ್ಲಿ ಶೇ.೫೬.೨೫ರಷ್ಟು ಕುಟುಂಬಗಳಿಗೆ ರೂ. ೧೦೦ರಿಂದ ೧,೦೦೦ವರೆಗೆ ಆಸ್ತಿ ತೆರಿಗೆಯನ್ನು ವಿಧಿಸಲಾಗಿದೆ. ಅದರಂತೆ ಶೇ. ೨೨.೫೦ರಷ್ಟು ಕುಟುಂಬಗಳು ರೂ. ೧,೧೦೦ರಿಂದ ೨,೦೦೦ರವರೆಗೆ ಆಸ್ತಿ ತೆರಿಗೆಯನ್ನು ವಿಧಿಸಲಾಗುತ್ತದೆ. ಇತರೆ ಶೇ. ೨.೫ರಷ್ಟು ಕುಟುಂಬಗಳಿಗೆ ಮಾತ್ರ ರೂ. ೩,೧೦೦ರಿಂದ ೪,೦೦೦ವರೆಗೆ ಆಸ್ತಿ ತೆರಿಗೆಯನ್ನು ವಿಧಿಸಲಾಗುತ್ತದೆ ಎಂದು ತಿಳಿಸಿರುತ್ತಾರೆ. ಉಳಿದ ಶೇ.೧೮.೭೫ರಷ್ಟು ಕುಟುಂಬಗಳಿಗೆ ಆಸ್ತಿ ತೆರಿಗೆಯ ವಿವರಗಳನ್ನು ಕೇಳಿದಾಗ ತಮಗೆ ಅದರ ಬಗ್ಗೆ ಗೊತ್ತಿಲ್ಲ ಎಂದು ತಿಳಿಸಿರುತ್ತಾರೆ. ಹೊಸಪೇಟೆ ನಗರಸಭೆಯಲ್ಲಿ ಶೇ. ೧.೬೭ರಷ್ಟು ಆಸ್ತಿ ತೆರಿಗೆಯನ್ನು ರೂ. ೧೦೦ರಿಂದ ೧,೦೦೦ವರೆಗೆ ಇರುವುದನ್ನು ತಿಳಿಸಿರುತ್ತಾರೆ. ಅದರಂತೆ ಶೇ.೧೨.೫೦ರಷು ಕುಟುಂಬಗಳು ರೂ. ೧,೧೦೦ರಿಂದ ೨,೦೦೦ರವರೆಗೆ ಇರುವುದು ಎಂದು ತಿಳಿಸಿರುತ್ತಾರೆ. ಇತರೆ ಶೇ. ೫೭.೫೦ರಷ್ಟು ಕುಟುಂಬಗಳು ರೂ. ೨,೦೦೦ರಿಂದ ೩,೦೦೦ರವರೆಗೆ ಇರುವುದನ್ನು ತಿಳಿಸಿರುತ್ತಾರೆ. ಅಲ್ಲದೇ, ಶೇ.೧೮.೩೩ರಷ್ಟು ಕುಟುಂಬಗಳು ರೂ. ೩,೧೦೦ರಿಂದ ೪,೦೦೦ರವರೆಗೆ ಇರುವುದನ್ನು ತಿಳಿಸಿರುತ್ತಾರೆ. ಉಳಿದ ಶೇ. ೩.೩೩ರಷ್ಟು ಕುಟುಂಬಗಳು ಆಸ್ತಿ ತೆರಿಗೆಯ ಬಗ್ಗೆ ಗೊತ್ತಿಲ್ಲ ಎಂದು ಹೇಳಿರುವುದು ಕಂಡುಬಂದಿದೆ. ಒಟ್ಟಾರೆ ಸಾಪೇಕ್ಷವಾಗಿ ಮುಂದುವರಿದ ಹೊಸಪೇಟೆ ನಗರಸಭೆ ಕುಟುಂಬಗಳಿಗಿಂತಲೂ ಹಿಂದುಳಿದ ಕೂಡ್ಲಿಗಿ ಪಟ್ಟಣ ಪಂಚಾಯಿತಿಯ ಕುಟುಂಬಗಳು ತೆರಿಗೆಯ ಬಗ್ಗೆ ಅರಿವು ಹೊಂದಿರುವುದು ಕಡಿಮೆ ಎಂದು ತಿಳಿದುಬಂದಿದೆ. ಅಂದರೆ ನೀರು, ವಿದ್ಯುತ್, ಖಾಲಿ ಸ್ಥಳ, ಆಸ್ತಿ ಇವುಗಳನ್ನೆಲ್ಲಾ ಒಟ್ಟುಗೂಡಿಸಿ ಮನೆ ತೆರಿಗೆ (ಆಸ್ತಿ) ಎಂದು ಸಂಗ್ರಹಿಸಲಾಗುತ್ತದೆ. ಕೂಡ್ಲಿಗಿ ಪಟ್ಟಣ ಪಂಚಾಯಿತಿಯಲ್ಲಿ ತೆರಿಗೆ ಸಂಗ್ರಹವು ಕಳೆದ ವರ್ಷದಿಂದ ಅಷ್ಟೊಂದು ಸಮಾಧಾನಕರವಾಗಿಲ್ಲ. ಕಾರಣವೆಂದರೆ ಆರ್ಥಿಕವಾಗಿ ದುರ್ಬಲರಾಗಿದ್ದು, ಹೆಚ್ಚು ಕೃಷಿಕರು, ಕೂಲಿಕಾರರು, ಅನಕ್ಷರತೆಯು ಹೆಚ್ಚಾಗಿರುವುದರಿಂದ ತೆರಿಗೆ ಸಮರ್ಪಕವಾಗಿ ಸಂಗ್ರಹವಾಗದೆ ಅಭಿವೃದ್ಧಿಗೆ ತೆರಿಗೆಯು ಮೂಲವಾಗಿರುವುದರಿಂದ ಅಭಿವೃದ್ಧಿ ಹೊಂದಿದ ಹೊಸಪೇಟೆ ನಗರಸಭೆಯು ತೆರಿಗೆ ಸಂಗ್ರಹದಲ್ಲಿ ಉತ್ತಮವಾಗಿದ್ದು, ಆದರೆ ಹಿಂದುಳಿದ ಕೂಡ್ಲಿಗಿ ಪಟ್ಟಣ ಪಂಚಾಯಿತಿಯು ತೆರಿಗೆ ಸಂಗ್ರಹಿಸುವಲ್ಲಿ ವಿಫಲವಾಗಿರುವುದರಿಂದ ಆ ಪ್ರದೇಶವು ಹಿಂದುಳಿದಿದೆ ಎಂದು ಕಂಡುಕೊಳ್ಳಲಾಗಿದೆ. ಹಾಗಾಗಿ ಅಭಿವೃದ್ಧಿಯಲ್ಲಿ ಚುನಾಯಿತ ಪ್ರತಿನಿಧಿಗಳ ಭಾಗವಹಿಸುವಿಕೆ ಎಷ್ಟು ಮುಖ್ಯವೋ ಅಷ್ಟೇ ಮುಖ್ಯವೂ ನಗರ ಜನತೆಯು ತೆರಿಗೆ ಸಮರ್ಥವಾಗಿ ಕಟ್ಟುವುದರಿಂದ ಅಭಿವೃದ್ಧಿಯನ್ನು ಸರಳವಾಗಿ ನಿರ್ಮಿಸುವ ಹಂತವಿರುತ್ತದೆ. ಹಾಗಾಗಿ ಜನರು ತೆರಿಗೆ ಕಟ್ಟುವಲ್ಲಿ ಹೆಚ್ಚಿನ ಪ್ರಮಾಣದಲ್ಲಿ ಭಾಗವಹಿಸುವಂತೆ ಪ್ರೇರೇಪಿಸುವ ಅವಶ್ಯಕತೆಯಿದೆ ಎಂದು ಕಂಡುಕೊಳ್ಳಲಾಗಿದೆ.

**ತೆರಿಗೆ ನಿಮ್ಮ ಪ್ರಕಾರ ಹೆಚ್ಚಾ/ಕಡಿಮೆ ವಿವರ**

| ತೆರಿಗೆಯ ವಿವರ | | ಕೂಡ್ಲಿಗಿ | | ಹೊಸಪೇಟೆ | |
|---|---|---|---|---|---|
| ತೆರಿಗೆ ನಿಮ್ಮ ಪ್ರಕಾರ ಹೆಚ್ಚಿದೆಯಾ/ಕಡಿಮೆ ಇದೆಯಾ | ಹೆಚ್ಚು | ೧೭ | ೨೧.೨೫ | ೮೭ | ೭೨.೫ |
| | ಗೊತ್ತಿಲ್ಲಾ | ೬೩ | ೭೮.೭೫ | ೩೩ | ೨೭.೫ |
| | **ಒಟ್ಟು** | ೮೦ | ೧೦೦ | ೧೨೦ | ೧೦೦ |

**ಮೂಲ: ಕ್ಷೇತ್ರ ಕಾರ್ಯದ ಮಾಹಿತಿ**

ನಗರದ ಕೂಡ್ಲಿಗಿ ಪಟ್ಟಣ ಪಂಚಾಯಿತಿಯಲ್ಲಿ ಶೇ. ೨೧.೨೫ರಷ್ಟು ಕುಟುಂಬಗಳು ತೆರಿಗೆಯ ಬಗ್ಗೆ ಅತೃಪ್ತಿಯನ್ನು ಸೂಚಿಸುತ್ತಾ ಹೆಚ್ಚಿದೆ ಎಂದು ತಿಳಿಸಿರುತ್ತಾರೆ. ಅದರಂತೆ ಉಳಿದ ಶೇ. ೭೮.೭೫ರಷ್ಟು ಕುಟುಂಬಗಳು ತೆರಿಗೆ ಪ್ರಮಾಣದ ಬಗ್ಗೆ ಅರಿವು ಇಲ್ಲದಿರುವುದು ತಿಳಿದುಬಂದಿದೆ. ಹಾಗೆಯೇ ಹೊಸಪೇಟೆ ನಗರಸಭೆಯಲ್ಲಿ ಶೇ. ೭೨.೫ರಷ್ಟು ಕುಟುಂಬಗಳು ತೆರಿಗೆಯ ಪ್ರಕಾರ ಹೆಚ್ಚಿದೆ ಎಂದು ತಿಳಿಸಿರುತ್ತಾರೆ. ಅದರಂತೆ ಉಳಿದ ಶೇ. ೨೭.೫ರಷ್ಟು ಕುಟುಂಬಗಳು ಇಲ್ಲಿಯೂ ಸಹಾ ತೆರಿಗೆಯ ಬಗ್ಗೆ ಅರಿವು ಇಲ್ಲದಿರುವುದು ತಿಳಿದುಬಂದಿದೆ. ಒಟ್ಟಾರೆ ಸಾಪೇಕ್ಷವಾಗಿ ಅಭಿವೃದ್ಧಿ ಹೊಂದಿದ ಹೊಸಪೇಟೆ ನಗರಸಭೆ ಕುಟುಂಬಗಳಿಗಿಂತ ತೀರಾ ಹಿಂದುಳಿದ ಕೂಡ್ಲಿಗಿ ಪಟ್ಟಣ ಪಂಚಾಯಿತಿಯ ಕುಟುಂಬಗಳಿಗೆ ತೆರಿಗೆಯ ಬಗ್ಗೆ ಅರಿವು ಕಡಿಮೆ ಇರುವುದು ಕಂಡುಬಂದಿದೆ. ತೆರಿಗೆಯು ಹೆಚ್ಚಿದೆ ಎಂದು ಹಿಂದುಳಿದ ಸ್ಥಳೀಯ ಸಂಸ್ಥೆಗಳೇ ಹೆಚ್ಚಾಗಿ ಹೇಳಿಕೊಂಡಿರುವುದು ತಿಳಿದುಬಂದಿದೆ. ಆದ್ದರಿಂದ ಕೂಡ್ಲಿಗಿ ಪಟ್ಟಣ ಪಂಚಾಯಿತಿಯ ಕುಟುಂಬಗಳು ಆರ್ಥಿಕವಾಗಿ ಬಹಳ ದುರ್ಬಲರಾಗಿದ್ದಾರೆ. ಹಾಗಾಗಿ ಮನೆಯ (ಆದಾಯ) ಮಾದರಿಯ ಮೇಲೆ ತೆರಿಗೆಯನ್ನು ವಿಧಿಸಿದರೆ ಉತ್ತಮ ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ಸಾಪೇಕ್ಷವಾಗಿ ಅಭಿವೃದ್ಧಿ ಹೊಂದಿದ ನಗರಸಭೆಯ ಕುಟುಂಬಗಳು ಆರ್ಥಿಕವಾಗಿ ಸಬಲರಾಗಿದ್ದು, ತೆರಿಗೆಯನ್ನು ಪ್ರತಿ ವರ್ಷದಂತೆ ಸರಿಯಾದ ಸಂಗ್ರಹಣೆಯಿಂದ ಸ್ಥಳೀಯ ಆದಾಯವನ್ನು ಸಮರ್ಥವಾಗಿ ಸದ್ಬಳಿಕೆ ಮಾಡುವುದರಿಂದ ಅಭಿವೃದ್ಧಿ ಹೊಂದಿದೆ, ತೀರಾ ಹಿಂದುಳಿದ ಕೂಡ್ಲಿಗಿ ಪಟ್ಟಣ ಪಂಚಾಯಿತಿಯು ಆರ್ಥಿಕವಾಗಿ ದುರ್ಬಲವಾಗಿದ್ದು ತೆರಿಗೆಯನ್ನು ಸಂಗ್ರಹಿಸಲಾಗದೆ ವಾರ್ಡಿನ ಜನರು ಅಭಿವೃದ್ಧಿಗಾಗಿ ಸ್ಪಂಧಿಸದೇಯಿರುವುದರಿಂದ ಘನತೆಯ ಜೀವನಮಟ್ಟವನ್ನು ಕಟ್ಟುವಲ್ಲಿ ಚುನಾಯಿತ ಸದಸ್ಯರು ವಿಫಲಗೊಂಡಿದ್ದು ಅಭಿವೃದ್ಧಿಯಿಂದ ವಂಚಿತಗೊಂಡು ಹಿಂದುಳಿದಿದೆ ಎಂದು ಹೇಳಬಹುದಾಗಿದೆ. ಸ್ಥಳೀಯ ಸಂಸ್ಥೆಗಳಲ್ಲಿ ಉತ್ತಮ ಆದಾಯದ ಸಂಗ್ರಹಿಸುವಂತಹ ಅವಶ್ಯಕತೆಯಿದೆ ಎಂದು ಹೇಳಬಹುದಾಗಿದೆ.

**ನಿಮ್ಮ ಪ್ರಕಾರ ತೆರಿಗೆ ಎಷ್ಟಿರಬೇಕು**

| ತೆರಿಗೆಯ ಪ್ರಮಾಣ | | ಕೂಡ್ಲಿಗಿ | | ಹೊಸಪೇಟೆ | |
|---|---|---|---|---|---|
| ನಿಮ್ಮ ಪ್ರಕಾರ ತೆರಿಗೆ ಎಷ್ಟು ಇರಬೇಕು | ಆದಾಯಕ್ಕೆ ತಕ್ಕಂತೆ | ೮ | ೧೦.೦೦ | ೮ | ೬.೬೭ |
| | ಗೊತ್ತಿಲ್ಲಾ | ೨೯ | ೩೬.೨೫ | ೩೩ | ೨೭.೫ |
| | ಅಭಿವೃದ್ಧಿ ಆಧಾರಿತ | ೬ | ೭.೫ | ೨೪ | ೨೦.೦೦ |
| | ಸಾಮಾನ್ಯ ಜನರು ಕಟ್ಟುವಂತಿರಬೇಕು | ೩೭ | ೪೬.೨೫ | ೫೫ | ೪೫.೮೩ |
| | **ಒಟ್ಟು** | ೮೦ | ೧೦೦ | ೧೨೦ | ೧೦೦ |

**ಮೂಲ: ಕ್ಷೇತ್ರ ಕಾರ್ಯದ ಮಾಹಿತಿ**

ನಗರ ಸ್ಥಳೀಯ ಸಂಸ್ಥೆಗಳಲ್ಲಿ ವಾರ್ಡಿನ ಜನತೆಯು ತೆರಿಗೆಯ ಬಗ್ಗೆ ಅಭಿಪ್ರಾಯಗಳನ್ನು ತೋರಿಸಲಾಗಿದೆ. ಕೂಡ್ಲಿಗಿ ಪಟ್ಟಣ ಪಂಚಾಯಿತಿಯಲ್ಲಿ ಶೇ. ೧೦ರಷ್ಟು ಕುಟುಂಬಗಳು ತೆರಿಗೆಯು

ಆದಾಯಕ್ಕೆ ತಕ್ಕಂತೆ ಇರಬೇಕು ಎಂದು ತಿಳಿಸಿರುತ್ತಾರೆ. ಅದರಂತೆ ಶೇ. ೩೬.೨೫ರಷ್ಟು ಕುಟುಂಬಗಳು ತೆರಿಗೆಯು ಎಷ್ಟಿರಬೇಕು ನಮಗೆ ಗೊತ್ತಾಗುವುದಿಲ್ಲ ಎಂದು ತಿಳಿಸಿರುತ್ತಾರೆ. ಇತರೆ ಶೇ. ೭.೫ರಷ್ಟು ಕುಟುಂಬಗಳು ತೆರಿಗೆಯು ಅಭಿವೃದ್ಧಿ ಆಧಾರಿತವಾಗಿರಬೇಕು ಎಂದು ತಿಳಿಸಿರುತ್ತಾರೆ. ಉಳಿದ ಶೇ. ೪೬.೨೫ರಷ್ಟು ಕುಟುಂಬಗಳು ಸಾಮಾನ್ಯ ಜನರು ಕಟ್ಟುವಂತಿರಬೇಕು ಎಂದು ತಿಳಿಸಿರುತ್ತಾರೆ. ಹಾಗೆಯೇ ಹೊಸಪೇಟೆ ನಗರಸಭೆಯಲ್ಲಿ ಶೇ. ೬.೬೭ರಷ್ಟು ಕುಟುಂಬಗಳು ಸಹ ಆದಾಯಕ್ಕೆ ತಕ್ಕಂತೆ ಇರಬೇಕು ಎಂದು ತಿಳಿಸಿರುತ್ತಾರೆ. ಅದರಂತೆ ಶೇ.೨೭.೫ರಷ್ಟು ಕುಟುಂಬಗಳು ಗೊತ್ತಿಲ್ಲ ಎಂದು ಹೇಳಿಕೊಂಡಿರುತ್ತಾರೆ. ಅಲ್ಲದೇ ಶೇ. ೨೦ರಷ್ಟು ಕುಟುಂಬಗಳು ಅಭಿವೃದ್ಧಿಗೆ ಆಧಾರಿತವಾಗಿರಬೇಕು ಎಂದು ತಿಳಿಸಿರುತ್ತಾರೆ. ಉಳಿದ ಶೇ. ೪೫.೮೩ರಷ್ಟು ಕುಟುಂಬಗಳು ಸಾಮಾನ್ಯ ಜನರು ಕಟ್ಟುವಂತಿರಬೇಕು ಎಂದು ತಿಳಿಸಿರುತ್ತಾರೆ. ಒಟ್ಟಾರೆ ಸಾಪೇಕ್ಷವಾಗಿ ಅಭಿವೃದ್ಧಿ ಹೊಂದಿದ ನಗರಸಭೆಯ ಕುಟುಂಬಗಳಿಗಿಂತ ತೀರಾ ಹಿಂದುಳಿದ ಪಟ್ಟಣ ಪಂಚಾಯಿತಿಯ ಕುಟುಂಬಗಳು ತೆರಿಗೆಯ ಬಗ್ಗೆ ಹೆಚ್ಚಾಗಿ ಅಭಿಪ್ರಾಯಗಳು ಹೇಳಿಕೊಂಡಿರುವುದು ತಿಳಿದುಬಂದಿದೆ. ಕೂಡ್ಲಿಗಿ ಪಟ್ಟಣ ಪಂಚಾಯಿತಿ ವ್ಯಾಪ್ತಿಯ ಕುಟುಂಬಗಳು ಆರ್ಥಿಕವಾಗಿ ಹಿಂದುಳಿದಿದ್ದು, ವಸೂಲಾತಿಯಲ್ಲಿ ಸರಿಯಾದ ನಿರ್ವಹಣೆಯಿಲ್ಲದೆ, ತೆರಿಗೆಯ ಹಂಚಿಕೆಯು ಶ್ರೀಮಂತರಿಗೂ ಮತ್ತು ಬಡವರಿಗೂ ಸಮಾನವಾಗಿದ್ದರಿಂದ ತೆರಿಗೆ ಕಟ್ಟುವುದರಲ್ಲಿ ವಾರ್ಡಿನ ಜನರು ವಿಫಲರಾಗಿದ್ದು ವಾರ್ಡಿನ ಜನತೆಗೆ ಮೂಲಭೂತ ಅವಶ್ಯಕತೆಯನ್ನು ಪೂರೈಸುವುದರಲ್ಲಿ ವಿಫಲತೆಯನ್ನು ಕಂಡುಬಂದಿದ್ದು ಅಭಿವೃದ್ಧಿ ಕಾಣುವಲ್ಲಿ ಹಿಂದುಳಿದಿದೆ ಎನ್ನಬಹುದು. ಅಭಿವೃದ್ಧಿ ಹೊಂದಿದ ನಗರಸಭೆಯು ಮೇಲಿನ ಕಾರಣಗಳಿಂದ ಉತ್ತಮವಾಗಿದ್ದು ವಾರ್ಡಿನ ಜನತೆಗೆ ಮೂಲಭೂತ ಸೌಲಭ್ಯಗಳನ್ನು ಪೂರೈಸುವಲ್ಲಿ ಸಫಲತೆಯನ್ನು ಹೊಂದಿದೆ ಎನ್ನಬಹುದು. ಹಿಂದುಳಿದ ಪಟ್ಟಣ ಪಂಚಾಯಿತಿಯು ಹೆಚ್ಚಿನ ರೀತಿಯಲ್ಲಿ ಅಭಿವೃದ್ಧಿ ಕಾರ್ಯದಲ್ಲಿ ಜನತೆಯನ್ನು ಭಾಗವಹಿಸುವಂತೆ ಪ್ರೋತ್ಸಾಹಿಸುತ್ತಾ ಅಭಿವೃದ್ಧಿಯನ್ನು ಕಾಣುವ ಅಗತ್ಯವಿದೆ ಎಂಬ ಅಂಶವನ್ನು ಕಂಡುಕೊಳ್ಳಲಾಗಿದೆ.

**ನೀವು ಕಟ್ಟಿದ ತೆರಿಗೆ ಅಭಿವೃದ್ಧಿಗೆ ಬಳಕೆ ವಿನಿಯೋಗವಾಗುವುರ ವಿವರ**

| **ತೆರಿಗೆಯ ಬಳಕೆ ಕುರಿತು** | | **ಕೂಡ್ಲಿಗಿ** | | **ಹೊಸಪೇಟೆ** | |
|---|---|---|---|---|---|
| ನೀವು ಕಟ್ಟಿದ ತೆರಿಗೆ ಅಭಿವೃದ್ಧಿಗೆ ಬಳಕೆಯಾಗುತ್ತದೆಯಾ | ಹೌದು | ೩೪. | ೪೨.೫ | ೭೪ | ೬೧.೬೭ |
| | ಇಲ್ಲ | ೪೦ | ೫೦.೦೦ | ೧೯ | ೨೨.೫ |
| | ಗೊತ್ತಿಲ್ಲ | ೧೬ | ೨೦.೦೦ | ೨೭ | ೧೫.೮೩ |
| | **ಒಟ್ಟು** | **೮೦** | ೧೦೦ | ೧೨೦ | ೧೦೦ |

ನಗರ ಸ್ಥಳೀಯ ಸಂಸ್ಥೆಗಳಲ್ಲಿ ತೆರಿಗೆಯು ಸ್ಥಳೀಯ ಅಭಿವೃದ್ಧಿಗಾಗಿ ಬಳಕೆ ಮಾಡುತ್ತದೆಯಾ ಎಂಬ ವಿವರಗಳನ್ನು ಕೋಷ್ಟಕ-೯ರಲ್ಲಿ ತೋರಿಸಲಾಗಿದೆ. ಕೂಡ್ಲಿಗಿ ಪಟ್ಟಣ ಪಂಚಾಯಿತಿಯಲ್ಲಿ ಶೇ. ೪೨.೫ರಷ್ಟು ಕುಟುಂಬಗಳು ಹೌದು ಅಭಿವೃದ್ಧಿಗಾಗಿ ಬಳಕೆಯಾಗುತ್ತದೆ ಎಂದು ತಿಳಿಸಿರುತ್ತಾರೆ. ಅದರಂತೆ ಶೆ. ೫೦ರಷ್ಟು ಕುಟುಂಬಗಳು ಅಭಿವೃದ್ಧಿಗಾಗಿ ತೆರಿಗೆಯು ಬಳಕೆಯಾಗುವುದಿಲ್ಲ ಎಂದು

ಅತೃಪ್ತಿಯನ್ನು ಸೂಚಿಸಿರುತ್ತಾರೆ. ಉಳಿದ ಶೇ. ೨೦ರಷ್ಟು ಕುಟುಂಬಗಳು ತೆರಿಗೆ ಬಳಕೆಯ ಬಗ್ಗೆ ಅರಿವು ಇಲ್ಲದಿರುವುದು ತಿಳಿದುಬಂದಿದೆ. ಹಾಗೆಯೇ ಹೊಸಪೇಟೆ ನಗರಸಭೆಯಲ್ಲಿ ಶೇ. ೬೧.೬೭ರಷ್ಟು ಕುಟುಂಬಗಳು ಅಭಿವೃದ್ಧಿಯಲ್ಲಿ ತೆರಿಗೆ ಸಂಗ್ರಹವನ್ನು ಬಳಕೆ ಮಾಡಲಾಗುತ್ತದೆ ಎಂದು ಹೇಳಿರುತ್ತಾರೆ. ಅದರಂತೆ ಶೇ. ೨೨.೫ರಷ್ಟು ಕುಟುಂಬಗಳು ಅಭಿವೃದ್ಧಿಗಾಗಿ ತೆರಿಗೆಯು ಬಳಕೆಯಾಗುವುದಿಲ್ಲ ಎಂದು ತಿಳಿಸಿರುತ್ತಾರೆ. ಉಳಿದ ಶೇ. ೧೫.೮೩ರಷ್ಟು ಕುಟುಂಬಗಳು ತೆರಿಗೆಯ ಬಗ್ಗೆ ಇಲ್ಲಿಯೂ ಅರಿವು ಇಲ್ಲದಿರುವುದು ಕಂಡುಬಂದಿದೆ. ಒಟ್ಟಾರೆ ಸಾಪೇಕ್ಷವಾಗಿ ಅಭಿವೃದ್ಧಿ ಹೊಂದಿದ ಹೊಸಪೇಟೆ ನಗರಸಭೆಯ ಕುಟುಂಬಗಳಿಗಿಂತ ತೀರಾ ಹಿಂದುಳಿದ ಕೂಡ್ಲಿಗಿ ಪಟ್ಟಣ ಪಂಚಾಯಿತಿಯ ಕುಟುಂಬಗಳಿಗೆ ತೆರಿಗೆಯು ಅಭಿವೃದ್ಧಿಗಾಗಿ ಬಳಕೆ ಮಾಡುವುದಿಲ್ಲ ಎಂದು ಹೆಚ್ಚಾಗಿ ತಿಳಿಸಿರುವುದು ಕಂಡುಬಂದಿದೆ. ಅಂದರೆ ಒಣಭೂಮಿ ಪ್ರದೇಶ ಮತ್ತು ನೀರಾವರಿ ಸ್ಥಳೀಯ ಸಂಸ್ಥೆಯಲ್ಲಿ ತೆರಿಗೆ ಪ್ರಮಾಣವು ಭಿನ್ನವಾಗಿದ್ದು, ಅದರಲ್ಲಿ ಎಲ್ಲರಿಗೂ ಸಮಾನವಾಗಿರುವುದು ತಿಳಿದುಬಂದಿದೆ. ಹೊಸಪೇಟೆ ನಗರಸಭೆಯ ಕುಟುಂಬಗಳಿಗಿಂತ ಪಟ್ಟಣ ಪಂಚಾಯಿತಿಯ ಕುಟುಂಬಗಳಿಗೆ ವಿವಿಧ ಮೂಲಗಳಿಂದ ಕಡಿಮೆ ತೆರಿಗೆಯು ಸಂಗ್ರಹವಾಗುತ್ತಿದೆ. ಆದಕಾರಣ ಸ್ಥಳೀಯ ಸಂಪನ್ಮೂಲ ಕ್ರೂಢೀಕರಣದಲ್ಲಿ ಹೊಸಪೇಟೆ ನಗರಸಭೆಯಲ್ಲಿ ಅಧಿಕ ಸಂಗ್ರಹವಾಗಿದೆ ಎಂದು ಹೇಳಬಹುದು. ಹಾಗೆಯೇ ಆಯಾ ಪ್ರದೇಶದ ಆರ್ಥಿಕ, ಸಾಮಾಜಿಕ ಸ್ಥಿತಿಗತಿಗಳು ಮತ್ತು ನಗರ ಸ್ಥಳೀಯ ಸಂಸ್ಥೆಗಳ ಅರಿವು ಭಾಗವಹಿಸುವಿಕೆಯ ಮೇಲೆ ತೆರಿಗೆ ಸಂಗ್ರಹದಲ್ಲಿ ಪ್ರಮುಖ ಪಾತ್ರ ವಹಿಸಿವೆ ಎಂದು ಕ್ಷೇತ್ರಕಾರ್ಯದಿಂದ ತಿಳಿದುಬಂದಿದೆ. ಮುಂದುವರಿದ ಹೊಸಪೇಟೆ ನಗರಸಭೆಯಲ್ಲಿ ತೆರಿಗೆ ಸಂಗ್ರಹವು ಉತ್ತಮವಾಗಿದೆ ಎಂದು ಹೇಳಬಹುದು. ಆದರೆ ಹಿಂದುಳಿದ ಪಟ್ಟಣ ಪಂಚಾಯಿತಿಯಲ್ಲಿ ತೆರಿಗೆ ಸಂಗ್ರಹದಲ್ಲಿ ವಿಫಲಗೊಂಡಿದ್ದು, ತೆರಿಗೆ ಸಂಗ್ರಹವು ಸಮರ್ಪಕವಾಗಿ ಸಂಗ್ರಹಿಸದೆ ಇರುವುದರಿಂದ ಅಭಿವೃದ್ಧಿಯಿಂದ ವಂಚಿತಗೊಂಡು ಕೂಡ್ಲಿಗಿ ಪಟ್ಟಣ ಪಂಚಾಯಿತಿಯು ಹಿಂದುಳಿದಿದೆ ಎಂದು ಕಂಡುಬಂದಿದೆ.

ಒಟ್ಟಾರೇ ವಿವರಣೆಯಿಂದ ಹೇಳಬಹುದಾದ ಅಂಶವೆಂದರೆ, ಅಭಿವೃದ್ಧಿ ಪ್ರಕ್ರಿಯೆಯಲ್ಲಿ ಜನರು ನೇರವಾಗಿ ಪಾಲ್ಗೋಳಬೇಕು. ಅಭಿವೃದ್ಧಿಯು ಜನರನ್ನು ಆವರಿಸಿಕೊಳ್ಳಬೇಕೆ ಹೊರತು, ಜನರು ಅಭಿವೃದ್ಧಿಯ ಹಿಂದೆ ಸುತ್ತುವರಿಯಬಾರದು. ಆಡಳಿತ ವ್ಯವಸ್ಥೆಯನ್ನು ಹುಡುಕಿಕೊಂಡು ಜನರು ವಿವಿಧ ಕಛೇರಿಗಳಿಗೆಡತಾಕುವುದರ ಬದಲು, ಆಡಳಿತ ವ್ಯವಸ್ಥೆಯೇ ಜನರ ಮನೆ ಬಾಗಿಲಿಗೆ ತಲುಪಬೇಕು. ಜನರಿಗಾಗಿ ಆಡಳಿತವೇ ಹೊರತು, ಆಡಳಿತಕ್ಕಾಗಿ ಜನರು ಅಲ್ಲ, ಅದೇ ರೀತಿಯಲ್ಲಿ ಜನರಿಗಾಗಿ ಅಭಿವೃದ್ಧಿ. ಅಭಿವೃದ್ಧಿಯ ರೀತಿ-ನೀತಿಗಳಲ್ಲಿ ಬಡ ಜನರು, ಮಹಿಳೆಯರು, ಅಳಿವಿನಂಚಿನಲ್ಲಿರುವ ವರ್ಗದವರು ಮುಖ್ಯ ಕೇಂದ್ರ ಬಿಂದುವಾಗಿರಬೇಕು ಅಂಬ ಅಂಶವನ್ನು ತಿಳಿಯಬಹುದಾಗಿದೆ.

### ೫.೧೦. ನಗರವಾರು ಸಂದರ್ಶನ ಮಾಡಿದ ಕುಟುಂಬಗಳ ಮೂಲಭೂತ ಅವಶ್ಯಕತೆಗಳ ಬಗ್ಗೆ ತಿಳುವಳಿಕೆ

**ಆರೋಗ್ಯ**

| ಮೂಲಭೂತ ಅವಶ್ಯಕತೆಗಳು ಬಗ್ಗೆ ತಿಳಿವಳಿಕೆ | ವಿವರಗಳು | ಕೂಡ್ಲಿಗಿ ಪಟ್ಟಣಪಂಚಾಯಿತಿ | | ಹೊಸಪೇಟೆ ನಗರ ಸಭೆ | |
|---|---|---|---|---|---|
| | | ಸಂಖ್ಯೆಗಳು | ಶೇಕಡವಾರು | ಸಂಖ್ಯೆಗಳು | ಶೇಕಡವಾರು |
| ಆರೋಗ್ಯದ ಬಗ್ಗೆ ತಿಳಿವಳಿಕೆ | ಅರಿವು ಇದೆ | ೩೫ | ೪೩.೭೫ | ೯೬ | ೮೦.೦೦ |
| | ಅರಿವು ಇಲ್ಲಾ | ೪೫ | ೫೬.೨೫ | ೨೪ | ೨೦.೦೦ |
| | **ಒಟ್ಟು** | ೮೦ | ೧೦೦ | ೧೨೦ | ೧೦೦ |
| ಸೌಲಭ್ಯ ಕುರಿತು | ದೊರಕಿದೆ | ೨೧ | ೨೬.೨೫ | ೭೨ | ೬೦.೦೦ |
| | ದೊರಕಿಲ್ಲಾ | ೫೯ | ೭೩.೭೫ | ೪೮ | ೪೦.೦೦ |
| | **ಒಟ್ಟು** | ೮೦ | ೧೦೦ | ೧೨೦ | ೧೦೦ |
| ಸೌಲಭ್ಯ ದೊರಕದಿರಲು ಕಾರಣ | ಮಾಹಿತಿ ಇಲ್ಲ | ೧೧ | ೧೩.೭೫ | ೨೯ | ೨೪.೧೬ |
| | ಇತರೆ ಕಾರಣಗಳು | ೪೮ | ೬೦.೦೦ | ೧೯ | ೧೫.೮೩ |
| | **ಒಟ್ಟು** | **೫೯** | **೭೩.೭೫** | **೪೮** | **೪೦** |

**ಮೂಲ: ಕ್ಷೇತ್ರ ಕಾರ್ಯದ ಮಾಹಿತಿ**

ನಗರ ಸ್ಥಳೀಯ ಕುಟುಂಬಗಳು ಆರೋಗ್ಯ ಸಂಬಂಧಿ ತಿಳುವಳಿಕೆ, ಸೌಲಭ್ಯ ಮತ್ತು ಪಡೆದಿರುವುದರ ಬಗ್ಗೆ ಅಂಶಗಳ ಅಂಕಣಪಟ್ಟಿ ವಿವರವನ್ನು ಕೋಷ್ಟಕ-೧೦ರಲ್ಲಿ ನೀಡಲಾಗಿದೆ. ಕೂಡ್ಲಿಗಿ ಪಟ್ಟಣ ಪಂಚಾಯಿತಿಯಲ್ಲಿ ಶೇ. ೪೩.೭೫ರಷ್ಟು ಕುಟುಂಬಗಳು ಆರೋಗ್ಯದ ಬಗ್ಗೆ ಅರಿವು ಇದೆ ಎಂದು ತಿಳಿಸಿರುತ್ತಾರೆ. ಅದರಂತೆ ಶೇ. ೫೬.೨೫ರಷ್ಟು ಕುಟುಂಬಗಳು ಆರೋಗ್ಯದ ಬಗ್ಗೆ ಅರಿವು ಹೊಂದದೇ ಇರುವುದು ತಿಳಿದುಬಂದಿದೆ. ಇತರೆ ಶೇ. ೨೬.೨೫ರಷ್ಟು ಕುಟುಂಬಗಳು ಆರೋಗ್ಯದ ಸೌಲಭ್ಯಗಳು ದೊರಕಿವೆ ಎಂದು ಹೇಳಿಕೊಂಡಿರುತ್ತಾರೆ. ಅದರಂತೆ ಶೇ. ೭೩.೭೫ರಷ್ಟು ಕುಟುಂಬಗಳು ಇರುವ ವಾರ್ಡಿನ ಜನತೆಗೆ ಆರೋಗ್ಯ ಸೌಲಭ್ಯಗಳು ದೊರಕಿರುವುದಿಲ್ಲ ಎಂದು ತಿಳಿಸಿರುತ್ತಾರೆ. ಅಲ್ಲದೇ ಶೇ. ೧೩.೭೫ರಷ್ಟು ಕುಟುಂಬಗಳು ಸೌಲಭ್ಯ ದೊರಕದಿರಲು ಕಾರಣಗಳೆಂದರೆ ಮಾಹಿತಿ ಇಲ್ಲ ಎಂದು ಮತ್ತು ಉಳಿದ ಶೇ. ೬೦ರಷ್ಟು ಕುಟುಂಬಗಳು ಇತರೆ ಕಾರಣಗಳ (ಭ್ರಷ್ಟಚಾರ, ದುರ್ಬಲರಿಗೆ ಮತ್ತು ಅನಕ್ಷರಸ್ಥರನ್ನು ಕಡೆಗಣಿಸುವುದು)ನ್ನು ಹೇಳಿಕೊಂಡಿರುವುದು ಕಂಡುಬಂದಿದೆ. ಹಾಗೆಯೇ ಹೊಸಪೇಟೆ ನಗರಸಭೆಯಲ್ಲಿ ಶೇ. ೮೦ರಷ್ಟು ಕುಟುಂಬಗಳಲ್ಲಿ ಆರೋಗ್ಯದ ಬಗ್ಗೆ ಅರಿವನ್ನು ಹೊಂದಿರುವುದು ತಿಳಿಸಿರುತ್ತಾರೆ. ಅದರಂತೆ ಶೇ. ೨೦ರಷ್ಟು ಕುಟುಂಬಗಳು ಯಾವ ಅರಿವು ಇಲ್ಲದಿರುವುದನ್ನು ತಿಳಿಸಿರುತ್ತಾರೆ. ಇತರೆ ಶೇ. ೬೦ರಷ್ಟು ಕುಟುಂಬಗಳು ಸೌಲಭ್ಯ ದೊರಕಿದೆ ಎಂಬ ಅಭಿಪ್ರಾಯವನ್ನು ನೀಡಿರುತಾರೆ. ಕೆಲವು ಶೇ. ೪೦ರಷ್ಟು ಕುಟುಂಬಗಳು ಅತೃಪ್ತಿಯಿಂದ

ದೊರಕಿಲ್ಲ ಎಂದು ಹೇಳಿಕೊಂಡಿರುತ್ತಾರೆ. ಅಲ್ಲದೇ ಸೌಲಭ್ಯ ದೊರಕದಿರಲು ಕಾರಣ ಕೇಳಿದಾಗ ಶೇ. ೨೪.೧೬ರಷ್ಟು ಕುಟುಂಬಗಳು ಮಾಹಿತಿ ಇಲ್ಲ ಎಂದು ಹೇಳಿದರೆ ಉಳಿದ ಶೇ. ೧೫.೮೩ರಷ್ಟು ಕುಟುಂಬಗಳು ಇತರೆ ಕಾರಣಗಳು ನೀಡಿರುವುದು ಅಧ್ಯಯನದಿಂದ ತಿಳಿದುಬಂದಿದೆ. ಒಟ್ಟಾರೆ ಸಾಪೇಕ್ಷವಗಿ ಅಭಿವೃದ್ಧಿ ಹೊಂದಿದ ಹೊಸಪೇಟೆ ನಗರಸಭೆಯ ಕುಟುಂಬಗಳಿಗಿಂತ ತೀರಾ ಹಿಂದುಳಿದ ಕೂಡ್ಲಿಗಿ ಪಟ್ಟಣ ಪಂಚಾಯಿತಿಯ ಕುಟುಂಬಗಳಲ್ಲಿ ಆರೋಗ್ಯದ ಬಗ್ಗೆ ತಿಳುವಳಿಕೆ, ಸೌಲಭ್ಯ ಮತ್ತು ಸೌಲಭ್ಯದಿಂದ ವಂಚಿತಗೊಂಡಿರುವುದು ಹೆಚ್ಚಾಗಿರುವುದು ಕಂಡುಬರುತ್ತದೆ. ಅಭಿವೃದ್ಧಿ ಹೊಂದಿದ ನಗರಸಭೆಯಲ್ಲಿ ಆರೋಗ್ಯ ಸಂಬಂಧಿ ಚಿಕಿತ್ಸಾ ಘಟಕಗಳು ಉತ್ತಮವಾಗಿದ್ದು ವಾರ್ಡಿನ ಜನರಿಗೆ ಅನಾರೋಗ್ಯದ ತೊಂದರೆಯಿಂದ ತಕ್ಷಣ ಚಿಕಿತ್ಸೆ ಸೌಲಭ್ಯ ಇದೆ ಅಂದರೆ ಆದಾಯ ಹೆಚ್ಚಳ ಮತ್ತು ಹೆಚ್ಚು ಶಿಕ್ಷಿತರನ್ನು ಹೊಂದಿರುವ ಸ್ಥಳೀಯ ಸಂಸ್ಥೆಯು ಅಭಿವೃದ್ಧಿಯ ಮೂಲ ಸಾಧನವನ್ನು ತೃಪ್ತಿಪಡಿಸಲಾಗಿದ್ದು ಅದು ಮುಂದುವರಿಯಲಿಕ್ಕೆ ಕಾರಣವಾಗಿದೆ ಎನ್ನಬಹುದು. ಹಿಂದುಳಿದ ಪಟ್ಟಣ ಪಂಚಾಯಿತಿಯಲ್ಲಿ ಆರೋಗ್ಯದ ಬಗ್ಗೆ ಕಾಳಜಿ ವಹಿಸಿದ ಆರೋಗ್ಯವೃದ್ಧಿ ಗುರಿಯನ್ನು ಸಾಧಿಸುವಲ್ಲಿ ಅರ್ಥಪೂರ್ಣ ಬದಲಾವಣೆಯನ್ನು ತರುವುದರಲ್ಲಿ ವಿಫಲಗೊಂಡಿದ್ದು ಅದು ಅಭಿವೃದ್ಧಿ ಮೂಲ ಸಾಧನವನ್ನು ಸಾಧಿಸುವಲ್ಲಿ ವಿಫಲಗೊಂಡಿರುವುದರಿಂದ ಆ ಪಂಚಾಯಿತಿಯು ಹಿಂದುಳಿದಿದೆ ಎನ್ನಬಹುದಾಗಿದೆ. ಅಂದರೆ ಜನರ ಆರೋಗ್ಯ ಸುಧಾರಣೆಯಲ್ಲಿ ಹಿಂದುಳಿದ ಪ್ರದೇಶಗಳಿಗೆ ಹೆಚ್ಚು-ಹೆಚ್ಚಾಗಿ ಮೂಲ ಸೌಕರ್ಯಗಳನ್ನು ಒದಗಿಸುವುದರ ಅಗತ್ಯವಿದೆ ಎಂದು ಅಧ್ಯಯನದಿಂದ ಕಂಡುಕೊಳ್ಳಲಾಗಿದೆ.

**ವಸತಿ**

| ವಸತಿಯ ಬಗ್ಗೆ | | ಕೂಡ್ಲಿಗಿ | | ಹೊಸಪೇಟೆ | |
|---|---|---|---|---|---|
| ವಸತಿ ನಿವೇಶನದ ಬಗ್ಗೆ | ಅರಿವು ಇದೆ | ೭೫ | ೯೩.೭೫ | ೧೧೭ | ೯೭.೫ |
| | ಇಲ್ಲ | ೫ | ೬.೨೫ | ೩ | ೨.೫ |
| | **ಒಟ್ಟು** | ೮೦ | ೧೦೦ | ೧೨೦ | ೧೦೦ |
| ಸೌಲಭ್ಯ ಕುರಿತು | ಸೌಲಭ್ಯ ದೊರಕಿದೆ | ೩೨ | ೪೦.೦೦ | ೮ | ೬.೬೭ |
| | ದೊರಕಿಲ್ಲ | ೪೮ | ೬೦.೦೦ | ೧೧೨ | ೯೩.೩೩ |
| | **ಒಟ್ಟು** | ೮೦ | ೧೦೦ | ೧೨೦ | ೧೦೦ |
| ಸೌಲಭ್ಯ ದೊರಕದಿರಲು ಕಾರಣ | ಇತರೆ ಕಾರಣಗಳು (ಆರ್ಹತೆ ಇಲ್ಲ) | ೩೨ | ೪೦.೦೦ | ೬೮ | ೫೬.೬೬ |
| | ಲಂಚ ನೀಡಲಾಗಿಲ್ಲ | ೧೬ | ೨೦.೦೦ | ೪೪ | ೩೬.೬೬ |
| | **ಒಟ್ಟು** | ೪೮ | ೬೦ | ೧೧೨ | ೯೩.೩೩ |

**ಮೂಲ: ಕ್ಷೇತ್ರ ಕಾರ್ಯದ ಮಾಹಿತಿ**

ನಗರವಾರು ಸಂದರ್ಶಿಸಿದಾಗ ಕೂಡ್ಲಿಗಿ ಪಟ್ಟಣ ಪಂಚಾಯಿತಿಯಲ್ಲಿ ಶೇ. ೯೩.೭೫ರಷ್ಟು ಕುಟುಂಬಗಳು ವಸತಿಯ ಯೋಜನೆಯ ಬಗ್ಗೆ ಅರಿವು ಹೊಂದಿರುವುದು ತಿಳಿಸಿರುತ್ತಾರೆ. ಅದರಂತೆ ಶೇ. ೬.೨೫ರಷ್ಟು ಕುಟುಂಬಗಳು ಅರಿವು ಇಲ್ಲದಿರುವುದು ತಿಳಿದುಬಂದಿದೆ. ಅಲ್ಲದೇ ವಸತಿ

ಯೋಜನೆಯ ಸೌಲಭ್ಯವು ಶೇ. ೪೦ರಷ್ಟು ಕುಟುಂಬಗಳು ದೊರಕಿದೆ ಎಂದು ತೃಪ್ತಿಯನ್ನು ಸೂಚಿಸಿರುತ್ತಾರೆ. ಉಳಿದ ಶೇ. ೬೦ರಷ್ಟು ಕುಟುಂಬಗಳು ದೊರಕದಿರುವುದಕ್ಕೆ ಅತೃಪ್ತಿಯನ್ನು ತಿಳಿಸಿರುವುದು ಕಂಡುಬಂದಿದೆ. ಅದಲ್ಲದೇ ಸೌಲಭ್ಯ ದೊರಕದಿರಲು ಕಾರಣಗಳು ಕೇಳಿದಾಗ ಶೇ. ೪೦ರಷ್ಟು ಇತರೆ ಕಾರಣಗಳನ್ನು ಎಂದು (ಅರ್ಧ ಭಾಗದ ಹಣ ಹಾಕಲು, ದಾಖಲಾತಿಗಳು ಇಲ್ಲ ಎಂದು) ಉಳಿದ ಶೇ. ೨೦ರಷ್ಟು ಕುಟುಂಬಗಳು ಲಂಚ ನೀಡಲಾಗಿಲ್ಲವೆಂದು ಅತೃಪ್ತಿಯನ್ನು ಹೊಂದಿರುವುದು ತಿಳಿದುಬಂದಿದೆ. ಹಾಗೆಯೇ ಹೊಸಪೇಟೆ ನಗರಸಭೆಯಲ್ಲಿ ಶೇ. ೯೭.೫ರಷ್ಟು ಕುಟುಂಬಗಳಿಗೆ ವಸತಿ ಯೋಜನೆಯ ಬಗ್ಗೆ ಅರಿವು ಇದ್ದು, ಉಳಿದ ಶೇ. ೨.೫ರಷ್ಟು ಕುಟುಂಬಗಳು ಅದರ ಬಗ್ಗೆ ಅರಿವು ಹೊಂದದೇ ಇರುವುದನ್ನು ಸೂಚಿಸಿರುತ್ತಾರೆ. ವಸತಿ ಯೋಜನೆಯಲ್ಲಿ ಫಲಾನುಭವಿಗಳಿಗೆ ಸೌಲಭ್ಯವು ಶೇ. ೬.೬೭ರಷ್ಟು ಕುಟುಂಬಗಳು ದೊರಕಿದೆ ಎಂದು ತೃಪ್ತಿಯನ್ನು ಕಂಡಿದ್ದು, ಉಳಿದ ಶೇ. ೯೩.೩೩ರಷ್ಟು ಕುಟುಂಬಗಳು ಸೌಲಭ್ಯ ದೊರಕಿಲ್ಲ ಎಂದು ತಿಳಿಸಿರುತ್ತಾರೆ. ಅದರಂತೆ ವಾರ್ಡಿನ ಜನತೆಯನ್ನು ಸೌಲಭ್ಯ ದೊರಕದಿರಲು ಕಾರಣಗಳನ್ನು ಕೇಳಿದಾಗ ಶೇ. ೫೬.೬೬ರಷ್ಟು ಕುಟುಂಬಗಳು ನಾವು ವಸತಿ ಯೋಜನೆಗೆ ಫಲಾನುಭವಿಗಳಾಗಲು ಅರ್ಹತೆಯನ್ನು ಹೊಂದಿರುವುದಿಲ್ಲ ಎಂದು ತಿಳಿಸಿರುತ್ತಾರೆ. ಉಳಿದ ಶೇ. ೩೩.೬೬ರಷ್ಟು ಕುಟುಂಬಗಳು ಅರ್ಹತೆಯಿದ್ದರೂ ವಸತಿಗಳನ್ನು ಪಡೆಯಲು ಪರೋಕ್ಷವಾಗಿ ಮತ್ತು ಪ್ರತ್ಯಕ್ಷವಾಗಿ ಹಣದ ಬೇಡಿಕೆ ಇಡುವುದರಿಂದ ಆರ್ಥಿಕವಾಗಿ ದುರ್ಬಲವಾಗಿದ್ದುಕೊಂಡು ಲಂಚವನ್ನು ಕೊಡಲಾಗದೆ ವಸತಿ ವಂಚಿತರಾಗಿರುವುದಾಗಿ ಹೇಳಿಕೊಂಡಿರುತ್ತಾರೆ. ಒಟ್ಟಾರೆಯಾಗಿ ಸಾಪೇಕ್ಷವಾಗಿ ಅಭಿವೃದ್ಧಿ ಹೊಂದಿದ ಹೊಸಪೇಟೆ ನಗರಸಭೆಯ ವ್ಯಾಪ್ತಿಯ ಮೂರು ವಾರ್ಡಿನಲ್ಲಿ ತೀರಾ ಹಿಂದುಳಿದ ಕೂಡ್ಲಿಗಿ ಪಟ್ಟಣ ಪಂಚಾಯಿತಿಯ ಕುಟುಂಬಗಳಲ್ಲಿ ವಸತಿ ಸೌಲಭ್ಯಗಳಿಂದ ವಂಚಿತರಾಗಿರುವುದು ಅಧಿಕವಾಗಿದೆ. ಇಲ್ಲಿ ಗಮನಿಸಬೇಕಾದ ಅಂಶವೆಂದರೆ ಕೊಳಚೆ ನಿವಾಸಿಗಳಿಗೆ ಮನೆ ಒದಗಿಸಲೇಬೇಕೆಂಬ ಒಂದು ಗಂಭೀರ ಪ್ರಯತ್ನದಲ್ಲಿ ತಾವು ನಂಬಿಕೆಯಿಟ್ಟರೆ ಈ ಯೋಜನೆಗೆ ಉಚಿತವಾಗಿ ಭೂಮಿ ದೊರೆಯುವಂತೆ ಆದಾಗ ಮಾತ್ರ ಬಡ ಕುಟುಂಬಗಳಿಗೆ ವಸತಿಯನ್ನು ಕಲ್ಪಿಸಬಹುದಾಗಿದೆ. ಆದ್ದರಿಂದಲೇ ಮುಂದುವರಿದ ನಗರಸಭೆಯ ಕುಟುಂಬಗಳು ಆರ್ಥಿಕವಾಗಿ ಸಬಲರಾಗಿದ್ದು, ನೀರಾವರಿ ಪ್ರದೇಶವಿದ್ದು, ವರಮಾನವನ್ನು ಅಧಿಕ ಹೊಂದಿದ್ದು ವಸತಿ ಯೋಜನೆ ಫಲಾನುಭವಿಗಳಾಗದೆ ಸುಸಂಘಟಿತ ವೈಯಕ್ತಿಕವಾಗಿ ವಸತಿಯನ್ನು ನಿರ್ಮಿಸಿಕೊಂಡಿರುವುದು ತಿಳಿದುಬಂದಿದೆ. ತೀರಾ ಹಿಂದುಳಿದ ಪಟ್ಟಣ ಪಂಚಾಯಿತಿಯಲ್ಲಿ ವೈಯಕ್ತಿಕವಾಗಿ ವಸತಿ ನಿರ್ಮಿಸಿಕೊಳ್ಳಲಿಕ್ಕೆ ಆಗದೇ ಯೋಜನೆಯ ಫಲಾನುಭವಿಗಳಾಗಿದ್ದರು ವಸತಿಯಿಂದ ವಂಚಿತರಾಗಲು ಆರ್ಥಿಕವಾಗಿ ದುರ್ಬಲರಾಗಿದ್ದು, ಒಣಭೂಮಿ ಪ್ರದೇಶವಾಗಿದ್ದರಿಂದ ಕೃಷಿಯೇತರ ಕೆಲಸಗಳಿಗೆ ಹೋಗದೆ ಕೂಲಿ ಮಾಡುತ್ತಾ ಕನಿಷ್ಠ ಮೂಲಭೂತ ಸೌಲಭ್ಯಗಳಿಗೂ ಸಹ ಸರ್ಕಾರ ಯೋಜನೆಗಳ ಮೇಲೆ ಅವಲಂಬಿತರಾಗಿದ್ದುಕೊಂಡು ಸ್ಥಳೀಯ ಆಡಳಿತದಲ್ಲಿ ನಿರ್ವಹಣೆಯ ಕೊರತೆಯಿಂದ ಕನಿಷ್ಠ ಸೂರನ್ನು ಹೊಂದಲು ಆಗದೇ ಹಿಂದುಳಿದಿದೆ ಎಂದು ಕಂಡುಬರುತ್ತದೆ. ಹಾಗಾಗಿ ಸಣ್ಣ ನಗರಗಳಿಗೆ ತುರ್ತಾಗಿ ವಸತಿರಹಿತರಿಗೆ ವಸತಿ ಒದಗಿಸುವುದು ಹಾಗೂ ಆರ್‌ಎವೈ ವಸತಿ ನೀಡುವ ಕಾರ್ಯಸೂಚಿಗಳು ಬದಲಾಗುವ ಅವಶ್ಯಕತೆಯಿದೆ ಎಂದು ಹೇಳಬಹುದಾಗಿದೆ.

## ಪಡಿತರ

| ಪಡಿತರ ಸೌಲಭ್ಯದ ಕುರಿತು | | ಕೂಡ್ಲಿಗಿ | | ಹೊಸಪೇಟೆ | |
|---|---|---|---|---|---|
| ಪಡಿತರ ಸೌಲಭ್ಯ ಬಗ್ಗೆ | ಅರಿವು ಇದೆ | ೮೦ | ೧೦೦.೦೦ | ೧೨೦ | ೧೦೦ |
| | ಇಲ್ಲ | ೦ | ೦.೦೦ | ೦ | ೦ |
| | **ಒಟ್ಟು** | ೮೦ | ೧೦೦ | ೧೨೦ | ೧೦೦ |
| ಪಡಿತರ ಕುರಿತು | ದೊರಕಿದೆ | ೬೭ | ೮೩.೭೫ | ೧೦೭ | ೮೯.೧೭ |
| | ಇಲ್ಲ | ೧೩ | ೧೬.೨೫ | ೧೩ | ೧೦.೮೪ |
| | **ಒಟ್ಟು** | ೮೦ | ೧೦೦ | ೧೨೦ | ೧೦೦ |
| ಸೌಲಭ್ಯ ದೊರಕದಿರಲು ಕಾರಣ | ಕಾರ್ಡ ಇಲ್ಲ, | ೧೩ | ೧೬.೨೫ | ೧೩ | ೧೦.೮೪ |
| | ಮಾಹಿತಿ ಇಲ್ಲ | | | | |
| | **ಒಟ್ಟು** | ೧೩ | ೧೬.೨೫ | ೧೩ | ೧೦.೮೪ |

**ಮೂಲ: ಕ್ಷೇತ್ರ ಕಾರ್ಯದ ಮಾಹಿತಿ**

ನಗರ ಸ್ಥಳೀಯ ಸಂಸ್ಥೆಗಳ ವಾರ್ಡಿನ ಜನತೆಯ ಪಡಿತರ ವ್ಯವಸ್ಥೆ ಕುರಿತ ವಿವರಗಳನ್ನು ನೀಡಲಾಗಿದೆ. ಕೂಡ್ಲಿಗಿ ಪಟ್ಟಣ ಪಂಚಾಯಿತಿಯಲ್ಲಿ ಶೇ. ೧೦೦ರಷ್ಟು ಕುಟುಂಬಗಳಿಗೆ ಸೌಲಭ್ಯದ ಬಗ್ಗೆ ಅರಿವನ್ನು ಹೊಂದಿರುವುದು ತಿಳಿದು ಬಂದಿದೆ. ಅದರಂತೆ ಪಡಿತರ ಸೌಲಭ್ಯವು ಶೇ. ೮೩.೭೫ರಷ್ಟು ಕುಟುಂಬಗಳು ದೊರಕಿದೆ ಎಂದು ತೃಪ್ತಿಯನ್ನು ವ್ಯಕ್ತಪಡಿಸಿದರೆ ಉಳಿದ ಶೇ. ೧೬.೨೫ರಷ್ಟು ಕುಟುಂಬಗಳು ಅತೃಪ್ತಿಯನ್ನು ಸೂಚಿಸುತ್ತಾ ದೊರಕಿಲ್ಲ ಎಂದು ತಿಳಿಸಿರುತ್ತಾರೆ. ಅಲ್ಲದೇ ವಾರ್ಡಿನ ಜನತೆಯಲ್ಲಿ ಸೌಲಭ್ಯ ದೊರಕದಿರಲು ಕಾರಣಗಳನ್ನು ಕೇಳಿದಾಗ ಶೇ. ೧೬.೨೫ರಷ್ಟು ಕುಟುಂಬಗಳು ಕಾರ್ಡ್ ಇಲ್ಲ, ಮಾಹಿತಿ ಇಲ್ಲ ಎಂದು ಕಾರಣಗಳನ್ನು ನೀಡಿರುತ್ತಾರೆ. ಹಾಗೆಯೇ ಹೊಸಪೇಟೆ ನಗರಸಭೆಯಲ್ಲಿ ಪಡಿತರ ಸೌಲಭ್ಯದ ಬಗ್ಗೆ ಕೇಳಿದಾಗ ಶೇ. ೧೦೦ರಷ್ಟು ಕುಟುಂಬಗಳು ಅರಿವನ್ನು ಹೊಂದಿರುವುದು ತಿಳಿದುಬಂದಿದೆ. ಅಲ್ಲದೇ ವಾರ್ಡಿನಲ್ಲಿ ಸೌಲಭ್ಯವು ಶೇ. ೮೯.೧೭ರಷ್ಟು ಕುಟುಂಬಗಳು ದೊರಕಿದೆ ಎಂದು, ಉಳಿದ ಶೇ. ೧೦.೮೪ರಷ್ಟು ಕುಟುಂಬಗಳು ದೊರಕಿಲ್ಲ ಎಂಮ ಅತೃಪ್ತಿಯನ್ನು ಸೂಚಿಸಿರುತ್ತಾರೆ. ಅದರಂತೆ ಸೌಲಭ್ಯ ದೊರಕದಿರಲು ಕಾರಣವನ್ನು ಕೇಳಿದಾಗ ಶೇ. ೧೦.೮೪ರಷ್ಟು ಕುಟುಂಬಗಳ ಭಿನ್ನ ರೀತಿಯ (ಕಾರ್ಡ್ ಮಾಹಿತಿ ಮತ್ತು ಕೃಷಿಕರು) ಕಾರಣಗಳನ್ನು ನೀಡಿರುತ್ತಾರೆ. ಇವೆರೆಡು ಸ್ಥಳೀಯ ಸಂಸ್ಥೆಗಳನ್ನು ಗಮನಿಸಿದಾಗ ತಿಳಿದುಬರುವ ಸಂಗತಿಯೆಂದರೆ ಪಡಿತರ ಸೌಲಭ್ಯದ ಕುರಿತು ಅರಿವು ಇರುವುದು ತಿಳಿದುಬರುತ್ತದೆ. ಆದರೆ ಸಾಪೇಕ್ಷವಾಗಿ ಅಭಿವೃದ್ಧಿ ಹೊಂದಿದ ಹೊಸಪೇಟೆ ನಗರಸಭೆ ಕುಟುಂಬಗಳಿಗಿಂತ ತೀರಾ ಹಿಂದುಳಿದ ಪಟ್ಟಣ ಪಂಚಾಯಿತಿಯ ಕುಟುಂಬಗಳಲ್ಲಿ ಸೌಲಭ್ಯದಿಂದ ವಂಚಿತರಾಗಿರುವವರು ಅಧಿಕವಾಗಿದೆ. ಅಂದರೆ ಅಭಿವೃದ್ಧಿ ಹೊಂದಿದ ಸ್ಥಳೀಯ ಸಂಸ್ಥೆಯಲ್ಲಿ ಹೆಚ್ಚು ಶಿಕ್ಷಿತರು, ಅಧಿಕ ವರಮಾನ

ಅಭಿವೃದ್ಧಿಯು ಒಳಗೊಳ್ಳುವ ಸಂಗತಿಗಳಾದ ಮೇಲೆ ಅವುಗಳಿಂದ ವಂಚಿತರಾಗದೆ ಸೌಲಭ್ಯಗಳನ್ನು ಸಮರ್ಥವಾಗಿ ಪಡೆದುಕೊಳ್ಳುವುದರ ಮೂಲಕ ಹೊಸಪೇಟೆ ನಗರಸಭೆಯು ಮುಂದುವರಿದಿದೆ ಎನ್ನಬಹುದಾಗಿದೆ. ಅದರಂತೆ ತೀರಾ ಹಿಂದುಳಿದ ಪಟ್ಟಣ ಪಂಚಾಯಿತಿಯು ಕೂಲಿ ಕಾರ್ಮಿಕರು, ಕೃಷಿಕರು, ವ್ಯವಸಾಯೇತರ ಕೆಲಸಗಳಲ್ಲಿ ಅಧಿಕವಿದ್ದು ಇವರಲ್ಲಿ ಹೆಚ್ಚಿನ ಜನತೆ ಅನಕ್ಷರತೆಯಿಂದ, ಕನಿಷ್ಠ ಮೂಲಭೂತ ಸೌಲಭ್ಯಗಳಿಂದ ಕಡಿಮೆ ವರಮಾನವನ್ನು ಹೊಂದಿರುವವರು ಅಧಿಕವಿದ್ದು ಅಭಿವೃದ್ಧಿಯು ಒಳಗೊಳ್ಳುವ ಸಂಗತಿಗಳಿಂದ ವಂಚಿತಗೊಂಡು ಮುಂದುವರಿಯಲಿಕ್ಕೆ ಆಗದೆ ಹಿಂದುಳಿದಿದ್ದಾರೆ ಎಂದು ಕಂಡುಬರುತ್ತದೆ. ಆದ್ದರಿಂದ ಹಿಂದುಳಿಯಲಿಕ್ಕೆ ಪ್ರಮುಖವಾಗಿ ಅಕ್ಷರದಿಂದ ವಂಚಿತಗೊಂಡವರಿಗೆ ಅಕ್ಷರಸ್ಥರನ್ನಾಗಿ ಮಾಡುವ ಅಗತ್ಯವಿದೆ ಎನ್ನಬಹುದಾಗಿದೆ.

**ಶಿಕ್ಷಣ**

| **ಶಿಕ್ಷಣದ ಸೌಲಭ್ಯದ ಕುರಿತು** | | **ಕೂಡ್ಲಿಗಿ** | | **ಹೊಸಪೇಟೆ** | |
|---|---|---|---|---|---|
| ಶಾಲಾ ಸೌಲಭ್ಯ ಬಗ್ಗೆ | ಅರಿವು ಇದೆ | ೩೪ | ೪೨.೫೦ | ೮೦ | ೬೬.೬೭ |
| | ಇಲ್ಲ | ೩೬ | ೪೫.೦೦ | ೪೦ | ೩೩.೩೩ |
| | **ಒಟ್ಟು** | ೭೦ | ೮೭.೦೦ | ೧೨೦ | ೧೦೦ |
| ಸೌಲಭ್ಯದ ಕುರಿತು | ದೊರಕಿದೆ | ೯ | ೧೧.೨೫ | ೫೭ | ೪೭.೫ |
| | ಇಲ್ಲ | ೨೫ | ೩೧.೨೫ | ೨೩ | ೧೯.೧೬ |
| | **ಒಟ್ಟು** | ೩೪ | ೪೨.೫ | ೮೦ | ೬೬.೬೬ |
| ಸೌಲಭ್ಯ ದೊರಕದಿರಲು ಕಾರಣ | ವೆಚ್ಚ ಭರಿಸಲಾಗಿಲ್ಲ | ೭ | ೮.೭೫ | ೧೪ | ೧೧.೬೬ |
| | ಮಾಹಿತಿ ಇಲ್ಲ | ೧೮ | ೨೨.೫ | ೯ | ೭.೫ |
| | **ಒಟ್ಟು** | ೨೫ | ೩೧.೨೫ | ೧೩ | ೧೦.೮೩ |

**ಮೂಲ: ಕ್ಷೇತ್ರ ಕಾರ್ಯದ ಮಾಹಿತಿ**

ನಗರ ಸ್ಥಳೀಯ ಸಂಸ್ಥೆಗಳ ವ್ಯಾಪ್ತಿಯಲ್ಲಿ ಶಿಕ್ಷಣ ಸೌಲಭ್ಯಗಳ ಕುರಿತು ವಿವರಗಳನ್ನು ತೋರಿಸಲಾಗಿದೆ. ಕೂಡ್ಲಿಗಿ ಪಟ್ಟಣ ಪಂಚಾಯಿತಿಯಲ್ಲಿ ಶಾಲಾ ಸೌಲಭ್ಯದ ಬಗ್ಗೆ ಶೇ. ೪೨.೫೦ರಷ್ಟು ಕುಟುಂಬಗಳು ಅರಿವನ್ನು ಹೊಂದಿದ್ದಾರೆ. ಉಳಿದ ಶೇ. ೪೫ರಷ್ಟು ಕುಟುಂಬಗಳು ಯಾವ ಅರಿವನ್ನು ಹೊಂದದೇ ಇರುವುದು ತಿಳಿಸಿರುತ್ತಾರೆ. ವಾರ್ಡಿನ ಜನತೆಯನ್ನು ಸೌಲಭ್ಯದ ಕುರಿತು ಕೇಳಿದಾಗ ಶೇ. ೧೧.೨೫ರಷ್ಟು ಕುಟುಂಬಗಳು ದೊರಕಿದೆ ಎಂದು ತೃಪ್ತಿಯನ್ನು ಸೂಚಿಸಿದ್ದು, ಉಳಿದ ಶೇ. ೩೧.೨೫ರಷ್ಟು ಕುಟುಂಬಗಳು ದೊರಕಿಲ್ಲ ಎಂದು ಅತೃಪ್ತಿಯನ್ನು ಸೂಚಿಸಿರುತ್ತಾರೆ. ಅದರಂತೆ ಸೌಲಭ್ಯ ದೊರಕದಿರಲು ಕಾರಣಗಳನ್ನು ಕೇಳಿದಾಗ ಶೇ. ೮.೭೫ರಷ್ಟು ಕುಟುಂಬಗಳು ಆರ್ಥಿಕವಾಗಿ ದುರ್ಬಲರಾಗಿದ್ದರಿಂದ ವೆಚ್ಚಭರಿಸಲಾಗಿಲ್ಲ ಎಂದು ತಿಳಿಸಿರುತ್ತಾರೆ. ಉಳಿದ ಶೇ. ೨೨.೫ರಷ್ಟು ಕುಟುಂಬಗಳು ನಾವು ಕೃಷಿಕರು ಕೂಲಿಕಾರ್ಮಿಕರಾಗಿದ್ದು ಯಾವುದೇ ಮಾಹಿತಿ ಇರುವುದಿಲ್ಲ ಎಂದು ತಿಳಿಸಿರುವುದು ಕಂಡುಬಂದಿದೆ. ಹಾಗೆಯೇ ಹೊಸಪೇಟೆ ನಗರಸಭೆಯಲ್ಲಿ ಶಿಕ್ಷಣ ಸೌಲಭ್ಯದ ಕುರಿತು ಪ್ರಶ್ನಿಸಿದಾಗ ಶೇ. ೬೬.೬೭ರಷ್ಟು ಕುಟುಂಬಗಳಿಗೆ ಅರಿವು ಇದೆ ಎಂದು

ಉಳಿದ ಶೇ. ೩೩.೩೩ರಷ್ಟು ಕುಟುಂಬಗಳು ಅರಿವನ್ನು ಇಲ್ಲದಿರುವುದು ತಿಳಿದುಬಂದಿದೆ. ಅದಲ್ಲದೆ ಸೌಲಭ್ಯ ದೊರಕಿದೆಯಾ ಎಂದಾಗ ಶೇ. ೪೭.೫೮ರಷ್ಟು ಕುಟುಂಬಗಳಿಗೆ ದೊರಕಿದೆ ಎಂದು, ಉಳಿದ ಶೇ. ೧೯.೧೬ರಷ್ಟು ಕುಟುಂಬಗಳು ದೊರಕಿಲ್ಲ ಎಂದು ಅತೃಪ್ತಿಯನ್ನು ಸೂಚಿಸಿರುತ್ತಾರೆ. ಹಾಗೆಯೇ ವಾರ್ಡಿನ ಕುಟುಂಬಗಳಿಗೆ ಸೌಲಭ್ಯ ದೊರಕದಿರಲು ಕಾರಣವೆಂದರೆ ಶೇ. ೧೧.೬೬ರಷ್ಟು ಕುಟುಂಬಗಳಿಗೆ ವೆಚ್ಚ ಭರಿಸಲಾಗಿಲ್ಲ ಎಂದು ಉಳಿದ ಶೇ. ೭.೫೮ರಷ್ಟು ಕುಟುಂಬಗಳು ಯಾವ ಮಾಹಿತಿಯು ಇಲ್ಲದಿರುವುದು ತಿಳಿಸಿರುತ್ತಾರೆ. ಇಲ್ಲಿ ಎರಡು ನಗರ ಸ್ಥಳೀಯ ಸಂಸ್ಥೆಗಳನ್ನು ಗಮನಿಸಿದಾಗ ತಿಳಿಯುವ ಸಂಗತಿಯೆಂದರೆ ಸಾಪೇಕ್ಷವಾಗಿ ಅಭಿವೃದ್ಧಿ ಹೊಂದಿದ ಹೊಸಪೇಟೆ ನಗರಸಭೆಯ ಕುಟುಂಬಗಳಿಗಿಂತ ಹಿಂದುಳಿದ ಕೂಡ್ಲಿಗಿ ಪಟ್ಟಣ ಪಂಚಾಯಿತಿಯ ಕುಟುಂಬಗಳು ಶಿಕ್ಷಣದ ಕುರಿತು ಅರಿವು, ಸೌಲಭ್ಯಗಳಿಂದ ವಂಚಿತರಾಗಿರುವುದು ಅಧಿಕವಾಗಿರುವುದು ತಿಳಿದುಬಂದಿದೆ. ಉಳಿದಂತೆ ಎರಡು ಸ್ಥಳೀಯ ಸಂಸ್ಥೆಗಳ ವಾರ್ಡ್‌ವಾರು ಶಿಕ್ಷಣ ಸೌಲಭ್ಯಗಳನ್ನು ಗಮನಿಸಿದಾಗ ನೀರಾವರಿ ಪ್ರದೇಶದ ವಾರ್ಡ್‌ಗಳಲ್ಲಿ ಶಿಕ್ಷಣದ ಸೌಲಭ್ಯಗಳು ಉತ್ತಮವಾಗಿವೆ. ತೀರಾ ಹಿಂದುಳಿದ ಪಟ್ಟಣ ಪಂಚಾಯಿತಿಯಲ್ಲಿ ಸೌಲಭ್ಯಗಳು ಹೆಚ್ಚಿದ್ದರೂ ಸಮರ್ಪಕವಾಗಿ ಬಳಸಿಕೊಳ್ಳುವಲ್ಲಿ ವಿಫಲರಾಗಿರುವುದು ಕಂಡುಬಂದಿದೆ. ಹೀಗೆ ನಗರ ಸ್ಥಳೀಯ ಸಂಸ್ಥೆಗಳು ಶಿಕ್ಷಣ ಪ್ರಗತಿಗಾಗಿ ಸೌಲಭ್ಯಗಳ ಮೂಲಕ ಕಾರ್ಯಗಳನ್ನು ನಿರ್ವಹಿಸಿದೆ. ಆದರೆ ಅವುಗಳ ಸದ್ಬಳಕೆಯಲ್ಲಿ ಅಭಿವೃದ್ಧಿ ಹೊಂದಿದ ನಗರಸಭೆಯು ಉತ್ತಮವಾಗಿದ್ದು, ತೀರಾ ಹಿಂದುಳಿದ ಪಟ್ಟಣ ಪಂಚಾಯಿತಿಯು ಉತ್ತಮವಾಗಿಲ್ಲದಿರುವುದರಿಂದ ಹಿಂದುಳಿದಿದೆ ಎನ್ನಬಹುದಾಗಿದೆ.

ಆದ್ದರಿಂದ ಎಲ್ಲಾ ಅಂಶಗಳನ್ನು ನೋಡಿದಾಗ ಒಟ್ಟು ನಗರದ ಆರ್ಥಿಕ, ಸಾಮಾಜಿಕ ಸ್ಥಿತಿಗಳು ಬದಲಾಗದೇ ಅಭಿವೃದ್ಧಿ ಹೊಂದುವುದು ಕಷ್ಟ. ಹಾಗಾಗಿ ಆಯಾ ಸ್ಥಳೀಯ ಸಂಸ್ಥೆಗಳು ಸಾಕ್ಷರತೆ, ಆದಾಯ, ಆರೋಗ್ಯ ಮತ್ತು ಉತ್ತಮ ಜೀವನಮಟ್ಟ ಅಭಿವೃದ್ಧಿಯು ಒಳಗೊಳ್ಳುವ ಸಂಗತಿಗಳ ಮೇಲೆ ಅವುಗಳಿಂದ ವಂಚಿತರಾದವರನ್ನು ಬಡವರೆಂದು ಕರೆಯಬಹುದಾಗಿದೆ. ಹಾಗಾಗಿ ಸಾಕ್ಷರತೆಯಲ್ಲಿ ಹಿಂದುಳಿದಿರುವ ಸ್ಥಳೀಯ ಸಂಸ್ಥೆ (ಪಟ್ಟಣ ಪಂಚಾಯಿತಿ)ಗೆ ಹೆಚ್ಚಿನ ಆದ್ಯತೆಯನ್ನು ನೀಡಬೇಕಾದ ಅಗತ್ಯತೆ ಇದೆ ಎಂದು ಕ್ಷೇತ್ರಾಧ್ಯಾಯದಿಂದ ತಿಳಿದು ಬಂದಿದೆ.

### ೫.೧೧. ಜನಪ್ರತಿನಿಧಿಗಳು ಚುನಾವಣೆ ಗೆದ್ದ ನಂತರದಲ್ಲಿ ಮಾಡುವ ಕೆಲಸಗಳ ಬಗ್ಗೆ ಜನರು ವ್ಯಕ್ತಪಡಿಸಿದ ಅಭಿಪ್ರಾಯಗಳು

| ಜನಪ್ರತಿನಿದಿಗಳು ಚುನಾವಣೆ ಗೆದ್ದ ನಂತರದಲ್ಲಿ ಮಾಡಿದ ಕೆಲಸಗಳ ಬಗ್ಗೆ ಜನರು ಅಭಿಪ್ರಾಯಗಳು | ಕೂಡ್ಲಿಗಿ ಪಟ್ಟಣಪಂಚಾಯಿತಿ | | ಹೊಸಪೇಟೆ ನಗರ ಸಭೆ | |
|---|---|---|---|---|
| | ಸಂಖ್ಯೆಗಳು | ಶೇಕಡವಾರು | ಸಂಖ್ಯೆಗಳು | ಶೇಕಡವಾರು |
| ಮಾಡಬೇಕಾಗಿದೆ | ೧೦ | ೧೨.೫ | ೮ | ೬.೬೭ |
| ಏನು ಮಾಡಿಲ್ಲ | ೨೧ | ೨೬.೨೫ | ೧೧ | ೯.೧೬ |
| ರಸ್ತೆ ರೀಪೆರಿ,<br>ವ್ಯವಹಾರ ಸಹಾಯ | | | | |

| ಧನ, ಚರಂಡಿ ವ್ಯವಸ್ಥೆ | ೩ | ೩.೭೫ | ೧೭ | ೧೪.೧೭ |
|---|---|---|---|---|
| ನೀರು ಸರಬರಾಜು, ಚರಂಡಿ ವ್ಯವಸ್ಥೆ ಮತ್ತು ರಸ್ತೆ ರಿಪೇರಿ | ೧೮ | ೨೨.೫ | ೧೬ | ೧೩.೩೩ |
| ಸಿಮೆಂಟ್ ರಸ್ತೆ, ಶಿಕ್ಷಣ ಸೌಲಭ್ಯ ಮತ್ತು ಆರೋಗ್ಯ ಕಾಳಜಿ | ೫ | ೬.೨೫ | ೨೫ | ೨೦.೮೩ |
| ಬೀದಿ ದೀಪ, ರಸ್ತೆ, ಚರಂಡಿ ವ್ಯವಸ್ಥೆ, ಆಶ್ರಯ ಮನೆ ಮತ್ತು ನೈರ್ಮಲೀಕರಣ | ೧೮ | ೨೨.೫ | ೩೧ | ೨೫.೮೩ |
| ಚರಂಡಿ ಸ್ವಚ್ಛತೆ, ಶೌಚಾಲಯ ನಿರ್ಮಾಣ | ೫ | ೬.೨೫ | ೧೨ | ೧೦.೦೦ |
| **ಒಟ್ಟು** | ೮೦ | ೧೦೦.೦೦ | ೧೨೦ | ೧೦೦.೦೦ |

**ಮೂಲ: ಕ್ಷೇತ್ರ ಕಾರ್ಯದ ಮಾಹಿತಿ**

ಜನಪ್ರತಿನಿಧಿಗಳು ಮಾಡಿದ ಅಭಿವೃದ್ಧಿ ಕಾರ್ಯಗಳ ಬಗ್ಗೆ ಕೋಷ್ಟಕ-೧೧ರಲ್ಲಿ ವಿಶ್ಲೇಷಿಸಲಾಗಿದೆ. ಕೂಡ್ಲಿಗಿ ಪಟ್ಟಣ ಪಂಚಾಯಿತಿಯಲ್ಲಿ ಶೇ. ೧೨.೫ರಷ್ಟು ಕುಟುಂಬಗಳು ಚುನಾಯಿತ ಸದಸ್ಯರು ಅಭಿವೃದ್ಧಿ ಕಾರ್ಯಗಳನ್ನು ಮಾಡಬೇಕಾಗಿದೆ ಎಂದು ತಿಳಿಸಿರುತ್ತಾರೆ. ಅದರಂತೆ ಶೇ. ೨೬.೨೫ರಷ್ಟು ಕುಟುಂಬಗಳು ಪ್ರತಿನಿಧಿಗಳು ಅಭಿವೃದ್ಧಿ ಕೆಲಸಗಳು ಏನೂ ಮಾಡಿಲ್ಲ ಎಂದು ತಿಳಿಸಿರುತ್ತಾರೆ. ಇತರೆ ಶೇ. ೩.೩೭ರಷ್ಟು ಕುಟುಂಬಗಳು ರಸ್ತೆ ದುರಸ್ತಿ, ವ್ಯವಹಾರ ಸಹಾಯಧನ ಮತ್ತು ಚರಂಡಿ ನಿರ್ಮಿಸಿದ್ದಾರೆ ಎಂದು ಹೇಳಿರುತ್ತಾರೆ. ಹಾಗೆಯೇ ಶೇ. ೨೨.೫ರಷ್ಟು ಕುಟುಂಬಗಳು ಚುನಾಯಿತ ಪ್ರತಿನಿಧಿಗಳು ಕುಡಿಯುವ ನೀರು ಸರಬರಾಜು, ಚರಂಡಿ ವ್ಯವಸ್ಥೆ ಮತ್ತು ರಸ್ತೆ ದುರಸ್ತಿಯನ್ನು ಮಾಡಿಸಿರುವುದನ್ನು ತಿಳಿಸಿರುತ್ತಾರೆ. ಅಲ್ಲದೇ ಶೇ. ೬.೨೫ರಷ್ಟು ಕುಟುಂಬಗಳು ನೈರ್ಮಲೀಕರಣ ಮತ್ತು ಸಿಮೆಂಟ್ ರಸ್ತೆ ಮಾಡಿಸಿರುವುದಾಗಿ ತಿಳಿಸಿರುತ್ತಾರೆ. ಅದಲ್ಲದೆ ಶೇ. ೨೨.೫ರಷ್ಟು ಕುಟುಂಬಗಳು ಬೀದಿ ದೀಪ, ರಸ್ತೆ, ಚರಂಡಿ ನಿರ್ಮಾಣ, ಆಶ್ರಯ ಮನೆ ಮತ್ತು ನೈರ್ಮಲೀಕರಣ ವ್ಯವಸ್ಥೆಯ ಕೆಲಸ ಕಾರ್ಯಗಳನ್ನು ಮಾಡಿಸಿರುವುದಾಗಿ ತಿಳಿಸಿರುತ್ತಾರೆ. ಉಳಿದ ಶೇ. ೬.೨೫ರಷ್ಟು ಕುಟುಂಬಗಳು ಚರಂಡಿ ನಿರ್ಮಾಣ ಮತ್ತು ಶೌಚಾಲಯ ನಿರ್ಮಾಣಕ್ಕೆ ಸಂಬಂಧಿಸಿದ ಅಭಿವೃದ್ಧಿ ಕಾರ್ಯಗಳನ್ನು ಮಾಡಿರುವುದಾಗಿ ತಿಳಿಸಿರುತ್ತಾರೆ. ಹಾಗೆಯೇ ಹೊಸಪೇಟೆ ನಗರಸಭೆಯಲ್ಲಿ ಶೇ. ೬.೬೭ರಷ್ಟು ಕುಟುಂಬಗಳು ಅಭಿವೃದ್ಧಿ ಕಾರ್ಯಗಳನ್ನು ಮಾಡಬೇಕಾಗಿದೆ ಎಂದು ತಿಳಿಸಿರುತ್ತಾರೆ. ಅದರಂತೆ ಶೇ. ೯.೧೬ರಷ್ಟು ಕುಟುಂಬಗಳು ಚುನಾಯಿತ ಸದಸ್ಯರು ಇನ್ನೂ ಯಾವ ಅಭಿವೃದ್ಧಿ ಕಾರ್ಯಗಳನ್ನು ಮಾಡಿರುವುದಿಲ್ಲ ಎಂದು ಹೇಳಿರುತ್ತಾರೆ. ಇತರೆ ಶೇ. ೧೪.೧೭ರಷ್ಟು ಕುಟುಂಬಗಳು ರಸ್ತೆ ದುರಸ್ತಿ, ವ್ಯವಹಾರ ಮಾಡಲು ಸಹಾಯಧನ ಮತ್ತು ಚರಂಡಿ ನಿರ್ಮಾಣವನ್ನು ಮಾಡಿಸಿರುವುದಾಗಿ ತಿಳಿಸಿರುತ್ತಾರೆ. ಅಲ್ಲದೇ ಶೇ. ೧೩.೩೩ರಷ್ಟು ಕುಟುಂಬಗಳು ನೀರು ಸರಬರಾಜು, ಚರಂಡಿ ನಿರ್ಮಾಣ ಮತ್ತು ರಸ್ತೆ ದುರಸ್ತಿ ಕೆಲಸಗಳನ್ನು ಮಾಡಿಸಿರುವುದಾಗಿ ಹೇಳಿಕೊಂಡಿರುತ್ತಾರೆ. ಹಾಗೆಯೇ ಶೇ. ೨೦.೮೩ರಷ್ಟು ಕುಟುಂಬಗಳು ಸಿಮೆಂಟ್ ರಸ್ತೆ, ಶಿಕ್ಷಣ ಸಂಬಂಧಿ ಸೌಲಭ್ಯಗಳು ಮತ್ತು

ನೈರ್ಮಲೀಕರಣದ ಬಗ್ಗೆ ಜವಾಬ್ದಾರಿ ಕಾರ್ಯಕ್ರಮಗಳನ್ನು ಮಾಡಿಸಿರುವುದಾಗಿದೆ ಎಂದು ತಿಳಿಸಿರುತ್ತಾರೆ. ಹಾಗೆಯೇ ಶೇ. ೨೫.೮೫ರಷ್ಟು ಕುಟುಂಬಗಳು ಚುನಾಯಿತ ಸದಸ್ಯರ ಬಗ್ಗೆ ಹೇಳುತ್ತಾ ಸಮರ್ಪಕ ಬೀದಿದೀಪ ವ್ಯವಸ್ಥೆ, ರಸ್ತೆಗಳು, ಚರಂಡಿ ನಿರ್ಮಾಣ, ಆಶ್ರಯ ಮನೆಗಳು ಮತ್ತು ಆರೋಗ್ಯ ಸಂಬಂಧಿ ಸಹಾಯಧನವನ್ನು ಕೊಡಿಸುವುದರೊಂದಿಗೆ ಅಭಿವೃದ್ಧಿ ಕೆಲಸಗಳನ್ನು ಮಾಡಿಸಿರುವುದಾಗಿ ತಿಳಿಸಿರುತ್ತಾರೆ. ಉಳಿದ ಶೇ. ೧೦ರಷ್ಟು ಕುಟುಂಬಗಳು ತಮ್ಮ ವಾರ್ಡಿನ ಸದಸ್ಯರ ಬಗ್ಗೆ ಅತೃಪ್ತಿಯನ್ನು ಸೂಚಿಸುತ್ತಾ ಬರೀ ಚರಂಡಿ ನಿರ್ಮಾಣ ಮತ್ತು ಸಮುದಾಯ ಶೌಚಾಲಯ ಮತ್ತು ವೈಯಕ್ತಿಕ ಶೌಚಾಲಯಗಳನ್ನು ನಿರ್ಮಿಸಿಕೊಟ್ಟಿರುವುದಾಗಿ ಹೇಳಿಕೊಂಡಿರುತ್ತಾರೆ. ಇಲ್ಲಿ ಎರಡು ನಗರ ಸ್ಥಳೀಯ ಸಂಸ್ಥೆಗಳಲ್ಲಿ ಗಮನಿಸಬೇಕಾದ ಸಂಗತಿಯೆಂದರೆ ಸಾಪೇಕ್ಷವಾಗಿ ಅಭಿವೃದ್ಧಿ ಹೊಂದಿದ ನಗರಸಭೆಯ ಕುಟುಂಬಗಳ ಕೆಲವು ವಾರ್ಡುಗಳು ತೀರಾ ಹಿಂದುಳಿದ ಕೂಡ್ಲಿಗಿ ಪಟ್ಟಣ ಪಂಚಾಯಿತಿ ಕುಟುಂಬಗಳಲ್ಲಿ ಚುನಾಯಿತ ಸದಸ್ಯರ ಅಭಿವೃದ್ಧಿ ಕೆಲಸಗಳ ಬಗ್ಗೆ ಅಧಿಕ ಅತೃಪ್ತಿಯನ್ನು ಹೊಂದಿರುವುದು ಕಂಡುಬಂದಿದೆ. ಆದ್ದರಿಂದ ನಗರಸಭೆಯು ನೀರಾವರಿ ಪ್ರದೇಶವಾಗಿದ್ದು, ಹತ್ತಿರದಲ್ಲಿ ತುಂಗಭದ್ರಾ ಕಾಲುವೆಯ ನೀರು ಇದ್ದರೂ ಕೆಲವು ವಾರ್ಡಿನಲ್ಲಿ ನೀರಿನ ಹಾಹಾಕಾರದಿಂದ ಟಿ. ಬಿ. ಬೋರ್ಡಿನಿಂದ ಕುಡಿಯುವ ನೀರು ಸರಬರಾಜು ವ್ಯವಸ್ಥೆ ಮಾಡಿಕೊಂಡಿರುತ್ತಾರೆ. ಅಂದರೆ ಅಭಿವೃದ್ಧಿ ಹೊಂದಿದ ನಗರಸಭೆಯು ನೀರು ಪೂರೈಕೆಯಲ್ಲಿ ವಿಫಲವಾಗಿರುವುದೊಂದೇ ಕಾರಣವಾಗಿದೆ. ಆದರೆ ತೀರಾ ಹಿಂದುಳಿದ ಕೂಡ್ಲಿಗಿ ಪಟ್ಟಣ ಪಂಚಾಯಿತಿಯಲ್ಲಿರುವ ಹೆಚ್ಚಿನ ಜನರು ರೈತರಾಗಿರುತ್ತಾರೆ. ಈ ವಾರ್ಡಿನಲ್ಲಿರುವ ಹಲವು ಕುಟುಂಬಗಳು ಸಣ್ಣ ವ್ಯಾಪಾರದಲ್ಲಿ ತೊಡಗಿಸಿಕೊಂಡಿದ್ದಾರೆ. ಆದರೆ ಇಲ್ಲಿ ಸರಿಯಾದ ಆರೋಗ್ಯ ಕೇಂದ್ರಗಳಿಲ್ಲದೆ ಜನರು ಚಿಕಿತ್ಸೆಗಾಗಿ ದೂರದಲ್ಲಿರುವ ಹೊಸಪೇಟೆಗೆ ಪ್ರಯಾಣ ಮಾಡಬೇಕಾಗಿದೆ. ಶಿಕ್ಷಣ ಸಂಬಂಧಿ ಸೌಲಭ್ಯದ ಸದ್ಬಳಕೆಯು ಸರಿಯಾಗಿ ಆಗುತ್ತಿಲ್ಲ. ಈ ಎಲ್ಲಾ ಮೂಲ ಸೌಲಭ್ಯಗಳಿದ್ದರೂ ಕೂಡ್ಲಿಗಿ ಪಟ್ಟಣ ಪಂಚಾಯಿತಿಯನ್ನು ತೀರಾ ಹಿಂದುಳಿದ ಪ್ರದೇಶ ಎನ್ನಬಹುದು. ಏಕೆಂದರೆ ಸರಿಯಾದ ರಸ್ತೆ ಸಂಪರ್ಕವಾಗಲಿ, ಆರೋಗ್ಯ ಸಂಬಂಧಪಟ್ಟಂತಹ ಸೌಲಭ್ಯಗಳು, ಶಿಕ್ಷಣ ಸಂಬಂಧಿ ಸೌಲಭ್ಯಗಳಾಗಲಿ, ಕನಿಷ್ಠ ಮೂಲಭೂತ ಸೌಲಭ್ಯಗಳಿಗಾಗಿ ಸರ್ಕಾರ ಯೋಜನೆಗಳ ಮೇಲೆ ಅವಲಂಬಿತರಾಗಿರುವುದು ಅವುಗಳು ಸಮರ್ಪಕವಾಗಿ ಅನುಷ್ಠಾನಗೊಳ್ಳದೆ ರಾಜಕೀಯ ಇಚ್ಛಾಶಕ್ತಿಯ ಕೊರತೆಯಿಂದಾಗಿ ಕೂಡ್ಲಿಗಿ ಪಟ್ಟಣ ಪಂಚಾಯಿತಿಯು ಕನಿಷ್ಠ ಮೂಲಭೂತ ಸೌಲಭ್ಯಗಳು ಇಲ್ಲದಿರುವುದರಿಂದ ತೀರಾ ಹಿಂದುಳಿದಿದೆ ಎನ್ನಬಹುದಾಗಿದೆ. ಇವುಗಳನ್ನು ಹೆಚ್ಚು ಹೆಚ್ಚು ಪಡೆಯುವುದರೊಂದಿಗೆ ಹೊಸಪೇಟೆ ನಗರಸಭೆಯು ಸಾಪೇಕ್ಷವಾಗಿ ಅಭಿವೃದ್ಧಿ ಹೊಂದಿದ ಪ್ರದೇಶವಾಗಿದೆ ಎನ್ನಬಹುದು. ಆದರೆ ಇಲ್ಲಿ ಹಿಂದುಳಿದ ಪಟ್ಟಣ ಪಂಚಾಯಿತಿಗೆ ಹೆಚ್ಚು ಹೆಚ್ಚು ಮೂಲಭೂತ ಸೌಲಭ್ಯಗಳ ಜೊತೆಗೆ ಶಿಕ್ಷಣ, ಆರೋಗ್ಯ ಮತ್ತು ವರಮಾನದ ವೃದ್ಧಿಗೆ ಪ್ರೋತ್ಸಾಹಿಸುವ ಅಗತ್ಯವಿದೆ ಎಂದು ಕಂಡು ಬಂದಿದೆ.

## ನಗರ ಸ್ಥಳೀಯ ಸಂಸ್ಥೆಗಳ ವಾರ್ಡಿನ ಜನರ ತೌಲನಿಕ ವಿವರಣೆ

೧೯೯೨ರಲ್ಲಿ ಜಾರಿಗೆ ಬಂದ ಸಂವಿಧಾನದ ೭೪ನೇ ತಿದ್ದುಪಡಿಯಿಂದಾಗಿ ಕೇಂದ್ರ ಮತ್ತು ರಾಜ್ಯ ಸರ್ಕಾರಗಳ ನಂತರ ಮೂರನೆ ಹಂತವಾಗಿ ನಗರ ಸ್ಥಳೀಯ ಸಂಸ್ಥೆಗಳು ಮಹತ್ವ ಪಡೆದಿವೆ. ಸಂವಿಧಾನದ ಹನ್ನೆರಡನೆ ಶೆಡ್ಯೂಲ್ ಪ್ರಕಾರ ನಗರಾಭಿವೃದ್ಧಿಯೂ ಸೇರಿದಂತೆ ಹನ್ನೆರೆಡು ಪ್ರಮುಖ

ಕಾರ್ಯಗಳನ್ನು ಸ್ಥಳೀಯ ಆಡಳಿತ ಸಂಸ್ಥೆಗಳಿಗೆ ವಹಿಸಿಕೊಡಲಾಗಿದೆ. ಆದರೆ ಕಳೆದ ಮೂರು ದಶಕಗಳಲ್ಲಿ ನಗರ ಸ್ಥಳೀಯ ಸಂಸ್ಥೆಗಳು ಕಾರ್ಯನಿರ್ವಹಣೆ ಮತ್ತು ಸಂಪನ್ಮೂಲ ಕ್ರೋಢಿಕರಣಕ್ಕೆ ಸಂಬಂಧಿಸಿದಂತೆ ನಿರೀಕ್ಷಿತ ಪ್ರಗತಿಯನ್ನು ಸಾಧಿಸಿದೆ ಇರುವುದು ಮೇಲ್ನೋಟಕ್ಕೆ ಕಂಡುಬರುತ್ತದೆ. ತಳಮಟ್ಟದ ಆಡಳಿತದ ಘಟಕವಾಗಿ ಈ ಸಂಸ್ಥೆಗಳನ್ನು ಬಲಗೊಳಿಸಲಿಕ್ಕಾಗಿ ಅಧಿಕಾರ ಮತ್ತು ಸಂಪನ್ಮೂಲಗಳನ್ನು ವರ್ಗಾಯಿಸಲು ರಾಜ್ಯ ಸರ್ಕಾರಗಳು ಹಿಂದೇಟು ಹಾಕುತ್ತಿರುವುದು ಕೂಡ ಇದಕ್ಕೆ ಮುಖ್ಯ ಕಾರಣವೆಂದು ಹಲವು ಅಧ್ಯಯನಗಳಿಂದ ತಿಳಿಯಲಾಗಿದೆ. ಜನರ ಸಹಭಾಗಿತ್ವ ಮತ್ತು ಪ್ರಾತಿನಿಧ್ಯವನ್ನು ದೊರಕಿಸುವುದಿಲ್ಲವೊ ಅಲ್ಲೀತನಕ ಸ್ಥಳೀಯ ಸಂಸ್ಥೆಗಳು ದುರ್ಬಲವಾಗಿಯೇ ಮುಂದುವರಿಯುತ್ತವೆ. ಹೀಗೇ ಇದ್ದರೆ ಈ ಸ್ಥಳೀಯ ಸಂಸ್ಥೆಗಳಲ್ಲಿನ ಅಧಿಕಾರಿಗಳು ಮತ್ತು ಜನಪ್ರತಿನಿಧಿಗಳ ಸೇವಾ ವೈಫಲ್ಯಗಳು ಮುಂದುವರಿಯುತ್ತಲೆ ಹೋಗುತ್ತವೆ. ಅಲ್ಲದೇ, ಕೇಂದ್ರ ಸರ್ಕಾರ ಜಾರಿಗೆ ತಂದಿರುವ ನಗರಾಭಿವೃದ್ಧಿ ಯೋಜನೆಗಳಿಂದ ಹಣ ಪಡೆಯಲು ಉತ್ಸುಕವಾಗಿರುವ ರಾಜ್ಯ ಸರ್ಕಾರಗಳು ಆಡಳಿತ ಸುಧಾರಣಾ ಕ್ರಮಗಳ ಬಗ್ಗೆ ಆಸಕ್ತಿ ವಹಿಸುತ್ತಿಲ್ಲ. ಇದರಿಂದಾಗಿ ಯೋಜನೆಗಳು ಕಳಪೆ ಕಾಮಗಾರಿ ಮತ್ತು ಭ್ರಷ್ಟಾಚಾರಗಳಿಂದ ನಿರೀಕ್ಷಿತ ಫಲವನ್ನು ನೀಡಲು ಸೋಲುತ್ತಿವೆ.

ಒಟ್ಟಾರೇಯಾಗಿ ಮೇಲಿನ ವಿಶ್ಲೇಷಣೆಯಿಂದ ತಿಳಿದುಬರುವ ಅಂಶವೆಂದರೆ ಹೊಸಪೇಟೆ ನಗರಸಭೆ ಮತ್ತು ಕೂಡ್ಲಿಗಿ ಪಟ್ಟಣ ಪಂಚಾಯಿತಿಯಲ್ಲಿ ವಾರ್ಡಿನ ಜನರ ಸಾಮಾಜಿಕ, ರಾಜಕೀಯ ಮತ್ತು ಆರ್ಥಿಕ ಪರಿಸ್ಥಿತಿಯನ್ನು ಗಮನಿಸಿದಾಗ ಮುಂದುವರಿದ ಹೊಸಪೇಟೆ ನಗರಸಭೆಯ ಜನರಿಗಿಂತ ಹಿಂದುಳಿದ ಪಟ್ಟಣ ಪಂಚಾಯಿತಿಯ ಜನರು ಹೆಚ್ಚಿನ ಸಂಖ್ಯೆಯಲ್ಲಿ ಅನಕ್ಷರಸ್ಥರು, ನಗರದಲ್ಲಿ ಪರಿಶಿಷ್ಟರ ಪ್ರಮಾಣ ಹೆಚ್ಚಿದ್ದರೂ ತಮ್ಮಗೆ ಸಿಗಬೇಕಾದ ಸೌಲಭ್ಯಗಳನ್ನು ಪಡೆಯದೆ ವಂಚಿತಗೊಂಡಿರುವುದಲ್ಲದೆ, ಒಣಭೂಮಿಯಿಂದ ಕಡಿಮೆ ಆದಾಯವನ್ನು ಹೊಂದಿ ಜೀವನಾಧಾರಕ್ಕೆ ಕೂಲಿಯನ್ನು ಮಾಡುತ್ತಾ ಹೆಚ್ಚಿನ ವರಮಾನವನ್ನು ಹೊಂದದೆ ವೈಯಕ್ತಿಕ ಜೀವನವನ್ನು ಗುಣಮಟ್ಟ ಜೀವನದಿಂದ ನಡೆಸಿಕೊಂಡು ಹೋಗುವಲ್ಲಿ ವಿಫಲವಾಗಿದ್ದು ನಗರ ಸ್ಥಳೀಯ ಸಂಸ್ಥೆಗಳ ಮೇಲೆ ಅವಲಂಬಿತವಾಗಿ ಅದರಿಂದ ನಿರೀಕ್ಷಿತ ಅನುಕೂಲತೆಗಳನ್ನು ಅಂಚಿನ ಜನರಿಗೆ ತಲುಪಿಸದೆ ಅಭಿವೃದ್ಧಿಯನ್ನು ಸಾಧಿಸಲು ಆಗದೆ ಹಿಂದುಳಿದಿದೆ ಎನ್ನಬಹುದು. ಈ ಹಿಂದುಳಿಯಲಿಕ್ಕೆ ಹಲವು ಸಮಸ್ಯೆಗಳನ್ನು ನಿವಾರಿಸಲಿಕ್ಕೆ ಕೇಂದ್ರ ಸರ್ಕಾರ ಯೋಜನೆಗಳಿಗೆ ಹಣ ಮಂಜೂರು ಮಾಡುವ ಮೊದಲು ರಾಜ್ಯ ಸರ್ಕಾರಗಳ ಜೊತೆ ಆಡಳಿತ ಸುಧಾರಣೆಯ ಬಗ್ಗೆ ಕಡ್ಡಾಯವಾಗಿ ಒಡಂಬಡಿಕೆಯನ್ನು ಮಾಡಿಕೊಂಡು ಸ್ಥಳೀಯ ಸಂಸ್ಥೆಗಳ ಬಗ್ಗೆ ಹೆಚ್ಚು ಹೆಚ್ಚು ಆಡಳಿತದಲ್ಲಿ ಪಾಲ್ಗೋಳ್ಳುತ್ತಾ ಹೋದಾಗ ಮಾತ್ರ ಅಭಿವೃದ್ಧಿಯನ್ನು ಕಾಣಲು ಸಾಧ್ಯವೆಂದು ಅಭಿಪ್ರಾಯ ಪಡಲಾಗಿದೆ.

ಪೀಠಿಕೆ

ಪ್ರಬಂಧದ ಐದನೆಯಾದಲ್ಲಿ ನಗರ ಸ್ಥಳೀಯ ಸಂಸ್ಥೆಗಳಲ್ಲಿ ಜನರ ಪಾಲ್ಗೋಳ್ಳುವಿಕೆಯನ್ನು ನೋಡುವ ಉದ್ದೇಶವನ್ನಿಟ್ಟುಕೊಂಡು ವಾರ್ಡಿನ ಜನರ ಸಾಮಾಜಿಕ, ಆರ್ಥಿಕ ಅಂಶಗಳ ಜೊತೆಗೆ ಸ್ಥಳೀಯ ರಾಜಕೀಯದಲ್ಲಿ ಕುಟುಂಬಗಳ ಭಾಗವಹಿಸುವಿಕೆ ಮತ್ತು ಅರಿವಿನ ಮೂಲಕ ಚುನಾಯಿತ ಸದಸ್ಯರ ಕಾರ್ಯ ನಿರ್ವಹಣೆಯನ್ನು ಚರ್ಚೆ ಮಾಡಲಾಗಿದೆ. ಹಾಗೆಯೇ ಪ್ರಸ್ತುತ ಅಧ್ಯಯನವು ನಗರ ಸ್ಥಳೀಯ ಸಂಸ್ಥೆಗಳಲ್ಲಿ ಚುನಾಯಿತ ಸದಸ್ಯರ ಪಾಲ್ಗೋಳ್ಳುವಿಕೆಯಿಂದ ವಾರ್ಡಿನ ಅಭಿವೃದ್ಧಿಯನ್ನು ಹೇಗೆ ಮಾಡಿದ್ದಾರೆ ಎಂಬುದನ್ನು ಅಧ್ಯಯನ ಮಾಡುವ ಉದ್ದೇಶವಾಗಿದೆ. ನಗರ ಆಡಳಿತ ವ್ಯವಸ್ಥೆ ಮತ್ತು ವಿಕೇಂದ್ರೀಕರಣದ ಪ್ರಮುಖ ಆಶಯ. ಆಡಳಿತ ಮತ್ತು ಅಭಿವೃದ್ಧಿ ಕಾರ್ಯಗಳು ಜನ ಕೇಂದ್ರಿತವಾಗಿರಬೇಕೆನ್ನುವುದು. ಅಂದರೆ ಜನರ ಬೇಡಿಕೆಗೆ ಹೆಚ್ಚಿನ ಮನ್ನಣೆ ಕೊಡಲಾಗುತ್ತದೆ. ಆದರೂ ನಗರ ಸ್ಥಳೀಯ ಸಂಸ್ಥೆಗಳ ಅಭಿವೃದ್ಧಿ ಬಗ್ಗೆ ನಿರ್ಧಾರ ತೆಗೆದುಕೊಳ್ಳುವಾಗ ಜನತೆ ಆಶಯ ಪರಿಗಣಿಸಲಾಗುತ್ತದೆಯೇ? ಇಂತಹ ಸಂದರ್ಭದಲ್ಲಿ ಜನರ ಪಾಲ್ಗೊಳ್ಳುವಿಕೆಯ ಬಗ್ಗೆ ಗಮನಹರಿಸಬೇಕಾಗುತ್ತದೆ. ಈ ರೀತಿ ಸ್ಥಳೀಯ ಜನರ ಪಾಲ್ಗೊಳ್ಳುವಿಕೆಯನ್ನು ನಗರ ಸ್ಥಳೀಯ ಸಂಸ್ಥೆಗಳಲ್ಲಿ ಅಳವಡಿಸಲಾಗಿದೆ. ಆಡಳಿತವು ವ್ಯವಸ್ಥಿತವಾಗಿ ನಡೆಯಬೇಕಾದರೆ ಸ್ಥಳೀಯ ಮಟ್ಟದ ಜನರ ಆಸೆ-ಆಕಾಂಕ್ಷೆಗಳು ಹಾಗೂ ಕ್ಷೇತ್ರ ಅಭಿವೃದ್ಧಿಗೆ ಒದಗಿಸಿರುವ ಜನರ ಉತ್ತಮ ಜೀವನ ಮಟ್ಟ, ಶಿಕ್ಷಣ, ಆರೋಗ್ಯ, ಶುದ್ಧ ಕುಡಿಯುವ ನೀರು, ಶೌಚಾಲಯ, ನೈರ್ಮಲೀಕರಣ, ರಸ್ತೆ ಮತ್ತು ಬೀದಿ ದೀಪ ಮೇಲೆ ಆಧಾರವಾಗಿದೆ. ಉತ್ತಮ ಆಡಳಿತ ಹಾಗೂ ರಾಜಕೀಯ ವಿಕೇಂದ್ರೀಕರಣದಿಂದ ಮಾತ್ರ ಅಭಿವೃದ್ಧಿಯು ಪರಿಣಾಮಕಾರಿಯಾಗಿಯಾಗಲು ಸಾಧ್ಯ. ಪ್ರಬಲವಾಗಿ ನಿಂತಿರುವ ಅಧಿಕಾರಿಗಳ ಆಡಳಿತದ ನಡುವೆ ಹೊಸದಾಗಿ ನಗರ ಸ್ಥಳೀಯ ಸಂಸ್ಥೆಗಳಲ್ಲಿ ವಿಕೇಂದ್ರೀಕರಣವು ಎಷ್ಟರಮಟ್ಟಿಗೆ ಕಾರ್ಯಗತವಾಗುತ್ತಿದೆ ಎಂದು ತಿಳಿದುಕೊಳ್ಳಲು ಚುನಾಯಿತ ಸದಸ್ಯರನ್ನು ಸಂದರ್ಶಿಸಲಾದೆ. ನಗರ ಸ್ಥಳೀಯ ಸಂಸ್ಥೆಗಳ ಕಾರ್ಯಕಲಾಪಗಳಲ್ಲಿ ಚುನಾಯಿತ ಸದಸ್ಯರು ಎಷ್ಟರಮಟ್ಟಿಗೆ ಭಾಗವಹಿಸುತ್ತಾರೆ?

ಅಭಿವೃದ್ಧಿ ಕಾರ್ಯಗಳಿಗೆ ಸಂಬಂಧಪಟ್ಟಂತೆ ಎಷ್ಟರಮಟ್ಟಿಗೆ ನಿರ್ಧಾರ ತೆಗೆದುಕೊಳ್ಳುತ್ತಾರೆ ಎಂದು ತಿಳಿದುಕೊಳ್ಳಲು ಪ್ರಶ್ನಾವಳಿಯನ್ನು ಉಪಯೋಗಿಸಿ ಚುನಾಯಿತ ಪ್ರತಿನಿಧಿಗಳನ್ನು ಸಂದರ್ಶಿಸಲಾಗಿದೆ. ಇದರ ಮೂಲಕ ಮಾಹಿತಿಯನ್ನು ಸಂಗ್ರಹಿಸಲಾಗಿದೆ.

ನಗರ ಸ್ಥಳೀಯ ಸಂಸ್ಥೆಗಳಲ್ಲಿನ ಹೊಸಪೇಟೆ ನಗರಸಭೆ ಮತ್ತು ಕೂಡ್ಲಿಗಿ ಪಟ್ಟಣ ಪಂಚಾಯಿತಿಯ ಸದಸ್ಯರುಗಳನ್ನು ಹಾಗೂ ಅವರು ವಾಸಿಸುತ್ತಿರುವ ಸ್ಥಳದಲ್ಲಿಯೇ ಸಂದರ್ಶಿಸಲಾಗಿದೆ. ನಾವು ಚುನಾಯಿತ ಪ್ರತಿನಿಧಿಗಳನ್ನು ಭೇಟಿ ಮಾಡುವಾಗ ಅಧ್ಯಯನದ ವಿಷಯಕ್ಕೆ ತಕ್ಕಂತೆ ಆರಂಭಿಸಿದ ಸಂದರ್ಶನವು ಸದಸ್ಯರೊಂದಿಗೆ ಮಾತನ್ನು ಮುಂದುವರಿಸಿದಂತೆಲ್ಲಾ ಸಂದರ್ಶನವು ಮುಕ್ತ ಚರ್ಚೆಗೆ ಅನುವು ಮಾಡಿಕೊಟ್ಟಿತ್ತು. ನಗರ ಸ್ಥಳೀಯ ಸಂಸ್ಥೆಗಳಿಗೆ ಸಂಬಂಧಪಟ್ಟ ಕೆಲಸ ಕಾರ್ಯಗಳ ಬಗ್ಗೆ, ಅಭಿವೃದ್ಧಿ ಕಾರ್ಯಗಳ ಬಗ್ಗೆ ಹೆಚ್ಚಿನ ವಿಷಯಗಳನ್ನು ತಿಳಿದುಕೊಳ್ಳಲಾಯಿತು. ಸಂಶೋಧನೆಗೆ ಹೊಸಪೇಟೆ ನಗರಸಭೆಯ ಸದಸ್ಯರನ್ನು ಸಂದರ್ಶಿಸಬೇಕೆಂದು ಕೊಂಡಿದ್ದೇನು ಆದರೆ ಡಾ. ನಂಜುಂಡಪ್ಪ ವರದಿಯು ತಿಳಿಸಿದಂತೆ ಬಳ್ಳಾರಿ ಜಿಲ್ಲೆಯ ಅತ್ಯಂತ ಮುಂದುವರಿದ ತಾಲೂಕು ಹೊಸಪೇಟೆ ನಗರಸಭೆ ಮತ್ತು ಅತ್ಯಂತ ಹಿಂದುಳಿದ ತಾಲೂಕು ಕೂಡ್ಲಿಗಿ ಪಟ್ಟಣ ಪಂಚಾಯಿತಿಯ ಸದಸ್ಯರನ್ನು ಸಂದರ್ಶಿಸಿದರೆ ಅಧ್ಯಯನವನ್ನು ಇನ್ನು ಬಲಗೊಳಿಸಲು ಸಾಧ್ಯ ಎನ್ನುವ ಉದ್ದೇಶದಿಂದ ಕೂಡ್ಲಿಗಿ ಪಟ್ಟಣ ಪಂಚಾಯಿತಿಯ ಸದಸ್ಯರನ್ನು ಹೊಸಪೇಟೆ ನಗರಸಭೆ ಸದಸ್ಯರಂತೆ ಸಂಶೋಧನೆಗೆ ಸಂಬಂಧಿಸಿದಂತಹ ಪ್ರಶ್ನೆಗಳನ್ನು ಕೇಳುವುದರ ಮೂಲಕ ಸಂದರ್ಶಿಸಲಾಯಿತು. ಸಂಶೋಧನ ಅಧ್ಯಯನದ ಬಗ್ಗೆ ಎಲ್ಲಾ ಸದಸ್ಯರು ಆಸಕ್ತಿ ತೋರಿಸಿದರು. ಎಲ್ಲಾ ಸದಸ್ಯರು ನನ್ನೊಂದಿಗೆ ಚೆನ್ನಾಗಿ ಸಹಕರಿಸಿದರು. ಈ ಜಿಲ್ಲೆಯ ಮುಂದುವರಿದ ತಾಲೂಕು ಹೊಸಪೇಟೆ ನಗರಸಭೆ ಸದಸ್ಯರ ಆರ್ಥಿಕ, ಸಾಮಾಜಿಕ ಮತ್ತು ಸ್ಥಳೀಯ ರಾಜಕೀಯದಲ್ಲಿ ಚುನಾಯಿತ ಸದಸ್ಯರ ಭಾಗವಹಿಸುವುದರ ಮೂಲಕ ಹೇಗೆ ಸ್ಥಳೀಯ ಅಭಿವೃದ್ಧಿಯನ್ನು ಕೈಗೊಂಡಿದ್ದಾರೆ ಎಂಬುದನ್ನು ಹಿಂದುಳಿದ ಪಟ್ಟಣ ಪಂಚಾಯಿತಿಯೊಂದಿಗೆ ತೌಲನಿಕವಾಗಿ ವಿಶ್ಲೇಷಿಸಲಾಗಿದೆ.

ಹೊಸಪೇಟೆ ನಗರಸಭೆ ಮತ್ತು ಕೂಡ್ಲಿಗಿ ಪಟ್ಟಣ ಪಂಚಾಯಿತಿ ಸದಸ್ಯರನ್ನು ಸಂದರ್ಶನದ ಆಧಾರದ ಮೇಲೆ ಸಂಗ್ರಹಿಸಿದ ಮಾಹಿತಿಯ ಹಿನ್ನೆಲೆಯಾಗಿ ವಿಕೇಂದ್ರೀಕರಣ ಎಷ್ಟರಮಟ್ಟಿಗೆ ಆಚರಣೆಯಲ್ಲಿದೆ ಎಂದು ತಿಳಿದುಕೊಳ್ಳಲು ನಾವು ಕ್ಷೇತ್ರ ಭೇಟಿಯಿಂದ ಸಂಗ್ರಹಿಸಿದ ಮಾಹಿತಿಯು ಅನುಕೂಲಕರವಾಗಿದೆ. ಸ್ಥಳೀಯ ಅಭಿವೃದ್ಧಿಯಲ್ಲಿ ಸ್ಥಳೀಯ ಸದಸ್ಯರುಗಳಿಗೆ ಎಷ್ಟು ನಿರ್ಧಾರ ತೆಗೆದುಕೊಳ್ಳುವ ಅಧಿಕಾರವಿದೆ. ನಗರ ಸ್ಥಳೀಯ ಸಂಸ್ಥೆಗಳ ಬಗ್ಗೆ ಎಷ್ಟು ತಿಳಿದಿದೆ ಎಂಬ ಅಂಶಗಳನ್ನು ತಿಳಿದುಕೊಳ್ಳುವುದರ ಜೊತೆಗೆ ಕೊನೆಯದಾಗಿ ಶಿಕ್ಷಣ, ಆರೋಗ್ಯ, ಶುದ್ಧ ಕುಡಿಯುವ ನೀರು ನೈರ್ಮಲ್ಯೀಕರಣ, ವಸತಿ ಮತ್ತು ರಸ್ತೆ ಮುಂತಾದ ಮೂಲಭೂತ ಅವಶ್ಯಕತೆಗಳ ಬಗ್ಗೆ ಸದಸ್ಯರೊಂದಿಗೆ ಚರ್ಚೆ ಮಾಡುವ ಮೂಲಕ ಈ ವಿಭಾಗಗಳಲ್ಲಿ ಎಷ್ಟರಮಟ್ಟಿಗೆ ಕೆಲಸಗಳು ನಡೆಯುತ್ತದೆ ಎನ್ನುವುದರ ಬಗ್ಗೆ ತಿಳಿಯುತ್ತಾ ಜನರ ಜೀವನವನ್ನು ಹೇಗೆ ಉತ್ತಮ ಜೀವನ ಮಟ್ಟದ ಕಡೆಗೆ ಒಯ್ಯುತ್ತಾರೆ ಎಂಬುದನ್ನು ತಿಳಿದುಕೊಳ್ಳಲು ಸಹಾಯಕರವಾಗುತ್ತದೆ. ಹಾಗಾಗಿ ಚುನಾಯಿತ ಸದಸ್ಯರ ಅರಿವು ಮತ್ತು ಭಾಗವಹಿಸುವಿಕೆಯು ಅಭಿವೃದ್ಧಿಯ ಪರಿಕಲ್ಪನೆಯಾಗಿಟ್ಟುಕೊಂಡು ಈ ಹಿನ್ನೆಲೆಯಲ್ಲಿ ಹೊಸಪೇಟೆ ಮತ್ತು ಕೂಡ್ಲಿಗಿ ನಗರ ಸ್ಥಳೀಯ ಸಂಸ್ಥೆಗಳ ಚುನಾಯಿತ ಸದಸ್ಯರ

ಅರಿವು ಮತ್ತು ಭಾಗವಹಿಸುವಿಕೆಯ ಮೂಲಕ ಹೇಗೆ ಅಭಿವೃದ್ಧಿಯನ್ನು ಕೈಗೊಳ್ಳಲಾಗಿದೆ ಎಂಬುದನ್ನು ಈ ಅಧ್ಯಾಯನದಲ್ಲಿ ಗುರುತಿಸಲಾಗಿದೆ.

**ಚುನಾಯಿತ ಸದಸ್ಯರ ಸಂದರ್ಶನದ ಮಾಹಿತಿ**

ನನ್ನ ಅಧ್ಯಯನವು ಬಳ್ಳಾರಿ ಜಿಲ್ಲೆಯ ಹೊಸಪೇಟೆ ನಗರಸಭೆ ಮತ್ತು ಕೂಡ್ಲಿಗಿ ಪಟ್ಟಣ ಪಂಚಾಯಿತಿಯ ಸ್ಥಳೀಯ ಸಂಸ್ಥೆಗಳಿಗೆ ಮಾತ್ರ ಸೀಮಿತವಾಗಿದೆ. ನಗರ ಸ್ಥಳೀಯ ಸಂಸ್ಥೆಗಳ ವ್ಯವಸ್ಥೆಗೆ ಸಂಬಂಧಪಟ್ಟ ವಿಷಯಗಳನ್ನು ಸಂಪೂರ್ಣವಾಗಿ ಅರ್ಥಮಾಡಿಕೊಳ್ಳುವ ಉದ್ದೇಶದಿಂದ ಹೊಸಪೇಟೆ ನಗರಸಭೆ ಮತ್ತು ಕೂಡ್ಲಿಗಿ ಪಟ್ಟಣ ಪಂಚಾಯಿತಿಯ ಸದಸ್ಯರನ್ನು ಗಣನೆಗೆ ತೆಗೆದುಕೊಂಡಿದ್ದೇನೆ. ೨೦೦೮-೨೦೦೯ರಲ್ಲಿ ಬಳ್ಳಾರಿ ಜಿಲ್ಲೆಯ ನಗರ ಸ್ಥಳೀಯ ಸಂಸ್ಥೆಗಳಿಗೆ ನಡೆದ ಚುನಾವಣೆಯಲ್ಲಿ ಹೊಸಪೇಟೆ ನಗರಸಭೆ ೩೫ ಸದಸ್ಯರನ್ನು ಮತ್ತು ೨೦ ಸದಸ್ಯರನ್ನು ಚುನಾಯಿತ ಪ್ರತಿನಿಧಿಗಳಾದರು. ನಗರಸಭೆ ೩೫ ಪ್ರತಿನಿಧಿಗಳಲ್ಲಿ ಪರಿಶಿಷ್ಟ ಜಾತಿ-೫, ಪರಿಶಿಷ್ಟ ಪಂಗಡ-೫, ಹಿಂದುಳಿದ ವರ್ಗ-೧೨, ಸಾಮಾನ್ಯ ವರ್ಗ-೧೩ ಇದರಲ್ಲಿ ೨೩ ಪುರುಷರು ಹಾಗೂ ಉಳಿದ ಸದಸ್ಯರು ೧೨ ಮಹಿಳಾ ಪ್ರತಿನಿಧಿಗಳು ಹಾಗೂ ಪಟ್ಟಣ ಪಂಚಾಯಿತಿ ೨೦ ಪ್ರತಿನಿಧಿಗಳಲ್ಲಿ ಪರಿಶಿಷ್ಟ ಜಾತಿ-೩, ಪರಿಶಿಷ್ಟ ಪಂಗಡ-೯, ಓಬಿಸಿ-೬ ಮತ್ತು ಸಾಮಾನ್ಯ-೨ ಪ್ರತಿನಿಧಿಗಳಿದ್ದಾರೆ. ಹೀಗೆ ನನ್ನ ಅಧ್ಯಯನದಲ್ಲಿ ನಗರಸಭೆ ಮತ್ತು ಪಟ್ಟಣ ಪಂಚಾಯಿತಿಗಳ ಸದಸ್ಯರನ್ನು ಸಂದರ್ಶಿಸಲಾಗಿದೆ. ನಗರ ಸ್ಥಳೀಯ ಸಂಸ್ಥೆಗಳ ಬಗ್ಗೆ ಅವರಿಗೆ ಇರುವ ಅಭಿಪ್ರಾಯಗಳನ್ನು ವಿವರಿಸಲಾಗಿದೆ. ಅಧ್ಯಯನದಲ್ಲಿ ಉಪಯೋಗಿಸಿರುವ ಅಂಕಿ-ಅಂಶಗಳು ಹೊಸಪೇಟೆ-ನಗರಸಭೆ ಮತ್ತು ಕೂಡ್ಲಿಗಿ-ಪಟ್ಟಣ ಪಂಚಾಯಿತಿಗೆ ಮಾತ್ರ ಸೀಮಿತವಾಗಿದೆ.

ಈ ಅಧ್ಯಯನವು ಚುನಾಯಿತ ಪ್ರತಿನಿಧಿಗಳ ಮತ್ತು ಸಾರ್ವಜನಿಕ ಇಬ್ಬರನ್ನು ಒಳಗೊಂಡಿರುವಂತಹದ್ದು. ವಿವಿಧ ರೀತಿಯ ಕೋಷ್ಟಕಗಳನ್ನು ಹೊಂದಿದ್ದು, ಮೊದಲನೆಯ ಕೋಷ್ಟಕವು ಚುನಾಯಿತ ಪ್ರತಿನಿಧಿಗಳು ಮತ್ತು ಕುಟುಂಬಗಳ ಸಾಮಾಜಿಕ ಮತ್ತು ಆರ್ಥಿಕ ವಿಷಯಗಳಿಗೆ ಸಂಬಂಧಪಟ್ಟಿದೆ. ಎರಡನೆಯ ಕೋಷ್ಟಕವು ಚುನಾಯಿತ ಪ್ರತಿನಿಧಿಗಳ ಆಯ್ಕೆ, ಶಿಕ್ಷಣ, ಸ್ಪರ್ಧೆ ಮತ್ತು ಗೆಲುವಿನ ವಿಷಯಗಳ ಕುರಿತಾಗಿದ್ದು ಹಾಗೂ ಕುಟುಂಬಗಳ ಸ್ಥಳೀಯ ಸಂಸ್ಥೆಗಳ ಅರಿವು ಮತ್ತು ಭಗವಹಿಸುವಿಕೆಯ ಕುರಿತಾಗಿದೆ. ಮೂರನೆಯ ಕೊಷ್ಟಕವು ಚುನಾಯಿತ ಪ್ರತಿನಿಧಿಗಳಿಗೆ ಸಂಬಂಧಪಟ್ಟ ಚುನಾಯಿತ ಕ್ಷೇತ್ರಗಳ ಬಗ್ಗೆ, ವಿವಿಧ ರಾಜಕೀಯ ಪಕ್ಷಗಳೊಂದಿಗೆ ಸದಸ್ಯರಿಗೆ ಇರುವ ಸಂಬಂಧ ಹಾಗೂ ಕುಟುಂಬಗಳು ಸ್ಥಳೀಯ ಮಟ್ಟದಲ್ಲಿ ಎದುರಿಸುತ್ತಿರುವ ವಿವಿದ ಸಮಸ್ಯೆಗಳಾದದ್ದು ಅಂತೆಯೇ, ನಾವು ಮಾಡುತ್ತಿರುವ ಅಧ್ಯಯನವು ಕರ್ನಾಟಕ ರಾಜ್ಯದ ನಗರ ಸ್ಥಳೀಯ ಸಂಸ್ಥೆಗಳಿಗೆ ಮಾತ್ರ ಸೀಮಿತವಾಗಿದೆ. ನಾಲ್ಕನೆ ಕೋಷ್ಟಕವು ಪ್ರತಿನಿಧಿಗಳ ಚುನಾಯಿತ ರಾಜಕೀಯದ ಅನುಭವಗಳ ಬಗ್ಗೆ ಹಾಗೂ ಕುಟುಂಬಗಳು ಚುನಾಯಿತ ಪ್ರತಿನಿಧಿಯನ್ನು ಆಯ್ಕೆ ಮಾಡಿಕೊಳ್ಳುವಾಗ ಪರಿಗಣಿಸಿರುವ ಅಂಶಗಳ ಕುರಿತಾಗಿದೆ. ಕೋಷ್ಟಕ ೫ನೆಯ ಚುನಾಯಿತ ಪ್ರತಿನಿಧಿಗಳು ತಮ್ಮ ಅಧಿಕಾರ ಅವಧಿಯಲ್ಲಿ ಅರಿವು ಮತ್ತು ಭಾಗವಹಿಸುವಿಕೆಯನ್ನು ಚರ್ಚಿಸಲಾಗಿದೆ. ಹಾಗೂ ಕುಟುಂಬಗಳು ಸ್ಥಳೀಯ ಮಟ್ಟದಲ್ಲಿ ಯಾವ ರಾಜಕೀಯ ಪಕ್ಷ ಅಧಿಕಾರದಲ್ಲಿರಬೇಕು. ಯಾವ ರಾಜಕೀಯ ಪಕ್ಷಕ್ಕೆ ಬೆಂಬಲ ನೀಡಲಾಗುತ್ತದೆ ಎನ್ನುವಂತಹದ್ದು, ಆರನೆಯ ಕೋಷ್ಟದಲ್ಲಿ ಪ್ರತಿನಿಧಿಗಳ ಸಾಮಾನ್ಯ ಸಭೆ/ಸಮಿತಿಯ

ಬಗ್ಗೆ ಚರ್ಚಿಸಲಾಗಿದೆ. ಹಾಗೂ ಕುಟುಂಬಗಳ ಮೂಲಭೂತ ಸೌಲಭ್ಯವಾದ ಕುಡಿಯುವ ನೀರಿನ ಕುರಿತು ಹೇಳಲಾಗಿದೆ. ಕೋಷ್ಟಕ–ಏಳನೆಯದರಲ್ಲಿ ಚುನಾಯಿತ ಪ್ರತಿನಿಧಿಗಳ ತೆರಿಗೆಯ ಬಗ್ಗೆ ಚರ್ಚಿಸಲಾಗಿದೆ. ಕುಟುಂಬಗಳು ಪ್ರಮುಖ ಮೂಲಭೂತ ಸೌಲಭ್ಯವಾದ ಶಿಕ್ಷಣ ಬಗ್ಗೆ ವ್ಯಕ್ತಪಡಿಸಿದ ಅಭಿಪ್ರಾಯಗಳನ್ನು ಹೇಳಲಾಗಿದೆ. ಕೊಷ್ಟಕ ಎಂಟರಲ್ಲಿ ಚುನಾಯಿತ ಪ್ರತಿನಿಧಿಗಳು ಕುಡಿಯುವ ನೀರಿನ ಕೆಲಸಗಳ ಬಗ್ಗೆ ಹಾಗೂ ಅವರ ಜವಾಬ್ದಾರಿಗಳ ಬಗ್ಗೆ ಇರುವ ಅಭಿಪ್ರಾಯಗಳನ್ನು ಒಳಗೊಂಡಿರುತ್ತದೆ. ಮತ್ತು ಕುಟುಂಬಗಳು ನೈರ್ಮಲ್ಯೀಕರಣ ಬಗೆಗೆ ಇರುವ ಅಭಿಪ್ರಾಯಗಳನ್ನು ವಿವರಿಸಲಾಗಿದೆ. ಕೋಷ್ಟಕ ೯ರಲ್ಲಿ ಚುನಾಯಿತ ಪ್ರತಿನಿಧಿಗಳು ಮೂಲವಶ್ಯಕತೆಗಳ ವಿಭಾಗಗಳಾದ ಶೌಚಾಲಯ, ಆರೋಗ್ಯ, ಶಿಕ್ಷಣ, ಬೀದಿ ದೀಪ ಮತ್ತು ಚರಂಡಿ ವ್ಯವಸ್ಥೆಗಳಲ್ಲಿ ಸಮಸ್ಯೆಗಳು ಎದುರಾದಾಗ ಅವುಗಳಿಗೆ ಪರಿಹಾರವನ್ನು ಕೊಡುವುದರ ಮೂಲಕ ಚುನಾಯಿತ ಪ್ರತಿನಿಧಿಗಳ ಅಭಿಪ್ರಾಯಗಳ ಬಗ್ಗೆ ಚರ್ಚಿಸಲಾಗಿದೆ ಮತ್ತು ಕುಟುಂಬಗಳು ಅಭಿವೃದ್ಧಿ ಭಾಗವಾಗಿರುವ ತೆರಿಗೆಯ ಬಗ್ಗೆ ಅಭಿಪ್ರಾಯಗಳನ್ನು ಚರ್ಚಿಸಲಾಗಿದೆ.

**ಕೋಷ್ಟಕ: ೬.೧.**

**ಸಂಶೋಧನಾ ಕ್ಷೇತ್ರದಲ್ಲಿನ ಒಟ್ಟು ಚುನಾಯಿತ ಸದಸ್ಯರ ಕುಟುಂಬಗಳ ಸಾಮಾಜಿಕ ಮತ್ತು ಆರ್ಥಿಕ ಹಿನ್ನೆಲೆ**

| ಕ್ರ.ಸಂ | ವಿವರಗಳು | ಕೂಡ್ಲಿಗಿ ಪಟ್ಟಣ ಪಂಚಾಯಿತಿ | | | | ಹೊಸಪೇಟೆ ನಗರ ಸಭೆ | | | |
|---|---|---|---|---|---|---|---|---|---|
| | | ಒಟ್ಟು ಸದ್ಯಸರು | | ಶೇಕಡವಾರು | | ಒಟ್ಟು ಸದ್ಯಸರು | | ಶೇಕಡವಾರು | |
| | | ಗಂಡು | ಹೆಣ್ಣು | ಗಂಡು | ಹೆಣ್ಣು | ಗಂಡು | ಹೆಣ್ಣು | ಗಂಡು | ಹೆಣ್ಣು |
| | ಕುಟುಂಬಗಳ ಒಟ್ಟು ಸದಸ್ಯರ ವಯಸ್ಸಿನ ವಿಂಗಡಣೆ | | | | | | | | |
| ೧ | ಐದು ವರ್ಷದ ಒಳಗಿನ ಮಕ್ಕಳು | ೫ | ೩ | ೬.೬ | ೪ | ೯ | ೭ | ೯.೫೭ | ೭.೪೪ |
| ೨ | ೬ ರಿಂದ ೧೦ ವರ್ಷದ ಒಳಗಿನ | ೧೨ | ೭ | ೧೬ | ೯.೩೩ | ೨೨ | ೬ | ೨೩.೪೦ | ೬.೩೮ |
| ೩ | ೧೧ ರಿಂದ ೧೯ ವರ್ಷದ ಒಳಗಿನ | ೮ | ೪ | ೧೦.೬೬ | ೫.೩೩ | ೩ | ೨ | ೪ | ೨.೧೨ |
| ೪ | ೨೦ ರಿಂದ ೩೦ ವರ್ಷದ ಒಳಗಿನ | ೯ | ೧೭ | ೧೨ | ೨೨.೬೬ | ೧೩ | ೧೫ | ೧೩.೮೨ | ೧೫.೯೫ |
| ೫ | ೩೧ಕ್ಕಿಂತ ಮೇಲ್ಪಟ್ಟವರು | ೬ | ೪ | ೮ | ೫.೩೩ | ೯ | ೮ | ೯.೫೭ | ೮.೫೧ |
| | ಒಟ್ಟು | ೪೦ | ೩೫ | ೫೩.೩೩ | ೪೬.೬೬ | ೫೯ | ೩೫ | ೬೨.೭೬ | ೩೭.೨೩ |

ಮೂಲ: ಕ್ಷೇತ್ರ ಕಾರ್ಯದ ಮಾಹಿತಿ

**ವಯಸ್ಸಿನ ವಿಂಗಡಣೆ**

ಎರಡು ನಗರ ಸ್ಥಳೀಯ ಸಂಸ್ಥೆಗಳ ವಾರ್ಡ್‌ವಾರು ಚುನಾಯಿತ ಸದಸ್ಯರ ಕುಟುಂಬಗಳಲ್ಲಿ ಕೂಡ್ಲಿಗಿ ಪಟ್ಟಣ ಪಂಚಾಯಿತಿಯಲ್ಲಿ ಒಟ್ಟು ೨೦ ಚುನಾಯಿತ ಸದಸ್ಯರಿದ್ದು ಅವರ ಕುಟುಂಬದಲ್ಲಿರುವ ಜನರ ವಯಸ್ಸಿನ ಪ್ರಮಾಣವು ಐದು ವರ್ಷದ ಒಳಗಿನ ಮಕ್ಕಳಲ್ಲಿ ಒಟ್ಟು ಶೇ. ೧೦.೬ರಷ್ಟು ಇದ್ದು ಅದರಲ್ಲಿ ಗಂಡು ಶೇ. ೬.೬.ರಷ್ಟು ಮತ್ತು ಹೆಣ್ಣು ಮಕ್ಕಳು ಶೇ. ೪ರಷ್ಟು, ಅದೇ ರೀತಿಯಾಗಿ ೬ರಿಂದ ೧೦ ವರ್ಷದ ಒಳಗಿನ ಒಟ್ಟು ಮಕ್ಕಳು ಶೇ. ೨೫.೩೩ರಷ್ಟು ಅದರಲ್ಲಿ ಗಂಡು ಶೇ. ೧೬ರಷ್ಟು ಮತ್ತು ಶೇ. ೯.೩೩ರಷ್ಟು ಹೆಣ್ಣು ಮಕ್ಕಳಾಗಿರುತ್ತಾರೆ. ಅಲ್ಲದೇ, ೧೧ ವರ್ಷದಿಂದ ೧೯ ವರ್ಷದ ಒಳಗಿನ ಮಕ್ಕಳು ಒಟ್ಟು ಶೇ. ೧೬ರಷ್ಟಾಗಿದು, ಅದರಲ್ಲಿ ಗಂಡು ಶೇ. ೧೦.೬೬ರಷ್ಟು ಮತ್ತು ಶೇ. ೫.೩೩ರಷ್ಟು ಹೆಣ್ಣುಮಕ್ಕಳಾಗಿದ್ದಾರೆ. ಅಂತೆಯೇ ೨೦ರಿಂದ ೩೦ ವರ್ಷದ ಒಳಗಿನ ಮಕ್ಕಳಾದ ಒಟ್ಟು ಶೇ. ೩೪.೬೬ರಷ್ಟಾಗಿದ್ದು ಅದರಲ್ಲಿ ಗಂಡು ಶೇ.೧೨ರಷ್ಟು ಮತ್ತು ಶೇ. ೨೨.೬೬ರಷ್ಟು ಹೆಣ್ಣು ಮಕ್ಕಳಾಗಿದ್ದಾರೆ. ಹಾಗೆಯೇ ೩೧ವರ್ಷಕ್ಕಿಂತ ಮೇಲ್ಪಟ್ಟವರ ಮಕ್ಕಳಲ್ಲಿ ಒಟ್ಟು ಶೇ. ೧೩.೩೩ರಷ್ಟಾಗಿದ್ದು ಅದರಲ್ಲಿ ಗಂಡು ಶೇ. ೮ರಷ್ಟು ಮತ್ತು ಶೇ. ೫.೩ರಷ್ಟು ಹೆಣ್ಣು ಮಕ್ಕಳಿರುವುದು ಅಧ್ಯಯನದಿಂದ ತಿಳಿದುಬಂದಿದೆ.

ಅದೇ ರೀತಿಯಾಗಿ ಹೊಸಪೇಟೆ ನಗರಸಭೆಯಲ್ಲಿ ಒಟ್ಟು ೩೫ ಚುನಾಯಿತ ಸದಸ್ಯರಿದ್ದು ಅವರ ಕುಟುಂಬದಲ್ಲಿರುವ ಜನರ ವಯಸ್ಸಿನ ಪ್ರಮಾಣವನ್ನು ನೋಡಿದಾಗ ಐದು ವರ್ಷದ ಒಳಗಿನ ಒಟ್ಟು ಮಕ್ಕಳಲ್ಲಿ ಶೇ. ೧೭.೦೨ರಷ್ಟಿದ್ದು ಅದರಲ್ಲಿ ಗಂಡು ಶೇ. ೯.೫೭ರಷ್ಟು ಮತ್ತು ಶೇ. ೭.೪೪ರಷ್ಟು ಹೆಣ್ಣು ಮಕ್ಕಳಾಗಿದ್ದಾರೆ. ಹಾಗೆಯೇ ೬ರಿಂದ ೧೦ ವರ್ಷದ ಒಟ್ಟು ಶೇ. ೨೮.೭೮ರಷ್ಟು ಜನರಲ್ಲಿ ಶೇ. ೨೩.೪೦ರಷ್ಟು ಗಂಡು ಮತ್ತು ಶೇ. ೬.೩೮ರಷ್ಟು ಹೆಣ್ಣು ಮಕ್ಕಳಾಗಿದ್ದಾರೆ. ಅಲ್ಲದೇ ೧೧ರಿಂದ ೧೯ ವರ್ಷದವರೂ ಒಟ್ಟು ಶೇ. ೫.೩೧ರಷ್ಟಾಗಿದ್ದು, ಅದರಲ್ಲಿ ಶೇ. ೪ರಷ್ಟು ಗಂಡು ಮತ್ತು ಶೇ. ೨.೧೨ರಷ್ಟು ಹೆಣ್ಣು ಮಕ್ಕಳಾಗಿದ್ದಾರೆ. ಅದೇ ತರಹ ೨೦ ವರ್ಷದಿಂದ ೩೦ವರ್ಷದವರಿಗೆ ಇರುವ ಒಟ್ಟು ಕುಟುಂಬದ ಸದಸ್ಯರಲ್ಲಿ ಶೇ. ೨೯.೭೮ರಷ್ಟರಲ್ಲಿ ಶೇ. ೧೩.೮೨ರಷ್ಟು ಗಂಡು ಹಾಗೂ ಶೇ. ೧೫.೯೨ರಷ್ಟು ಹೆಣ್ಣು ಸದಸ್ಯರಿದ್ದಾರೆ. ಅದಲ್ಲದೇ, ೩೧ ವರ್ಷಕ್ಕಿಂತ ಮೇಲ್ಪಟ್ಟವರಲ್ಲಿ ಒಟ್ಟು ಶೇ. ೧೮.೦೮ರಷ್ಟರಲ್ಲಿ ಶೇ. ೯.೫೭ರಷ್ಟು ಗಂಡು ಹಾಗೂ ಶೇ. ೮.೫೧ರಷ್ಟು ಹೆಣ್ಣು ಮಕ್ಕಳಿರುವುದು ಅಧ್ಯಯನದಿಂದ ತಿಳಿದುಬಂದಿದೆ.

ಈ ವಿಶ್ಲೇಷಣೆಯಿಂದ ಗಮನಿಸಬಹುದಾದ ಸಂಗತಿಯೆಂದರೆ ಸಾಪೇಕ್ಷವಾಗಿ ಮುಂದುವರಿದ ಹೊಸಪೇಟೆ ನಗರಸಭೆ ಕುಟುಂಬ ಜನರ ವಯಸ್ಸಗಿಂತ ತೀರಾ ಹಿಂದುಳಿದ ಪಟ್ಟಣ ಪಂಚಾಯಿತಿಯ ಕುಟುಂಬದ ಜನರ ವಯಸ್ಸಿನ ಪ್ರಮಾಣ ಕೆಳಮಟ್ಟದಲ್ಲಿರುವುದು ಅಂಕಿ ಅಂಶಗಳಿಂದ ತಿಳಿಯುತ್ತದೆ. ಅಂದರೆ ಜನರ ವಯಸ್ಸು ಸ್ಥಳೀಯ ಸಂಸ್ಥೆಗಳ ಚುನಾಯಿತ ಸದಸ್ಯರು ಸಮರ್ಥ ಆಡಳಿತವನ್ನು ನಡೆಸಲು ಮನೆಯವರ ಸಹಕಾರದಿಂದ ಚುನಾಯಿತ ಸದಸ್ಯರು ಮನೆಯ ಕೆಸಲಗಳಲ್ಲಿ ಹೆಚ್ಚಾಗಿ ಪಾಲ್ಗೊಳ್ಳದಂತೆ ತಮ್ಮ ರಾಜಕೀಯ ಕರ್ತವ್ಯವನ್ನು ವಾರ್ಡಿನ ಅಭಿವೃದ್ಧಿಗಾಗಿ ದುಡಿಯಲು ಸಹಾಯವಾಗುತ್ತದೆ. ಈ ಒಂದು ಅಂಶವು ಕೂಡ್ಲಿಗಿಯಲ್ಲಿ ಕೆಳಮಟ್ಟದಲ್ಲಿರುವುದರಿಂದ ಚುನಾಯಿತ ಸದಸ್ಯರು ಕೇವಲ ನಾಮಕಾವವಸ್ಥೆಯಾಗಿ ಜನಪ್ರತಿನಿಧಿಗಳಾಗಿದ್ದು ಅಭಿವೃದ್ಧಿ ಕಾರ್ಯಗಳಲ್ಲಿ ಪಾಲ್ಗೊಳ್ಳದೇ ಅನಿವಾರ್ಯದಿಂದ ತಮ್ಮ ಕೆಸಲಗಳನ್ನು ಮಾಡಿಕೊಳ್ಳುವುದರಿಂದ ಸ್ಥಳೀಯ ರಾಜಕೀಯದಲ್ಲಿ ಭಾಗವಹಿಸದೆ

ಇರುವುದರಿಂದ ಹಿಂದುಳಿಯಕ್ಕೆ ಕಾರಣವಾಗಿದೆ ಎಂದು ಹೇಳಬಹುದಾಗಿದೆ. ವಾರ್ಡಿನ ನಾಗರೀಕ ಸೌಲಭ್ಯಗಳಿಗೆ ಸಂಬಂಧಿಸಿದ ಕೊರತೆಗಳನ್ನು ಗುರುತಿಸುವುದರೊಂದಿಗೆ ನಗರಗಳನ್ನು ಸಬಲೀಕರಣಗೊಳಿಸುವಲ್ಲಿ ಪರಿಣಾಮಕಾರಿಯಾದ ಸೇವೆ ಸಹಕಾರ ಕುಟುಂಬದವರ ನಿರ್ವಹಣೆಯ ಅಗತ್ಯತೆ ಇರುವುದು ಕಂಡುಬಂದಿದೆ.

**ಚುನಾಯಿತ ಕುಟುಂಬಗಳ ಒಟ್ಟು ಸದಸ್ಯರ ಶಿಕ್ಷಣ**

| ಕ್ರ.ಸಂ | ವಿವರಗಳು | ಕೂಡ್ಲಿಗಿ ಪಟ್ಟಣ ಪಂಚಾಯಿತಿ – ಒಟ್ಟು ಸದ್ಯಸರು – ಗಂಡು | ಹೆಣ್ಣು | ಶೇಕಡವಾರು – ಗಂಡು | ಹೆಣ್ಣು | ಹೊಸಪೇಟೆ ನಗರ ಸಭೆ – ಒಟ್ಟು ಸದ್ಯಸರು – ಗಂಡು | ಹೆಣ್ಣು | ಶೇಕಡವಾರು – ಗಂಡು | ಹೆಣ್ಣು |
|---|---|---|---|---|---|---|---|---|---|
| | **ಚುನಾಯಿತ ಕುಟುಂಬಗಳ ಒಟ್ಟು ಸದಸ್ಯರ ಶಿಕ್ಷಣ** | | | | | | | | |
| ೧ | ಅನಕ್ಷರಸ್ಥರು | ೩ | ೦ | ೫.೩೫ | ೦ | ೨ | ೧ | ೨.೯೪ | ೧.೪೭ |
| ೨ | ಅಂಗನವಾಡಿ(ಪ್ಲೇಹೋಮ್) | ೨ | ೪ | ೩.೫೭ | ೭.೧೪ | ೫ | ೪ | ೭.೩೫ | ೫.೮೮ |
| ೩ | ಪೂರ್ವ ಪ್ರಾಥಮಿಕ ಶಿಕ್ಷಣ | ೫ | ೬ | ೮.೯೨ | ೧೦.೭೧ | ೭ | ೫ | ೧೦.೨೯ | ೭.೩೫ |
| ೪ | ಹಿರಿಯ ಪ್ರಾಥಾಮಿಕ ಶಾಲೆ | ೩ | ೫ | ೫.೩೫ | ೮.೯೨ | ೪ | ೩ | ೫.೮೮ | ೪.೪೧ |
| ೫ | ಪ್ರೌಡ ಶಿಕ್ಷಣ | ೩ | ೧ | ೫.೩೫ | ೧.೭೮ | ೫ | ೪ | ೭.೩೫ | ೫.೮೮ |
| ೬ | ಪದವಿ ಪೂರ್ವ, ಡಿಪ್ಲೋಮ | ೭ | ೫ | ೧೨.೫ | ೮.೯೨ | ೩ | ೨ | ೪.೪೧ | ೨.೯೪ |
| ೭ | ಬಿ.ಎ., ಬಿ.ಎಡ್ | ೬ | ೪ | ೧೬.೭೧ | ೭.೧೪ | ೯ | ೭ | ೧೩.೨೩ | ೧೦.೨೯ |
| ೮ | ಸ್ನಾತೋಕೊತ್ತರ | ೨ | ೦ | ೩.೫೭ | ೦ | ೨ | ೫ | ೨.೯೪ | ೭.೩೫ |
| | ಒಟ್ಟು | ೩೧ | ೨೫ | ೫೫.೩೫ | ೪೪.೬೪ | ೩೭ | ೩೧ | ೫೪.೪೧ | ೪೫.೫೮ |

**ಮೂಲ: ಕ್ಷೇತ್ರ ಕಾರ್ಯದ ಮಾಹಿತಿ**

ವಾರ್ಡ್‌ವಾರು ಚುನಾಯಿತ ಸದಸ್ಯರ ಕುಟುಂಬದಲ್ಲಿರುವ ಸದಸ್ಯರ ಶಿಕ್ಷಣದಮಟ್ಟವನ್ನು ನೋಡಿದಾಗ ಒಟ್ಟು ಅನಕ್ಷರಸ್ಥರಲ್ಲಿ ಪಟ್ಟಣ ಪಂಚಾಯಿತಿಯ ಶೇ. ೫.೩೫ರಷ್ಟು ಗಂಡು ಮಾತ್ರ, ನಗರಸಭೆಯಲ್ಲಿ ಶೇ. ೨.೯೪ರಷ್ಟು ಗಂಡು ಹಾಗೂ ಶೇ. ೧.೪೭ರಷ್ಟು ಹೆಣ್ಣು ಮಕ್ಕಳಾಗಿದ್ದಾರೆ. ಅಂತೆಯೇ ಅಂಗನವಾಡಿ (ಪ್ಲೇಹೊಮ್, ಎಲ್.ಕೆ.ಜಿ. ಯುಕೆಜಿ) ಓದುವವರಲ್ಲಿ ಪಟ್ಟಣ ಪಂಚಾಯಿತಿಯು ಒಟ್ಟು ಶೇ. ೧೦.೭೧ರಷ್ಟರಲ್ಲಿ ಶೇ. ೩.೫೭ರಷ್ಟು ಗಂಡು ಮತ್ತು ಶೇ. ೭.೧೪ರಷ್ಟು ಹೆಣ್ಣು ಮಕ್ಕಳಾಗಿದ್ದಾರೆ. ನಗಸಭೆಯಲ್ಲಿ ಒಟ್ಟು ಶೇ. ೧೩.೨೩ರಷ್ಟಾಗಿದ್ದು ಅದರಲ್ಲಿ ಶೇ. ೭.೩೫ರಷ್ಟು ಗಂಡು ಮತ್ತು ಶೇ. ೫.೮೮ರಷ್ಟು ಮಕ್ಕಳು ಅಂಗನವಾಡಿ (ಪ್ಲೇಹೊಮ್, ಎಲ್.ಕೆ.ಜಿ. ಯುಕೆಜಿ)ಯಲ್ಲಿ ಓದುತ್ತಿದ್ದಾರೆ. ಅದೇ ರೀತಿಯಾಗಿ ಪಟ್ಟಣ ಪಂಚಾಯಿತಿಯಲ್ಲಿ ಒಟ್ಟು ಪೂರ್ವ ಪ್ರಾಥರ್ಮಿಕ ಶಿಕ್ಷಣ ಓದುವವರಲ್ಲಿ ಶೇ. ೧೯.೬೪ರಲ್ಲಿ ಶೇ. ೮.೯೨ರಷ್ಟು ಗಂಡು ಮತ್ತು ಶೇ. ೧೦.೭೧ರಷ್ಟು ಹೆಣ್ಣು ಮಕ್ಕಳಾಗಿದ್ದಾರೆ. ಹಾಗೂ ನಗರಸಭೆಯಲ್ಲಿ ಒಟ್ಟು ಶೇ. ೧೭.೬೪ರಷ್ಟಾಗಿದ್ದು ಅದರಲ್ಲಿ ಶೇ. ೧೦.೨೯ರಷ್ಟು ಗಂಡು ಮತ್ತು ಶೇ. ೭.೩೫ರಷ್ಟು ಹೆಣ್ಣು ಮಕ್ಕಳು ಶಾಲೆಯನ್ನು ಕಲೆಯುತ್ತಿದ್ದಾರೆ. ಅದಲ್ಲದೇ ಪಟ್ಟಣ ಪಂಚಾಯಿತಿಯ ಒಟ್ಟು ಹಿರಿಯ ಪ್ರಾಥಮಿಕ ಶಾಲೆಯನ್ನು ಓದುವವರಲ್ಲಿ ಒಟ್ಟು

ಶೇ. ೧೪.೨೮ರಷ್ಟರಲ್ಲಿ ಶೇ. ೫.೩೫ರಷ್ಟು ಗಂಡು ಮತ್ತು ಶೇ. ೮.೯೨ರಷ್ಟು ಹೆಣ್ಣು ಮಕ್ಕಳಾಗಿದ್ದಾರೆ. ಹಾಗೂ ನಗರಸಭೆಯ ಒಟ್ಟು ಶೇ. ೧೦.೨೯ರಷ್ಟರಲ್ಲಿ ಶೇ. ೫.೮೮ರಷ್ಟು ಗಂಡು ಮತ್ತು ಶೇ. ೪.೪೧ರಷ್ಟು ಹೆಣ್ಣು ಮಕ್ಕಳು ಹಿರಿಯ ಪ್ರಾಥಮಿಕ ಶಾಲೆಯಲ್ಲಿ ಕಲಿತಿರುವುದು ತಿಳಿದು ಬಂದಿದೆ. ಹಾಗೂ ಪಟ್ಟಣ ಪಂಚಾಯಿತಿಯಲ್ಲಿ ಪ್ರೌಢಶಿಕ್ಷಣವನ್ನು ಕಲಿಯುವವರಲ್ಲಿ ಒಟ್ಟು ಶೇ. ೭.೧೪ರಷ್ಟರಲ್ಲಿ ಶೇ. ೫.೩೩ರಷ್ಟು ಗಂಡು ಮತ್ತು ಶೇ. ೧.೭ರಷ್ಟು ಹೆಣ್ಣು ಮಕ್ಕಳಾಗಿದ್ದಾರೆ. ಹಾಗೂ ನಗರಸಭೆಯಲ್ಲಿ ಒಟ್ಟು ಶೇ. ೧೩.೨೩ರಷ್ಟರಲ್ಲಿ ಶೇ. ೭.೩ರಷ್ಟು ಗಂಡು ಮತ್ತು ಶೇ. ೫.೮೮ರಷ್ಟು ಹೆಣ್ಣು ಮಕ್ಕಳು ಪ್ರೌಢಶಿಕ್ಷಣವನ್ನು ಕಲೆಯುತ್ತಿದ್ದಾರೆ. ಅಂತೆಯೇ ಪಟ್ಟಣ ಪಂಚಾಯಿತಿಯಲ್ಲಿ ಪದವಿಪೂರ್ವ, ಡಿಪ್ಲೋಮ ಶಿಕ್ಷಣವನ್ನು ಅಭ್ಯಾಸ ಮಾಡುವವರಲ್ಲಿ ಒಟ್ಟು ಶೇ. ೨೧.೪೨ರಷ್ಟು ಶೇ. ೧೨.೫ರಷ್ಟು ಗಂಡು, ಶೇ. ೮.೯೨ರಷ್ಟು ಹೆಣ್ಣು ಮಕ್ಕಳಾಗಿದ್ದಾರೆ. ಹಾಗೂ ನಗರಸಭೆಯಲ್ಲಿ ಒಟ್ಟು ಶೇ. ೭.೩೫ರಷ್ಟರಲ್ಲಿ ಶೇ. ೪.೪೧ರಷ್ಟು ಗಂಡು, ಶೇ. ೨.೯೪ರಷ್ಟು ಹೆಣ್ಣು ಮಕ್ಕಳು ಪ್ರೌಢಶಿಕ್ಷಣವನ್ನು ಕಲಿಯುತ್ತಿರುವುದು ತಿಳಿದುಬಂದಿದೆ. ಅದರಂತೆ, ಪಟ್ಟಣ ಪಂಚಾಯಿತಿಯಲ್ಲಿ ಪದವಿ, ಬಿ.ಎಡ್, ಶಿಕ್ಷಣವನ್ನು ಒಟ್ಟು ಶೇ. ೧೭.೮೫ರಷ್ಟರಲ್ಲಿ ಶೇ. ೧೦.೭೧ರಷ್ಟು ಗಂಡು, ಶೇ. ೭.೧೪ರಷ್ಟು ಹೆಣ್ಣು ಮಕ್ಕಳಾಗಿದ್ದಾರೆ. ಹಾಗೂ ನಗರಸಭೆಯಲ್ಲಿ ಒಟ್ಟು ಶೇ. ೨೩.೫೨ರಷ್ಟರಲ್ಲಿ ಶೇ. ೧೩.೨೩ರಷ್ಟು ಗಂಡು, ಶೇ. ೧೦.೨೯ರಷ್ಟು ಹೆಣ್ಣು ಮಕ್ಕಳು ಪದವಿಯಲ್ಲಿ ಓದುತ್ತಿರುವುದು ತಿಳಿಯಲಾಗಿದೆ. ಕೊನೆಯದಾಗಿ ಪಟ್ಟಣ ಪಂಚಾಯಿತಿಯಲ್ಲಿ ಸ್ನಾತಕೋತ್ತರ ಓದುತ್ತಿರುವವರಲ್ಲಿ ಒಟ್ಟು ಶೇ. ೧೦.೨೯ರಷ್ಟು ಗಂಡು ಮಕ್ಕಳು ಮಾತ್ರ ಕಲಿಯುತ್ತಿದ್ದಾರೆ. ಹಾಗೂ ನಗರಸಭೆಯಲ್ಲಿ ಒಟ್ಟು ಶೇ. ೧೦.೨೯ರಷ್ಟರಲ್ಲಿ ಶೇ. ೨.೯೪ರಷ್ಟು ಗಂಡು, ಶೇ. ೭.೩೫ರಷ್ಟು ಹೆಣ್ಣು ಮಕ್ಕಳು ಸ್ನಾತಕೋತ್ತರ ಅಧ್ಯಯನ ಮಾಡುತ್ತಿರುವುದು ಅಧ್ಯಯನಗಳಿಂದ ತಿಳಿದುಬಂದಿದೆ.

ಒಟ್ಟಾರೆಯಾಗಿ ಈ ವಿಶ್ಲೇಷಣೆಯಿಂದ ಗಮನಿಸಬಹುದಾದೆಂದರೆ ಸಾಪೇಕ್ಷವಾಗಿ ಮುಂದುವರಿದ ಹೊಸಪೇಟೆ ನಗರಸಭೆ ಚುನಾಯಿತ ಸದಸ್ಯರ ಕುಟುಂಬಗಳ ಜನರು ಮತ್ತು ತೀರಾ ಹಿಂದುಳಿದ ಪಟ್ಟಣ ಪಂಚಾಯಿತಿ ಚುನಾಯಿತ ಸದಸ್ಯರ ಕುಟುಂಬಗಳ ಜನರಿಗೆ ಹೋಲಿಕೆ ಮಾಡಿದಾಗ ಶಿಕ್ಷಣದ ಪ್ರಮಾಣವು ಸರಿಸುಮಾರು ಸಮನಾಗಿರುವುದು ತಿಳಿದುಬಂದಿದೆ. ಇಲ್ಲಿ ಸೂಕ್ಷ್ಮವಾಗಿ ತಿಳಿಯುವ ಸಂಗತಿಯೆಂದರೆ ಮುಂದುವರಿದ ಸ್ಥಳೀಯ ಸಂಸ್ಥೆ ಸದಸ್ಯರ ಮಕ್ಕಳಂತೆಯೇ ಹಿಂದುಳಿದ ಪಟ್ಟಣ ಪಂಚಾಯಿತಿಯ ಸದಸ್ಯರ ಕುಟುಂಬದಲ್ಲಿ ಸಹ ಮಕ್ಕಳನ್ನು ಅಂಗನವಾಡಿ ಮತ್ತು ಇಂಗ್ಲಿಷ್ ಶಾಲೆಗಳಿಗೆ ಕಳುಹಿಸುವುದರ ಜೊತೆಗೆ ಹೆಚ್ಚಿನ ಪ್ರಮಾಣದಲ್ಲಿ ಶಿಕ್ಷಣವನ್ನು ಕೊಡಿಸುವುದನ್ನು ನೋಡಿದಾಗ ಚುನಾಯಿತ ಸದಸ್ಯರ ಕೌಟುಂಬಿಕ ಶಿಕ್ಷಣದ ಸ್ಥಿತಿಯು ಸ್ವಲ್ಪ ಪ್ರಮಾಣದಲ್ಲಿ ಬದಲಾವಣೆಯನ್ನು ಹೊಂದಿರುವುದು ಅಧ್ಯಯನಗಳಿಂದ ತಿಳಿದುಬಂದಿದೆ. ಆದರೆ ತಮ್ಮ ಕುಟುಂಬ ಮಾತ್ರ ಬದಲಾವಣೆ ಹೊಂದಿದ್ದರೆ ಸಾಲದು ತೀರಾ ಹಿಂದುಳಿದ ಪಟ್ಟಣ ಪಂಚಾಯಿತಿಯು ಅಭಿವೃದ್ಧಿಯನ್ನು ಕಾಣಬೇಕಾದರೆ ನಗರದ ಸಾರ್ವಜನಿಕರಿಗೆ ಶಿಕ್ಷಣದ ಬಗ್ಗೆ ಅರಿವು ಮೂಡಿಸಿ ಅವರನ್ನು ಶಿಕ್ಷಿತರನ್ನಾಗಿ ಮಾಡಿದಾಗ ಮಾತ್ರ ತಮ್ಮ ಕುಟುಂಬದಂತೆ ಹಿಂದುಳಿದ ಪಟ್ಟಣವು ಮುಂದುವರಿಯಲು ಸಾಧ್ಯವಾಗುತ್ತದೆ. ಮಾನವ ಅಭಿವೃದ್ಧಿಯ ಪ್ರಮುಖ ಅಂಶವಾದ ಶಿಕ್ಷಣಕ್ಕೆ ಆದ್ಯತೆಯನ್ನಾಗಿ ಮಾಡಿ ಹೆಚ್ಚಿನ ಪ್ರಮಾಣದಲ್ಲಿ ಕೊಡಿಸುವ ತುರ್ತು ಅವಶ್ಯಕತೆಯಿದೆ ಎಂದು ಹೇಳಬಹುದಾಗಿದೆ.

| ಕ್ರಸಂ | ವಿವರಗಳು | ಕೂಡ್ಲಿಗಿ ಪಟ್ಟಣ ಪಂಚಾಯಿತಿ | | | | ಹೊಸಪೇಟೆ ನಗರ ಸಭೆ | | | |
|---|---|---|---|---|---|---|---|---|---|
| | | ಒಟ್ಟು ಸದ್ಯಸರು | | ಶೇಕಡವಾರು | | ಒಟ್ಟು ಸದ್ಯಸರು | | ಶೇಕಡವಾರು | |
| | | ಗಂಡು | ಹೆಣ್ಣು | ಗಂಡು | ಹೆಣ್ಣು | ಗಂಡು | ಹೆಣ್ಣು | ಗಂಡು | ಹೆಣ್ಣು |
| | ಚುನಾಯಿತ ಸದಸ್ಯರ ವೈವಾಹಿಕ ಸ್ಥಿತಿ | | | | | | | | |
| ೧ | ವಿವಾಹಿತ | ೧೧ | ೭ | ೪೭.೮೨ | ೩೦.೪೩ | ೨೩ | ೧೨ | ೫೧.೧೧ | ೨೬.೬೬ |
| ೨ | ಅವಿವಾಹಿತ | ೨ | ೦ | ೮.೬೯ | ೦ | ೭ | ೩ | ೧೫.೫೫ | ೬.೬೬ |
| ೩ | ವಿಧವೆ/ವಿಧುರ | ೦ | ೩ | ೦ | ೧೩.೦೪ | ೦ | ೦ | ೦ | ೦ |
| | ಒಟ್ಟು | ೧೩ | ೧೦ | ೫೬.೫೨ | ೪೩.೪೭ | ೩೦ | ೧೫ | ೬೬.೬೬ | ೩೩.೩೩ |

**ಮೂಲ: ಕ್ಷೇತ್ರ ಕಾರ್ಯದ ಮಾಹಿತಿ**

ವಾರ್ಡ್‌ವಾರು ಪಟ್ಟಣ ಪಂಚಾಯಿತಿಯ ಚುನಾಯಿತ ಸದಸ್ಯ ಕುಟುಂಬಗಳ ವೈವಾಹಿಕ ಸ್ಥಿತಿಗೆ ಸಂಬಂಧಿಸಿದಂತೆ ಒಟ್ಟು ಶೇ. ೭೮.೨೬ರಷ್ಟರಲ್ಲಿ ಶೇ. ೪೭.೮೨ರಷ್ಟು ಗಂಡು ಮತ್ತು ಶೇ. ೩೦.೪೩ರಷ್ಟು ಹೆಣ್ಣು ಮಕ್ಕಳು ವಿವಾಹಿತರಾಗಿದ್ದಾರೆ. ಹಾಗೂ ನಗರಸಭೆಯಲ್ಲಿ ಒಟ್ಟು ಶೇ. ೭೭.೭೭ರಷ್ಟರಲ್ಲಿ ಶೇ. ೫೧.೧೧ರಷ್ಟು ಗಂಡು ಮತ್ತು ಶೇ. ೨೬.೬೬ರಷ್ಟು ಹೆಣ್ಣು ಮಕ್ಕಳು ವಿವಾಹಿತರಾಗಿದ್ದಾರೆ. ಅದರಂತೆ ಪಟ್ಟಣ ಪಂಚಾಯಿತಿಗೆ ಸಂಬಂಧಿಸಿದಂತೆ ಒಟ್ಟು ಶೇ. ೮.೬೯ರಷ್ಟರಲ್ಲಿ ಗಂಡು ಮಕ್ಕಳು ಇನ್ನೂ ಅವಿವಾಹಿತರಾಗಿದ್ದಾರೆ ಹಾಗೂ ನಗರಸಭೆಗೆ ಸಂಬಂಧಿಸಿದಂತೆ ಒಟ್ಟು ಶೇ. ೨೨.೨೨ರಷ್ಟರಲ್ಲಿ ಶೇ. ೧೫.೫೫ರಷ್ಟು ಗಂಡು ಮತ್ತು ಶೇ. ೬.೬೬ರಷ್ಟು ಹೆಂಗಸರು ಅವಿವಾಹಿತರಾಗಿದ್ದಾರೆ. ಅಲ್ಲದೇ, ಪಟ್ಟಣ ಪಂಚಾಯಿತಿಯಲ್ಲಿ ಒಟ್ಟು ಶೇ. ೧೩.೦೪ರಷ್ಟು ಹೆಂಗಸರು ಮಾತ್ರ ವಿಧವೆಯಾಗಿರುವುದು ಅಧ್ಯಯನಗಳಿಂದ ತಿಳಿದುಬಂದಿದೆ. ಒಟ್ಟಾರೆಯಾಗಿ ಇಲ್ಲಿ ತಿಳಿಯಬಹುದಾದ ಸಂಗತಿಯೆಂದರೆ ತೀರಾ ಹಿಂದುಳಿದ ಪಟ್ಟಣ ಪಂಚಾಯಿತಿ ಚುನಾಯಿತ ಸದಸ್ಯರ ಕುಟುಂಬದ ಜನರಿಗಿಂತ ಸಾಪೇಕ್ಷವಾಗಿ ಮುಂದುವರಿದಿರುವ ನಗರಸಭೆ ಕುಟುಂಬದಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಗಂಡಸರು ವಿವಾಹವಾಗುವುದರೊಂದಿಗೆ ತಮ್ಮ ಮನೆಯ ಜವಾಬ್ದಾರಿಯನ್ನು ತಾವೇ ನೋಡಿಕೊಳ್ಳುತ್ತಾ ಅವರ ತಂದೆಯು ಸ್ಥಳೀಯ ಸಂಸ್ಥೆಯ ಆಡಳಿತದಲ್ಲಿ ನಿಯಮಿತವಾಗಿ ಪಾಲ್ಗೊಳ್ಳಲು ಸಹಕರಿಸುತ್ತಾರೆ. ನಗರದ ಚುನಾಯಿತ ಸದಸ್ಯನಿಗೆ ಆಡಳಿತದಲ್ಲಿ ಸಕ್ರೀಯವಾಗಿ ಭಾಗವಹಿಸುವುದರಿಂದ ವಾರ್ಡಿನ ನಾಗರೀಕರ ಸಮಸ್ಯೆಗಳಿಗೆ ಪ್ರತಿಕ್ರಿಯಿಸುವುದರಿಂದ ಬದಲಾವಣೆಗೆ ಉತ್ತಮ ಹೆಜ್ಜೆಯಾಗಿದೆ ಎಂದು ತಿಳಿಯಬಹುದಾಗಿದೆ. ಅಲ್ಲದೇ ವ್ಯವಹಾರಕ್ಕೆ ಸಂಬಂಧಿಸಿದ ಅನುಕೂಲ, ರಾಜಕೀಯ ನಾಯಕರೊಂದಿಗಿನ ಉತ್ತಮ ಸಂಬಂಧದಿಂದ ಹಲವು ಉದ್ಯೋಗ ಸೌಲಭ್ಯಗಳು, ವರಮಾನದ ಏರಿಕೆ, ಶಿಕ್ಷಿತರಾಗಿದ್ದರಿಂದ ವೈವಾಹಿಕ ಸ್ಥಿತಿಯು ಉತ್ತಮ ಮಟ್ಟದಲ್ಲಿ ಬದಲಾವಣೆಯನ್ನು ಹೊಂದಿರುವುದಾಗಿದೆ. ಆದರೆ ಪಟ್ಟಣ ಪಂಚಾಯಿತಿಯಲ್ಲಿ ಇದರ ಪ್ರಮಾಣವು ಕೆಳಮಟ್ಟದಲ್ಲಿದ್ದು ಹೆಚ್ಚಿನ ಬದಲಾವಣೆಯನ್ನು ಕಾಣದೇ ಹಿಂದುಳಿಯಲಿಕ್ಕೆ ಕಾರಣವಾಗಿದೆ ಎಂದು ಹೇಳಲಾಗಿದೆ.

| ಕ್ರಸಂ | ವಿವರಗಳು | ಕೂಡ್ಲಿಗಿ | | | | ಹೊಸಪೇಟೆ | | | |
|---|---|---|---|---|---|---|---|---|---|
| | | ಪಟ್ಟಣ ಪಂಚಾಯಿತಿ | | | | ನಗರ ಸಭೆ | | | |
| | | ಒಟ್ಟು ಸದ್ಯಸರು | | ಶೇಕಡವಾರು | | ಒಟ್ಟು ಸದ್ಯಸರು | | ಶೇಕಡವಾರು | |
| | | ಗಂಡು | ಹೆಣ್ಣು | ಗಂಡು | ಹೆಣ್ಣು | ಗಂಡು | ಹೆಣ್ಣು | ಗಂಡು | ಹೆಣ್ಣು |
| | | ಚುನಾಯಿತ ಸದಸ್ಯರ ಉದ್ಯೋಗದ ವಿವರ | | | | | | | |
| ೧ | ಕೂಲಿ | ೪ | ೧ | ೧೫.೩೮ | ೩.೮೪ | ೩ | ೦ | ೬.೮೧ | ೦ |
| ೨ | ವ್ಯವಸಾಯ | ೫ | ೦ | ೧೯.೨೩ | ೦ | ೯ | ೦ | ೨೦.೪೫ | ೦ |
| ೩ | ಮನೆಗೆಲಸ | ೦ | ೭ | ೦ | ೨೬.೯೨ | ೦ | ೧೨ | ೦ | ೨೭.೨೭ |
| ೪ | ಸರ್ಕಾರಿ ಉದ್ಯೋಗ | ೦ | ೦ | ೦ | ೦ | ೪ | ೨ | ೯.೦೯ | ೪.೫೪ |
| ೫ | ಖಾಸಗಿ/ವ್ಯಾಪಾರ | ೬ | ೩ | ೨೩.೦೭ | ೧೧.೫೩ | ೯ | ೫ | ೨೦.೪೫ | ೧೧.೩೬ |
| | ಒಟ್ಟು | ೧೫ | ೧೧ | ೫೭.೬೯ | ೪೨.೩೦ | ೨೫ | ೧೯ | ೫೬.೮೧ | ೪೩.೧೮ |

ಮೂಲ: ಕ್ಷೇತ್ರ ಕಾರ್ಯದ ಮಾಹಿತಿ

ವಾರ್ಡ್‌ವಾರು ಪಟ್ಟಣ ಪಂಚಾಯಿತಿಯ ಜನಪ್ರತಿನಿಧಿಗಳಿಗೆ ಸಂಬಂಧಿಸಿದಂತೆ ತಮ್ಮ ಜೀವನೋಪಾಯಕ್ಕಾಗಿ ಕುಟುಂಬಗಳ ಜನರು ಕೆಲಸ ಕಾರ್ಯಗಳಲ್ಲಿ ತೊಡಗಿರುತ್ತಾರೆ. ಕೂಡ್ಲಿಗಿ ಪಟ್ಟಣ ಪಂಚಾಯಿತಿಯಲ್ಲಿ ಒಟ್ಟು ಶೇ. ೧೯.೨೩ರಷ್ಟರಲ್ಲಿ ಶೇ. ೧೫.೩೮ರಷ್ಟು ಗಂಡಸರು ಮತ್ತು ಶೇ. ೩.೮೪ರಷ್ಟು ಹೆಂಗಸರು ತೊಡಗಿಸಿಕೊಂಡಿದ್ದಾರೆ. ಹಾಗೂ ನಗರಸಭೆಗೆ ಸಂಬಂಧಿಸಿದಂತೆ ಒಟ್ಟು ಶೇ. ೬.೮೧ರಷ್ಟು ಗಂಡಸರು ಮಾತ್ರ ಕೂಲಿಯನ್ನು ಆಧರಿಸಿಕೊಂಡಿದ್ದಾರೆ. ಅದರಂತೆ ಪಟ್ಟಣ ಪಂಚಾಯಿತಿಯಲ್ಲಿ ಒಟ್ಟು ಶೇ. ೧೯.೨೩ರಷ್ಟು ಪುರುಷರು ಮಾತ್ರ ವ್ಯವಸಾಯವನ್ನು ಅವಲಂಬಿಸಿದ್ದಾರೆ. ಹಾಗೂ ನಗರಸಭೆಯಲ್ಲಿ ಕೂಡ ಒಟ್ಟು ಶೇ. ೨೦.೪೫ರಷ್ಟು ಪುರುಷರು ಮಾತ್ರ ವ್ಯವಸಾಯದ ಚಟುವಟಿಕೆಯಲ್ಲಿ ತೊಡಗಿಸಿಕೊಂಡಿದ್ದಾರೆ. ಅದಲ್ಲದೇ, ಪಟ್ಟಣ ಪಂಚಾಯಿತಿಯಲ್ಲಿ ಒಟ್ಟು ಶೇ. ೨೬.೯೨ರಷ್ಟು ಜನರಲ್ಲಿ ಹೆಣ್ಣು ಮಕ್ಕಳು ಮಾತ್ರ ಮನೆಗೆಲಸವನ್ನು ಮಾಡಿ ತಮ್ಮ ಜೀವನ ನಡೆಸುತ್ತಿದ್ದು, ಹಾಗೂ ನಗರಸಭೆಯಲ್ಲಿಯೂ ಸಹ ಒಟ್ಟು ಶೇ. ೨೭.೨೭ರಷ್ಟು ಹೆಣ್ಣು ಮಕ್ಕಳು ಮಾತ್ರ ಮನೆಗೆಲಸವನ್ನು ಅವಲಂಬಿಸಿದ್ದಾರೆ. ಹಾಗೆಯೇ ಕೂಡ್ಲಿಗಿ ಪಟ್ಟಣ ಪಂಚಾಯಿತಿಗೆ ಸಂಬಂಧಿಸಿದಂತೆ ಯಾರು ಸರ್ಕಾರಿ ಕೆಲಸವನ್ನು ಪಡೆಯದಿರುವುದನ್ನು ನೋಡಬಹುದು ಹಾಗೂ ಹೊಸಪೇಟೆ ನಗರಸಭೆಯಲ್ಲಿ ಒಟ್ಟು ಶೇ. ೧೩.೬೩ರಷ್ಟರಲ್ಲಿ ಶೇ. ೯.೦೯ರಷ್ಟು ಗಂಡಸರು ಮತ್ತು ಶೇ. ೪.೫೪ರಷ್ಟು ಹೆಂಗಸರು ತಮ್ಮ ಜೀವನವನ್ನು ಸರ್ಕಾರಿ ಉದ್ಯೋಗದಲ್ಲಿ ತೊಡಗಿಸಿಕೊಂಡಿರುವುದಾಗಿ ತಿಳಿದಿದೆ. ಅಂತೆಯೇ ಪಟ್ಟಣ ಪಂಚಾಯಿತಿಯ ಒಟ್ಟು ಶೇ. ೩೪.೬೧ರಷ್ಟರಲ್ಲಿ ಶೇ. ೨೩.೦೭ರಷ್ಟು ಗಂಡಸರು ಮತ್ತು ಶೇ. ೧೧.೫೩ರಷ್ಟು ಹೆಂಗಸರು ತಮ್ಮ ಜೀವನೋಪಾಯಕ್ಕಾಗಿ ಖಾಸಗಿ/ ವ್ಯಾಪಾರದ ಮೇಲೆ ಅವಲಂಬಿಸಿದ್ದಾರೆ. ಹಾಗೂ ನಗರಸಭೆಗೆ ಸಂಬಂಧಪಟ್ಟಂತೆ ಒಟ್ಟು ಶೇ. ೩೧.೮೧ರಷ್ಟರಲ್ಲಿ ಶೇ. ೨೦.೪೫ರಷ್ಟು ಗಂಡಸರು ಮತ್ತು ಶೇ. ೧೧.೩೬ರಷ್ಟು ಹೆಂಗಸರು ತಮ್ಮ ಜೀವನ ನಿರ್ವಹಣೆಯನ್ನು ಖಾಸಗಿ/ವ್ಯಾಪಾರವನ್ನು ಮಾಡಿಕೊಂಡು ಹೋಗುತ್ತಿದ್ದಾರೆ. ಒಟ್ಟಾರೆಯಾಗಿ ಈ ವಿಶ್ಲೇಷಣೆಯಿಂದ ತಿಳಿದುಬರುವ ಅಂಶವೇಂದರೆ ಮೀಸಲಾತಿ ನೀತಿಯು ಬಹಳಷ್ಟು ಕೆಳಜಾತಿಗಳು

ಸರ್ಕಾರಿ ಸೇವೆಗಳನ್ನು ಸೇರಲು ಹಾಗೂ ಅವರ ಅಧಿಕಾರ ರಚನೆಯ ಶಿಖರವನ್ನು ತಲುಪುವಂತೆ ಖಾತ್ರಿಗೊಳಿಸಿಕೊಳ್ಳುವ ಪ್ರಯತ್ನ ಕೈಗೊಂಡರೂ ಇಂತಹ ಪ್ರಯತ್ನ ಅದರಲ್ಲಿನ ಒಂದು ಅಂಶವಾಗಿದೆ. ಅಷ್ಟೇ ಬಡತನದ ರೇಖೆಯ ಅಂಚಿನಲ್ಲಿರುವ ಬಹಳಷ್ಟು ಜನರು ಕಡಿಮೆ ಆದಾಯದ ಉದ್ಯೋಗಗಳಲ್ಲಿಯೇ ಒದ್ದಾಡುವುದು ಅವರ ಜೀವನ ಹೀನಾಯ ಸ್ಥಿತಿಯಲ್ಲಿದ್ದಾಗಿದೆ. ತೀರಾ ಹಿಂದುಳಿದ ಪಟ್ಟಣ ಪಂಚಾಯಿತಿಯ ಕುಟುಂಬದವರಿಗಿಂತ ಸಾಪೇಕ್ಷವಾಗಿ ಮುಂದುವರಿದ ನಗರಸಭೆಯ ಚುನಾಯಿತ ಸದಸ್ಯರ ಕುಟುಂಬದ ಸ್ಥಿತಿಗಳು ಸುಧಾರಣೆಯಲ್ಲಿರುವುದನ್ನು ಕಾಣಬಹುದಾಗಿದೆ. ರಾಜಕೀಯದಲ್ಲಿ ಪಾಲ್ಗೊಂಡಿದ್ದರೂ ಅವರು ಸರ್ಕಾರಿ ಉದ್ಯೋಗವನ್ನು ಪಡೆಯುವಲ್ಲಿ ಯಶಸ್ವಿಗೊಳ್ಳದೆ ಯಾವ ಬದಲಾವಣೆಯನ್ನು ಕಾಣದಿರುವುದು ತಿಳಿದುಬಂದಿದೆ. ಎರಡು ಸ್ಥಳೀಯ ಸಂಸ್ಥೆಗಳಲ್ಲಿರುವ ಚುನಾಯಿತ ಸದಸ್ಯರ ಕುಟುಂಬದಲ್ಲಿ ಉದ್ಯೋಗ ಸಂಬಂಧಿಸಿದಂತೆ ಕೂಡ್ಲಿಗಿಯಲ್ಲಿ ಹೆಚ್ಚಿನ ಪ್ರಮಾಣದಲ್ಲಿ ಹಿಂದೆ ಯಾವ ಕಸುಬುಗಳನ್ನು ಮಾಡುತ್ತಿದ್ದರೂ ಈಗಲೂ ಅವೇ ಕಸುಬುಗಳನ್ನು ಮುಂದುವರಿಸಿಕೊಂಡು ಹೋಗಿ ಯಾವ ಬದಲಾವಣೆಯನ್ನು ಕಾಣದೇ ಅವರ ಜೀವನ ತಕ್ಕಮಟ್ಟಿನಲ್ಲಿರುವುದನ್ನು ಕಾಣಬಹುದಾಗಿದೆ. ಅಲ್ಲದೇ ಅಧಿಕಾರದಿಂದ ಯಾವ ನಿರ್ಣಯಗಳನ್ನು ತೆಗೆದುಕೊಳ್ಳದೇ ಅಧಿಕಾರವು ನಾಮಕವಸ್ತೆಯಾಗಿರುವುದು ತಿಳಿದುಬಂದಿದೆ. ನಗರದ ಅಧಿಕಾರ ಚುಕ್ಕಾಣಿಯು ಕೆಲವರ ಕೈಯಲ್ಲಿ ಕೇಂದ್ರಿಕರಣಗೊಂಡಿದ್ದು ಕೆಳವರ್ಗದ ಚುನಾಯಿತ ಸದಸ್ಯರ ಕುಟುಂಬದ ಸ್ಥಿತಿಯು ಹೊರತಾಗದೆ ಪಟ್ಟಣದ ಅಭಿವೃದ್ಧಿಗೆ ಯಾವ ಸೇವೆ ಸಲ್ಲಿಸಿ ನಾಗರಿಕ ಬದುಕನ್ನು ಹೇಗೆ ಗುಣಮಟ್ಟದಲ್ಲಿಡಲು ಸಾಧ್ಯ? ಅಂದಹಾಗೆ ಯಜಮಾನನ ಕೈಯಲ್ಲಿ ಕುಟುಂಬದ ನಿರ್ವಹಣೆ ಕೇಂದ್ರಿಕರಣಗೊಂಡಿರುವುದರಿಂದ ಸ್ಥಳೀಯ ಸಂಸ್ಥೆಯಿಂದ ಯಾವ ಲಾಭವಿಲ್ಲದೆ ಅವರ ಅಧಿಕಾರವನ್ನು ನಡೆಸುವವರೆ ಬೇರೆಯವರಾಗಿದ್ದು ಕೂಲಿ ನಾಲಿ ಮಾಡಿಕೊಂಡು ತಮ್ಮ ಕುಟುಂಬದ ಜೀವನವನ್ನು ನಡೆಸಬೇಕಾದ ಸಂದರ್ಭ ಹೊದಗಿಬಂದ ಸಂಗತಿಯಾದ್ದರಿಂದ ಸ್ಥಳೀಯ ರಾಜಕೀಯದಲ್ಲಿ ಪಾಲ್ಗೋಳ್ಳದೆ ಇರುವುದರಿಂದ ಯಾವ ಅಭಿವೃದ್ಧಿಯನ್ನು ಕಾಣದೆ ಹಿಂದುಳಿದಿದೆ ಎಂದು ಹೇಳಲಾಗಿದೆ.

| ಕ್ರ.ಸಂ | ವಿವರಗಳು | ಕೂಡ್ಲಿಗಿ ಪಟ್ಟಣ ಪಂಚಾಯಿತಿ | | | | ಹೊಸಪೇಟೆ ನಗರ ಸಭೆ | | | |
|---|---|---|---|---|---|---|---|---|---|
| | | ಒಟ್ಟು ಸದ್ಯಸರು | | ಶೇಕಡವಾರು | | ಒಟ್ಟು ಸದ್ಯಸರು | | ಶೇಕಡವಾರು | |
| | | ಗಂಡು | ಹೆಣ್ಣು | ಗಂಡು | ಹೆಣ್ಣು | ಗಂಡು | ಹೆಣ್ಣು | ಗಂಡು | ಹೆಣ್ಣು |
| | ಚುನಾಯಿತ ಸದಸ್ಯರ ಕುಟುಂಬದ ಸದಸ್ಯರು ಹೊಂದಿರುವ ಸಂಘ ಸಂಸ್ಥೆಗಳ ಸದಸ್ಯತ್ವ | | | | | | | | |
| ೧ | ಸದಸ್ಯತ್ವ ಹೊಂದಿರುವ ಸದಸ್ಯರು | ೩ | ೮ | ೧೧.೫೩ | ೩೦.೭೬ | ೧೯ | ೧೨ | ೪೩.೧೮ | ೨೭.೨೭ |
| ೨ | ಸದಸ್ಯತ್ವ ಹೊಂದದೆ ಇರುವ ಸದಸ್ಯರು | ೧೨ | ೩ | ೪೬.೧೫ | ೧೧.೫೩ | ೬ | ೭ | ೧೩.೬೩ | ೧೫.೯೦ |
| | ಒಟ್ಟು | ೧೫ | ೧೧ | ೫೭.೬೯ | ೪೨.೩೦ | ೨೫ | ೧೯ | ೫೬.೮೧ | ೪೩.೧೮ |

ಮೂಲ: ಕ್ಷೇತ್ರ ಕಾರ್ಯದ ಮಾಹಿತಿ

ವಾರ್ಡ್‌ವಾರು ಚುನಾಯಿತ ಸದಸ್ಯರ ಕುಟುಂಬದಲ್ಲಿ ವಿವಿಧ ಸಂಘಗಳಲ್ಲಿ ಸದಸ್ಯತ್ವವನ್ನು ಹೊಂದಿರುವವರ ವಿವರಗಳನ್ನು ನೀಡಲಾಗಿದೆ. ಪಟ್ಟಣ ಪಂಚಾಯಿತಿಯಲ್ಲಿ ಒಟ್ಟು ಸದಸ್ಯತ್ವ ಹೊಂದಿರುವ ಜನರು ಶೇ. ೪೨.೩೦ರಷ್ಟರಲ್ಲಿ ಶೇ. ೧೧.೫೩ರಷ್ಟು ಗಂಡು ಮತ್ತು ಶೇ. ೩೦.೭೬ರಷ್ಟು ಹೆಂಗಸರಾಗಿದ್ದಾರೆ. ಹಾಗೂ ನಗರಸಭೆಗೆ ಸಂಬಂಧಿಸಿದಂತೆ ಒಟ್ಟು ಶೇ. ೭೦.೪೫ರಷ್ಟರಲ್ಲಿ ಶೇ. ೪೩.೧೮ರಷ್ಟು ಗಂಡಸರು ಮತ್ತು ಶೇ. ೨೭.೨೭ರಷ್ಟು ಹೆಂಗಸರು ಸದಸ್ಯತ್ವ ಹೊಂದಿರುವುದು ತಿಳಿದುಬಂದಿದೆ. ಅದಲ್ಲದೇ ಪಟ್ಟಣ ಪಂಚಾಯಿತಿಗೆ ಸಂಬಂಧಿಸಿದಂತೆ ಒಟ್ಟು ಯಾವ ಸದಸ್ಯತ್ವವನ್ನು ಹೊಂದದೇ ಇರುವ ಜನರು ಶೇ. ೫೭.೬೯ರಷ್ಟರಲ್ಲಿ ಶೇ. ೪೬.೧೫ರಷ್ಟು ಗಂಡಸರು ಮತ್ತು ಶೇ. ೧೧.೫೩ರಷ್ಟು ಹೆಂಗಸರಿದ್ದಾರೆ. ಹಾಗೂ ನಗರಸಭೆಗೆ ಸಂಬಂಧಿಸಿದಂತೆ ಒಟ್ಟು ಶೇ. ೨೯.೫೪ರಷ್ಟರಲ್ಲಿ ಶೇ. ೧೩.೬೩ರಷ್ಟು ಗಂಡಸರು ಮತ್ತು ಶೇ. ೧೫.೯೦ರಷ್ಟು ಹೆಂಗಸರು ನಗರದಲ್ಲಿ ಯಾವ ಸದಸ್ಯತ್ವವನ್ನು ಹೊಂದದೇ ಇರುವುದು ಅಧ್ಯಯನಗಳಿಂದ ತಿಳಿದುಬಂದಿದೆ.

ಒಟ್ಟಾರೆ ಈ ಅಂಕಿ ಅಂಶಗಳನ್ನು ನೋಡಿದಾಗ ತೀರಾ ಹಿಂದುಳಿದ ಪಟ್ಟಣ ಪಂಚಾಯಿತಿ ಚುನಾಯಿತ ಸದಸ್ಯರ ಕುಟುಂಬದ ಜನರಿಗಿಂತ ಸಾಪೇಕ್ಷವಾಗಿ ಮುಂದುವರಿದ ನಗರಸಭೆಯ ಕುಟುಂಬದ ಜನರು ಹೆಚ್ಚಿನ ಪ್ರಮಾಣದಲ್ಲಿ ಸಂಘ-ಸಂಸ್ಥೆಗಳಲ್ಲಿ ಸದಸ್ಯತ್ವವನ್ನು ಪಡೆದಿರುವುದು ಗಮನಿಸಲಾಗಿದೆ. ಅಂದರೆ ಮತ್ತೊಂದು ಅಂಶವೆಂದರೆ ಸ್ವಸಹಾಯ ಗುಂಪುಗಳು ಸಮಾನ ಆರ್ಥಿಕ ಹಿತಾಸಕ್ತಿಯನ್ನು ಹೊಂದಿರುವ ಮಹಿಳಾ ಗುಂಪುಗಳಾಗಿದ್ದು, ರಚನಾತ್ಮಕ ಆಡಳಿತದಲ್ಲಿ ತೊಡಗುತ್ತವೆ. ನಿರ್ಣಯ ಪ್ರಕ್ರಿಯೆಯಲ್ಲಿ ನೇರವಾಗಿ ಭಾಗವಹಿಸುತ್ತವೆ ಮತ್ತು ಸಮಾನತೆಯ ಆಧಾರದ ಮೇಲೆ ಸೌಲಭ್ಯಗಳನ್ನು ಹಂಚಿಕೊಳ್ಳುತ್ತವೆ. ಅಲ್ಲದೇ ಹಲವು ಸಂಘಗಳು ಸಾರ್ವಜನಿಕರನ್ನು ಆರ್ಥಿಕವಾಗಿ ಸ್ವಾವಲಂಬಿಗಳನ್ನಾಗಿ ಮಾಡುತ್ತವೆ. ಈ ರೀತಿಯಲ್ಲಿ ಸಂಘ-ಸಂಸ್ಥೆಗಳ ಸದಸ್ಯತ್ವವು ಮುಂದಿನ ಸ್ಥಳೀಯ ರಾಜಕೀಯಕ್ಕೆ ಪಾದಾರ್ಪಣೆ ಮಾಡಲು ಅನುವು ಮಾಡಿಕೊಡುತ್ತದೆ. ಅಲ್ಲದೇ ಹೆಚ್ಚಿನ ಜನರು ಸದಸ್ಯತ್ವ ಪಡೆಯುವುದರ ಜೊತೆಗೆ ನಾಗರೀಕರ ಸಮಸ್ಯೆ ಬೇಕು-ಬೇಡಗಳನ್ನು ತಿಳಿಯುವಲ್ಲಿ ಪಾಲ್ಗೊಂಡು ಚುನಾಯಿತ ಸದಸ್ಯರಿಗೆ ವಿವಿಧ ಮುಖಗಳಲ್ಲಿ ಸಹಕಾರ ನೀಡಲಾಗುತ್ತದೆ. ಪಟ್ಟಣ ಪಂಚಾಯಿತಿಯು ಇಂತಹ ಬೆಳವಣಿಗೆಯಲ್ಲಿ ಕೆಳಮಟ್ಟದಲ್ಲಿದ್ದು ಅದು ಬದಲಾವಣೆಯನ್ನು ಕಾಣದೇ ಹೆಚ್ಚಿನ ಸಂಖ್ಯೆಯಲ್ಲಿ ಚುನಾಯಿತ ಸದಸ್ಯರು ಅನಕ್ಷರಸ್ಥರಾಗಿದ್ದು ಅವರ ಕುಟುಂಬದ ಜನರು ಅಕ್ಷರ ಜ್ಞಾನದ ಬಗ್ಗೆ ಹೆಚ್ಚಿನ ಕಾಳಜಿ ವಹಿಸದೆ ತಮ್ಮ ಜೀವನೋಪಾಕ್ಕಾಗಿ ಕೂಲಿ, ವ್ಯವಹಾರ ಮತ್ತು ವ್ಯವಸಾಯವನ್ನು ಅವಲಂಬಿಸಿ ತಮ್ಮ ಮೂಲಭೂತ ಸೌಲಭ್ಯಗಳನ್ನು ಸಮರ್ಥವಾಗಿ ನಿಭಾಯಿಸಿಕೊಳ್ಳಲು ಆಗದೇ ಪಟ್ಟಣ ಪಂಚಾಯಿತಿ ಮೇಲೆ ಅವಲಂಬನೆಯಾಗಿ ಪಂಚಾಯಿತಿಯು ನಿಯಮಿತ ಸೇವೆಗಳನ್ನು ನೀಡದೆ ಸಾರ್ವಜನಿಕರು ಅತಂತ್ರರಾಗಿ ಹಿಂದುಳಿಯಲಿಕ್ಕೆ ಕಾರಣರಾಗಿದ್ದಾರೆಯೆಂದು ತಿಳಿಯಲಾಗಿದೆ. ಅವರ ಜೀವನ ಮಟ್ಟವನ್ನು ಸುಧಾರಿಸಲು ವಿವಿಧ ತರಬೇತಿಯನ್ನು ನೀಡುವ ಅಗತ್ಯತೆಯಿದೆ ಎಂದು ಹೇಳಬಹುದಾಗಿದೆ.

| ಕ್ರ.ಸಂ | ವಿವರಗಳು | ಕೂಡ್ಲಿಗಿ ಪಟ್ಟಣ ಪಂಚಾಯಿತಿ | | | | ಹೊಸಪೇಟೆ ನಗರ ಸಭೆ | | | |
|---|---|---|---|---|---|---|---|---|---|
| | | ಒಟ್ಟು ಸದ್ಯಸರು | | ಶೇಕಡವಾರು | | ಒಟ್ಟು ಸದ್ಯಸರು | | ಶೇಕಡವಾರು | |
| | | ಗಂಡು | ಹೆಣ್ಣು | ಗಂಡು | ಹೆಣ್ಣು | ಗಂಡು | ಹೆಣ್ಣು | ಗಂಡು | ಹೆಣ್ಣು |
| | ಚುನಾಯಿತ ಸದಸ್ಯರ ಕುಟುಂಬದ ಸದಸ್ಯರು ಹೊಂದಿರುವ ಸದ್ಯಸರ ವರಮಾನ | | | | | | | | |
| ೧ | ೫೦೦೧–೧೦,೦೦೦ | ೨ | ೮ | ೭.೬೯ | ೩೦.೭೬ | ೫ | ೫ | ೧೧.೩೬ | ೧೧.೩೬ |
| ೨ | ೧೦,೦೦೧–೨೦,೦೦೦ | ೭ | ೩ | ೨೬.೯೨ | ೧೧.೫೩ | ೧೦ | ೪ | ೨೨.೭೨ | ೯.೦೯ |
| ೩ | ೨೦,೦೦೧–೩೦,೦೦೦ | ೬ | ೦ | ೨೩.೦೭ | ೦ | ೫ | ೭ | ೧೧.೩೬ | ೧೫.೯೦ |
| ೪ | ೩೦ **Above** | – | – | – | – | ೮ | ೦ | ೧೮.೧೮ | ೦ |
| | ಒಟ್ಟು | ೧೫ | ೧೧ | ೫೭.೬೯ | ೪೨.೩೦ | ೨೮ | ೧೬ | ೬೩.೬೩ | ೩೬.೩೬ |

**ಮೂಲ: ಕ್ಷೇತ್ರ ಕಾರ್ಯದ ಮಾಹಿತಿ**

ವಾರ್ಡ್‌ವಾರು ಚುನಾಯಿತ ಸದಸ್ಯರ ಕುಟುಂಬದ ಜನರ ವರಮಾನವನ್ನು ತೋರಿಸಲಾಗಿದೆ. ಪಟ್ಟಣ ಪಂಚಾಯಿತಿಗೆ ಸಂಬಂಧಿಸಿದಂತೆ ೫೦೦೧ರಿಂದ ೧೦,೦೦೦ ರೂ.ಗಳನ್ನು ಹೊಂದಿರುವ ಒಟ್ಟು ಕುಟುಂಬಗಳಲ್ಲಿ ಶೇ. ೩೮.೪೬ರಷ್ಟರಲ್ಲಿ ಶೇ. ೭.೬೯ರಷ್ಟು ಗಂಡು ಮತ್ತು ಶೇ. ೩೦.೭೬ರಷ್ಟು ಹೆಂಗಸರಾಗಿದ್ದಾರೆ. ಹಾಗೂ ನಗರಸಭಗೆ ಸಂಬಂಧಿಸಿದಂತೆ ಒಟ್ಟು ಶೇ. ೨೨.೭೨ರಷ್ಟರಲ್ಲಿ ಶೇ. ೧೧.೩೬ರಷ್ಟು ಗಂಡಸರು ಮತ್ತು ಶೇ. ೧೧.೩೬ರಷ್ಟು ಹೆಂಗಸರಾಗಿದ್ದಾರೆ. ಅದರಂತೆ ೧೦,೦೦೧ರಿಂದ ೨೦,೦೦೦ ರೂಪಾಯಿಗಳನ್ನು ಪಡೆಯುವವರಲ್ಲಿ ಪಟ್ಟಣ ಪಂಚಾಯಿತಿಗೆ ಸಂಬಂಧಿಸಿದಂತೆ ಒಟ್ಟು ಶೇ. ೩೮.೪೬ರಷ್ಟರಲ್ಲಿ ಶೇ. ೨೬.೯೨ರಷ್ಟು ಗಂಡಸರು ಮತ್ತು ಶೇ. ೧೧.೫೩ರಷ್ಟು ಹೆಂಗಸರಾಗಿದ್ದಾರೆ. ಹಾಗೂ ನಗರಸಭೆಗೆ ಸಂಬಂಧಿಸಿದಂತೆ ಒಟ್ಟು ಶೇ. ೩೧.೮೧ರಷ್ಟರಲ್ಲಿ ಶೇ. ೨೨.೭೨ರಷ್ಟು ಗಂಡಸರು ಮತ್ತು ಶೇ. ೯.೦೯ರಷ್ಟು ಹೆಂಗಸರು ವರಮಾನವನ್ನು ಹೊಂದಿದವರಾಗಿದ್ದಾರೆ. ಅಲ್ಲದೇ ಪಟ್ಟಣ ಪಂಚಾಯಿತಿಯಲ್ಲಿ ಒಟ್ಟು ೨೦ಸಾವಿರದಿಂದ ೩೦ ಸಾವಿರವರೆಗೆ ಶೇ. ೨೩.೦೭ರಷ್ಟು ಗಂಡಸರಿದ್ದಾರೆ ಹಾಗೂ ನಗರಸಭೆಯಲ್ಲಿ ಒಟ್ಟು ಶೇ. ೨೭.೨೭ರಷ್ಟರಲ್ಲಿ ಶೇ. ೧೧.೩೬ರಷ್ಟು ಗಂಡಸರು ಮತ್ತು ಶೇ. ೫.೯೦ರಷ್ಟು ಹೆಂಗಸರು ೨೦ ಸಾವಿರದಿಂದ ೩೦ ಸಾವಿರದವರೆಗೆ ವರಮಾವನ್ನು ಹೊಂದಿದ್ದಾರೆ. ಹಾಗೆಯೇ ೨೦ಸಾವಿರಕ್ಕಿಂತ ಹೆಚ್ಚಿನ ವರಮಾನವನ್ನು ಪಟ್ಟಣ ಪಂಚಾಯಿತಿಯ ವ್ಯಾಪ್ತಿಯಲ್ಲಿ ಹೊಂದದೇ ಇರುವ ಜನರು ಇದ್ದರೆ ನಗರಸಭೆಯಲ್ಲಿ ಈ ಮೊತ್ತವನ್ನು ಕೇವಲ ಶೇ. ೧೮.೧೮ರಷ್ಟು ಗಂಡಸರು ಮಾತ್ರ ಹೊಂದಿರುವುದು ಅಧ್ಯಯನಗಳಿಂದ ತಿಳಿದುಬಂದಿದೆ.

ಒಟ್ಟಾರೆಯಾಗಿ ಈ ವಿಶ್ಲೇಷಣೆಯಿಂದ ತಿಳಿಯಬಹುದಾದ ಸಂಗತಿಯೆಂದರೆ ತೀರಾ ಹಿಂದುಳಿದ ಪಟ್ಟಣ ಪಂಚಾಯಿತಿ ಚುನಾಯಿತ ಸದಸ್ಯರ ಕುಟುಂಬದ ಜನರಗಿಂತ ಸಾಪೇಕ್ಷವಾಗಿ ಮುಂದುವರಿದ ನಗರಸಭೆ ಚುನಾಯಿತ ಸದಸ್ಯರ ಕುಟುಂಬದ ಜನರು ವರಮಾನವನ್ನು ಹೆಚ್ಚಿನ ಪ್ರಮಾಣದಲ್ಲಿ ಹೊಂದಿರುವುದಾಗಿದೆ. ಅಲ್ಲದೇ ಪಟ್ಟಣ ಪಂಚಾಯಿತಿಯಲ್ಲಿ ಹೆಂಗಸರಗಿಂತ ಕೂಲಿ, ಮನೆಗೆಲಸ

ಮಾಡಿಕೊಂಡು ನಗರಸಭೆ ಕುಟುಂಬದವರಿಗಿಂತ ಹೆಚ್ಚಿನ ಪ್ರಮಾಣದಲ್ಲಿ ವರಮಾನವನ್ನು ಹೊಂದಿರುವುದು ಕಂಡುಬಂದಿದೆ. ಕುಟುಂಬದಲ್ಲಿ ವರಮಾನ ವೃದ್ಧಿಯು ಅಭಿವೃದ್ಧಿಯ ಒಂದು ಮಾನದಂಡವಾಗಿದೆ. ಸ್ಥಳೀಯ ಆಡಳಿತದಲ್ಲಿ ಹೆಚ್ಚಿನ ಮಟ್ಟದಲ್ಲಿ ಭಾಗವಹಿಸಿ ಅಭಿವೃದ್ಧಿಯನ್ನು ತರುವ ಬದಲು ತಮ್ಮ ಘನತೆಯ ಜೀವನವನ್ನು ನಡೆಸಲು ಮನೆಯಲ್ಲಿ ದುಡಿಯುವ ವರ್ಗದ ಕೊರತೆಯಿಂದ ವರಮಾನ ಸಂಗ್ರಹಣೆಯ ಕಡೆಗೆ ಗಮನ ಹರಿಸುವುದರಿಂದ ತಮ್ಮ ಕರ್ತವ್ಯವನ್ನು ನಿಯಮಿತವಾಗಿ ನಿಭಾಯಿಸದೆ ಇರುವುದರಿಂದ ಯಾವ ಅಭಿವೃದ್ಧಿಯನ್ನು ಕಾಣದೇ ಹಿಂದುಳಿದಿದೆ ಎಂದು ಹೇಳಬಹುದಾಗಿದೆ. ಹಾಗಾಗಿ ಪಟ್ಟಣ ಪಂಚಾಯಿತಿಯ ಕುಟುಂಬದ ಹೆಂಗಸರು ಹೆಚ್ಚಿನ ಪ್ರಮಾಣದಲ್ಲಿ ಆದಾಯವನ್ನು ಹೊಂದಿದ್ದು, ನಗರಸಭೆಯ ಸದಸ್ಯರ ಕುಟುಂಬದಲ್ಲಿ ಅದರ ಪ್ರಮಾಣ ಕೆಳಮಟ್ಟದಲ್ಲಿರುವುದು ಅಧ್ಯಯನಗಳಿಂದ ತಿಳಿದುಬಂದಿದೆ. ಆದರೆ ಕೂಲಿ ಮತ್ತು ಮನೆಗೆಲಸಗಳಲ್ಲಿ ಇದ್ದು ಯಾವ ಸರ್ಕಾರಿ ಉದ್ಯೋಗದಲ್ಲಿ ಪಾಲ್ಗೊಳ್ಳದೇ ಅನಕ್ಷರತೆಯ ಪ್ರಮಾಣ ಹೆಚ್ಚಾಗಿರುವುದರಿಂದ ಬೇರೆ ದಾರಿಯಿಲ್ಲದೇ ಇಂತಹ ಕೆಲಸ ಕಾರ್ಯಗಳಲ್ಲಿ ದುಡಿದು ತಮ್ಮ ಜೀವನದಲ್ಲಿ ಯಾವ ಬದಲಾವಣೆಯನ್ನು ಕಾಣದೇ ಬದುಕಿರುವುದಕ್ಕಾಗಿ ಜೀವನ ಮಾಡಬೇಕಾದ ಪರಿಸ್ಥಿತಿ ಬಂದಿದೆ ಎಂದು ತಮ್ಮ ಅಳಲನ್ನ ತೊಡಿಕೊಳ್ಳುತ್ತಾರೆ.

**೬.೨. ನಗರವಾರು ಸಂದರ್ಶನ ಮಾಡಿದ ಚುನಾಯಿತ ಪ್ರತಿನಿಧಿಗಳ ಸಾಮಾಜಿಕ ಮತ್ತು ಆರ್ಥಿಕ ಹಿನ್ನೆಲೆ**

ಪ್ರತಿನಿಧಿಗಳ ಜಾತಿ, ವಯಸ್ಸು, ಲಿಂಗ, ಶಿಕ್ಷಣ, ಉದ್ಯೋಗ, ಕುಟುಂಬದ ವರಮಾನ(ಮಾಸಿಕ), ಧರ್ಮ, ವಾಸಿಸುವ ಮನೆ ಹಾಗೂ ಭೂ ಹಿಡುವಳಿ ಮತ್ತು ಶೌಚಾಲಯ ಬಗ್ಗೆ ಈ ಭಾಗದಲ್ಲಿ ವಿಶ್ಲೇಷಿಸಲಾಗಿದೆ.

**ಜಾತಿವಾರು ಪ್ರಾತಿನಿಧ್ಯ**

| **ಚುನಾಯಿತ ಪ್ರತಿನಿಧಿಗಳ ಸಾಮಾಜಿಕ ಮತ್ತು ಆರ್ಥಿಕ ಅಂಶಗಳು** | **ಹೊಸಪೇಟೆ ನಗರ ಸಭೆ** | | **ಕೂಡ್ಲಿಗಿ ಪಟ್ಟಣಪಂಚಾಯಿತಿ** | |
|---|---|---|---|---|
| **ಜಾತಿ** | **ಸಂಖ್ಯೆಗಳು** | **ಶೇಕಡವಾರು** | **ಸಂಖ್ಯೆಗಳು** | **ಶೇಕಡವಾರು** |
| ಪರಿಶಿಷ್ಟ ಜಾತಿ | ೫ | ೧೪.೨೮ | ೩ | ೧೫.೦೦ |
| ಪರಿಶಿಷ್ಟ ಪಂಗಡ | ೫ | ೧೪.೨೮ | ೯ | ೪೫.೦೦ |
| ಹಿಂದುಳಿದ ವರ್ಗ | ೧೨ | ೩೪.೨೮ | ೬ | ೩೦.೦೦ |
| ಸಾಮಾನ್ಯ ವರ್ಗ | ೧೩ | ೩೭.೧೪ | ೨ | ೧೦.೦೦ |
| **ಒಟ್ಟು** | ೩೫ | ೧೦೦.೦೦ | ೨೦ | ೧೦೦.೦೦ |

**ಮೂಲ: ಕ್ಷೇತ್ರ ಕಾರ್ಯದ ಮಾಹಿತಿ**

ನಗರ ಸ್ಥಳೀಯ ಸಂಸ್ಥೆಗಳಾದ ನಗರಸಭೆ ಸದಸ್ಯರು ಶೇ. ೧೪.೨೮ ಪರಿಶಿಷ್ಟ ಜಾತಿ, ಶೇ. ೧೪.೨೮ ಪರಿಶಿಷ್ಟ ಪಂಗಡ ಶೇ. ೩೪.೨೮ ಹಿಂದುಳಿದ ವರ್ಗ ಹಾಗೂ ಉಳಿದ ಶೇ. ೩೭.೧೪ರಷ್ಟು ಸದಸ್ಯರು ಸಾಮಾನ್ಯ ಜಾತಿಗೆ ಸೇರಿದವರಾಗಿದ್ದಾರೆ. ಶೇ. ೩೪.೨೮ ಮಹಿಳಾ

ಸದಸ್ಯೆಯರು ಈ ಮೂರು ಜಾತಿಗೆ ಸೇರಿದವರಾಗಿದ್ದಾರೆ. ಹಾಗೆಯೇ ಕೂಡ್ಲಿಗಿ ಪಟ್ಟಣ ಪಂಚಾಯಿತಿಯಲ್ಲಿ ಪರಿಶಿಷ್ಟ ಜಾತಿಗೆ ಸೇರಿದವರು ಶೇ. ೧೫ರಷ್ಟು ಪ್ರತಿನಿಧಿಗಳಿದ್ದಾರೆ. ಪರಿಶಿಷ್ಟ ಪಂಗಡಕ್ಕೆ ಸೇರಿದವರು ಶೇ. ೪೫ರಷ್ಟು ಪ್ರತಿನಿಧಿಗಳು, ಹಿಂದುಳಿದ ಜಾತಿಗೆ ಸೇರಿದವರು ಶೇ. ೩೦ರಷ್ಟು ಪ್ರತಿನಿಧಿಗಳು ಹಾಗೂ ಉಳಿದ ಸಾಮಾನ್ಯ ಜಾತಿಗೆ ಸೇರಿದ ಶೇ. ೧೦ರಷ್ಟು ಸದಸ್ಯರುಗಳಿದ್ದಾರೆ. ಶೇ. ೩೫ರಷ್ಟು ಮಹಿಳಾ ಪ್ರತಿನಿಧಿಗಳಿದ್ದಾರೆ. ಪ್ರತಿನಿಧಿಗಳು ಮೀಸಲಾತಿ ಸಿದ್ಧಾಂತದ ಪ್ರಕಾರ ಆಯ್ಕೆಯಾಗಿರುತ್ತಾರೆ. ಹೆಚ್ಚಿನ ಸಂಖ್ಯೆಯಲ್ಲಿ ಹೊಸಪೇಟೆ ನಗರಸಭೆಯಲ್ಲಿ ಸಾಮಾನ್ಯ ಜಾತಿಗೆ ಸೇರಿದ ಪ್ರತಿನಿಧಿಗಳು ಬಂದಿದ್ದು ಹಾಗೂ ಕೂಡ್ಲಿಗಿ ಪಟ್ಟಣ ಪಂಚಾಯಿತಿಯಲ್ಲಿ ಪರಿಶಿಷ್ಟ ಪಂಗಡ ಜಾತಿಗೆ ಸೇರಿದ ಪ್ರತಿನಿಧಿಗಳು ಬಂದವರಾಗಿದ್ದಾರೆ. ನಗರಸಭೆಯಿಂದ ೧೩(೩೭.೧೪) ಸಾಮಾನ್ಯ ಜಾತಿಯವರು ಮತ್ತು ಪಟ್ಟಣ ಪಂಚಾಯಿತಿಯಲ್ಲಿ ೯(೪೫.೦೦)ರಷ್ಟು ಪರಿಶಿಷ್ಟ ಪಂಗಡದ ಜಾತಿಯಿಂದ ಆಯ್ಕೆಯಾಗಿರುತ್ತಾರೆ. ಒಟ್ಟಾರೆಯಾಗಿ ಹಿಂದುಳಿದ ಪಟ್ಟಣ ಪಂಚಾಯಿತಿಯಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಕೆಳಜಾತಿಗೆ ಸೇರಿದವರು ಚುನಾಯಿತರಾಗಿದ್ದುಕೊಂಡು ಅಜ್ಞಾನ ಮತ್ತು ಸ್ಥಳೀಯ ರಾಜಕೀಯದ ಸಾಮಾನ್ಯ ಜ್ಞಾನ ಬಗ್ಗೆ ಅರಿವು ಹೊಂದದೆ ಅಭಿವೃದ್ಧಿಯಲ್ಲಿ ಭಾಗವಹಿಸದೆಯಿದ್ದರಿಂದ ಪಟ್ಟಣ ಪಂಚಾಯಿತಿಯು ಹಿಂದುಳಿದಿದೆ ಎನ್ನಬಹುದಾಗಿದೆ. ಮುಂದುವರಿದ ನಗರಸಭೆಯಲ್ಲಿ ಮೇಲ್ಜಾತಿಗೆ ಸೇರಿದ ಚುನಾಯಿತ ಸದಸ್ಯರ ಪ್ರಮಾಣ ಹೆಚ್ಚಾಗಿದ್ದು ಅವರು ಶಿಕ್ಷಿತರಾಗಿ, ಉತ್ತಮ ರಾಜಕೀಯದ ಬಗ್ಗೆ ಅರಿವುನ್ನು ಪಡೆದ್ದರಿಂದ ಹೆಚ್ಚಿನ ಸಂಖ್ಯೆಯಲ್ಲಿ ಅಭಿವೃದ್ಧಿಗಾಗಿ ಭಾಗವಹಿಸುವುದರೊಂದಿಗೆ ಮುಂದುವರಿದಿದೆ ಎನ್ನಬಹುದಾಗಿದೆ. ಹಾಗಾಗಿ ಹಿಂದುಳಿದ ಪಟ್ಟಣ ಪಂಚಾಯಿತಿ ಸದಸ್ಯರಿಗೆ ರಾಜಕೀಯ ಅರಿವು ಮೂಡಿಸುವಂತಹ ಕಾರ್ಯಕ್ರಮಗಳನ್ನು ಸರ್ಕಾರದವತಿಯಿಂದ ಹೆಚ್ಚಿನ ರೀತಿಯಲ್ಲಿ ಹಾಕಿಕೊಂಡು ತರಬೇತಿಯನ್ನು ಕೊಡಿಸುವ ಅನಿವಾರ್ಯತೆಯಿದೆ ಎಂದು ಹೇಳಬಹುದಾಗಿದೆ.

### ಸದಸ್ಯರ ವಯೋಮಿತಿ

| | **ವಯೋಮಿತಿ** | **ಹೊಸಪೇಟೆ** | | **ಕೂಡ್ಲಿಗಿ** | |
|---|---|---|---|---|---|
| ೧. | ೩೧-೪೦ | ೧೯ | ೫೪.೨೯ | ೧೧ | ೫೫.೦೦ |
| ೨. | ೪೧ + | ೧೬ | ೪೫.೭೧ | ೯ | ೪೫.೦೦ |
| | **ಒಟ್ಟು** | ೩೫ | ೧೦೦ | ೨೦ | ೧೦೦.೦೦ |

**ಮೂಲ: ಕ್ಷೇತ್ರ ಕಾರ್ಯದ ಮಾಹಿತಿ**

ಹೊಸಪೇಟೆ ನಗರ ಸಭೆಯಲ್ಲಿ ಶೇ. ೫೪.೨೯ರಷ್ಟು ಪ್ರತಿನಿಧಿಗಳು ೩೧ರಿಂದ ೪೦ ವಯೋಮಿತಿಯವರಾಗಿದ್ದಾರೆ. ಅದೇ ಪ್ರಕಾರ ಕೂಡ್ಲಿಗಿ ಪಟ್ಟಣ ಪಂಚಾಯಿತಿಯಲ್ಲಿ ಶೇ. ೫೫ರಷ್ಟು ಪ್ರತಿನಿಧಿಗಳು ಇದೇ ವಯೋಮಿತಿಯವರಾಗಿದ್ದಾರೆ. ೪೧ ವರ್ಷದಿಂದ ಮೇಲ್ಪಟ್ಟವರಲ್ಲಿ ಹೊಸಪೇಟೆ ನಗರಸಭೆಯಲ್ಲಿ ಶೇ. ೪೫.೭೧ ಪ್ರತಿನಿಧಿಗಳು ಮತ್ತು ಕೂಡ್ಲಿಗಿಯ ಪಟ್ಟಣ ಪಂಚಾಯಿತಿಯಲ್ಲಿ ಶೇ. ೪೫ರಷ್ಟು ಪ್ರತಿನಿಧಿಗಳಿದ್ದಾರೆ. ವಯೋಮಿತಿಯನ್ನು ಗಮನಿಸಿದರೆ ಮುಂದುವರಿದ ನಗರಸಭೆಯ ಸದಸ್ಯರು ಮತ್ತು ಹಿಂದುಳಿದ ಪಟ್ಟಣ ಪಂಚಾಯತಿಯ ಚುನಾಯಿತ ಸದಸ್ಯರು ಸಹಾ ಯುವ ಜನತೆ ನಗರ ಸ್ಥಳೀಯ ಸಂಸ್ಥೆಗಳಲ್ಲಿ ಹುಮ್ಮಸ್ಸಿನಿಂದ ಭಾಗವಹಿಸುತ್ತಿದ್ದಾರೆಂದು ಹೇಳಬಹುದು. ಆದರೆ ಪಟ್ಟಣ ಪಂಚಾಯಿತಿ ಸದಸ್ಯರು ಯುವ ಜನತೆಯಾಗಿದ್ದರೂ ಅಕ್ಷರ ಜ್ಞಾನದಿಂದ ವಂಚಿತಗೊಂಡು

ಸ್ಥಳೀಯ ರಾಜಕೀಯ ಮೂಲಕ ಜನರ ಸೇವೆ ಮಾಡುವಲ್ಲಿ ಅಸಹಾಯಕರಾಗಿದ್ದು ಸ್ಥಳೀಯ ರಾಜಕೀಯದಲ್ಲಿ ಭಾಗವಹಿಸದೆ ಮತ್ತು ಸ್ಥಳೀಯ ಅಧಿಕಾರಿಗಳೊಂದಿಗೆ ಉತ್ತಮ ಸಂಬಂಧವನ್ನಿಟ್ಟುಕೊಳ್ಳದೇ ಹಿಂದುಳಿದಿದೆ ಹಾಗೂ ಹೊಸಪೇಟೆ ನಗರಸಭೆಯು ಮೇಲಿನ ಅಂಶಗಳಿಂದ ಪ್ರೇರಿತಗೊಂಡಿರುವುದ್ದರಿಂದ ಮುಂದುವರಿದಿದೆ ಎಂದು ಅಧಯಯಯಗಳಿಂದ ತಿಳಿದುಬಂದಿದೆ. ಆದರೂ ನಗರಸಭೆ ಮತ್ತು ಪಟ್ಟಣ ಪಂಚಾಯಿತಿಗಳ ಮೂಲಕ ವಾರ್ಡಿನ ಜನರ ಸೇವೆ ಮಾಡುವುದಕ್ಕೆ ಅಡಿಪಾಯವಾಗಿದೆ ಎನ್ನಬಹುದಾಗಿದೆ.

## ಲಿಂಗವಾರು ಪ್ರಾತಿನಿಧ್ಯ

| | ಲಿಂಗ | ಹೊಸಪೇಟೆ | | ಕೂಡ್ಲಿಗಿ | |
|---|---|---|---|---|---|
| ೧ | ಗಂಡು | ೨೩ | ೬೫.೭೧ | ೧೩ | ೬೫.೦೦ |
| ೨ | ಹೆಣ್ಣು | ೧೨ | ೩೪.೨೮ | ೭ | ೩೫.೦೦ |
| | **ಒಟ್ಟು** | ೩೫ | ೧೦೦.೦೦ | ೨೦ | ೧೦೦.೦೦ |

**ಮೂಲ: ಕ್ಷೇತ್ರ ಕಾರ್ಯದ ಮಾಹಿತಿ**

ಹೊಸಪೇಟೆ ನಗರಸಭೆಯ ಒಟ್ಟು ೩೫ ಪ್ರತಿನಿಧಿಗಳಲ್ಲಿ ಶೇ.೬೫.೭೧ ಪ್ರತಿನಿಧಿಗಳಲ್ಲಿ ಗಂಡಸರು ಉಳಿದ ಶೇ. ೩೪.೨೮ರಷ್ಟು ಪ್ರತಿನಿಧಿಗಳು ಹೆಂಗಸರಾಗಿರುತ್ತಾರೆ. ಹಾಗೆಯೇ ಕೂಡ್ಲಿಗಿ ಪಟ್ಟಣ ಪಂಚಾಯಿತಿಯಲ್ಲಿ ಒಟ್ಟು ೨೦ ಪ್ರತಿನಿಧಿಗಳು ಇದ್ದು, ಅದರಲ್ಲಿ ಶೇ.೬೫ರಷ್ಟು ಪ್ರತಿನಿಧಿಗಳು ಗಂಡಸರು ಉಳಿದ ಶೇ.೩೫ರಷ್ಟು ಸದಸ್ಯರು ಮಹಿಳೆಯರಾಗಿರುತ್ತಾರೆ. ಈ ಲಿಂಗವಾರನ್ನು ನೋಡಿದಾಗ ಸ್ಥಳೀಯ ಸಂಸ್ಥೆಗಳಲ್ಲಿ ಮಹಿಳೆಯರಿಗೆ ೫೦ರಷ್ಟು ಮೀಸಲಾತಿಯಿದ್ದು ಸ್ಥಳೀಯ ರಾಜಕೀಯದಲ್ಲಿ ಭಾಗವಹಿಸುವ ಪ್ರಮಾಣ ಕಡಿಮೆಯಿರುವುದು ತಿಳಿದುಬರುತ್ತದೆ ಹಾಗಾಗಿ ಸಾಪೇಕ್ಷವಾಗಿ ಮುಂದುವರಿದ ನಗರಸಭೆ ಮತ್ತು ಹಿಂದುಳಿದ ಪಟ್ಟಣ ಪಂಚಾಯಿತಿಯಲ್ಲಿ ಮಹಿಳೆಯರ ಪ್ರಮಾಣ ಕಡಿಮೆಯಿರುವುದು ಅಧ್ಯಯಗಳಿಂದ ತಿಳಿದುಬಂದಿದೆ. ಹಾಗಾಗಿ ಮಹಿಳೆಯರು ಹೆಚ್ಚಿನ ಸಂಖ್ಯೆಯಲ್ಲಿ ರಾಜಕೀಯದಲ್ಲಿ ಭಾಗವಹಿಸುವುದರ ಮೂಲಕ ಗಂಡಂದಿರ ಹಸ್ತಕ್ಷೇಪ, ಸಬಲರ ರಾಜಕೀಯ ಪ್ರವೇಶ, ಮೇಲ್ಜಾತಿ ವರ್ಗದ ರಾಜಕೀಯ ಪ್ರವೇಶವಾಗದೆ ಮತ್ತು ಮೀಸಲಾತಿಯ ಕಾರಣದಿಂದ ರಾಜಕೀಯ ಪ್ರವೇಶಿಸಿ ನಗರ ಕೆಲವು ವ್ಯಕ್ತಿಗಳ ಕೈಯಲ್ಲಿ ಆಡಳಿತವನ್ನು ಕೊಡದೆ ಮಹಿಳೆಯರು ಹೆಚ್ಚಿನ ರೀತಿಯಲ್ಲಿ ಸ್ಥಳೀಯ ರಾಜಕೀಯದ ಬಗ್ಗೆ ಅರಿವು ಪಡೆಯುವುದರೊಂದಿಗೆ ನಿಯಮಿತವಾಗಿ ಆಡಳಿತದಲ್ಲಿ ಭಾಗವಹಿಸುವುದರ ಮೂಲಕ ಸ್ಥಳೀಯ ಅಭಿವೃದ್ಧಿಯನ್ನು ಮಾಡುವುದರೊಂದಿಗೆ ಮಹಿಳಾ ಸಬಲೀಕರಣಗೊಳ್ಳುವ ಅವಶ್ಯಕತೆಯಿದೆ ಎಂದು ಹೇಳಲಾಗಿದೆ.

**ಚುನಾಯಿತ ಸದಸ್ಯರ ಶಿಕ್ಷಣ**

| ಕ್ರ.ಸಂ. | ಶಿಕ್ಷಣ | ಹೊಸಪೇಟೆ | | ಕೂಡ್ಲಿಗಿ | |
|---|---|---|---|---|---|
| ೧ | ಅನಕ್ಷರಸ್ಥರು | ೩ | ೮.೫೩ | ೯ | ೪೫.೦೦ |
| ೨ | ಪ್ರೌಢ ಶಿಕ್ಷಣ | ೧೮ | ೫೧.೪೭ | ೩ | ೧೫.೦೦ |
| ೩ | ಪದವಿ ಪೂರ್ವ | ೯ | ೨೫.೭೯ | ೫ | ೨೫.೦೦ |
| ೪ | ಪದವಿ | ೫ | ೧೪.೨೧ | ೩ | ೧೫.೦೦ |
| | **ಒಟ್ಟು** | ೩೫ | ೧೦೦.೦೦ | ೨೦ | ೧೦೦.೦೦ |

**ಮೂಲ: ಕ್ಷೇತ್ರ ಕಾರ್ಯದ ಮಾಹಿತಿ**

ಎರಡು ನಗರಗಳಲ್ಲಿನ ಚುನಾಯಿತ ಸದಸ್ಯರ ಶಿಕ್ಷಣವನ್ನು ಪ್ರಮಾಣವನ್ನು ನೋಡುವಾಗ ಹೊಸಪೇಟೆ ನಗರಸಭೆಯಲ್ಲಿ ಒಟ್ಟ ೩೫ ಪ್ರತಿನಿಧಿಗಳಲ್ಲಿ ಶೇ. ೫೧.೪೭ರಷ್ಟು ಚುನಾಯಿತ ಪ್ರತಿನಿಧಿಗಳು ಪ್ರೌಢ ಶಾಲೆಯವರೆಗೆ ಓದಿದ್ದರೆ, ಕೆಲವು ಸದಸ್ಯರು ಪದವಿ ಪೂರ್ವ ಶಿಕ್ಷಣವನ್ನು ಕಲಿತಿರುತ್ತಾರೆ. ಹಾಗೆಯೇ ೧೪.೨೧ರಷ್ಟು ಜನ ಪ್ರತಿನಿಧಿಗಳು ಪದವಿ ವಿದ್ಯಾಭ್ಯಾಸವನ್ನು ಪಡೆದಿರುತ್ತಾರೆ. ಹಾಗೂ ಕೇವಲ ಶೇ. ೮.೫೩ ಜನ ಚುನಾಯಿತ ಪ್ರತಿನಿಧಿಗಳು ಅನಕ್ಷರಸ್ಥರಾಗಿರುತ್ತಾರೆ. ಅದರಂತೆ ಕೂಡ್ಲಿಗಿ ಪಟ್ಟಣ ಪಂಚಾಯಿತಿಯಲ್ಲಿ ಶೇ. ೧೫ರಷ್ಟು ಪ್ರತಿನಿಧಿಗಳು ಪ್ರೌಢಶಾಲೆಯವರೆಗೆ ಓದಿದ್ದಾರೆ. ಹಾಗೆಯೇ ಶೇ. ೨೫ರಷ್ಟು ಪ್ರತಿನಿಧಿಗಳು ಪದವಿ ಪೂರ್ವ ಶಿಕ್ಷಣವನ್ನು ಮುಗಿಸಿದ್ದು, ಶೇ. ೧೫ರಷ್ಟು ಜನಪ್ರತಿನಿಧಿಗಳು ಪದವಿ ವ್ಯಾಸಂಗವನ್ನು ಮಾಡಿರುತ್ತಾರೆ. ಕೇವಲ ಶೇ. ೪೫ರಷ್ಟು ಜನಪ್ರತಿನಿಧಿಗಳು ಅನಕ್ಷರಸ್ಥರಾಗಿರುತ್ತಾರೆ. ಒಟ್ಟಾರೆಯಾಗಿ, ಎರಡು ಸ್ಥಳೀಯ ಸಂಸ್ಥೆಗಳನ್ನು ನೋಡಿದಾಗ ಸಾಪೇಕ್ಷವಾಗಿ ಅಭಿವೃದ್ಧಿ ಹೊಂದಿದ ಹೊಸಪೇಟೆ ನಗರಸಭೆ ಚುನಾಯಿತನ ಸದಸ್ಯರ ಅನಕ್ಷರಸ್ಥರ ಪ್ರಮಾಣಕ್ಕಿಂತ ಮತ್ತು ಹಿಂದುಳಿದ ಕೂಡ್ಲಿಗಿ ಪಟ್ಟಣ ಪಂಚಾಯಿತಿಯಲ್ಲಿ ಅನಕ್ಷರಸ್ಥರ ಪ್ರಮಾಣ ಹೆಚ್ಚಾಗಿರುವುದು ಅಧ್ಯಯನದಿಂದ ತಿಳಿದು ಬಂದಿದೆ. ಹಾಗಾಗಿ ಸ್ಥಳೀಯ ಸಂಸ್ಥೆಯನ್ನು ಅಭಿವೃದ್ಧಿಗೊಳಿಸುವಲ್ಲಿ ಶಿಕ್ಷಣದ ಅಗತ್ಯತೆಯು ಹೆಚ್ಚಾಗಿರುವುದರಿಂದ ಅದರಲ್ಲಿ ಕೂಡ್ಲಿಗಿ ಪಟ್ಟಣ ಪಂಚಾಯಿತಿ ಚುನಾಯಿತ ಸದಸ್ಯರು ಪಡೆಯುವಲ್ಲಿ ಹಿಂದುಳಿದಿದ್ದು ಅದು ಹಿಂದುಳಿದಿದೆ ಎನ್ನಬಹುದಾಗಿದೆ. ಆದ್ದರಿಂದ ಚುನಾಯಿತ ಸದಸ್ಯರು ಶಿಕ್ಷಣದಿಂದ ವಂಚಿತಗೊಂಡಿರುವುದಲ್ಲದೆ ಅವರಿಗೆ ಉತ್ತಮವಾದ ಆಡಳಿತ ಜ್ಞಾನದ ಬಗ್ಗೆ ಹೆಚ್ಚಿನ ಅರಿವು ಮೂಡಿಸುವ ಕೆಲಸವಾಗುವ ಅಗತ್ಯವಿದೆ ಎಂದು ತಿಳಿಯಲಾಗಿದೆ.

**ಚುನಾಯಿತ ಸದಸ್ಯರ ಉದ್ಯೋಗ ವಿವರ**

| ವೃತ್ತಿ ವಿನ್ಯಾಸ | | ಹೊಸಪೇಟೆ | | ಕೂಡ್ಲಿಗಿ | |
|---|---|---|---|---|---|
| ೧ | ಖಾಸಗಿ | ೨೩ | ೬೫.೭೯ | ೫ | ೨೫.೦೦ |
| ೨ | ಮನೆಗೆಲಸ | ೧೦ | ೨೮.೫೩ | ೭ | ೩೫.೦೦ |
| ೩ | ವ್ಯವಸಾಯ | ೨ | ೫.೭೯ | ೮ | ೪೦.೦೦ |
| | **ಒಟ್ಟು** | ೩೫ | ೧೦೦ | ೨೦ | ೧೦೦ |

**ಮೂಲ: ಕ್ಷೇತ್ರ ಕಾರ್ಯದ ಮಾಹಿತಿ**

ಹೊಸಪೇಟೆ ನಗರದ ಒಟ್ಟು ೩೫ ಚುನಾಯಿತ ಪ್ರತಿನಿಧಿಗಳಲ್ಲಿ ಶೇ. ೬೫.೭೯ರಷ್ಟು ಪ್ರತಿನಿಧಿಗಳು ಖಾಸಗಿ ಜೀವನ(ಮೆಕಾನಿಕ್, ಹಿಟ್ಟಿನ ಗಿರಣಿ, ಹೊಲಿಗೆ ಕಟ್ಟಡ, ನಿರ್ಮಾಣ) ವೃತ್ತಿಯಲ್ಲಿ ನಿರತರಾಗಿದ್ದಾರೆ. ಶೇ. ೨೮.೫೩ ಪ್ರತಿನಿಧಿಗಳು ಮನೆಗೆಲಸವನ್ನು ಆಧಾರಿಸಿದ್ದಾರೆ. ಹಾಗೆಯೇ ಶೇ. ೫.೭೯ ಜನಪ್ರತಿನಿಧಿಗಳು ಜೀವನ ವ್ಯವಸಾಯವನ್ನೇ ಆಧಾರಿತವಾಗಿದೆ. ಅದರಂತೆ ಕೂಡ್ಲಿಗಿ ಪಟ್ಟಣ ಪಂಚಾಯಿತಿಯಲ್ಲಿ ಒಟ್ಟು ೨೦ ಚುನಾಯಿತ ಪ್ರತಿನಿಧಿಗಳಲ್ಲಿ ಶೇ. ೨೫ರಷ್ಟು ಸದಸ್ಯರು ಜೀವನ ಖಾಸಗಿ ಉದ್ಯೋಗದಲ್ಲಿದ್ದರೆ ಶೇ. ೩೫ರಷ್ಟು ಸದಸ್ಯರ ಜೀವನ ಮನೆಗೆಲಸವನ್ನು ಆಯ್ಕೆ ಮಾಡಿಕೊಂಡಿರುತ್ತಾರೆ. ಹಾಗೆಯೇ ಶೇ. ೪೦ರಷ್ಟು ಜನಪ್ರತಿನಿಧಿಗಳು ಜೀವನವನ್ನು ವ್ಯವಸಾಯ ಮಾಡುತ್ತ ಸ್ಥಳೀಯ ಸಂಸ್ಥೆಗಳಲ್ಲಿ ಭಾಗವಹಿಸಿರುವುದು ತಿಳಿದು ಬಂದಿದೆ. ಹೊಸಪೇಟೆ ನಗರಸಭೆಯ

ಸದಸ್ಯರ ಜೀವನ ಸ್ಥಿತಿಯನ್ನು ನೋಡಿದಾಗ ಕೂಡ್ಲಿಗಿ ಪಟ್ಟಣ ಪಂಚಾಯಿತಿ ಸದಸ್ಯರ ಜೀವನ ಸ್ಥಿತಿಯು ಉತ್ತಮವಾಗದಿರುವುದರಿಂದ ಹಿಂದುಳಿದಿದೆ ಎನ್ನಬಹುದಾಗಿದೆ.

**ಸದಸ್ಯರ ಕುಟುಂಬದ ವರಮಾನ(ಮಾಸಿಕ)**

| ಕುಟುಂಬದ ವರಮಾನ | | ಹೊಸಪೇಟೆ | | ಕೂಡ್ಲಿಗಿ | |
|---|---|---|---|---|---|
| ೧ | ೫೦೦೧-೧೦೦೦೦ | ೪ | ೧೧.೪೩ | ೧೬ | ೮೦.೦೦ |
| ೨ | ೧೦೦೦೧-೨೦೦೦೦ | ೭ | ೨೦.೦೦ | ೩ | ೧೫.೦೦ |
| ೩ | ೨೦೦೦೧-೩೫೦೦೦ | ೨೪ | ೬೮.೫೭ | ೧ | ೫.೦೦ |
| | **ಒಟ್ಟು** | ೩೫ | ೧೦೦ | ೨೦ | ೧೦೦ |

**ಮೂಲ: ಕ್ಷೇತ್ರ ಕಾರ್ಯದ ಮಾಹಿತಿ**

ಹೊಸಪೇಟೆ ನಗರ ಸಭೆಯಲ್ಲಿ ಒಟ್ಟು ೩೫ ಚುನಾಯಿತ ಪ್ರತಿನಿಧಿಗಳಲ್ಲಿ ಶೇ. ೧೧.೪೩ ಪ್ರತಿನಿಧಿಗಳ ೫ ಸಾವಿರದಿಂದ ೧ ಲಕ್ಷದವರೆಗೆ ಮಾಸಿಕ ಆದಾಯವನ್ನು ಹೊಂದಿರುತ್ತಾರೆ. ಹಾಗೆಯೇ ಶೇ. ೨೦ರಷ್ಟು ಪ್ರತಿನಿಧಿಗಳು ಒಂದು ಲಕ್ಷದಿಂದ ೨ ಲಕ್ಷದವರೆಗೆ ಆದಾಯವಿದ್ದು, ಶೇ. ೬೮.೫೭ರಷ್ಟು ಪ್ರತಿನಿಧಿಗಳು ಎರಡು ಲಕ್ಷದಿಂದ ಮೂರು ಲಕ್ಷದ ಐವತ್ತು ಸಾವಿರ ಆದಾಯವನ್ನು ಹೊಂದಿರುತ್ತಾರೆ. ಅದರಂತೆ ಕೂಡ್ಲಿಗಿ ಪಟ್ಟಣ ಪಂಚಾಯಿತಿಯಲ್ಲಿ ಒಟ್ಟು ೨೦ ಚುನಾಯಿತ ಪ್ರತಿನಿಧಿಗಳಿದ್ದು ಅದರಲ್ಲಿ ಶೇ.೮೦ರಷ್ಟು ಪ್ರತಿನಿಧಿಗಳು ೫ ಸಾವಿರದಿಂದ ಒಂದು ಲಕ್ಷದವರೆಗೆ ಮಾಸಿಕ ಆದಾಯವನ್ನು ಹೊಂದಿರುತ್ತಾರೆ. ಹಾಗೆಯೇ ಶೇ.೧೫ರಷ್ಟು ಜನಪ್ರತಿನಿಧಿಗಳು ೧ ಲಕ್ಷದಿಂದ ೨ ಲಕ್ಷದವರೆಗೆ ಆದಾಯವನ್ನು ಹೊಂದಿರುತ್ತಾರೆ. ಉಳಿದ ಶೇ. ೫ರಷ್ಟು ಪ್ರತಿನಿಧಿಗಳು ೨ ಲಕ್ಷದಿಂದ ೩ ಲಕ್ಷದ ೫೦ ಸಾವಿರ ಆದಾಯವನ್ನು ಹೊಂದಿರುವುದು ತಿಳಿದು ಬಂದಿದೆ. ಇದನ್ನು ಗಮನಿಸಿದರೆ ಅಭಿವೃದ್ಧಿ ಹೊಂದಿದ ನಗರಸಭೆಯಲ್ಲಿ ಚುನಾಯಿತ ಪ್ರತಿನಿಧಿಗಳು ಆದಾಯದ ಪ್ರಮಾಣದಲ್ಲಿ ಹೆಚ್ಚಿನ ಸಂಖ್ಯೆಯವರಿದ್ದು, ಹಿಂದುಳಿದ ಪಟ್ಟಣ ಪಂಚಾಯಿತಿಯಲ್ಲಿ ಚುನಾಯಿತ ಪ್ರತಿನಿಧಿಗಳು ಕಡಿಮೆ ಆದಾಯದ ಪ್ರಮಾಣವನ್ನು ಹೊಂದಿರುವುದರ ಪರಿಣಾಮವಾಗಿ ಹಿಂದುಳಿದಿದೆ ಎನ್ನಬಹುದಾಗಿದೆ. ಇಷ್ಟೆಲ್ಲಾ ಆದಾಯದ ವೈರುಧ್ಯವನ್ನು ನೋಡುವುದಾದರೆ ಎರಡು ಸ್ಥಳೀಯ ಸಂಸ್ಥೆಗಳಲ್ಲಿ ಮೂಲಸೌಕರ್ಯ ಗಳನ್ನು ಉತ್ತಮಗೊಳಿಸುವುದರ ಬಗ್ಗೆ ಹೆಚ್ಚಿನ ಗಮನ ಹರಿಸಿರುವುದಿಲ್ಲ ಎಂಬ ಅಂಶ ತಿಳಿದುಬರುತ್ತದೆ. ಆದ್ದರಿಂದ ಅಭಿವೃದ್ಧಿಯನ್ನು ಕೈಗೊಳ್ಳುವಲ್ಲಿ ವರಮಾನವು ಬಹಳ ಪ್ರಮುಖವಾದ ಸಾಧನವಾಗಿದೆ. ಹಾಗಾಗಿ ಚುನಾಯಿತ ಸದಸ್ಯರು ಆದಾಯದ ಗಳಿಕೆಯಿಂದ ಉತ್ತಮ ರೀತಿಯಾದ್ದಂತಹ ಸಂಪರ್ಕಗಳನ್ನು ಹೊಂದುವುದರ ಮೂಲಕ ಅಭಿವೃದ್ಧಿಯನ್ನು ಕಾಣುವ ಅಗತ್ಯವಿದೆ ಎಂದು ತಿಳಿಯಬಹುದಾಗಿದೆ.

**ಚುನಾಯಿತ ಸದಸ್ಯರ ವಸತಿ ವಿವರ**

| ವಾಸಿಸುವ ಮನೆ | | ಹೊಸಪೇಟೆ | | ಕೂಡ್ಲಿಗಿ | |
|---|---|---|---|---|---|
| ೧ | ಸ್ವಂತ | ೨೯ | ೮೨.೮೬ | ೧೭ | ೮೫.೦೦ |
| ೨ | ಬಾಡಿಗೆ | ೬ | ೧೭.೧೪ | ೩ | ೧೫.೦೦ |
| | **ಒಟ್ಟು** | ೩೫ | ೧೦೦ | ೨೦ | ೧೦೦ |

**ಮೂಲ: ಕ್ಷೇತ್ರ ಕಾರ್ಯದ ಮಾಹಿತಿ**

ಚುನಾಯಿತ ಸದಸ್ಯರ ವಸತಿಯ ಪ್ರಮಾಣವನ್ನು ನೋಡಿವಾಗ ಹೊಸಪೇಟೆ ನಗರಸಭೆಯಲ್ಲಿ ಒಟ್ಟು ೩೫ ಚುನಾಯಿತ ಪ್ರತಿನಿಧಿಗಳಲ್ಲಿ ಶೇ. ೮೨.೮೬ರಷ್ಟು ಪ್ರತಿನಿಧಿಗಳು ಸ್ವಂತ ಮನೆಯನ್ನು ಹೊಂದಿರುತ್ತಾರೆ. ಹಾಗೆಯೇ ಶೇ. ೧೭.೧೪ರಷ್ಟು ಜನಪ್ರತಿನಿಧಿಗಳು ಬಾಡಿಗೆಯ ಮನೆಯಲ್ಲಿ ವಾಸವಾಗಿರುತ್ತಾರೆ. ಅದರಂತೆ ಕೂಡ್ಲಿಗಿ ಪಟ್ಟಣ ಪಂಚಾಯಿತಿಯಲ್ಲಿ ಒಟ್ಟು ೨೦ ಚುನಾಯಿತ ಪ್ರತಿನಿಧಿಗಳಿದ್ದು ಅದರಲ್ಲಿ ಶೇ. ೮೫ರಷ್ಟು ಜನಪ್ರತಿನಿಧಿಗಳು ಸ್ವಂತ ಮನೆಯನ್ನು ಹೊಂದಿರುತ್ತಾರೆ. ಹಾಗೆಯೇ ಉಳಿದ ಶೇ. ೧೫ರಷ್ಟು ಪ್ರತಿನಿಧಿಗಳು ಬಾಡಿಗೆ ಮನೆಯಲ್ಲಿ ವಾಸಿಸುತ್ತಿದ್ದಾರೆ. ಇಲ್ಲಿ ತಿಳಿದುಬರುವ ಸಂಗತಿಯೆಂದರೆ ಕೂಡ್ಲಿಗಿ ಪಟ್ಟಣ ಪಂಚಾಯಿತಿಯಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಚುನಾಯಿತ ಪ್ರತಿನಿಧಿಗಳು ಸ್ವಂತ ಮನೆಯನ್ನು ಹೊಂದಿದವರೇ ಆಗಿದ್ದು, ಅವರಿಗೆ ವಸತಿಗೆ ಸಂಬಂಧಿಸಿದ ಸಮಸ್ಯೆಯು ಯಾವುದು ಎದುರಾಗದೇ ಇದ್ದು ಹಾಗೆಯೇ ಸ್ಥಳೀಯ ಜನರಲ್ಲಿ ವಸತಿಯ ಅವಶ್ಯಕತೆಯನ್ನು ಗಣನೆಗೆ ತೆಗೆದುಕೊಳ್ಳದೆ ಮತ್ತು ಸರ್ಕಾರದಿಂದ ಬಂದ ಅನುದಾನವನ್ನು ಅವರಿಗೆ ಸಮರ್ಪಕ ರೀತಿಯಲ್ಲಿ ಜವಾಬ್ದಾರಿಯುತವಾಗಿ ಮುಟ್ಟಿಸದೇ ನಗರಮಟ್ಟದಲ್ಲಿ ಯಾವ ನಿರ್ಧಾರವನ್ನು ತೆಗೆದುಕೊಳ್ಳಲಾಗದೆ ಆಡಳಿತವನ್ನು ಬೇಕಾದ ರೀತಿಯಲ್ಲಿ ನಡೆಸುತ್ತಿರುವುದರಿಂದ ಪಟ್ಟಣ ಪಂಚಾಯಿತಿಯು ಹಿಂದುಳಿದಿದೆ ಎಂದು ಕ್ಷೇತ್ರಧ್ಯಾಯನದಲ್ಲಿ ಜನರ ಸಂದರ್ಶಿದ ಸಮಯದಲ್ಲಿ ತಿಳಿದು ಬಂದಿದೆ. ಹಾಗಾಗಿ ವಾರ್ಡಿನ ಜನರ ಸಮಸ್ಯೆಗಳಿಗೆ ನಿಯಮಿತ ಪರಿಹಾರಗಳನ್ನು ಕಾಲ-ಕಾಲಕ್ಕೆ ನೀಡುತ್ತಾ ಹೋಗುವಲ್ಲಿ ಸ್ಥಳೀಯ ರಾಜಕಾರಣದ ಬಗ್ಗೆ ಅರಿವು ಮತ್ತು ಭಾಗವಹಿಸುವಂತೆ ಮಾಡುವ ಅಗತ್ಯತೆ ಇದೆ ಎನ್ನಲಾಗಿದೆ.

**ಸದಸ್ಯರ ಭೂಮಿ ವಿವರ**

| **ಭೂ-ಹಿಡುವಳಿ** | | **ಹೊಸಪೇಟೆ** | | **ಕೂಡ್ಲಿಗಿ** | |
|---|---|---|---|---|---|
| ೧ | ಇಲ್ಲ | ೧೦ | ೨೮.೫೩ | ೬ | ೩೦.೦೦ |
| ೨ | ೧-೪ | ೧೩ | ೩೭.೧೬ | ೧೦ | ೫೦.೦೦ |
| ೩ | ೫-೧೦ | ೧೨ | ೩೪.೨೧ | ೪ | ೨೦.೦೦ |
| | **ಒಟ್ಟು** | ೩೫ | ೧೦೦ | ೨೦ | ೧೦೦ |

**ಮೂಲ: ಕ್ಷೇತ್ರ ಕಾರ್ಯದ ಮಾಹಿತಿ**

ಹೊಸಪೇಟೆ ನಗರಸಭೆಯಲ್ಲಿ ಒಟ್ಟು ೩೫ ಚುನಾಯಿತ ಸದಸ್ಯರಿದ್ದು, ಅದರಲ್ಲಿ ಶೇ. ೩೭.೧೬ರಷ್ಟು ಪ್ರತಿನಿಧಿಗಳು ೧ರಿಂದ ೪ ಎಕರೆ ಭೂಮಿಯನ್ನು ಹೊಂದಿರುತ್ತಾರೆ. ಹಾಗೆಯೇ ಶೇ. ೩೪.೨೧ರಷ್ಟು ಪ್ರತಿನಿಧಿಗಳು ೫ರಿಂದ ೧೦ ಎಕರೆ ಭೂಮಿಯನ್ನು ಹೊಂದಿರುತ್ತಾರೆ. ಅಲ್ಲದೇ ಶೇ. ೨೮.೫೩ರಷ್ಟು ಪ್ರತಿನಿಧಿಗಳು ಯಾವುದೇ ಭೂಮಿಯನ್ನು ಹೊಂದಿರುವುದಿಲ್ಲ. ಅದರಂತೆ ಕೂಡ್ಲಿಗಿ ಪಟ್ಟಣ ಪಂಚಾಯಿತಿಯಲ್ಲಿ ಒಟ್ಟು ೨೦ ಚುನಾಯಿತ ಸದಸ್ಯರಲ್ಲಿ ೧ರಿಂದ ೪ ಎಕರೆ ಭೂಮಿಯನ್ನು ಶೇ. ೪೦ಷ್ಟು ಪ್ರತಿನಿಧಿಗಳು ಹೊಂದಿರುತ್ತಾರೆ. ಹಾಗೆಯೇ ಶೇ. ೨೦ರಷ್ಟು ಜನಪ್ರತಿನಿಧಿಗಳು ೫ರಿಂದ ೧೦ ಎಕರೆ ಭೂಮಿಯನ್ನು ಹೊಂದಿದ್ದು, ಶೇ. ೪೦ರಷ್ಟು ಚುನಾಯಿತರು ಯಾವುದೇ ಭೂಮಿಯನ್ನು

ಹೊಂದಿರುವುದಿಲ್ಲ. ಇಲ್ಲಿ ಗಮನಿಸುವ ಅಂಶವೆಂದರೆ ಸಾಪೇಕ್ಷವಾಗಿ ಅಭಿವೃದ್ಧಿ ಹೊಂದಿದ ನಗರಸಭೆಯಲ್ಲಿ ಭೂ ಹಿಡುವಳಿದಾರರು ಹೆಚ್ಚಿನ ಪ್ರಮಾಣದಲ್ಲಿದ್ದು ಹಾಗೂ ತೀರಾ ಹಿಂದುಳಿದ ಪಟ್ಟಣ ಪಂಚಾಯಿತಿಯಲ್ಲಿ ಭೂ ಹಿಡುವಳಿದಾರರ ಪ್ರಮಾಣ ಕಡಿಮೆ ಇರುವುದು ಅಧ್ಯಯಗಳಿಂದ ತಿಳಿದು ಬಂದಿದೆ.

**ಶೌಚಾಲಯ ಹೊಂದಿರುವ ವಿವರ**

| ಶೌಚಾಲಯವನ್ನು ಹೊಂದಿದ್ದಾರೆಯಾ | | ಹೊಸಪೇಟೆ | | ಕೂಡ್ಲಿಗಿ | |
|---|---|---|---|---|---|
| ೧ | ಹೊಂದಿದ್ದಾರೆ. | ೩೫ | ೧೦೦.೦೦ | ೨೦ | ೧೦೦ |
| ೨ | ಹೊಂದಿಲ್ಲ. | ೦ | ೦ | ೦ | ೦ |
| | ಒಟ್ಟು | ೩೫ | ೧೦೦ | ೨೦ | ೧೦೦ |

**ಮೂಲ: ಕ್ಷೇತ್ರ ಕಾರ್ಯದ ಮಾಹಿತಿ**

ಎರಡು ನಗರ ಸ್ಥಳೀಯ ಸಂಸ್ಥೆಗಳಲ್ಲಿ ಚುನಾಯಿತ ಸದಸ್ಯರ ಶೌಚಾಲಯದ ಬಳಕೆಯಲ್ಲಿ ಒಟ್ಟು ಹೊಸಪೇಟೆ ೩೫ ಚುನಾಯಿತ ಸದಸ್ಯರು ಮತ್ತು ಕೂಡ್ಲಿಗಿ ಪಟ್ಟಣ ಪಂಚಾಯಿತಿಯ ಒಟ್ಟು ೨೦ ಚುನಾಯಿತ ಸದಸ್ಯರು ಶೌಚಾಲಯ ಶೇ. ೧೦೦ರಷ್ಟು ಇರುವುದು ಕಂಡುಬರುತ್ತದೆ. ಅದರಂತೆ ಹೊಸಪೇಟೆ ನಗರಸಭೆಯ ಸದಸ್ಯರು ಮತ್ತು ಕೂಡ್ಲಿಗಿಯ ಪಟ್ಟಣ ಪಂಚಾಯಿತಿಯ ಸದಸ್ಯರು ಶೌಚಾಲಯದ ಬಳಕೆಯಿಂದ ಇರುವ ಅನುಕೂಲಗಳ ಬಗ್ಗೆ ಹೆಚ್ಚಿನ ಅರಿವು ಮತ್ತು ಶೌಚಾಯಲಗಳನ್ನು ಫಲಾನುಭವಿಗಳಿಗೆ ನಿಯಮಿತವಾಗಿ ಒದಗಿಸುವಲ್ಲಿ ಮುಂದೆ ಇರುವುದನ್ನು ನಾವು ನೋಡಬಹುದಾಗಿದೆ. ಅದರಂತೆ ಮುಂದುವರಿದ ನಗರಸಭೆ ಸದಸ್ಯರು ಹಿಂದುಳಿದ ಪಟ್ಟಣ ಪಂಚಾಯಿತಿಯ ಸದಸ್ಯರಿಗಿಂತ ತಮ್ಮ ವಾರ್ಡಿನ ಜನರಿಗೆ ಶೌಚಾಲಯ ಒದಗಿಸುವಲ್ಲಿ ವಿಫಲವಾಗಿದ್ದು ಇದರಿಂದ ಅನೇಕ ರೋಗರುಜಿನಿಗಳಿಗೆ ಈಡಾಗಿ ಉತ್ತಮ ಜೀವನ ನಡೆಸುವಲ್ಲಿ ವಂಚಿತಗೊಂಡಿರುವುದರಿಂದ ಪಟ್ಟಣ ಪಂಚಾಯಿತಿಯು ಹಿಂದುಳಿದಿದೆ ಎನ್ನಬಹುದಾಗಿದೆ. ಹಾಗಾಗಿ ಸ್ಥಳೀಯ ರಾಜಕೀಯದಲ್ಲಿ ಬರುವ ಯೋಜನೆಗಳ ಬಗ್ಗೆ ಹೆಚ್ಚಿ ಅರಿವು ಮತ್ತು ಭಾಗವಹಿಸುವಂತೆ ನೋಡಿಕೊಳ್ಳುವ ಅಗತ್ಯವಿದೆ ಎಂದು ತಿಳಿಯಬಹುದಾಗಿದೆ.

**ಸ್ವಂತದ್ದ ಅಥವಾ ಯೋಜನೆ ಫಲಾನುಭವಿನಾ**

| ಫಲಾನುಭವಿಗಳು | | ಹೊಸಪೇಟೆ | | ಕೂಡ್ಲಿಗಿ | |
|---|---|---|---|---|---|
| ೧ | ಸ್ವಂತ | ೦೯ | ೨೫.೭೯ | ೬ | ೩೦.೦೦ |
| ೨ | ಯೋಜನೆ | ೨೬ | ೭೪.೨೧ | ೧೪ | ೭೦.೦೦ |
| | ಒಟ್ಟು | ೩೫ | ೧೦೦ | ೨೦ | ೧೦೦ |

**ಮೂಲ: ಕ್ಷೇತ್ರ ಕಾರ್ಯದ ಮಾಹಿತಿ**

ಮೇಲಿನ ಅಂಶದಿಂದ ಹೊಸಪೇಟೆ ನಗರಸಭೆಯ ಶೇ. ೨೫.೭೯ ಚುನಯಿತ ಸದಸ್ಯರು ಮತ್ತು ಕೂಡ್ಲಿಗಿ ಪಟ್ಟಣ ಪಂಚಾಯಿತಿಯ ಶೇ. ೩೦ ಚುನಾಯಿತ ಸದಸ್ಯರು ಶೌಚಾಲಯವನ್ನು ಕಟ್ಟಿಸಿಕೊಳ್ಳುವಾಗ ಸ್ವಂತವಾಗಿ ಕಟ್ಟಿಸಿಕೊಂಡಿದ್ದೇವೆ ಎಂದು ತಿಳಿಸಿರುತ್ತಾರೆ. ಉಳಿದ ನಗರಸಭೆಯ ಶೇ. ೭೪.೨೧ ಚುನಾಯಿತ ಸದಸ್ಯರು ಮತ್ತು ಪಟ್ಟಣ ಪಂಚಾಯಿತಿಯ ಶೇ. ೭೦ರಷ್ಟು ಚುನಾಯಿತ

ಸದಸ್ಯರು ಸ್ವಂತವಾಗಿ ಕಟ್ಟಿಸಿಕೊಳ್ಳಲಿಕ್ಕೆ ಆಗಿಲ್ಲ. ಹಾಗಾಗಿ ಯೋಜನೆಯ ನೆರವಿನಿಂದ ಶೌಚಾಲಯವನ್ನು ಕಟ್ಟಿಸಿಕೊಂಡಿದ್ದೇವೆ ಎಂದು ತಿಳಿದು ಬಂದಿದೆ. ಸಾಪೇಕ್ಷವಾಗಿ ಮುಂದುವರಿದ ಹೊಸಪೇಟೆ ನಗರಸಭೆಯು ಹಿಂದುಳಿದ ಪಟ್ಟಣ ಪಂಚಾಯಿತಿ ಸದಸ್ಯರಿಗಿಂತ ಹೆಚ್ಚಿನ ಪ್ರಮಾಣದಲ್ಲಿ ಸರ್ಕಾರದ ಯೋಜನೆಗಳನ್ನು ಸಮರ್ಥವಾಗಿ ಬಳಸಿಕೊಂಡಿರುವುದು ತಿಳಿದುಬಂದಿದೆ. ಅಲ್ಲದೆ ಶೌಚಾಲಯಗಳ ಅಗತ್ಯತೆಯ ಬಗ್ಗೆ ಎರಡು ಸ್ಥಳೀಯ ಸಂಸ್ಥೆಗಳ ಚುನಾಯಿತ ಸದಸ್ಯರು ಮನಗಂಡು ಸೌಲಭ್ಯಗಳನ್ನು ಬಳಸಿಕೊಳ್ಳುವುದರ ಪ್ರಮಾಣವು ನಗರಸಭೆಯ ಸದಸ್ಯರಿಗಿಂತ ಪಟ್ಟಣ ಪಂಚಾಯಿತಿಯ ಚುನಾಯಿತ ಸದಸ್ಯರ ಫಲಿತಾಂಶವು ಉತ್ತಮವಾಗಿರುವುದನ್ನು ಕಂಡುಕೊಳ್ಳಬಹುದಾಗಿದೆ. ನಗರಸಭೆಯಲ್ಲಿ ಮೂಲಭೂತ ಸೌಕರ್ಯಗಳ ಬಳಕೆಯ ಸ್ಥಿತಿಗೂ ಪಟ್ಟಣ ಪಂಚಾಯಿತಿಯ ಸ್ಥಿತಿಯನ್ನು ಕಂಡಾಗ ಅವರು ಹಿಂದುಳಿದಿದೆ ಎಂದು ಹೇಳಬಹುದಾಗಿದೆ.

ಒಟ್ಟಾರೆಯಾಗಿ ಹೇಳುವುದಾದರೆ ನಗರಸಭೆ ಚುನಾಯಿತ ಸದಸ್ಯರಿಗಿಂತ ಪಟ್ಟಣ ಪಂಚಾಯಿತಿ ಚುನಾಯಿತ ಸದಸ್ಯರು ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಯು ಉತ್ತಮವಾಗದಿರುವುದು ಕಂಡು ಬಂದಿದೆ. ಹಾಗಾಗಿ ಕೂಡ್ಲಿಗಿ ಚುನಾಯಿತ ಸದಸ್ಯರು ಸಾಮಾಜಿಕ, ಆರ್ಥಿಕ ಸ್ಥಿತಿಯು ಉತ್ತಮವಾಗಬೇಕಾದರೆ ಹೆಚ್ಚಿನ ಸಂಖ್ಯೆಯಲ್ಲಿ ಶಿಕ್ಷಣ, ಆದಾಯ, ಗುಣಮಟ್ಟದ ಜೀವನ ನಡೆಸಲಿಕ್ಕೆ ಬೇಕಾದ ಉತ್ತಮವಾದ ಆರೋಗ್ಯದ ಜಾಗೃತಿಯನ್ನು ಪಡೆಯುವ ಅಗತ್ಯತೆಯಿದೆ ಎಂದು ತಿಳಿಯಲಾಗಿದೆ.

### ೬.೩. ನಗರವಾರು ಸಂದರ್ಶನ ಮಾಡಿದ ಚುನಾಯಿತ ಪ್ರತಿನಿಧಿಗಳ ಆಯ್ಕೆ/ಶಿಕ್ಷಣ/ಸ್ಪರ್ಧೆ ಮತ್ತು ಗೆಲುವಿನ ಕುರಿತು

ಚುನಾಯಿತ ಪ್ರತಿನಿಧಿಗಳ ಆಯ್ಕೆ ವಿಧಾನ

| ಚುನಾಯಿತ ಪ್ರತಿನಿಧಿಗಳ ಆಯ್ಕೆ/ ಶಿಕ್ಷಣ/ಸ್ಪರ್ಧೆ ಮತ್ತು ಗೆಲುವಿನ ವಿವರಗಳು | | ಹೊಸಪೇಟೆ ನಗರ ಸಭೆ | | ಕೂಡ್ಲಿಗಿ ಪಟ್ಟಣಪಂಚಾಯಿತಿ | |
|---|---|---|---|---|---|
| | | ಸಂಖ್ಯೆಗಳು | ಶೇಕಡವಾರು | ಸಂಖ್ಯೆಗಳು | ಶೇಕಡವಾರು |
| ಚುನಾಯಿತ ಪ್ರತಿನಿಧಿಗಳ ಆಯ್ಕೆ ವಿಧಾನ | | | | | |
| ೧ | ಚುನಾವಣೆ | ೩೪ | ೯೭.೧೪ | ೨೦ | ೧೦೦.೦೦ |
| ೨ | ಅವಿರೋಧ ಆಯ್ಕೆ | ೧ | ೨.೮೫ | ೦ | ೦.೦೦ |
| | ಒಟ್ಟು | ೩೫ | ೧೦೦ | ೨೦ | ೧೦೦ |

**ಮೂಲ: ಕ್ಷೇತ್ರ ಕಾರ್ಯದ ಮಾಹಿತಿ**

ಹೊಸಪೇಟೆ ನಗರಸಭೆಯಲ್ಲಿ ಒಟ್ಟು ೩೫ ಚುನಾಯಿತ ಪ್ರತಿನಿಧಿಗಳಲ್ಲಿ ಶೇ. ೯೭.೧೪ರಷ್ಟು ಪ್ರತಿನಿಧಿಗಳು ಪ್ರತಿ ಸ್ಪರ್ಧಿಯನ್ನು ಸೋಲಿಸಿ ಆಯ್ಕೆಯಾಗಿದ್ದಾರೆ. ಹಾಗೆಯೇ ಉಳಿದ ಶೇ. ೨.೮೫ರಷ್ಟು ಪ್ರತಿನಿಧಿಯು ಚುನಾವಣೆ ಇಲ್ಲದೆ (ಅವಿರೋಧ ಆಯ್ಕೆ) ಆಯ್ಕೆಯಾಗಿರುತ್ತಾರೆ. ಅದರಂತೆ ಕೂಡ್ಲಿಗಿ ಪಟ್ಟಣ ಪಂಚಾಯಿತಿಯಲ್ಲಿ ಒಟ್ಟು ೨೦ ಚುನಾಯಿತ ಪ್ರತಿನಿಧಿಗಳಿದ್ದು, ಶೇ.

೧೦೦ರಷ್ಟು ಸದಸ್ಯರು ಪ್ರತಿಸ್ಪರ್ಧಿಗಳನ್ನು ಸೋಲಿಸುವುದರ ಮೂಲಕ ಆಯ್ಕೆಯಾಗಿರುತ್ತಾರೆ. ಇಲ್ಲಿ ತಿಳಿದುಕೊಳ್ಳಬೇಕಾದ ವಿಶೇಷವೆಂದರೆ ಇಲ್ಲಿ ಸತತವಾಗಿ ೧೫ ವರ್ಷಗಳಿಂದ ನಗರಸಭೆಯಲ್ಲಿ ಅವಿರೋಧ ಆಯ್ಕೆ ನಡೆಯುತ್ತದೆ. ಆ ವಾರ್ಡಿನ ಹಿರಿಯರೊಬ್ಬರು ಹೇಳಿಕೊಂಡಿರುವುದು ಕಂಡು ಬಂದಿದೆ. ಚುನಾವಣೆಯ ವೇಳೆಯಲ್ಲಿ ಚುನಾವಣೆ ನಡೆದರೆ ವಾರ್ಡಿನಲ್ಲಿ ಒಡಕು ಉಂಟಾಗುತ್ತದೆ. ಹಣ, ಹೆಂಡ, ಬಾಡೂಟ, ಸೀರೆಗಳನ್ನು ಹಂಚಲಾಗುತ್ತದೆ. ಇದರಿಂದ ವಾರ್ಡಿನ ಜನರನ್ನು ನಾವೇ ಭ್ರಷ್ಟರನ್ನಾಗಿಸಿದಂತೆ ಆಗುತ್ತದೆ. ಆದ್ದರಿಂದ ಅವಿರೋಧ ಆಯ್ಕೆಯೇ ಸರಿ ಅಲ್ಲವೇ? ಅವಿರೋಧ ಆಯ್ಕೆಯ ಬಗ್ಗೆ ಹಲವಾರು ಅಪಪ್ರಚಾರಗಳಿರುವುದು ಹಲವಾರು ಅಧ್ಯಯನಗಳಿಂದ ತಿಳಿದು ಬರುತ್ತದೆ. ಆದರೆ ಸೂಕ್ಷ್ಮವಾಗಿ ಗಮನಿಸಿದಾಗ ಅಂತಹ ಪ್ರಸಂಗಗಳ ಸುಳಿವು ನಾನು ಮಾಡಿದ ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಕಂಡು ಕೊಂಡಿದ್ದೇನೆ. ಹಾಗಾಗಿ ವಾರ್ಡಿನ ಸದಸ್ಯರೊಬ್ಬರನ್ನು ಚುನಾವಣೆ ನಡೆಸದೆ ಚುನಾಯಿಸುವ ಪ್ರಕ್ರಿಯೆಯಲ್ಲಿ ಹಿರಿಯರು ಪ್ರಮುಖ ಪಾತ್ರವನ್ನು ವಹಿಸಲಾಗಿದೆ. ಆದುದರಿಂದ ಸಾಂಪ್ರಾದಾಯಿಕ ಚುನಾವಣೆಯು ಅಭ್ಯರ್ಥಿಗಳ ಆಯ್ಕೆಯಲ್ಲಿ ಪ್ರಮುಖ ಪಾತ್ರವನ್ನು ವಹಿಸಿತೆಂಬ ಅಂಶವು ನಮಗೆ ತಿಳಿದು ಬಂದಿದೆ. ಒಟ್ಟಾರೆಯಾಗಿ ಈ ವಿಶ್ಲೇಷಣೆಯಿಂದ ತಿಳಿದು ಬರುವ ಸಂಗತಿಯೆಂದರೆ, ಮುಂದುವರಿದ ಹೊಸಪೇಟೆ ನಗರಸಭೆ ಸದಸ್ಯರು ಹಿಂದುಳಿದ ಪಟ್ಟಣ ಪಂಚಾಯಿತಿಯ ಸದಸ್ಯರಿಗಿಂತ ಆಯ್ಕೆ ಪ್ರಕ್ರೀಯೆಯಲ್ಲಿ ಉತ್ತಮ ಹೆಜ್ಜೆಗಳನ್ನು ಇಟ್ಟಿರುವುದು ತಿಳಿದು ಬಂದಿದೆ. ಹಾಗಾಗಿ ತೀರಾ ಹಿಂದುಳಿದ ಪಟ್ಟಣ ಪಂಚಾಯಿತಿಯು ಅಭಿವೃದ್ಧಿಹೊಂದಬೇಕಾದರೆ ಪಂಚಾಯಿತಿಯ ಚುನಾಯಿತ ಸದಸ್ಯರಿಗೂ ಗುಣಮಟ್ಟದ ಶಿಕ್ಷಣ, ಮೌಲ್ಯಗಳನ್ನು ಉಳಿಸಬಲ್ಲ, ಬೆಳಸಬಲ್ಲತಂಹ ಸಾಮಾರ್ಥ್ಯಗಳನ್ನು ನೀಡುವ ಅವಶ್ಯಕತೆಯಿದೆ ಎಂದು ಹೇಳಲಾಗಿದೆ.

**ನಗರಸಭೆ/ಪಟ್ಟಣ ಪಂಚಾಯಿತಿ ಕಾರ್ಯನಿರ್ವಹಣೆಗೆ ಶಿಕ್ಷಣದ ಅವಶ್ಯಕತೆಯ ವಿವರ**

| **ನಗರ ಸಭೆ/ಪಟ್ಟಣ ಪಂಚಾಯಿತಿ ಕಾರ್ಯನಿರ್ವಹಣೆಗೆ ಶಿಕ್ಷಣದ ಅವಶ್ಯಕತೆ ಕುರಿತು** | | **ಹೊಸಪೇಟೆ** | | **ಕೂಡ್ಲಿಗಿ** | |
|---|---|---|---|---|---|
| ೧ | ಇರಬೇಕು | ೨೮ | ೮೦.೦೦ | ೧೭ | ೮೫.೦೦ |
| ೨. | ಬೇಡ | ೭ | ೨೦.೦೦ | ೩ | ೧೫.೦೦ |
| | **ಒಟ್ಟು** | ೩೫ | ೧೦೦ | ೨೦ | ೧೦೦ |

**ಮೂಲ: ಕ್ಷೇತ್ರ ಕಾರ್ಯದ ಮಾಹಿತಿ**

ನಗರವಾರು ಚುನಾಯಿತ ಸದಸ್ಯರ ಶಿಕ್ಷಣದ ವಿವರವನ್ನು ನೋಡುವಾಗ ಹೊಸಪೇಟೆ ನಗರಸಭೆಯು ಒಟ್ಟು ೩೫ ಚುನಾಯಿತ ಸದಸ್ಯರನ್ನು ಒಳಗೊಂಡಿರುತ್ತದೆ. ಶೇ. ೮೦ರಷ್ಟು ಸದಸ್ಯರು ಆಡಳಿತದ ನಿರ್ವಹಣೆಗೆ ಶಿಕ್ಷಣವನ್ನು ಪಡೆದಿರಬೇಕು ಎಂಬುದಾಗಿ, ಹಾಗೆಯೇ ಉಳಿದ ಶೇ. ೨೦ರಷ್ಟು ಸದಸ್ಯರು ಆಡಳಿತ ನಿರ್ವಹಣೆಗಾಗಿ ಶಿಕ್ಷಣ ಅವಶ್ಯಕತೆ ಬೇಡ ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದರು. ಅದರಂತೆ ಕೂಡ್ಲಿಗಿ ಪಟ್ಟಣ ಪಂಚಾಯಿತಿಯಲ್ಲಿ ೨೦ ಚುನಾಯಿತ ಪ್ರತಿನಿಧಿಗಳಿರುತ್ತಾರೆ. ಅದರಲ್ಲಿ ಶೇ. ೮೫ ಸದಸ್ಯರು ಆಡಳಿತದ ನಿರ್ವಹಣೆಗಾಗಿ ಶಿಕ್ಷಣ ಬೇಕು ಎನ್ನುತ್ತಾರೆ. ಹಾಗೆಯೇ ಶೇ. ೧೫ರಷ್ಟು ಶಿಕ್ಷಣದ ಅವಶ್ಯಕತೆಯನ್ನು ತಿರಸ್ಕರಿಸುತ್ತಾರೆ. ಒಟ್ಟಾರೆ ಸ್ಥಳೀಯ ಸಂಸ್ಥೆಗಳಲ್ಲಿ

ಚುನಾಯಿತ ಪ್ರತಿನಿಧಿಗಳು ಸರ್ಕಾರದಿಂದ ಬಂದಂತಹ ಅನುದಾನವನ್ನು ಸಮರ್ಪಕ ರೀತಿಯಲ್ಲಿ ಬಳಸುವುದು, ವಿವಿಧ ಇಲಾಖೆಗಳಿಂದ ಬಂದಂತಹ ಕಾರ್ಯಕ್ರಮಗಳ ವಿವರಗಳನ್ನು ತಿಳಿಯಲು, ಯೋಜನೆಯನ್ನು ಸರಿಯಾದ ಸಮಯಕ್ಕೆ ಸರಿಯಾದ ರೀತಿಯಲ್ಲಿ ಅನುಷ್ಠಾನಗೊಳಿಸಲು ವಿವಿಧ ತಜ್ಞರನ್ನು ಭೇಟಿಯಾಗುವುದರ ಮೂಲಕ ಸಲಹೆ-ಮಾರ್ಗದರ್ಶನಗಳನ್ನು ಪಡೆಯಲು ಅವಶ್ಯಕ ಎಂದು ತಿಳಿದು ಬಂದಿದೆ. ಹಾಗೆಯೇ ಸಭೆಗಳು ನಡೆಯುವ ಸಂದರ್ಭದಲ್ಲಿ ನಗರ ಜನತೆ ಪಾಲ್ಗೊಂಡು ಸಭೆಯಲ್ಲಿ ಹೆಚ್ಚಾಗಿ ಪ್ರಶ್ನೆಗಳನ್ನು ಕೇಳುತ್ತಿರುತ್ತಾನೆ. ಅದಕ್ಕೆ ಸರಿಯಾದ ಉತ್ತರ ನೀಡಲು ಕಾರ್ಯನಿರ್ವಹಣೆಯ ಬಗ್ಗೆ ಹೇಳಲು ಶಿಕ್ಷಣ ಪಡೆದರೆ ಮಾತ್ರ ಸಾಧ್ಯ ಎಂಬ ಅಂಶಗಳು ಎರಡು ಸ್ಥಳೀಯ ಸಂಸ್ಥೆಗಳಿಂದ ತಿಳಿದುಬಂದ ಅಂಶವಾಗಿರುತ್ತದೆ. ಅದರಂತೆ ಆಡಳಿತ ಕಾರ್ಯನಿರ್ವಹಣೆ ಮಾಡಲಿಕ್ಕೆ ಶಿಕ್ಷಣ ಅವಶ್ಯಕತೆ ಬೇಡ ಅನುಭವೊಂದಿದ್ದರೆ ಸಾಕು ಆಡಳಿತವನ್ನು ಸಮರ್ಥವಾಗಿ ನಡೆಸಬಹುದೆಂಬ ಕಡಿಮೆ ಚುನಾಯಿತ ಪ್ರತಿನಿಧಿಗಳು ತಮ್ಮ ಕೆಲವು ಅಭಿಪ್ರಾಯಗಳು ಅಧ್ಯಯದಿಂದ ತಿಳಿದು ಬಂದಿದೆ. ಒಟ್ಟಾರೆಯಾಗಿ ವಾರ್ಡಿನ ಚುನಾಯಿತ ಸದಸ್ಯರ ಶಿಕ್ಷಣದ ಅವಶ್ಯಕತೆಯ ಅಭಿಪ್ರಾಯಗಳನ್ನು ನೋಡಿದಾಗ ಸಾಪೇಕ್ಷವಾಗಿ ಮುಂದುವರಿದ ನಗರಸಭೆ ಸದಸ್ಯರಿಗಿಂತ ತೀರಾ ಹಿಂದುಳಿದ ಸದಸ್ಯರು ಆಸಕ್ತಿಯನ್ನು ವಹಿಸದೆ ಸ್ಥಳೀಯ ರಾಜಕೀಯ ಜ್ಞಾನವೊಂದಿದ್ದರೆ ಸಾಕು ಎಂಬ ಅಂಶವನ್ನು ಹೇಳಿದ್ದಾರೆ. ಪ್ರಜಾತಂತ್ರ ವ್ಯವಸ್ಥೆಯಲ್ಲಿ ಜನಪ್ರತಿನಿಧಿಯಾಗಿ ಆಯ್ಕೆಯಾದಾಗ ಸಂವಿಧಾನಬದ್ಧವಾಗಿ ಅಂಚಿಗೆ ತಳಲ್ಪಟ್ಟ ಸಮುದಾಯಗಳಿಗೆ ಸಮಾಜದ ಮೇಲ್ದರ್ಜೆಗೆ ಬರುವಂತೆ ಮಾಡಲು ಸರ್ಕಾರದಿಂದ ಬರು ಯೋಜನೆಗಳಿಂದ ಮೂಲಭೂತ ಸೌಲಭ್ಯಗಳನ್ನು ನಿಯಮಿತವಾಗಿ ಅನುಷ್ಠಾನಗೊಳ್ಳುವಲ್ಲಿ ಹಾಗೂ ಹಿಂದುಳಿದ ಪಟ್ಟಣ ಪಂಚಾಯಿತಿ ಬೇರನ್ನು ಸಡಿಲಗೊಂಡಿರುವುದನ್ನ ಗಟ್ಟಿಗೊಳಿಸುವುದರ ಮೂಲಕ ಅಭಿವೃದ್ಧಿಪಡಿಸುವುದಕ್ಕಾಗಿ ಚುನಾಯಿತ ಸದಸ್ಯರಿಗೆ ಶಿಕ್ಷಣದ ಅವಶ್ಯಕತೆಯ ಅಗತ್ಯವಿದೆ ಎಂದು ಹೇಳಲಾಗಿದೆ.

**ಜಾತಿ/ಮುಖ್ಯಸ್ಥನ ಬೆಂಬಲ ಪಡೆದರೆ ಚುನಾವಣೆಯಲ್ಲಿ ಗೆಲುವಿನ ಬಗ್ಗೆ**

| ಜಾತಿ/ಮುಖ್ಯಸ್ಥನ ಬೆಂಬಲ ಪಡೆದರೆ ಚುನಾವಣೆಯಲ್ಲಿ ಗೆಲುವಿನ ಬಗ್ಗೆ | | ಹೊಸಪೇಟೆ | | ಕೂಡ್ಲಿಗಿ | |
|---|---|---|---|---|---|
| ೧ | ಸಾಧ್ಯವಿದೆ | ೧೪ | ೪೦.೦೦ | ೦೨ | ೭೦.೦೦ |
| ೨ | ಇಲ್ಲ | ೨೧ | ೬೦.೦೦ | ೮ | ೩೦.೦೦ |
| | **ಒಟ್ಟು** | ೩೫ | ೧೦೦ | ೨೦ | ೧೦೦ |

**ಮೂಲ: ಕ್ಷೇತ್ರ ಕಾರ್ಯದ ಮಾಹಿತಿ**

ನಗರವಾರು ಸಂದರ್ಶಿಸಿದಲ್ಲಿ ಹೊಸಪೇಟೆ ನಗರಸಭೆಯ ಒಟ್ಟು ೩೫ ಚುನಾಯಿತ ಪ್ರತಿನಿಧಿಗಳನ್ನು ಹೊಂದಿದ್ದು, ಅದರಲ್ಲಿ ಶೇ. ೪೦ರಷ್ಟು ಸದಸ್ಯರು ಜಾತಿ/ಮುಖ್ಯಸ್ಥನ ಬೆಂಬಲ ಪಡೆದರೆ ಚುನಾವಣೆಯಲ್ಲಿ ಗೆಲ್ಲಲು ಸಾಧ್ಯವಿದೆ ಎಂದು ಹೇಳಿರುತ್ತಾರೆ. ಹಾಗೆಯೇ ಉಳಿದ ಶೇ. ೬೦ ಸದಸ್ಯರು ಯಾವ ಬೆಂಬಲವನ್ನು ಪಡೆದರೂ ಚುನಾವಣೆಯಲ್ಲಿ ಗೆಲ್ಲಲು ಸಾಧ್ಯವಿಲ್ಲ ಎಂದು ಹೇಳಿರುತ್ತಾರೆ. ಅದರಂತೆ ಕೂಡ್ಲಿಗಿ ಪಟ್ಟಣ ಪಂಚಾಯಿತಿಯಲ್ಲಿ ಒಟ್ಟು ೨೦ ಚುನಾಯಿತ ಸದಸ್ಯರನ್ನು ಒಳಗೊಂಡಿದ್ದು, ಅದರಲ್ಲಿ ಶೇ. ೭೦ರಷ್ಟು ಸದಸ್ಯರು ಜಾತಿ/ಮುಖ್ಯಸ್ಥನ ಬೆಂಬಲ ಪಡೆದರೆ ಚುನಾವಣೆಯಲ್ಲಿ ಗೆಲುವು

ಸಾಧ್ಯವಿದೆ ಎಂದು ಹೇಳಿರುತ್ತಾರೆ. ಹಾಗೆಯೇ ಉಳಿದ ಶೇ. ೩೦ರಷ್ಟು ಚುನಾಯಿತ ಸದಸ್ಯರು ಜಾತಿ/ ಮುಖ್ಯಸ್ಥನ ಬೆಂಬಲ ಪಡೆದರೂ ಚುನಾವಣೆಯಲ್ಲಿ ಗೆಲುವು ಸಾಧ್ಯವಾಗುವುದಿಲ್ಲ ಎಂದು ಹೇಳಿರುತ್ತಾರೆ. ನಗರಸಭೆಯ ಚುನಾಯಿತ ಪ್ರತಿನಿಧಿಗಳು ಶೇ. ೬೦ರಷ್ಟು ಸದಸ್ಯರ ಪ್ರಕಾರ ನಗರದ ವಾರ್ಡ್ ಜನರೊಂದಿಗೆ ಇರುವ ಒಳ್ಳೆಯ ಸಂಬಂಧವೇ ಚುನಾವಣೆಯನ್ನು ಗೆಲ್ಲಲು ಸಾಧ್ಯವಾಯಿತು, ಸದಸ್ಯರ ಉತ್ತಮ ಗುಣವನ್ನು ನೋಡಿ ವಾರ್ಡಿನ ಜನರು ಅಭ್ಯರ್ಥಿಗಳನ್ನು ಆಯ್ಕೆ ಮಾಡಲಾಗಿದೆ, ಒಬ್ಬ ಸದಸ್ಯರ ಪ್ರಕಾರ ನಗರ ಸ್ಥಳೀಯ ಸಂಸ್ಥೆಗಳ ಕಾರ್ಯಗಳನ್ನು ನಿರ್ವಹಿಸಲು ಅಭ್ಯರ್ಥಿಗಳು ಯೋಗ್ಯರೇ ಎಂದು ಯೋಚಿಸಿ ವಾರ್ಡಿನ ಜನರು ಮತ ನೀಡುತ್ತಾರೆ ಮತ್ತು ಅಭ್ಯರ್ಥಿಗಳು ಚುನಾವಣಾ ಪ್ರಣಾಳಿಕೆಯನ್ನು ಸಿದ್ಧಗೊಳಿಸಲಿಲ್ಲ ಎಂದು ಸದಸ್ಯರುಗಳನ್ನು ಸಂದರ್ಶಿಸಿದಾಗ ತಿಳಿದು ಬಂದಿದೆ. ಎರಡು ನಗರ ಸ್ಥಳೀಯ ಸಂಸ್ಥೆಗಳಲ್ಲಿ ಅಭ್ಯರ್ಥಿಗಳು ಸಾರ್ವಜನಿಕ ಸಭೆ ಹಾಗೂ ಮನೆ ಮನೆಗೆ ಹೋಗಿ ಚುನಾವಣಾ ಪ್ರಚಾರ ಮಾಡಿದ್ದಾರೆ. ಈ ರೀತಿ ಮಾಡುವುದರಿಂದ ನಗರಸಭೆಯ ವಾರ್ಡಿನ ಸಮಸ್ಯೆಗಳನ್ನು ತಿಳಿದುಕೊಳ್ಳಲು ಸಹಾಯಕವಾಗಿ ಚುನಾವಣೆಯನ್ನು ಗೆಲ್ಲಬಹುದು ಎಂದು ವಿವಿಧ ರೀತಿಯ ಅಭಿಪ್ರಾಯಗಳನ್ನು ವ್ಯಕ್ತಪಡಿಸುತ್ತಾರೆ. ಮೇಲಿ ತಿಳಿಸಿದಂತಹ ಅಂಶಗಳಲ್ಲಿ ಪಟ್ಟಣ ಪಂಚಾಯಿತಿಯಲ್ಲಿ ಯಾವ ಅಂಶಗಳೂ ಕಾಣದಿರುವುದು ಅಧ್ಯಯಗಳಿಂದ ತಿಳಿದು ಬಂದಿದೆ. ಒಟ್ಟಾರೆಯಾಗಿ ಸಾಪೇಕ್ಷವಾಗಿ ಮುಂದುವರಿದ ನಗರಸಭೆ ಸದಸ್ಯರಿಗಿಂತ ತೀರಾ ಹಿಂದುಳಿದ ಪಟ್ಟಣ ಪಂಚಾಯಿತಿ ಸದಸ್ಯರು ಜಾತಿ/ಮುಖ್ಯಸ್ಥನ ಬೆಂಬಲ ಪಡೆಯುವುದರ ಮೂಲಕ ಜಾತಿ–ಮುಖಂಡರಿಗೆ ಜೊತು ಬಿದ್ದು ಅಭಿವೃದ್ಧಿಯಾಗದೆ ಹಿಂದುಳಿಯಿತು ಎನ್ನಬಹುದಾಗಿದೆ. ಚನಾವಣೆಯಲ್ಲಿ ವಾರ್ಡಿನ ಜನರು ಅಭ್ಯರ್ಥಿಗಳನ್ನು ಚುನಾಯಿಸಿರುತ್ತಾರೆ. ಹಾಗಾಗಿ ಚುನಾಯಿತ ಅಭ್ಯರ್ಥಿಗಳು ತಮ್ಮ ಕರ್ತವ್ಯವನ್ನು ಮಾಡಿ ಯಾವ ಜಾತಿ–ಮುಂಖಡರೆನ್ನದೆ ಹಿಂದುಳಿದ ಪಟ್ಟಣ ಪಂಚಾಯಿತಿಯನ್ನು ಮುಂದುವರಿಸುವ ಅವಶ್ಯಕತೆಯಿದೆ ಎಂದು ಹೇಳಬಹುದಾಗಿದೆ.

**ನೀವು ಜಾತಿ/ಮುಖಂಡನ ಬೆಂಬಲ ಪಡೆದು ಚುನಾವಣೆ ಸ್ಪರ್ಧಿಸಿದ್ದೀರಾ**

| ನೀವು ಜಾತಿ/ಮುಖಂಡನ ಬೆಂಬಲ ಪಡೆದು ಚುನಾವಣೆ ಸ್ಪಂರ್ಧಿಸಿದ್ದೀರಾ | | ಹೊಸಪೇಟೆ | | ಕೂಡ್ಲಿಗಿ | |
|---|---|---|---|---|---|
| ೧. | ಹೌದು | ೧೪ | ೪೦.೦೦ | ೧೨ | ೬೦.೦೦ |
| ೨. | ಇಲ್ಲ | ೨೧ | ೬೦.೦೦ | ೮ | ೩೦.೦೦ |
| | ಒಟ್ಟು | ೩೫ | ೧೦೦ | ೨೦ | ೧೦೦ |

**ಮೂಲ: ಕ್ಷೇತ್ರ ಕಾರ್ಯದ ಮಾಹಿತಿ**

ನಗರ ಪ್ರದೇಶಗಳಲ್ಲಿ ಮಹಿಳೆಯರು ಚುನಾವಣೆಗೆ ಸ್ಪರ್ಧಿಸಬೇಕಾದರೆ ಪತಿ, ಕುಟುಂಬದ ಇತರ ಪುರುಷರು ಇಲ್ಲವೇ ಸಮುದಾಯದ ಯಾವುದೋ ಪ್ರಭಾವಿ ವ್ಯಕ್ತಿಗಳು/ರಾಜಕಾರಣಿಗಳು ನೇಮಕ ಮಾಡಬೇಕಾಗಿದೆ. ಇಲ್ಲಿ ಗಮನಾರ್ಹವಾದ ಸಂಗತಿಯೆಂದರ, ಸಾಮಾನ್ಯವಾಗಿ ಮಾಜಿ ಸದಸ್ಯರ ಕುಟುಂಬದವರೇ ತಮ್ಮ ತಾಯಿ ಅಥವಾ ಹೆಂಡತಿಯನ್ನು ಸ್ಪರ್ಧೆಗಿಳಿಸಲು ಇನ್ನೊಂದು ಅವಕಾಶವನ್ನು ಗಿಟ್ಟಿಸಿಕೊಳ್ಳುತ್ತಾರೆ. ಮಹಿಳೆಯರ ಅಭಿಪ್ರಾಯ ಅಥವಾ ಇಚ್ಛೆಯನ್ನು ಅರಿತು ಅವರನ್ನು ಚುನಾವಣೆಗೆ ನಿಲ್ಲಿಸುವುದು ಬಹಳ ವಿರಳ. ಹೆಚ್ಚಿನ ಸಂದರ್ಭಗಳಲ್ಲಿ ಸ್ವಂತ ನಿರ್ಧಾರ ತೆಗೆದುಕೊಳ್ಳಲು ಅವಕಾಶವೇ ಇಲ್ಲದೆ ಯಾರದೋ ಹೆಂಡತಿಯಾಗಿ, ಯಾರದೋ ಒತ್ತಡದ

ಪ್ರತಿನಿಧಿಯಾಗಿ ಮಹಿಳೆಯರು ಸ್ಪರ್ಧೆಗಿಳಿಯುತ್ತಾರೆ. ಪುರುಷ ಪ್ರಧಾನ ಸಮಾಜದಲ್ಲಿ ಸ್ವ ಅಸ್ತಿತ್ವ ಮಹಿಳೆಯರಿಗೆ ಇನ್ನೂ ದೂರದ ಮಾತು. ಈ ಹಿನ್ನೆಲೆಯಲ್ಲಿ ನೋಡಿದಾಗ ಹೊಸಪೇಟೆ ನಗರಸಭೆಯಲ್ಲಿ ಒಟ್ಟು ೩೫ ಚುನಾಯಿತ ಪ್ರತಿನಿಧಿಗಳಿದ್ದು, ಅದರಲ್ಲಿ ಶೇ.೪೦ರಷ್ಟು ಜನ ಪ್ರತಿನಿಧಿಗಳು ಜಾತಿ/ಮುಖಂಡನ ಬೆಂಬಲ ಪಡೆದು ಚುನಾವಣೆಗೆ ಸ್ಪರ್ಧಿಸಿದ್ದೇವೆ ಎಂಬುದಾಗಿ ಹಾಗೆಯೇ ಉಳಿದ ಶೇ. ೬೦ರಷ್ಟು ಸದಸ್ಯರು ಜಾತಿ/ಮುಖಂಡನ ಬೆಂಬಲ ಪಡೆಯದೆ ಚುನಾವಣೆಯಲ್ಲಿ ಸ್ಪರ್ಧಿಸಿರುವುದಾಗಿದೆ. ಅದರಂತೆ ಕೂಡ್ಲಿಗಿ ಪಟ್ಟಣ ಪಂಚಾಯಿತಿಯು ೨೦ ಚುನಾಯಿತ ಪ್ರತಿನಿಧಿಗಳನ್ನು ಹೊಂದಿರುತ್ತದೆ. ಅದರಲ್ಲಿ ಶೇ.೭೦ರಷ್ಟು ಸದಸ್ಯರು ಜಾತಿ/ಮುಖಂಡನ ಬೆಂಬಲ ಪಡೆದು ಚುನಾವಣೆಗೆ ಸ್ಪರ್ಧಿಸಿದ್ದೇವೆ ಎಂದು ಹೇಳುತ್ತಾರೆ. ಉಳಿದ ಶೇ.೩೦ರಷ್ಟು ಚುನಾಯಿತ ಸದಸ್ಯರು ಯಾವ ಜಾತಿ/ಮುಖಂಡನ ಬೆಂಬಲ ಪಡೆಯದೆ ಚುನಾವಣೆಗೆ ಸ್ಪರ್ಧಿಸಿರುತ್ತೇವೆ ಎಂಬ ಅಂಶಗಳು ಅಧ್ಯಯನದಿಂದ ತಿಳಿದು ಬಂದಿದೆ. ಹಾಗೆಯೇ ಸಾಪೇಕ್ಷವಾಗಿ ಮುಂದುವರಿದ ನಗರಸಭೆ ವಾರ್ಡಿನಲ್ಲಿ ಸ್ಥಳೀಯ ಜನರ ಬೆಂಬಲ ಮತ್ತು ಬಹಳ ವರ್ಷಗಳಿಂದ ರಾಜಕೀಯದಲ್ಲಿದ್ದು ಅನುಭವವು ಚುನಾವಣೆಗೆ ಸ್ಪರ್ಧಿಸಲು ಸಹಾಯಕಾರಿಯಾಗುತ್ತದೆ ಎಂದು ಸಕಾರಾತ್ಮಕ ಅಭಿಪ್ರಾಯಗಳನ್ನು ನೀಡಿರುತ್ತಾರೆ ತೀರಾ ಹಿಂದುಳಿದ ಪಟ್ಟಣ ಪಂಚಾಯಿತಿಯ ಸ್ಥಳೀಯ ಸಂಸ್ಥೆಗಳಲ್ಲಿ ಚುನಾವಣೆಯನ್ನು ಗೆಲ್ಲಲು ಪ್ರಬಲವಾದ ರಾಜಕೀಯ ಪಕ್ಷದ ಬೆಂಬಲವು ಮುಖ್ಯ ಎಂದು ನಕಾರಾತ್ಮಕ ಹೇಳಿಕೆಯಲ್ಲಿ ಸ್ಥಳೀಯ ರಾಜಕೀಯ ಘರ್ಷಣೆ ಹಾಗೂ ಆರ್ಥಿಕ ಹೊಡೆತದಿಂದ ನಗರ ಪ್ರದೇಶಗಳು ಹಾಗೂ ಅವುಗಳ ಆಡಳಿತ ಯಂತ್ರ ಅಖಾಡವಾಗಿರುವುದರ ಪರಿಣಾಮವಾಗಿ ಹಿಂದುಳಿದಿದೆ ಎನ್ನಬಹುದಾಗಿದೆ. ಒಟ್ಟಾರೆಯಾಗಿ ಹಿಂದುಳಿದ ಚುನಾಯಿತ ಸದಸ್ಯರು ತಮ್ಮ ಸ್ಥಾನದ ಜವಾಬ್ದಾರಿಯಿಂದ ವಾರ್ಡಿನ ಜನರ ಹಿತಾಸಕ್ತಿಗೆ ಅನುಸಾರವಾಗಿ ರಾಜಕೀಯ ಇಚ್ಛಾಸಕ್ತಿಯಿಂದ ಆಡಳಿತದ ಬಗ್ಗೆ ಹೆಚ್ಚಿನ ಅರಿವು ಮತ್ತು ಭಾಗವಹಿಸುತ್ತಾ ಅಬಿವೃದ್ಧಿ ಪಟ್ಟಣವನ್ನಾಗಿ ಮಾಡುವ ಅವಶ್ಯಕತೆಯಿದೆ ಎನ್ನಬಹುದಾಗಿದೆ.

**೬.೪ ನಗರವಾರು ಸಂದರ್ಶನ ಮಾಡಿದ ಚುನಾಯಿತ ಪ್ರತಿನಿಧಿಗಳ ಚುನಾವಣೆಯ ಸ್ಪರ್ದೆ ಮತ್ತು ರಾಜಕೀಯ ಪಕ್ಷದ ವಿವರ**

**ನಿಮ್ಮನ್ನು ನಗರಸಭೆ/ಪಟ್ಟಣ ಪಂಚಾಯಿತಿ ಚುನಾವಣೆಗೆ ಸ್ಪರ್ಧಿಸಲು ಕಾರಣಗಳು**

| | ನಿಮ್ಮನ್ನು ನಗರಸಭೆ/ಪಟ್ಟಣ ಪಂಚಾಯಿತಿ ಚುನಾವಣೆಗೆ ಸ್ಪರ್ಧಿಸಲು ಕಾರಣಗಳು | ಹೊಸಪೇಟೆ ನಗರ ಸಭೆ | | ಕೂಡ್ಲಿಗಿ ಪಟ್ಟಣಪಂಚಾಯಿತಿ | |
|---|---|---|---|---|---|
| | | ಸಂಖ್ಯೆಗಳು | ಶೇಕಡವಾರು | ಸಂಖ್ಯೆಗಳು | ಶೇಕಡವಾರು |
| | **ನಿಮ್ಮನ್ನು ನಗರಸಭೆ/ಪಟ್ಟಣ ಪಂಚಾಯಿತಿ ಚುನಾವಣೆಗೆ ಸ್ಪರ್ಧಿಸಲು ಕಾರಣಗಳು** | | | | |
| ೧ | ಕ್ಷೇತ್ರ ಮೀಸಲಾಗಿರುವುದರಿಂದ, (ಸ್ವ ಇಚ್ಛೆಯಿಂದ) | ೯ | ೨೫.೭೧ | ೫ | ೨೫.೦೦ |
| ೨ | ವಾರ್ಡಿನ ಉದ್ದಾರಕ್ಕಾಗಿ | ೧೫ | ೪೨.೮೫ | ೭ | ೩೫.೦೦ |
| ೩ | ಜಾತಿಯವರು | ೭ | ೨೦.೦೦ | ೫ | ೨೫.೦೦ |
| ೪ | ಹಿರಿಯರು ರಾಜಕೀಯದಲ್ಲಿದ್ದರಿಂದ | ೪ | ೧೧.೪೨ | ೩ | ೧೫.೦೦ |
| | **ಒಟ್ಟು** | ೩೫ | ೧೦೦ | ೨೦ | ೧೦೦ |

**ಮೂಲ: ಕ್ಷೇತ್ರ ಕಾರ್ಯದ ಮಾಹಿತಿ**

ನಗರವಾರು ಚುನಾವಣೆಗೆ ಸ್ಪರ್ಧಿಸಲು ಕಾರಣಗಳೇನು ಎಂಬ ವಿವರವನ್ನು ನೀಡಲಾಗಿದೆ. ನಗರ ಸ್ಥಳೀಯ ಸಂಸ್ಥೆಗಳ ಪುರುಷ ಮತ್ತು ಮಹಿಳಾ ಪ್ರತಿನಿಧಿಗಳು ವಿಶೇಷವಾಗಿ ಮಹಿಳೆಯರಿಗೆ ರಾಜ್ಯ ಸರ್ಕಾರ ಶೇ. ೫೦ರಷ್ಟು ಮೀಸಲಾತಿ ನಿಗದಿಯಾಗಿದ್ದು, ಅಂತೆಯೇ, ಬೇರುಮಟ್ಟದ ಆಡಳಿತ ವ್ಯವಸ್ಥೆಯಲ್ಲಿ ಮಹಿಳೆಯರ ಭಾಗವಹಿಸುವಿಕೆಗೆ ಹಾಗೂ ನಿರ್ದಿಷ್ಟ ಬದಲಾವಣೆಗಳಿಗೆ ಸದಾವಕಾಶ ಸಿಕ್ಕಂತಾಗಿದೆ ಎಂಬುದರಿಂದ ಮಹಿಳೆಯರು ಸ್ವತಂತ್ರ್ಯವಾಗಿ ತಮ್ಮಿಚ್ಛೆಯಂತೆ ಚುನಾವಣೆಯಲ್ಲಿ ಸ್ಪರ್ಧಿಸುವುದಾಗಿದೆ. ರಾಜಕೀಯ ಧ್ವನಿ ಮತ್ತು ನಿರ್ಣಯ ಕೈಗೊಳ್ಳುವ ಅವಕಾಶ, ಆರ್ಥಿಕ ಅಭಿವೃದ್ಧಿ ಮತ್ತು ಸಾಮಾಜಿಕ ನ್ಯಾಯಗಳಿಗೆ ಸಂಬಂಧಿಸಿದಂತೆ ಅಗತ್ಯವಾಗಿದ್ದು ಇವುಗಳು ಜಾತಿ ಸಂರಚನೆ , ಲಿಂಗ ಸಂಬಂಧಿ ತಾರತಮ್ಯ ಅಳಿಸಿಹಾಕು ಮೂಲಕ ಸ್ಥಳೀಯ ಸಂಸ್ಥೆಗಳಲ್ಲಿ ಮಹಿಳೆಯರ ಭಾಗವಹಿಸುವಿಕೆ ಉತ್ತಮವಾದದ್ದು ಈ ರೀತಿಯ ವಿಶ್ಲೇಷಣೆಗಳಿಂದ ನಗರವಾರು ಸಂದರ್ಶಿಸಿದಾಗ ಹೊಸಪೇಟೆ ನಗರಸಭೆ ಶೇ. ೨೫.೭೧ರಷ್ಟು ಪ್ರತಿನಿಧಿಗಳು ಕ್ಷೇತ್ರವು ಮೀಸಲಾಗಿದ್ದು ಅಲ್ಲದೇ, ನಗರ ಜನರ ಸಾಮಾಜಿಕ ಮತ್ತು ಆರ್ಥಿಕ ತೊಂದರೆಗಳಿಗೆ ಸ್ಪಂಧಿಸುವ ಸಲುವಾಗಿ ಹಾಗೂ ಕೂಡ್ಲಿಗಿ ಪಟ್ಟಣ ಪಂಚಾಯಿತಿ ಶೇ. ೨೫ರಷ್ಟು ಜನಪ್ರತಿನಿಧಿಗಳು ಕ್ಷೇತ್ರದ ಮೀಸಲಾಗಿರುವ ಉದ್ದೇಶದಿಂದ ಸ್ಥಳೀಯ ಸಂಸ್ಥೆಗೆ ಸೇರಿದ್ದಾರೆ. ಹೊಸಪೇಟೆ ನಗರಸಭೆ ಶೇ. ೪೨.೮೫ರಷ್ಟು ಜನಪ್ರತಿನಿಧಿಗಳು ಹಾಗೂ ಕೂಡ್ಲಿಗಿ ಪಟ್ಟಣ ಪಂಚಾಯಿತಿಯ ಶೇ. ೩೫ರಷ್ಟು ಜನಪ್ರತಿನಿಧಿಗಳು ತಮ್ಮ ವಾರ್ಡ್‌ನ್ನು ಉದ್ಧಾರ ಮಾಡಬೇಕೆಂಬ ಉದ್ದೇಶಗಳಿಂದ ರಾಜಕೀಯ ರಂಗದಲ್ಲಿದ್ದರೆ ಮಾತ್ರ ಸಾಧ್ಯವೆಂದು ಕೆಲವರ ಅಭಿಪ್ರಾಯ. ನಗರಸಭೆಯ ಶೇ. ೨೦ರಷ್ಟು ಚುನಾಯಿತ ಸದಸ್ಯರು, ಪಟ್ಟಣ ಪಂಚಾಯಿತಿಯ ಶೇ. ೨೫ರಷ್ಟು ಜನಪ್ರತಿನಿಧಿಗಳು ಜಾತಿಯವರ ಪ್ರೇರಣೆಯಿಂದ ಉತ್ತಮ ಜೀವನ ಮಟ್ಟದ ಸುಧಾರಣೆಗಾಗಿ ಚುನಾವಣೆ ಸ್ಪಂರ್ಧಿಸಿದ್ದೇವೆ. ಅದರಂತೆ ಹೊಸಪೇಟೆ ನಗರಸಭೆಯಲ್ಲಿ ಶೇ. ೧೧.೪೨ರಷ್ಟು ಚುನಾಯಿತ ಸದಸ್ಯರು ಹಾಗೂ ಕೂಡ್ಲಿಗಿ ಪಟ್ಟಣ ಪಂಚಾಯಿತಿಯ ಶೇ. ೧೫ರಷ್ಟು ಜನಪ್ರತಿನಿಧಿಗಳು ಅವರ ಮನೆಯಲ್ಲಿರುವ ಹಿರಿಯರು ರಾಜಕೀಯದಲ್ಲಿರುವುದರಿಂದ ಹಿರಿಯರು ಹಾಕಿಕೊಟ್ಟ ಮಾರ್ಗವನ್ನು ಅನುಸರಿಸಲು ಚುನಾವಣೆಗೆ ಸ್ಪಂರ್ಧಿಸಲು ಸೇರಿಕೊಂಡಿರುವುದಾಗಿದೆ ಎಂದು ಅಧ್ಯಯನಗಳಿಂದ ತಿಳಿದು ಬಂದಿದೆ. ಒಟ್ಟಾರೆಯಾಗಿ, ಸಾಪೇಕ್ಷವಾಗಿ ಮುಂದುವರಿದ ನಗರಸಭೆ ಚುನಾಯಿತ ಸದಸ್ಯರುಗಳಿಗೆ ಸ್ಥಳೀಯರೊಂದಿಗೆ ಇದ್ದ ಉತ್ತಮ ಸಂಬಂಧ ಹಾಗೂ ಸ್ಥಳೀಯರಿಗಾಗಿ ಮಾಡಿದ ಉತ್ತಮ ಕೆಲಸದ ಆಧಾರದ ಮೇಲೆ ಚುನಾವಣೆಗೆ ಸ್ಪರ್ಧಿಸಲು ಸಹಾಯವಾಗಿದೆ. ಮುಂದುವರಿಯುತ್ತಾ ತೀರಾ ಹಿಂದುಳಿದ ಕೂಡ್ಲಿಗಿ ಪಟ್ಟಣ ಪಂಚಾಯಿತಿಯಲ್ಲಿ ಮಹಿಳಾ ಪ್ರತಿನಿಧಿ ಪ್ರಕಾರ ಅವರ ಚುನಾವಣಾ ಕ್ಷೇತ್ರದಲ್ಲಿ ಮೀಸಲಾತಿ ಸ್ಥಾನಕ್ಕೆ ಯಾವ ಮಹಿಳಾ ಅಭ್ಯರ್ಥಿಗಳು ಲಭ್ಯವಿಲ್ಲದ್ದರಿಂದ ಅವರು ಬೆಂಬಲಿಸುತ್ತಿದ್ದ ಪಕ್ಷ ಆದೇಶದಂತೆ ಅವರನ್ನು ಆಯ್ಕೆ ಮಾಡಲಾಯಿತೆಂದು ತಿಳಿದು ಬಂದಿದೆ. ಮಹಿಳಾ ಪ್ರತಿನಿಧಿಯ ಗಂಡ ಜಿಲ್ಲಾ ಮಟ್ಟದ ರಾಜಕೀಯ ಪಕ್ಷದ ಸದಸ್ಯರಾಗಿದ್ದರು ಈ ಸದಸ್ಯೆಗೆ ಚುನಾವಣೆ ಸ್ಪರ್ಧಿಸಲು ಇಷ್ಟವಿಲ್ಲದಿದ್ದರೂ ತಮ್ಮ ಗಂಡನ ಒತ್ತಾಯದಿಂದ ಸ್ಪರ್ಧಿಸುವಂತಾಯಿತು. ಒಬ್ಬ ಮಹಿಳಾ ಪ್ರತಿನಿಧಿಗೆ ತಮ್ಮ ಪರವಾಗಿ ನಾಮಪತ್ರ ಸಲ್ಲಿಸಿರುವುದೇ ಗೊತ್ತಿರಲಿಲ್ಲ ಇಂತಹ ಅಂಶಗಳಿಂದ ಹಿಂದುಳಿಯಿತು ಎನ್ನಬಹುದಾಗಿದೆ. ಚುನಾಯಿತಗೊಂಡ ಅಭ್ಯರ್ಥಿಗಳು ತಮ್ಮ ಕ್ಷೇತ್ರದ ಅಭಿವೃದ್ಧಿಗಾಗಿ ಮುಕ್ತವಾಗಿ ಅಧಿಕಾರ

ಚಲಾಯಿಸುವಂತಹ ವ್ಯವಸ್ಥೆ ಹಾಗೂ ಸ್ಥಳೀಯ ರಾಜಕೀಯದಲ್ಲಿ ಸಕ್ರಿಯವಾಗಿ ಭಾಗವಹಿಸುವುದರೊಂದಿಗೆ ಕುಟುಂಬದ ಬೆಂಬಲ, ಉತ್ತಮ ಸಂಬಂಧ, ಆರ್ಥಿಕ ಸ್ಥಿರತೆ ಮತ್ತು ರಾಜಕೀಯ ಸಂಬಂಧಗಳನ್ನು ಹಿಂದುಳಿದ ಪ್ರದೇಶದಲ್ಲಿ ಸಹಾ ನಿರ್ಮಾಣ ಮಾಡುವ ಅವಶ್ಯಕತೆಯಿದೆ ಎಂದು ಹೇಳಬಹುದಾಗಿದೆ.

**ಚುನಾಯಿತ ಪ್ರತಿನಿಧಿಗಳ ರಾಜಕೀಯ ಪಕ್ಷದ ವಿವರ**

| | ಚುನಾಯಿತ ಪ್ರತಿನಿಧಿಗಳ ರಾಜಕೀಯ ಪಕ್ಷದ ವಿವರ | ಹೊಸಪೇಟೆ | | ಕೂಡ್ಲಿಗಿ | |
|---|---|---|---|---|---|
| ೧. | ಕಾಂಗ್ರೆಸ್ | ೨೦ | ೫೭.೧೪ | ೧೧ | ೫೫.೦೦ |
| ೨. | ಬಿ.ಜೆ.ಪಿ. | ೨ | ೫.೭೧ | ೩ | ೧೫.೦೦ |
| ೩. | ಬಿ.ಎಸ್.ಆರ್. (ಪಕ್ಷೇತರ) | ೧೨ | ೩೪.೨೮ | ೬ | ೩೦.೦೦ |
| ೪. | ಜೆ.ಡಿ.ಎಸ್. | ೧ | ೨.೮೫ | ೦ | ೦.೦೦ |
| | ಒಟ್ಟು | ೩೫ | ೧೦೦ | ೨೦ | ೧೦೦ |

**ಮೂಲ: ಕ್ಷೇತ್ರ ಕಾರ್ಯದ ಮಾಹಿತಿ**

ನಗರ ಪ್ರದೇಶಗಳಾದ ಹೊಸಪೇಟೆ ನಗರಸಭೆಯಲ್ಲಿ ೩೫ ಸದಸ್ಯರಿದ್ದಾರೆ. ಇದರಲ್ಲಿ ಶೇ. ೬೫.೭೧ರಷ್ಟು ಪುರುಷ ಸದಸ್ಯರು ಮತ್ತು ಶೇ. ೩೪.೨೮ರಷ್ಟು ಮಹಿಳಾ ಸದಸ್ಯೆಯರು ಇದ್ದು, ಹೆಚ್ಚಿನ ಜನ ಸದಸ್ಯರು ರಾಜಕೀಯ ಪಕ್ಷಗಳಿಗೆ ಸೇರಿದ್ದಾರೆ ಎಂದು ನಾವು ಸದಸ್ಯರನ್ನು ಸಂದರ್ಶಿಸಿದಾಗ ತಿಳಿಯಿತು. ಇವರಲ್ಲಿ ಶೇ. ೫೭.೧೪ರಷ್ಟು ಸದಸ್ಯರು ಕಾಂಗ್ರೇಸ್ ಪಕ್ಷಕ್ಕೆ ಸೇರಿದ್ದಾರೆ. ಶೇ. ೫.೭೧ರಷ್ಟು ಬಿಜೆಪಿ ಪಕ್ಷಕ್ಕೆ ಸೇರಿದವರಾಗಿದ್ದು, ಶೇ. ೩೪.೨೮ರಷ್ಟು ಬಿಎಸ್ಆರ್ ಪಕ್ಷಕ್ಕೆ ಸೇರಿದವರು. ಹಾಗೂ ಶೇ. ೨.೮೫ರಷ್ಟು ಸದಸ್ಯರು ಜೆ.ಡಿ.ಎಸ್. ಪಕ್ಷಕ್ಕೆ ಸೇರಿದ್ದಾರೆ. ಅದರಂತೆ ಕೂಡ್ಲಿಗಿ ಪಟ್ಟಣ ಪಂಚಾಯಿತಿ ಸದಸ್ಯರನ್ನು ಸಂದರ್ಶಿಸಿದಾಗ ಅಲ್ಲಿ ಶೇ. ೬೫ರಷ್ಟು ಪುರುಷ ಸದಸ್ಯರು ಮತ್ತು ಶೇ. ೩೫ರಷ್ಟು ಮಹಿಳಾ ಸದಸ್ಯರು ಕಂಡು ಬರುತ್ತಾರೆ. ಇದರಲ್ಲಿ ಶೇ. ೫೫ರಷ್ಟು ಸದಸ್ಯರು ಕಾಂಗ್ರೆಸ್ ಪಕ್ಷಕ್ಕೆ ಸೇರಿದವರಾಗಿದ್ದು, ಶೇ. ೧೫ರಷ್ಟು ಸದಸ್ಯರು ಬಿಜೆಪಿ ಪಕ್ಷಕ್ಕೆ ಹೊಂದಿದವರಾಗಿದ್ದು, ಶೇ. ೩೦ರಷ್ಟು ಸದಸ್ಯರು ಬಿಎಸ್ಆರ್ ಪಕ್ಷಕ್ಕೆ ಸೇರಿಕೊಂಡವರಾಗಿದ್ದಾರೆ. ೧೫ ಸದಸ್ಯರ ಪ್ರಕಾರ ನಗರಸಭೆ-ಪಟ್ಟಣ ಪಂಚಾಯಿತಿಯ ಸದಸ್ಯರೆಲ್ಲಾ ಒಂದೇ ಪಕ್ಷಕ್ಕೆ ಸೇರಿದವರಾದರೆ ಒಳ್ಳೆಯದು ಎಂದು ತಿಳಿಸಿದರು. ಏಕೆಂದರೆ ತಿಂಗಳಿಗೊಮ್ಮೆ ನಡೆಯುವ ಮೀಟಿಂಗ್‌ಗಳು ಯಾವ ಅಡೆತಡೆಗಳಿಲ್ಲದೆ ಸರಾಗವಾಗಿ ನಡೆಯುತ್ತದೆ. ಆದರೆ ವಿರೋಧ ಪಕ್ಷದ ಸದಸ್ಯರ ಪ್ರಕಾರ ಎರಡು ಪಕ್ಷಗಳಿದ್ದರೆ ತೊಂದರೆ ಹೆಚ್ಚು ಎಂದು ತಿಳಿಸಿದರು. ಏಕೆಂದರೆ ವಿರೋಧ ಪಕ್ಷದ ಸದಸ್ಯರು ಕಡಿಮೆ ಸಂಖ್ಯೆಯಲ್ಲಿದ್ದರೆ ನಿರ್ಧಾರ ತೆಗೆದುಕೊಳ್ಳುವಾಗ ವಿರೋಧ ಪಕ್ಷದವರ ಮಾತಿಗೆ ಬೆಲೆ ಇರುವುದಿಲ್ಲವೆಂದು ಹೇಳಿರುತ್ತಾರೆ. ಮತ್ತೊಂದು ಅನುಕೂಲವೆಂದರೆ ನಗರ ಸ್ಥಳೀಯ ಸಂಸ್ಥೆಗಳಲ್ಲಿ ಸದಸ್ಯರು ಒಂದೇ ಪಕ್ಷಕ್ಕೆ ಸೇರಿದವರಾದರೆ ರಾಜ್ಯ ಸರ್ಕಾರ ಮಟ್ಟದ ಅಧಿಕಾರಗಳೊಂದಿಗೆ ಅಭಿವೃದ್ಧಿ ಕಾರ್ಯಗಳ ಬಗ್ಗೆ ಚರ್ಚೆ ಮಾಡಲು ಸುಲಭವಾಗುತ್ತದೆ ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದರು. ಒಟ್ಟಾರೆಯಾಗಿ, ಸಾಪೇಕ್ಷವಾಗಿ ಅಭಿವೃದ್ಧಿ ಹೊಂದಿದ ನಗರಸಭೆ ಸದಸ್ಯರು ತೀರಾ ಹಿಂದುಳಿದ ಪಟ್ಟಣ ಪಂಚಾಯಿತಿ ಸದಸ್ಯರೂ ರಾಜಕೀಯ

ಪಕ್ಷಗಳಿಗೆ ತಕ್ಕಮಟ್ಟಿನ ಆದ್ಯತೆಯನ್ನು ನೀಡಿರುವುದು ಅಧ್ಯಯನಗಳಿಂದ ತಿಳಿದು ಬರುತ್ತದೆ. ಹಾಗಾಗಿ ನಗರಸಭೆಯು ರಾಜಕೀಯ ಪಕ್ಷಗಳನ್ನು ಸಮರ್ಥ ರೀತಿಯಲ್ಲಿ ಬಳಕೆ ಮಾಡಿಕೊಳ್ಳುವುದರಲ್ಲಿ ಉತ್ತಮ ಸ್ಥಿತಿಯಲ್ಲಿದ್ದರೆ ಪಟ್ಟಣ ಪಂಚಾಯಿತಿಯು ಅದರ ಪ್ರಮಾಣವು ಕೆಳಮಟ್ಟದಲ್ಲಿರುವುದರಿಂದ ಹಿಂದುಳಿಯಿತು ಎನ್ನಲಾಗಿದೆ. ಈ ಹಿನ್ನೆಲೆಯಲ್ಲಿ ಹಿಂದುಳಿದ ಪ್ರದೇಶವು ರಾಜಕೀಯ ಮುಖಂಡರನ್ನು ನಿಯಮಿತವಾಗಿ ಬಳಸಿಕೊಳ್ಳುವ ಅಗತ್ಯವಿದೆ ಎನ್ನಲಾಗಿದೆ.

**ಮೀಸಲಾತಿ ಅವಶ್ಯಕತೆ ಇದೆಯಾ**

| | ಸದಸ್ಯರ ಪ್ರಕಾರ ಮೀಸಲಾತಿ ಅವಶ್ಯಕತೆ ಇದೆಯಾ | ಹೊಸಪೇಟೆ | | ಕೂಡ್ಲಿಗಿ | |
|---|---|---|---|---|---|
| ೧. | ತುಂಬಾ ಅಗತ್ಯ ಇದೆ | ೧೫ | ೬೮.೫೭ | ೧೨ | ೬೦.೦೦ |
| ೨. | ಅಗತ್ಯ ಇಲ್ಲ | ೨೦ | ೩೧.೪೩ | ೮ | ೪೦.೦೦ |
| | ಒಟ್ಟು | ೩೫ | ೧೦೦ | ೨೦ | ೧೦೦ |

**ಮೂಲ: ಕ್ಷೇತ್ರ ಕಾರ್ಯದ ಮಾಹಿತಿ**

ನಗರ ಪ್ರದೇಶಗಳಲ್ಲಿ ಮೀಸಲಾತಿಯ ಬಗ್ಗೆ ಸದಸ್ಯರಿಗೆ ಇರುವ ಅಭಿಪ್ರಾಯಗಳ ಪ್ರಮಾಣವನ್ನು ತೋರಿಸಲಾಗಿದೆ. ನಗರಸಭೆ ಮತ್ತು ಪಟ್ಟಣ ಪಂಚಾಯಿತಿಯಲ್ಲಿ ಒಟ್ಟು ಶೇ. ೬೮.೫೭ರಷ್ಟು ಮತ್ತು ಶೇ. ೬೦ರಷ್ಟು ಸದಸ್ಯರು ಮೀಸಲಾತಿಯ ಬಗ್ಗೆ ಒಳ್ಳೆಯ ಅಭಿಪ್ರಾಯವನ್ನು ವ್ಯಕ್ತಪಡಿಸಿದರು. ಈ ಸದಸ್ಯರ ಪ್ರಕಾರ ಮೀಸಲಾತಿ ಇರುವುದರಿಂದ ಹಿಂದುಳಿದ ವರ್ಗಕ್ಕೆ ಸೇರಿದ ಜನ ಸ್ಥಳೀಯ ಸರ್ಕಾರದ ಆಡಳಿತದಲ್ಲಿ ಭಾಗವಹಿಸಿದಂತಾಗುತ್ತದೆ. ಅಲ್ಲದೆ ಹಿಂದುಳಿದ ವರ್ಗದ ಜನರ ಅಭಿವೃದ್ಧಿಗೆ ಹೆಚ್ಚಿನ ಗಮನ ಹರಿಸಿದಂತಾಗುತ್ತದೆ. ಮತ್ತೊಂದು ೬ ಸದಸ್ಯರ ಪ್ರಕಾರ ಮಹಿಳೆ ಮೀಸಲಾತಿ ಕೊಡುವುದರಿಂದ ಮಹಿಳೆಯರು ನಗರ ಸ್ಥಳೀಯ ಸಂಸ್ಥೆಗಳ ಮಟ್ಟದಲ್ಲಿ ನಡೆಯುವ ಕೆಲಸ ಕಾರ್ಯಗಳಲ್ಲಿ ನಿರ್ಧಾರವನ್ನು ತೆಗೆದುಕೊಳ್ಳುವ ಪ್ರಕ್ರಿಯೆಯಲ್ಲಿ ಭಾಗವಹಿಸಿದಂತಾಗುತ್ತದೆ ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದರು. ಅದಲ್ಲದೆ, ಹೊಸಪೇಟೆ ನಗರಸಭೆಯಲ್ಲಿ ಶೇ. ೩೧.೪೩ರಷ್ಟು ಸದಸ್ಯರು ಮತ್ತು ಕೂಡ್ಲಿಗಿ ಪಟ್ಟಣ ಪಂಚಾಯಿತಿಯಲ್ಲಿ ಶೇ. ೪೦ರಷ್ಟು ಸದಸ್ಯರು ಮೀಸಲಾತಿಯ ಅಗತ್ಯ ಇಲ್ಲ ಎನ್ನುವ ಅಭಿಪ್ರಾಯವನ್ನು ವ್ಯಕ್ತಪಡಿಸಿದರು. ಪಟ್ಟಣ ಪಂಚಾಯಿತಿಯ ಸದಸ್ಯರು ಕೆಲವೊಮ್ಮೆ ಮೀಸಲಾತಿಯಿಂದ ಆಯ್ಕೆಯಾದ ಸದಸ್ಯರು ಸ್ಥಳೀಯ ಸಂಸ್ಥೆಗಳ ಆಡಳಿತದ ಸಮಸ್ಯೆಗಳ ಬಗ್ಗೆ ತಿಳಿದುಕೊಳ್ಳದೇ ತಮ್ಮ ಬೇಡಿಕೆಯನ್ನು ಸಂಸ್ಥೆಗಳು ಈಡೇರಿಸಬೇಕೆಂದು ಒತ್ತಾಯಿಸುತ್ತಾರೆ. ಹಾಗೆಯೇ ನಗರ ಸ್ಥಳೀಯ ಮಟ್ಟದಲ್ಲಿ ಮೀಸಲಾತಿಗೆ ಹೆಚ್ಚಿನ ಮಹತ್ವವನ್ನು ಕೊಡುವ ಅಗತ್ಯ ಇಲ್ಲ. ಏಕೆಂದರೆ ಹಿಂದುಳಿದ ಮತ್ತು ಕೆಳವರ್ಗದವರಿಗೆ ಸೇರಿದ ತೊಂದರೆಯನ್ನು ಎತ್ತಿ ಹಿಡಿಯಲು ಹಿಂದುಳಿದ ವರ್ಗಕ್ಕೆ ಸೇರಿದ ಸದಸ್ಯರೇ ಆಗಬೇಕು ಎಂದಿಲ್ಲ. ಇಲ್ಲಿ ಉಂಟಾಗುವ ತೊಂದರೆಗಳು ಪ್ರತಿಯೊಬ್ಬರಿಗೂ ಸಂಬಂಧಪಟ್ಟಿರುತ್ತದೆ ಎಂಬ ಅಭಿಪ್ರಾಯವನ್ನು ಮೀಸಲಾತಿ ವಿರೋಧಿ ಸದಸ್ಯರು ಮೀಸಲಾತಿಯನ್ನು ಸಮರ್ಥಿಸದೆಯಿರುವುದರಿಂದ ಹಿಂದುಳಿಯಿತು ಎಂದು ಅಧ್ಯಯನಗಳಿಂದ ತಿಳಿದು ಬಂದಿದೆ. ಒಟ್ಟಾರೆಯಾಗಿ, ಇಲ್ಲಿ ಗಮನಿಸಬೇಕಾದ ಸಂಗತಿಯೆಂದರೆ, ತೀರಾ ಹಿಂದುಳಿದ

ಪಟ್ಟಣ ಪಂಚಾಯಿತಿ ಸದಸ್ಯರಿಗಿಂತ ಸಾಪೇಕ್ಷವಾಗಿ ಮುಂದುವರಿದ ಹೊಸಪೇಟೆ ನಗರಸಭೆ ಸದಸ್ಯರು ಮೀಸಲಾತಿಯಿಂದ ಆಯ್ಕೆಯಾಗಿ ಬಂದಿರುವ ಸಂಖ್ಯೆಯು ಹೆಚ್ಚಾಗಿದ್ದು ಅವಕಾಶವನ್ನು ಎತ್ತಿ ಹಿಡಿದಿದ್ದಾರೆ. ಅಲ್ಲದೇ, ಮೀಸಲಾತಿಯು ತಳಸಮುದಾಯವನ್ನು ಪರಿಗಣನೆಗೆ ತೆಗೆದುಕೊಂಡು ಅಭಿವೃದ್ಧಿಯ ಸಾಧನವಾಗಿ ಕೆಲಸ ನಿರ್ವಹಿಸುವುದನ್ನು ನಾವು ಮನಗಾಣಲಾಗಿದೆ. ಹಾಗಾಗಿ ಹಿಂದುಳಿದ ಪಟ್ಟಣ ಪಂಚಾಯಿತಿ ಚುನಾಯಿತ ಪುರುಷ ಮತ್ತು ಮಹಿಳಾ ಸದಸ್ಯರು ಸ್ಥಳೀಯ ರಾಜಕೀಯದಲ್ಲಿ ಭಾಗವಹಿಸುವಂತಹ ಹಕ್ಕಿನ ಬಗ್ಗೆ ಅರಿವು ಮೂಡಿಸುವುದರ ಜೊತೆಗೆ ತಳಸಮುದಾಉದ ಅಭಿವೃದ್ಧಿಗೆ ರಾಜಕೀಯ ಭಾಗವಹಿಸುವಿಕೆ ಎಷ್ಟು ಮುಖ್ಯ ಎಂಬುದನ್ನು ಮನವರಿಕೆ ಮಾಡುವುದು ಹೆಚ್ಚು ಮುಖ್ಯವಾದದ್ದು ಇದರ ಭಾಗವಾಗಿ ಚುನಾಯಿತ ಪ್ರತಿನಿಧಿಗಳು ಮುಕ್ತವಾಗಿ ಮತ್ತು ಸ್ವಾತಂತ್ರವಾಗಿ ಸ್ಥಳೀಯ ರಾಜಕೀಯದಲ್ಲಿ ಭಾಗವಹಿಸುವ ಮಹತ್ವವನ್ನು ವಾರ್ಡಿನ ಮುಖಂಡರಿಗೆ, ಸದಸ್ಯರಿಗೆ ಅವರ ಗಂಡಂದಿರಿಗೆ ಮತ್ತು ಅವರ ಪುರುಷ ಕುಟುಂಬ ಸದಸ್ಯರಿಗೆ ಚರ್ಚೆಯ ಮೂಲಕ ಮನವರಿಕೆ ಮಾಡಿಕೊಡುವ ಅವಶ್ಯಕತೆಯಿದೆ ಎಂದು ಹೇಳಲಾಗಿದೆ.

**ಮೀಸಲಾತಿ ಕ್ಷೇತ್ರದಿಂದ ಆರಿಸಿಬಂದ ಸದಸ್ಯರ ಸಂಖ್ಯೆ ವಿವರ**

| ಮೀಸಲಾತಿ ಕ್ಷೇತ್ರದಿಂದ ಆರಿಸಿಬಂದ ಸದಸ್ಯರ ಸಂಖ್ಯೆ | | ಹೊಸಪೇಟೆ | | ಕೂಡ್ಲಿಗಿ | |
|---|---|---|---|---|---|
| 1. | ಹೌದು | ೧೫ | ೬೮.೫೭ | ೧೨ | ೬೦.೦೦ |
| 2. | ಇಲ್ಲ | ೨೦ | ೩೧.೪೩ | ೮ | ೪೦.೦೦ |
| ಒಟ್ಟು | | ೩೫ | ೧೦೦ | ೨೦ | ೧೦೦ |

**ಮೂಲ: ಕ್ಷೇತ್ರ ಕಾರ್ಯದ ಮಾಹಿತಿ**

ನಗರವಾರು ಅಧ್ಯಯನದಲ್ಲಿ ಹೊಸಪೇಟೆ ನಗರಸಭೆಯಲ್ಲಿ ಶೇ. ೬೮.೫೭ ಚುನಾಯಿತ ಪ್ರತಿನಿಧಿಗಳು ಮೀಸಲಾತಿಯ ಕ್ಷೇತ್ರದಿಂದ ಆಯ್ಕೆಯಾಗಿದ್ದಾರೆ. ಶೇ. ೩೧.೪೩ರಷ್ಟು ಚುನಾಯಿತ ಸದಸ್ಯರು ಸಾಮಾನ್ಯ ವರ್ಗದಿಂದ ಚುನಾಯಿತರಾಗಿದ್ದಾರೆ. ಅದರಂತೆ ಕೂಡ್ಲಿಗಿ ಪಟ್ಟಣ ಪಂಚಾಯಿತಿಯಲ್ಲಿ ಶೇ. ೬೦ರಷ್ಟು ಚುನಾಯಿತ ಪ್ರತಿನಿಧಿಗಳು ಮೀಸಲಾತಿ ಕ್ಷೇತ್ರದಿಂದ ಆಯ್ಕೆಯಾಗಿದ್ದಾರೆ. ಇನ್ನುಳಿದ ಶೇ. ೪೦ರಷ್ಟು ಜನಪ್ರತಿನಿಧಿಗಳು ಸಾಮಾನ್ಯ ವರ್ಗದಿಂದ ಚುನಾಯಿತರಾಗಿದ್ದಾರೆ. ಅದಲ್ಲದೇ ಮಹಿಳೆಯರಿಗಾಗಿ ಮೀಸಲಿರುವ ವಾರ್ಡ್‌ಗಳಿಂದ ಮಹಿಳೆಯುರ ಚುನಾಯಿತರಾಗಿ ಬಂದಿದ್ದಾರೆ. ಆದರೆ ಮಹಿಳೆಯರೊಂದಿಗೆ ಅಧಿಕಾರವನ್ನು ಹಂಚಿಕೊಳ್ಳುವುದು ಇನ್ನೂ ಯಾರು ಒಪ್ಪಿಕೊಂಡಿಲ್ಲ ಮಹಿಳೆಯರು ಉತ್ತಮವಾಗಿ ಆಡಳಿತ ನಡೆಸಬಲ್ಲರೇ ತಮ್ಮ ಜವಾಬ್ದಾರಿಗಳನ್ನು ಸಮರ್ಥವಾಗಿ ನಡೆಸಬಲ್ಲರೇ ಎನ್ನುವುದರ ಬಗ್ಗೆ ಇನ್ನೂ ಸಂಶಯವಿದೆ. ಮಹಿಳೆಯರು ಚುನಾಯಿತರಾಗಿ ಬಂದರೂ ಅವರನ್ನು ಸದಸ್ಯೆಯನ್ನಾಗಿ ಸಂಪೂರ್ಣವಾಗಿ ಒಪ್ಪಿಕೊಳ್ಳುತ್ತಿಲ್ಲ ಎಂಬ ಅಭಿಪ್ರಾಯಗಳು ಸಂಶೋಧನೆಯ ಕ್ಷೇತ್ರದಿಂದ ತಿಳಿದು ಬಂದ ಮಾಹಿತಿಯಾಗಿರುತ್ತದೆ. ಒಟ್ಟಾರೆಯಾಗಿ, ತೀರಾ ಹಿಂದುಳಿದ ಪಟ್ಟಣ ಪಂಚಾಯಿತಿ ಸದಸ್ಯರಿಗಿಂತ ಸಾಪೇಕ್ಷವಾಗಿ ಅಭಿವೃದ್ಧಿ ಹೊಂದಿದ ಹೊಸಪೇಟೆ ನಗರಸಭೆ ಸದಸ್ಯರು ಮೀಸಲಾತಿಯಿಂದ ಹೆಚ್ಚಿನ ಸಂಖ್ಯೆಯಲ್ಲಿ ಆಯ್ಕೆಯಾಗಿರುವುರ ಜೊತೆಗೆ ಮೀಸಲಾತಿಯನ್ನು ಸಮರ್ಥವಾಗಿ

ಬಳಸಿಕೊಂಡು ತಮ್ಮ ಜೀವನವನ್ನ ಉತ್ತಮ ಸ್ಥಿತಿಯಲ್ಲಿಟ್ಟುಕೊಂಡು ಮುಂದುವರಿದಿದ್ದಾರೆ ಹಾಗೂ ಹಿಂದುಳಿದ ಪಟ್ಟಣ ಪಂಚಾಯಿತಿಯಲ್ಲಿ ಮೀಸಲಾತಿಯನುಸಾರವಾಗಿ ಆಯ್ಕೆಯಾಗಿದ್ದರೂ ಅದನ್ನು ಸಮರ್ಥವಾಗಿ ಸ್ಥಳೀಯ ರಾಜಕೀಯದಲ್ಲಿ ಸಕ್ರಿಯವಾಗಿ ಭಾಗವಹಿಸಿ ಬಳಸಿಕೊಳ್ಳಲಾಗದೆ ಹಿಂದುಳಿದಿದೆ ಎನ್ನಲಾಗಿದೆ. ಹಾಗಾಗಿ ಮೀಸಲಾತಿ ಮೇಲೆ ತಾರತಮ್ಯ ನಡೆಯದಂತೆ ಮೇಲ್ವಿಚಾರಣೆ ಮಾಡುವುದು, ಸ್ಥಳೀಯ ಸಂಸ್ಥೆಗಳಲ್ಲಿ ರಾಜಕೀಯ ಪಕ್ಷಗಳು ತಮ್ಮ ಪಕ್ಷದ ರಚನೆಯಲ್ಲಿ ಮೇಲ್ಸ್ತರದ ಹುದ್ದೆಗಳನ್ನು ಕೆಳವರ್ಗದ ಸದಸ್ಯರಿಗೆ ಕೊಡಬೇಕಾಗಿ ಮತ್ತು ಲಿಂಗ ಸಂಬಂಧಿ, ಜಾತಿ ಸಂಬಂಧಿ ಹಾಗೂ ಆಚರಣೆಗಳು ಮುಂತಾದವುಗಳ ಬಗ್ಗೆ ಅರಿವು ಮೂಡಿಸುವ ಅಗತ್ಯವಿದೆ ಎನ್ನಲಾಗಿದೆ.

**ಪಕ್ಷದ ಮುಖಂಡರು ಟಿಕೇಟು ನೀಡಲು ಇರುವ ಕಾರಣ**

| **ಪಕ್ಷದ ಮುಖಂಡರು ಟಿಕೀಟು ನೀಡಲು ಇರುವ ಕಾರಣಗಳು** | **ಹೊಸಪೇಟೆ** | | **ಕೂಡ್ಲಿಗಿ** | |
|---|---|---|---|---|
| ಸಂಬಂಧಿಕರು ರಾಜಕೀಯದಲ್ಲಿದ್ದರಿಂದ | ೬ | ೧೭.೧೪ | ೩ | ೧೫.೦೦ |
| ಕ್ಷೇತ್ರವು ಮೀಸಲಾತಿಯಾದ್ದರಿಂದ | ೭ | ೨೦.೦೦ | ೬ | ೩೦.೦೦ |
| ಸ್ಥಳೀಯ ಜನರೊಂದಿಗೆ ಇದ್ದ ಒಳ್ಳೆ ಸಂಬಂಧ | ೧೫ | ೪೨.೮೫ | ೭ | ೩೫.೦೦ |
| ಬಹಳ ವರ್ಷಗಳಿಂದ ಪಕ್ಷದೊಂದಿಗೆ ಇದ್ದ ಒಳ್ಳೆ ಸಂಬಂಧ | ೭ | ೨೦.೦೦ | ೪ | ೨೦.೦೦ |
| **ಒಟ್ಟು** | ೩೫ | ೧೦೦ | ೨೦ | ೧೦೦ |

**ಮೂಲ: ಕ್ಷೇತ್ರ ಕಾರ್ಯದ ಮಾಹಿತಿ**

ನಗರ ಪ್ರದೇಶಗಳಲ್ಲಿ ಪಕ್ಷದ ಮುಖಂಡರಿಂದ ಟಿಕೇಟು ಸಿಗಲು ಕಾರಣಗಳನ್ನು ತೋರಿಸಲಾಗಿದೆ. ಹೊಸಪೇಟೆ ನಗರಸಭೆಗೆ ಸೇರಿದ ಶೇ. ೧೭.೧೪ರಷ್ಟು ಹಾಗೂ ಕೂಡ್ಲಿಗಿ ಪಟ್ಟಣ ಪಂಚಾಯಿತಿಯ ಶೇ. ೧೫ರಷ್ಟು ಜನಪ್ರತಿನಿಧಿಗಳ ಪ್ರಕಾರ ತಮ್ಮ ಸಂಬಂಧಿಕರು, ಮನೆಯ ಹಿರಿಯರು, ಆತ್ಮೀಯರು ರಾಷ್ಟ್ರೀಯ, ಪ್ರಾದೇಶಿಕ ಪಕ್ಷದಲ್ಲಿದ್ದ ಕಾರಣ, ನಗರ ಸ್ಥಳೀಯ ಸಂಸ್ಥೆಗಳಲ್ಲಿ ಸ್ಪರ್ಧಿಸಲು ಪಕ್ಷದಿಂದ ಟಿಕೇಟು ಕೊಡಲಾಯಿತು. ಹೊಸಪೇಟೆ ನಗರಸಭೆ ಶೇ. ೨೦ರಷ್ಟು ಸದಸ್ಯರು ಮತ್ತು ಕೂಡ್ಲಿಗಿ ಪಟ್ಟಣ ಪಂಚಾಯಿತಿಯ ಶೇ. ೩೦ರಷ್ಟು ಸದಸ್ಯರು ಮೀಸಲಾತಿ ಇರುವುದರಿಂದ ಟಿಕೇಟು ಸಿಕ್ಕಿದೆ ಎಂದರು. ಅಲ್ಲದೇ ನಗರಸಭೆ ಶೇ. ೪೨.೮೫ರಷ್ಟು ಚುನಾಯಿತ ಪ್ರತಿನಿಧಿಗಳು ಮತ್ತು ಕೂಡ್ಲಿಗಿ ಪಟ್ಟಣ ಪಂಚಾಯಿತಿಯ ಶೇ. ೩೫ರಷ್ಟು ಆಯ್ಕೆಗೊಂಡ ಸದಸ್ಯರ ಪ್ರಕಾರ ಪಕ್ಷದಿಂದ ಟಿಕೇಟು ಸಿಗಲು ಸ್ಥಳೀಯ ಜನರೊಂದಿಗೆ ಇರುವ ಸಂಬಂಧದ ಆಧಾರದ ಮೇಲೆ ಪಕ್ಷದಿಂದ ಟಿಕೇಟ್ ಕೊಡಲಾಯಿತು. ಇತರ ನಗರಸಭೆ ಶೇ. ೨೦ರಷ್ಟು ಪ್ರತಿನಿಧಿಗಳು, ಮತ್ತು ಪಟ್ಟಣ ಪಂಚಾಯಿತಿಯ ಶೇ. ೨೦ರಷ್ಟು ಸದಸ್ಯರು ಅವರಿಗೆ ಪಕ್ಷದ ಮುಖಂಡರೊಂದಿಗೆ ಇದ್ದ ನಿಕಟ ಸಂಬಂಧಗಳ ಆಧಾರದ ಮೇಲೆ ಟಿಕೇಟ್ ಕೊಡಲಾಯಿತು ಎಂದು ತಿಳಿದು ಬಂದಿದೆ. ಒಬ್ಬ ಮಹಿಳಾ ಸದಸ್ಯೆಯರ ಪ್ರಕಾರ, ಅವರಿಗೆ

ರಾಜಕೀಯದಲ್ಲಿ ಆಸಕ್ತಿ ಇಲ್ಲದಿದ್ದರೂ ಅವರ ಕ್ಷೇತ್ರವು ಮಹಿಳೆಯರಿಗೆ ಮೀಸಲಾಗಿದ್ದರಿಂದ ಹಾಗೂ ಯಾವುದೇ ಮಹಿಳಾ ಅಭ್ಯರ್ಥಿಯು ಚುನಾವಣೆಗೆ ನಿಲ್ಲಲು ಇಚ್ಚಿಸದೆ ಇದ್ದರು ಪಕ್ಷದಿಂದ ಅವರಿಗೆ ಟಿಕೇಟ್ ಕೊಡಲಾಯಿತು ಎಂಬ ಅಂಶವನ್ನು ಸಂದರ್ಶಿತ ಸದಸ್ಯರು ತಮ್ಮ ಅಭಿಪ್ರಾಯ ವ್ಯಕ್ತಪಡಿಸಿರುವುದು ಅಧ್ಯಯಗಳಿಂದ ತಿಳಿದು ಬಂದಿದೆ. ಒಟ್ಟಾರೆಯಾಗಿ ಸಾಪೇಕ್ಷವಾಗಿ ಮುಂದುವರಿದ ನಗರಸಭೆಯ ಸದಸ್ಯರು ತೀರಾ ಹಿಂದುಳಿದ ಪಟ್ಟಣ ಪಂಚಾಯಿತಿ ಸದಸ್ಯರಿಗಿಂತ ವಾರ್ಡಿನ ಜನರರೊಂದಿಗೆ ಉತ್ತಮ ಸಂಬಂಧವಿದ್ದು ಹಾಗು ಅವರು ಸಮರ್ಥವಾಗಿ ಕೆಲಸ ನಿರ್ವಹಿಸಲು ಯೋಗ್ಯನೆಂದುಕೊಂಡು ಟಿಕೇಟ್ ನೀಡಿರುವುದನ್ನು ನೋಡಬಹುದಾಗಿದೆ. ಆದರೆ ಪಟ್ಟಣ ಪಂಚಾಯಿತಿಯಲ್ಲಿ ಮೀಸಲಾತಿಯ ಬಗ್ಗೆ ಭಿನ್ನ ಅಭಿಪ್ರಾಯಗಳಿದ್ದು, ಹೆಚ್ಚಾಗಿ ಮೀಸಲಾತಿಯ ಹಿನ್ನೆಲೆಯಲ್ಲಿ ಮತ್ತು ಪಕ್ಷದ ಮುಖಂಡರೊಂದಿಗೆ ಇರುವ ಸಂಬಂಧದಿಂದ ಟಿಕೇಟ್ ಪಡೆಯಲಾಗಿದೆ ಎನ್ನಲಾಗಿದೆ. ಆದರೆ, ಮೀಸಲಾತಿಯಿಂದ ಬಂದ ಬಹುತೇಕ ಚುನಾಯಿತ ಪ್ರತಿನಿಧಿಗಳು ಕೇವಲ ತಮ್ಮ ಸಮುದಾಯಗಳಿಗೆ ಸಮರ್ಪಕವಾದ ಕುಡಿಯುವ ನೀರು, ರಸ್ತೆ, ಮತ್ತು ವಸತಿ ಸೌಲಭ್ಯಗಳನ್ನು ಒದಗಿಸಿಕೊಡುವಲ್ಲಿಯೂ ಯಶಸ್ವಿಯಾಗದೆ ಪಟ್ಟಣ ಪಂಚಾಯಿತಿಯು ಹಿಂದುಳಿಯಿತು ಎಂದು ಹೇಳಲಾಗಿದೆ. ಹಾಗಾಗಿ ಅಂಚಿನಲ್ಲಿರುವ ಸಮುದಾಯಗಳು ಉತ್ತಮ ಮಟ್ಟಕ್ಕೆ ಬರಬೇಕಾದರೆ ಮೀಸಲಾತಿಯು ಅವಶ್ಯಕತೆಯಿದೆ ಹಾಗಾಗಿ ಮೀಸಲಾತಿಯಿಂದ ಬಂದ ಚುನಾಯಿತ ಪ್ರತಿನಿಧಿಗಳಿಗೆ ಸರಿಯಾದ ಸ್ಥಳೀಯ ರಾಜಕೀಯದ ಬಗ್ಗೆ ಅರಿವು ಮತ್ತು ಭಾಗವಹಿಸುವಂತಹ ತರಬೇತಿ ಕಾರ್ಯಕ್ರಮಗಳನ್ನು ಕೈಗೊಳ್ಳುವುದರ ಅಗತ್ಯತೆಯು ಇದೆ ಎನ್ನಲಾಗಿದೆ.

**ಮೀಸಲಾತಿಯ ಬಗ್ಗೆ ಸದಸ್ಯರ ಅಭಿಪ್ರಾಯಗಳು**

| ಮೀಸಲಾತಿಯ ಬಗ್ಗೆ ಸದಸ್ಯರ ಅಭಿಪ್ರಾಯಗಳು | ಹೊಸಪೇಟೆ | | ಕೂಡ್ಲಿಗಿ | |
|---|---|---|---|---|
| ಪರಿಣಾಮ ಬೀರಿದೆ | ೧೧ | ೩೧.೪೨ | ೭ | ೩೫.೦೦ |
| ಯಾವುದೇ ವ್ಯತ್ಯಾಸ ಕಂಡು ಬಂದಿಲ್ಲ | ೭ | ೨೦.೦೦ | ೬ | ೩೦.೦೦ |
| ಸದಸ್ಯರ ಮೇಲೆ ಅವಲಂಭಿತವಾಗಿದೆ | ೧೭ | ೪೮.೫೭ | ೭ | ೩೫.೦೦ |
| ಒಟ್ಟು | ೩೫ | ೧೦೦ | ೨೦ | ೧೦೦ |

**ಮೂಲ: ಕ್ಷೇತ್ರ ಕಾರ್ಯದ ಮಾಹಿತಿ**

ಮೀಸಲಾತಿಯಿಂದ ಆದ ಉಪಯೋಗವನ್ನು ತಿಳಿದುಕೊಳ್ಳಲು ಹೊಸಪೇಟೆ ನಗರಸಭೆ ಹಾಗೂ ಕೂಡ್ಲಿಗಿ ಪಟ್ಟಣ ಪಂಚಾಯಿತಿಯ ಚುನಾಯಿತ ಪ್ರತಿನಿಧಿಗಳನ್ನು ಪ್ರಶ್ನಿಸಲಾಯಿತು. ಮೀಸಲಾತಿಯ ಬಗ್ಗೆ ಹೊಸಪೇಟೆ ನಗರಸಭೆ ಮತ್ತು ಕೂಡ್ಲಿಗಿ ಪಟ್ಟಣ ಪಂಚಾಯಿತಿಯ ಚುನಾಯಿತ ಸದಸ್ಯರ ಆಭಿಪ್ರಾಯಗಳು ಬೇರೆ ಬೇರೆಯಾಗಿತ್ತು. ಮೀಸಲಾತಿಯು ಜಾರಿಗೆ ಬಂದ ಮೇಲೆ ನಗರ ಸ್ಥಳೀಯ ಸಂಸ್ಥೆಗಳ ಆಡಳಿತ ಕ್ರಮದಲ್ಲಿ ಬದಲಾವಣೆಯಾಗಿದೆಯೋ ಎಂಬ ಪ್ರಶ್ನೆಗೆ ಸದಸ್ಯರ ಅಭಿಪ್ರಾಯಗಳನ್ನು ತೋರಿಸಲಾಗಿದೆ. ಅದರಂತೆ ಹೊಸಪೇಟೆ ನಗರಸಭೆಯ ಶೇ. ೩೧.೪೨ರಷ್ಟು ಚುನಾಯಿತ ಸದಸ್ಯರು ಮೀಸಲಾತಿಯಿಂದ ನಗರ ಸ್ಥಳಿಯ ಸಂಸ್ಥೆಗಳ ಆಡಳಿತದ ಶೈಲಿಯಲ್ಲಿ ಬದಲಾವಣೆಯಾಗಿದೆ ಎಂದರು. ಆದರೆ ಶೇ. ೨೦ರಷ್ಟು ಜನಪ್ರತಿನಿಧಿಗಳು ವಿಕೇಂದ್ರಿಕೃತ ಆಡಳಿತದಲ್ಲಿ ಮೀಸಲಾತಿಯಿಂದ

ಯಾವುದೇ ವ್ಯತ್ಯಾಸ ಕಂಡುಬಂದಿಲ್ಲವೆಂದು ಅಭಿಪ್ರಾಯ ವ್ಯಕ್ತಪಡಿಸಿದರು. ಉಳಿದ ಶೇ. ೪೮.೫೭ರಷ್ಟು ಜನ ಸದಸ್ಯರು ನಗರ ಸ್ಥಳೀಯ ಸಂಸ್ಥೆಗಳು ಉತ್ತಮವಾಗಿ ನಡೆಯಲು ಚುನಾಯಿತರಾಗಿರುವ ಸದಸ್ಯರ ಮೇಲೆ ಅವಲಂಬಿಸುತ್ತದೆಯೇ ಹೊರತು ಸದಸ್ಯರು ಮೀಸಲಾತಿಯಿಂದ ಆರಿಸಿ ಬಂದಿದ್ದರಿಂದ ಕ್ಷೇತ್ರದ ಅಭಿವೃದ್ಧಿಗೆ ಸಹಾಯಕವಾಗುತ್ತದೆ ಎನ್ನುವ ಮಾತು ಸುಳ್ಳು ಎನ್ನುತ್ತಾರೆ. ಆದರೆ ಪ್ರಮುಖ ವಿಷಯವೆಂದರೆ ಮೀಸಲಾತಿಯಿಂದ ಹಿಂದುಳಿದ ವರ್ಗಕ್ಕೆ ಸೇರಿದವರು ವಿಕೇಂದ್ರಿಕೃತ ಸರ್ಕಾರದಲ್ಲಿ ಭಾಗವಹಿಸುವ ಅವಕಾಶ ದೊರೆಯುತ್ತದೆ ಎಂದು ಕೆಲವು ಸದಸ್ಯರು ಅಭಿಪ್ರಾಯಪಟ್ಟರು. ಒಬ್ಬ ಮಹಿಳೆಯು ತಾನು ಚುನಾಯಿತಳಾದ ಮೇಲೆ ಮಹಿಳೆಯರ ಸ್ಥಾನಮಾನ ಹೆಚ್ಚಾಗಿದೆ ಎಂದು ಅಭಿಪ್ರಾಯಪಟ್ಟಳು.

ಅದರಂತೆ ಕೂಡ್ಲಿಗಿ ಪಟ್ಟಣ ಪಂಚಾಯಿತಿಯ ಚುನಾಯಿತ ಪ್ರತಿನಿಧಿಗಳ ಅಭಿಪ್ರಾಯ ಶೇ. ೩೫ರಷ್ಟು ಸದಸ್ಯರ ಪ್ರಕಾರ ಮೀಸಲಾತಿಯು ನಗರ ವ್ಯವಸ್ಥೆಯ ಕಾರ್ಯವೈಖರಿಯಲ್ಲಿ ಉತ್ತಮವಾಗಿ ಪರಿಣಾಮ ಬೀರಿದೆ ಎಂದು ಹೇಳುತ್ತಾರೆ. ಕೆಲವು ಶೇ. ೩೦ರಷ್ಟು ಸದಸ್ಯರು ವಿಕೇಂದ್ರಿಕೃತ ಆಡಳಿತದಲ್ಲಿ ಯಾವ ಗಮನಾರ್ಹವಾದ ಬದಲಾವಣೆಯನ್ನು ಕಾಣಲಿಲ್ಲ ಎಂದು ಹೇಳಿದರು. ಇತರೆ ಶೇ. ೩೫ರಷ್ಟು ಚುನಾಯಿತ ಸದಸ್ಯರು ಮೀಸಲಾತಿಯನ್ನು ಸಮ್ಮತಿಸದೆ ಸಮಾಜದ ಅಭಿವೃದ್ಧಿಯಾಗಬೇಕಾದರೆ, ಸಮಾಜದಲ್ಲಿ ಹಿಂದುಳಿದ ವರ್ಗದವರನ್ನು ಮಾತ್ರವಲ್ಲದೇ ಸಮಾಜದಲ್ಲಿರುವ ಎಲ್ಲಾ ವರ್ಗದವರನ್ನು ಗಣನೆಗೆ ತೆಗೆದುಕೊಳ್ಳಲು ಮೀಸಲಾತಿ ಒಂದರಿಂದ ಸಾಧ್ಯವಿಲ್ಲ ಅದು ಸದಸ್ಯರ ಮೇಲೆ ಅವಲಂಬಿತವಾಗಿರುತ್ತದೆ. ಆದುದರಿಂದ ಮೀಸಲಾತಿಯ ಅಗತ್ಯತೆ ಇಲ್ಲ ಎನ್ನುವುದು ಅವರ ವಾದವಾಗಿರುತ್ತದೆ ಎಂಬ ಬೇರೆ ಬೇರೆ ಅಭಿಪ್ರಾಯಗಳನ್ನು ವ್ಯಕ್ತಪಡಿಸಿದ್ದಾರೆ. ಒಟ್ಟಾರೆಯಾಗಿ ತೀರಾ ಹಿಂದುಳಿದ ಪಟ್ಟಣ ಪಂಚಾಯಿತಿ ಸದಸ್ಯರಿಗಿಂತ ಸಾಪೇಕ್ಷವಾಗಿ ಮುಂದುವರಿದ ನಗರಸಭೆಯ ಸದಸ್ಯರಲ್ಲಿ ಮೀಸಲಾತಿಯಿಂದ ಉತ್ತಮ ಕೆಲಸಗಳು ಆಗುತ್ತವೆ ಎನ್ನುವುದನ್ನು ಅಭಿಪ್ರಾಯವನ್ನು ಒಪ್ಪದೆ ಅಭಿವೃದ್ಧಿಯು ವ್ಯಕ್ತಿಯ ಮೇಲೆ ಅವಲಂಬಿತವಾಗಿರುತ್ತದೆ ಎನ್ನುವ ಸಕಾರಾತ್ಮಕವಾದ ಅಭಿಪ್ರಾಯಗಳನ್ನು ನೀಡಿರುವುದು ತಿಳಿದು ಬಂದಿದೆ. ಪಟ್ಟಣ ಪಂಚಾಯಿತಿಯ ಚುನಾಯಿತ ಸದಸ್ಯರು ಮೀಸಲಾತಿಯಿಂದ ಆಯ್ಕೆಯಾಗಿ ತಮ್ಮ ಸಮುದಾಯಗಳ ಸಮಸ್ಯೆಗಳಿಗೆ ಸ್ಪಂದಿಸುತ್ತಾ ಅಭಿವೃದ್ಧಿಯ ಕನಸು ಈಡೇರಿಸುವ ಹಿನ್ನೆಲೆಯಲ್ಲಿ ಅಧಿಕಾರಿಗಳಿಗೆ ಸಮಸ್ಯೆಗಳ ಬಗ್ಗೆ ಮನವಿಯನ್ನು ಪದೇ-ಪದೇ ನೀಡಿದರು ಸಹಾ ಅಧಿಕಾರಿಗಳು ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸದೆ ಇರುವುದು ಮತ್ತು ಕಾರ್ಯಕ್ರಮಗಳ ಅನುಷ್ಠಾನಕ್ಕಾಗಿ ಲಂಚವನ್ನು ಕೇಳುವ ಪ್ರಸಂಗ ಇಂತಹ ಹಲವು ಸಮಸ್ಯೆಗಳಿಂದ ಹಿಂದುಳಿಯಿತು ಎನ್ನಬಹುದಾಗಿದೆ. ಹಾಗಾಗಿ ಸ್ಥಳೀಯ ಸಂಸ್ಥೆಗಳು ನೈಜ ಸಂಸ್ಥೆಗಳಾಗಿ ಕಾರ್ಯನಿರ್ವಹಿಸಲು ಅವುಗಳಿಗೆ ಹೆಚ್ಚುವರಿ ಕಾರ್ಯಗಳನ್ನು, ಅನುದಾನ ಮತ್ತು ಹೆಚ್ಚುವರಿ ಸಿಬ್ಬಂದಿಗಳನ್ನು ಒದಗಿಸತಕ್ಕದ್ದು, ಇದರ ಜೊತೆಗೆ ಸ್ಥಳೀಯ ಸಂಸ್ಥೆಗಳ ಮೇಲೆ ಅಧಿಕಾರಿಗಳ ನಿಯಂತ್ರಣವನ್ನು ಕಡಿತಗೊಳಿಸತಕ್ಕದ್ದು ಜೊತೆಗೆ ಅಧಿಕಾರಿಗಳನ್ನು ಉತ್ತಾರದಾಯಿಗಳನ್ನಾಗಿಸಿ ಅವರು ಚುನಾಯಿತ ಸದಸ್ಯರೊಂದಿಗೆ ನಿರ್ಣಯಗಳಲ್ಲಿ ಸಕಾರಾತ್ಮಕವಾಗಿ ಭಾಗವಹಿಸುವಂತೆ ಮಾಡುವ ಅವಶ್ಯಕತೆಯಿದೆ ಎಂದು ಹೇಳಲಾಗಿದೆ.

ಸ್ಥಳೀಯ ಸಂಸ್ಥೆಗಳಲ್ಲಿ ಮಹಿಳಾ ಸದಸ್ಯರ ಗಂಡಂದಿರ ಹಸ್ತಕ್ಷೇಪ

| ಸ್ಥಳೀಯ ಸಂಸ್ಥೆಗಳಲ್ಲಿ ಮಹಿಳಾ ಸದಸ್ಯರ ಗಂಡದಿರ ಹಸ್ತಕ್ಷೇಪ | ಹೊಸಪೇಟೆ | | ಕೂಡ್ಲಿಗಿ | |
|---|---|---|---|---|
| ಹಸ್ತಕ್ಷೇಪ ಇದೆ | ೬ | ೧೭.೦೦ | ೪ | ೨೦.೦೦ |
| ಇಲ್ಲ | ೧೨ | ೩೪.೦೦ | ೬ | ೩೦.೦೦ |
| ಹೇಳಲು ಸಾಧ್ಯವಿಲ್ಲ | ೯ | ೨೫.೭೧ | ೭ | ೩೫.೦೦ |
| ಅಭಿಪ್ರಾಯ ವ್ಯಕ್ತಪಡಿಸಿಲ್ಲ | ೮ | ೨೨.೮೫ | ೩ | ೧೫.೦೦ |
| **ಒಟ್ಟು** | ೩೫ | ೧೦೦ | ೨೦ | ೧೦೦ |

**ಮೂಲ: ಕ್ಷೇತ್ರ ಕಾರ್ಯದ ಮಾಹಿತಿ**

ಅಂದರೆ ಮಹಿಳಾ ಮೀಸಲಾತಿ ಸ್ಪರ್ಧಾ ಕ್ಷೇತ್ರದಲ್ಲಿರುವ ಮಹಿಳೆಯರ ಸೀಟಿಗೆ ಅವರ ಗಂಡಂದಿರ ಹೆಸರುಗಳು ಚಲಾವಣೆಯಲ್ಲಿರುವುದಕ್ಕೆ ಕಾರಣಗಳು ಬಹಳಷ್ಟಿರಬಹುದು. ಆದಿಕಾಲದಿಂದಲೂ ಪುರುಷರು ಅಧಿಕಾರದ ಅವಕಾಶಗಳನ್ನು ಬಳಸಿಕೊಂಡಿರುವುದು ಎಲ್ಲಾ ಸಂಸ್ಥೆಗಳಲ್ಲಿ ಮಹಿಳೆಯರನ್ನು ಕಡೆಗಣಿಸಿರುವುದು ಮತ್ತು ಈಗಲೂ ಮಹಿಳೆಯನ್ನು ಎರಡನೇ ದರ್ಜೆ ಪ್ರಜೆಯನ್ನಾಗಿ ನೋಡುವುದು ಮುಂದುವರಿದಿದೆ. ಇದಕ್ಕೆ ಪೂರಕವೆಂಬಂತೆ ಮಹಿಳೆಯರಿಗೆ ಶಿಕ್ಷಣದ ಕೊರತೆ, ರಾಜಕೀಯ ಅನುಭವದ ಅಭಾವ, ಆಡಳಿತ ವ್ಯವಸ್ಥೆಯ ಅಜ್ಞಾನ, ಹೆಚ್ಚಿನ ಶಿಕ್ಷಣ ಮತ್ತು ತಿಳುವಳಿಕೆ ಇರುವ ಮಹಿಳೆಯರು ಚುನಾವಣೆಗೆ ಸ್ಪರ್ಧಿಸದಿರುವುದು ಮುತಾಂದ ಕಾರಣಗಳು ಅಡ್ಡಿಯಾಗಿವೆ. ಪುರುಷರು ಮಾತ್ರ ಈ ಪರಿಸ್ಥಿತಿಯನ್ನು ತಮಗೆ ಉತ್ತಮ ಅವಕಾಶವಾಗಿ ಬಳಸಿಕೊಂಡು ಬಂದಿದ್ದಾರೆ. ಈ ಹಿನ್ನೆಲೆಯಲ್ಲಿ ಎರಡು ನಗರ ಸ್ಥಳೀಯ ಸಂಸ್ಥೆಗಳಿಗೆ ಹೋದಂತಹ ಸಂದರ್ಭದಲ್ಲಿ ಹೊಸಪೇಟೆ ನಗರಸಭೆಯ ಶೇ. ೧೭.೦೦ರಷ್ಟು ಚುನಾಯಿತ ಸದಸ್ಯರು ಮತ್ತು ಕೂಡ್ಲಿಗಿ ಪಟ್ಟಣ ಪಂಚಾಯಿತಯ ಶೇ. ೨೦ರಷ್ಟು ಚುನಾಯಿತ ಸದಸ್ಯರ ಎರಡೂ ನಗರ ಸ್ಥಳೀಯ ಸಂಸ್ಥೆಗೆ ಸಂಬಂಧಪಟ್ಟ ವಿಷಯಗಳಲ್ಲಿ ತಮ್ಮ ಪತಿ ಹಸ್ತಕ್ಷೇಪ ಮಾಡುತ್ತಾರೆ ಎಂದು ಒಪ್ಪಿಕೊಂಡಿರುವುದಾಗಿ. ಹಾಗೆಯೇ ಹೊಸಪೇಟೆ ನಗರಸಭೆಯ ಸದಸ್ಯರು ಶೇ. ೩೪ರಷ್ಟು ಮತ್ತು ಕೂಡ್ಲಿಗಿ ಪಟ್ಟಣ ಪಂಚಾಯಿತಿಯ ಶೇ. ೩೦ರಷ್ಟು ಚುನಾಯಿತ ಸದಸ್ಯರು ಹಸ್ತಕ್ಷೇಪ ಇಲ್ಲ ಎಂದಿದ್ದಾರೆ. ಅಲ್ಲದೇ, ಹೊಸಪೇಟೆ ನಗರಸಭೆಯ ಸದಸ್ಯರು ಶೇ. ೨೫.೭೧ರಷ್ಟು ಮತ್ತು ಕೂಡ್ಲಿಗಿ ಪಟ್ಟಣ ಪಂಚಾಯಿತಿಯ ಶೇ. ೩೫ರಷ್ಟು ಚುನಾಯಿತ ಸದಸ್ಯರು ಹೇಳಲು ಸಾಧ್ಯವಿಲ್ಲ ಎಂದು ಹೇಳಿದ್ದಾರೆ. ಇತರೆ, ಹೊಸಪೇಟೆ ನಗರಸಭೆಯ ಸದಸ್ಯರು ಶೇ. ೨೨.೮೫ರಷ್ಟು ಮತ್ತು ಕೂಡ್ಲಿಗಿ ಪಟ್ಟಣ ಪಂಚಾಯಿತಿಯ ಶೇ. ೧೫ರಷ್ಟು ಚುನಾಯಿತ ಸದಸ್ಯರು ಅಭಿಪ್ರಾಯ ವ್ಯಕ್ತಪಡಿಸಿರುವುದಿಲ್ಲ ಎಂದು ಕ್ಷೇತ್ರಾಧ್ಯಾಯದಿಂದ ತಿಳಿದು ಬಂದಿದೆ. ತಮಗೆ ವಹಿಸಿದ ಕೆಲಸವನ್ನು ಸಮರ್ಥವಾಗಿ ಮಾಡಲು ತಮ್ಮ ಪತಿಯ ಅವಶ್ಯಕ ಎಂದು ಪರವಾಗಿ ಮಾತನಾಡಲು ಅನುಮತಿಕೊಟ್ಟಿಲ್ಲ ಇಂತಹ ಸಂದರ್ಭದಲ್ಲಿ ಸದಸ್ಯೆಯರ ಪತಿ ಮೀಟಿಂಗ್ ನಡೆಯುವ ಹಾಲ್‌ನಿಂದ ಹೊರಗಿದ್ದು ಮೀಟಿಂಗ್ ಮುಗಿದ ನಂತರ ಕರೆದುಕೊಂಡ ಹೋದ ಘಟನೆಗಳೂ ಇದೆ. ಕೆಲವು ಸಲ ಮಹಿಳಾ ಸದಸ್ಯೆಯರು ತಮ್ಮ ಪತಿಯೊಂದಿಗೆ ಅಥವಾ ಮಗನೊಂದಿಗೆ ಸಭೆಗೆ ಹಾಜರಾದ

ಘಟನೆಗಳೂ ಇವೆ. ಇಂತಹ ಸಂದರ್ಭದಲ್ಲಿ ಅವರನ್ನು ಸಭಾಂಗಣಕ್ಕೆ ಸೇರಿಸಿಲ್ಲ ಮತ್ತು ತಮ್ಮ ಪತ್ನಿಯ ಪರವಾಗಿ ಮಾತನಾಡಲು ಅನುಮತಿ ಕೊಟ್ಟಿಲ್ಲ. ಅಲ್ಲದೇ ಸ್ಥಳೀಯ ಸಂಸ್ಥೆಗಳ ಮಟ್ಟದಲ್ಲಿ ಮಹಿಳಾ ಮೀಸಲಾತಿ ಕ್ಷೇತ್ರದಲ್ಲಿ ಮಹಿಳಾ ಸದಸ್ಯೆಯರ ಗಂಡಂದಿರು ತಮ್ಮ ಪತ್ನಿ ಮಾಡಬೇಕಿದ್ದ ಕೆಲಸಗಳಲ್ಲಿ ತಲೆ ಹಾಕುತ್ತಾರೆ. ಹಾಗೂ ಹೆಚ್ಚಿನ ಸಲ ಅವರೇ ನಿರ್ಧಾರ ತೆಗೆದುಕೊಳ್ಳುತ್ತಾರೆ. ಮಹಿಳಾ ಸದಸ್ಯೆ ವಿದ್ಯಾವಂತೆಯಾಗಿದ್ದರೆ ನಗರ ಸ್ಥಳೀಯ ಸಂಸ್ಥೆಗಳ ಕೆಲಸ ಕಾರ್ಯಗಳಲ್ಲಿ ಪತಿಯ ಹಸ್ತಕ್ಷೇಪ ಹೆಚ್ಚಾಗಿರುವುದಿಲ್ಲ. ಮಹಿಳಾ ಸದಸ್ಯೆಯರೇ ತಮ್ಮ ಜವಾಬ್ದಾರಿಗಳನ್ನು ನಡೆಸಿಕೊಂಡು ಹೋಗುತ್ತಾರೆ. ಒಟ್ಟಾರೆಯಾಗಿ, ಸಾಪೇಕ್ಷವಾಗಿ ಮುಂದುವರಿದ ಹೊಸಪೇಟೆ ನಗರಸಭೆಯ ಸದಸ್ಯರಿಗಿಂತ ತೀರಾ ಹಿಂದುಳಿದ ಪಟ್ಟಣ ಪಂಚಾಯಿತಿಯ ಸದಸ್ಯರಲ್ಲಿ ಗಂಡದಿರು ತಮ್ಮ ಪತ್ನಿಯ ಸ್ಥಳೀಯ ಅಧಿಕಾರದಲ್ಲಿ ಹೆಚ್ಚಿನ ರೀತಿಯಲ್ಲಿ ಹಸ್ತಕ್ಷೇಪ ಮಾಡುವುದನ್ನು ಅಧ್ಯಯನದಿಂದ ಕಂಡುಬಂದಿದೆ. ಪಟ್ಟಣ ಪಂಚಾಯಿತಿಯಲ್ಲಿ ಮಹಿಳಾ ಪ್ರತಿನಿಧಿಗಳ ಸಂದರ್ಶನದ ಸಮಯದಲ್ಲಿ ಗೆದ್ದ ಮಹಿಳಾ ಅಭ್ಯರ್ಥಿಯನ್ನು ಸ್ವತಂತ್ರವಾಗಿ ಕೆಲಸ ನಿರ್ವಹಿಸಲು ಬಿಡದಿರುವುದು, ಸಭೆಗಳಿಗೆ ಹಿಂಬಾಲಿಸುವುದು, ಮಹಿಳೆಯನ್ನು ಬದಿಗೊತ್ತಿ ತಾನೇ ಸದಸ್ಯನಂತೆ ವ್ಯವಹರಿಸುವುದು, ಹಾಗೇ ಸಮುದಾಯ ಸಹ ಗಂಡಸರನ್ನೇ ಸದಸ್ಯರೆಂಬತೆ ಪರಿಗಣಿಸಿ ಎಲ್ಲಾ ಕಾರ್ಯಕ್ಕೂ ಅವರನ್ನೇ ಸಂಪರ್ಕಿಸುವಂತಹ ಕಾರಣಗಳಿಂದಾಗಿ ಮಹಿಳೆಯರು ಸಮರ್ಥ ನಾಯಕರಾಗಿ ಅಧಿಕಾರ ನಡೆಸಲು ಸಾಧ್ಯವಾಗುತ್ತಿಲ್ಲ. ಮಹಿಳೆಯರಿಗೆ ಕನಿಷ್ಠ ಶಿಕ್ಷಣ ಮಟ್ಟವನ್ನು ನಿಗದಿಪಡಿಸದೆ ಗಂಡದಿರ ಹಸ್ತಕ್ಷೇಪ ಹೆಚ್ಚಾಗಿರುವುದರಿಂದ ಮಹಿಳೆಯರು ಸ್ಥಳೀಯ ರಾಜಕೀಯದಲ್ಲಿ ಹೆಚ್ಚಿನ ಪ್ರಮಾಣದಲ್ಲಿ ಅರಿವಿನ್ನು ಹೊಂದದೆ ಹಾಗೂ ಭಾಗವಹಿಸದೆ ಮಹಿಳೆಯರ ಸಬಲೀಕರಣಗೊಳದೆ ಹಿಂದುಳಿಯಿತು ಎಂದು ಕಾಣಬಹುದಾಗಿದೆ. ಹಾಗಾಗಿ ಸ್ಥಳೀಯ ಮಟ್ಟದಲ್ಲಿ ಚುನಾಯಿತ ಮಹಿಳೆಯರಿಗೆ ಕನಿಷ್ಠ ಶಿಕ್ಷಣ ಮಟ್ಟವನ್ನು ಹೊಂದಿದರೆ ಪಂಚಾಯಿತಿ ಅಧಿಕಾರಿಗಳಿಂದ ನಗರ ಸ್ಥಳೀಯ ಸಂಸ್ಥೆಗಳಿಗೆ ಸಂಬಂಧಪಟ್ಟ ಕೆಲಸಗಳನ್ನು ತಮ್ಮಿಷ್ಟ ಬಂದಂತೆ ಮಾಡಿಕೊಂಡು ಹೋಗುವುದನ್ನು ತಪ್ಪಿಸಬಹುದು ಅಧ್ಯಕ್ಷರು ವಿಷಯಗಳನ್ನು ಓದಿ ಅರ್ಥ ಮಾಡಿಕೊಳ್ಳದೇ ಸಹಿ ಹಾಕುವುದನ್ನು ತಪ್ಪಿಸಬಹುದು. ಈ ಹಿನ್ನೆಲೆಯಲ್ಲಿ, ಮಹಿಳೆಯರ ಸಾಮರ್ಥ್ಯದ ಮೇಲೆ ನಂಬಿಕೆ ಹೊಂದದೆ, ಅವರು ಸಂಪೂರ್ಣ ಸ್ವಾತಂತ್ರ್ಯ ಹಾಗೂ ಅಧಿಕಾರವನ್ನು ಅನುಭವಿಸಲು ಬಿಡದಿರುವುದು ವಿಷಾದಕರ ಸಂಗತಿಯಾಗಿದೆ. ಈ ವಿಶ್ಲೇಷಣೆಯಿಂದ ತಿಳಿದುಬರುವ ಸಂಗತಿಯೆಂದರೆ ಮಹಿಳೆಯರಿಗೆ ಹೆಚ್ಚಿನ ಮಟ್ಟದಲ್ಲಿ ಶಿಕ್ಷಣವನ್ನು ನೀಡುವ ಮೂಲಕ ಅವರಿಗೆ ಸ್ಥಳೀಯ ರಾಜಕೀಯದ ಬಗ್ಗೆ ಹೆಚ್ಚಿನ ಅರಿವು ಮತ್ತು ಭಾಗವಹಿಸುವಂತಹ ತರಬೇತಿ ಕಾರ್ಯಕ್ರಮಗಳನ್ನು ಹಾಕಿಕೊಳ್ಳುವ ಅಗತ್ಯವಿದೆ ಎಂದು ಹೇಳಲಾಗಿದೆ.

೬.೫. ನಗರವಾರು ಸಂದರ್ಶನ ಮಾಡಿದ ಚುನಾಯಿತ ಪ್ರತಿನಿಧಿಗಳ ಚುನಾವಣೆಯ/ರಾಜಕೀಯದ ಅನುಭವಗಳ ವಿವರ

ನಿಮ್ಮನ್ನು ನಗರಸಭೆ/ಪಟ್ಟಣ ಪಂಚಾಯಿತಿ ಚುನಾವಣೆಗೆ ಸ್ಪರ್ಧಿಸಲು ಕಾರಣಗಳು

| ಚುನಾಯಿತ ಪ್ರತಿನಿಧಿಗಳ ಚುನಾವಣೆಯ/ ರಾಜಕೀಯದ ಅನುಭವಗಳ ವಿವರ | ಹೊಸಪೇಟೆ ನಗರ ಸಭೆ | | ಕೂಡ್ಲಿಗಿ ಪಟ್ಟಣಪಂಚಾಯಿತಿ | |
|---|---|---|---|---|
| | ಸಂಖ್ಯೆಗಳು | ಶೇಕಡವಾರು | ಸಂಖ್ಯೆಗಳು | ಶೇಕಡವಾರು |
| ನೀವು ನಗರಸಭೆ/ ಪಟ್ಟಣ ಪಂಚಾಯಿತಿಗೆ ಆಯ್ಕೆಯಾಗಿದ್ದರಿಂದ ವೈಯಕ್ತಿವಾಗಿ ಆದ ಬದಲಾವಣೆಗಳು | | | | |
| ಉದ್ಯೋಗ | ೭ | ೨೦.೦೦ | ೫ | ೨೫.೦೦ |
| ಆಡಳಿತ ನಿರ್ವಹಣೆ | ೯ | ೨೫.೭೧ | ೬ | ೩೦.೦೦ |
| ಹೆಚ್ಚಿನ ಜನರ ಸಂಪರ್ಕ, ಗೌರವ | ೧೯ | ೫೪.೨೯ | ೯ | ೪೫.೦೦ |
| ಒಟ್ಟು | ೩೫ | ೧೦೦ | ೨೦ | ೧೦೦ |

ಮೂಲ: ಕ್ಷೇತ್ರ ಕಾರ್ಯದ ಮಾಹಿತಿ

ಹೊಸಪೇಟೆ ನಗರಸಭೆಗೆ ಆಯ್ಕೆಯಾಗಿದ್ದರಿಂದ ವೈಯಕ್ತಿಕವಾಗಿ ಆದ ಬದಲಾವಣೆಯನ್ನು ಶೇ. ೨೦ರಷ್ಟು ಚುನಾಯಿತ ಪ್ರತಿನಿಧಿಗಳು ಪ್ರಕಾರ ಒಂದು ಔಪಚಾರಿಕವಾದ ಉದ್ಯೋಗ ಸೃಷ್ಟಿಯಾಯಿತು ಎಂದು ಹೇಳಿದರು. ಇತರ ನಗರಸಭೆಯ ಶೇ. ೨೫.೭೧ರಷ್ಟು ಜನಪ್ರತಿನಿಧಿಗಳು ಸ್ಥಳೀಯ ಮಟ್ಟದಲ್ಲಿ ಆಡಳಿತವನ್ನು ಬಲಗೊಳಿಸುವುದರ ಜೊತೆಗೆ ಜನಗಳನ್ನು ಯಾವ ರೀತಿಯಾಗಿ ಅಭಿವೃದ್ಧಿ ಕಾರ್ಯದಲ್ಲಿ ಭಾಗವಹಿಸುವುದು ಅದಲ್ಲದೆ ಪಕ್ಷದ ಮುಖಂಡರೊಂದಿಗೆ ತಮ್ಮ ರಾಜಕೀಯ ಬೆಳವಣಿಗೆಯ ಬಗ್ಗೆ ಮಾತನಾಡುವ ಮೂಲಕ ನಗರ ಸ್ಥಳೀಯ ಸಂಸ್ಥೆಗಳು ಆಡಳಿತ ನಿರ್ವಹಣೆ ಮಾಡುವುದರಲ್ಲಿ ಸಹಾಯವಾಗುತ್ತದೆ. ನಗರಸಭೆಗೆ ಆಯ್ಕೆಯಾದ ಶೇ. ೫೪.೨೯ರಷ್ಟು ಚುನಾಯಿತ ಸದಸ್ಯರ ಬದಲಾವಣೆಗೆ ಪ್ರಬಲವಾದ ಕಾರಣ ಹೆಚ್ಚಿನ ಜನರ ಸಂಪರ್ಕ ಬೆಳೆಯಿತು ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ.

ಕೂಡ್ಲಿಗಿ ಪಟ್ಟಣ ಪಂಚಾಯಿತಿಗೆ ಆಯ್ಕೆಯಾಗಿದ್ದರಿಂದ ವೈಯಕ್ತಿಕವಾಗಿ ಆದ ಬದಲಾವಣೆಯನ್ನು ಶೇ. ೨೫ರಷ್ಟು ಜನಪ್ರತಿನಿಧಿಗಳು ಪ್ರಕಾರ ಒಂದು ಜವಾಬ್ದಾರಿಯುತವಾದ ಒಂದು ಉದ್ಯೋಗವು ದೊರೆಯಿತು ಎಂದು ಹೇಳಿದರು. ಇತರ ಪಟ್ಟಣ ಪಂಚಾಯಿತಯ ಶೇ. ೩೦ರಷ್ಟು ಸದಸ್ಯರು ಸ್ಥಳೀಯ ರಾಜಕೀಯ ವಿಕೇಂದ್ರಿಕರಣದಿಂದ ವಾರ್ಡ್ ಮಟ್ಟದಲ್ಲಿ ಸ್ಥಳೀಯ ಅಭಿವೃದ್ಧಿ ಕಾರ್ಯಗಳಿಗೆ ಸಂಬಂಧಪಟ್ಟಂತೆ ಆಡಳಿತದ ಮೂಲಕ ಪರಿಣಾಮಕಾರಿಯಾದ ಆಡಳಿತದ ನಿರ್ವಹಣೆ ಮಾಡಲಿಕ್ಕೆ ಸಹಾಯಕಾರಿಯಾಯಿತು. ಉಳಿದ ಪಟ್ಟಣ ಪಂಚಾಯಿತಿಯ ಶೇ. ೪೫ರಷ್ಟು ಚುನಾಯಿತ ಸದಸ್ಯರ ಪ್ರಕಾರ ತಮ್ಮ ವಾರ್ಡಿನ ಉದ್ಧಾರ ಮಾಡಬೇಕೆಂಬ ಉದ್ದೇಶದಿಂದ ಚುನಾಯಿತರಾದ ನಂತರ ಅವರಿಗೆ ಅದರಿಂದ ಹೆಚ್ಚಿನ ಜನಸಂಪರ್ಕದೊಂದಿಗೆ ಗೌರವವು ಕೂಡ ಸಿಕ್ಕಿತು ಎಂಬ ಅಭಿಪ್ರಾಯವನ್ನು

ವ್ಯಕ್ತಪಡಿಸಿದರು. ಒಟ್ಟಾರೆಯಾಗಿ ತೀರಾ ಹಿಂದುಳಿದ ಪಟ್ಟಣ ಪಂಚಾಯಿತಿ ಚುನಾಯಿತ ಸದಸ್ಯರಿಗಿಂತ ಮುಂದುವರಿದ ನಗರಸಭೆಯ ಚುನಾಯಿತ ಸದಸ್ಯರಲ್ಲಿ ವಾರ್ಡಿನ ಜನರಿಗಾಗಿ ಉತ್ತಮ ಕೆಲಸಗಳನ್ನು ಮಾಡುವುದರ ಜೊತೆಗೆ ಅವರ ಸಂಪರ್ಕವನ್ನು ಹೆಚ್ಚಿನ ರೀತಿಯಲ್ಲಿ ಗಳಿಸುವಲ್ಲಿ ಯಶಸ್ವಿಯಾಗಿದ್ದಾರೆ ಆದರೆ ಹಿಂದುಳಿದ ಪಟ್ಟಣವು ಚುನಾಯಿತರಾಗಿ ಸ್ಥಳೀಯ ಅಭ್ಯರ್ಥಿತನವನ್ನು ಕೇವಲ ಉದ್ಯೋಗ ಮತ್ತು ಆಡಳಿತದ ನಿರ್ವಹಣೆಯೆಂದು ಭಾವಿಸಿ ಅಭಿವೃದ್ಧಿ ಕಾರ್ಯಗಳಿಗೆ ಆಸಕ್ತಿಯನ್ನು ಕೊಡದೆರುವುದರಿಂದ ಹಿಂದುಳಿಯಿತು ಎಂದು ಹೇಳಬಹುದಾಗಿದೆ. ಹಾಗಾಗಿ ಅಭಿವೃದ್ಧಿಯಿಂದ ವಂಚಿತಗೊಂಡ ಸ್ಥಳೀಯ ಜನರ ಉಳಿವು ಮತ್ತು ಅಭಿವೃದ್ಧಿಗಾಗಿ ಕಾಳಜಿವಹಿಸುವ ಅಗತ್ಯತೆ ಇದೆ ಎಂದು ಹೇಳಲಾಗಿದೆ.

**ಚುನಾವಣೆಯಲ್ಲಿ ಹಣ-ಮಧ್ಯಪಾನ ಪ್ರಭಾವ ಬೀರುವ ಅಂಶಗಳು**

| **ಚುನಾವಣೆಯಲ್ಲಿ ಹಣ-ಮಧ್ಯಪಾನದ ಕುರಿತು** | **ಹೊಸಪೇಟೆ** | | **ಕೂಡ್ಲಿಗಿ** | |
|---|---|---|---|---|
| ಪ್ರಭಾವ ಬೀರುತ್ತದೆ | ೧೨ | ೩೪.೨೯ | ೧೫ | ೭೫.೦೦ |
| ಪ್ರಭಾವ ಬೀರಲ್ಲ | ೨೩ | ೬೫.೭೧ | ೫ | ೨೫.೦೦ |
| **ಒಟ್ಟು** | ೩೫ | ೧೦೦ | ೨೦ | ೧೦೦ |

**ಮೂಲ: ಕ್ಷೇತ್ರ ಕಾರ್ಯದ ಮಾಹಿತಿ**

ನಗರ ಸ್ಥಳಿಯ ಸಂಸ್ಥೆಗಳಲ್ಲಿ ಕೆಲವು ವರ್ಷಗಳಿಂದೀಚೆಗೆ ಈ ವ್ಯವಸ್ಥೆಯಲ್ಲಿ ಕೆಲವು ವಿರೂಪಗಳು ಗೋಚರಿಸಿವೆ. ಮತದಾರರಿಗೆ ಲಂಚ ನೀಡುವುದು, ವಿವಿಧ ಗುಂಪುಗಳ ನಡುವೆ ವ್ಯವಹಾರ ಕುದುರಿಸುವುದು ಕಾಣಲಾಗಿದೆ. ಹಾಗಾಗಿ ಚುನಾವಣಾ ವೆಚ್ಚ ಹೆಚ್ಚಳವಾಗಿದೆ. ಇದರಿಂದ ಮೆಲ್ವರ್ಗದವರು ಮತ್ತು ಹಣವಂತರೇ ಸ್ಥಳೀಯ ಸಂಸ್ಥೆಗಳ ಅಧಿಕಾರವನ್ನು ಖರೀದಿಸಿಕೊಳ್ಳುವಂತಾಗಿದೆ. ಆಗ ಲಂಚ ಪಡೆಯುವುದು ಮತ್ತು ತಮ್ಮ ಮತವನ್ನು ಮಾರಿಕೊಳ್ಳುವುದು ಉತ್ತಮ ಆಯ್ಕೆಯೆಂದೇ ತೊರುತ್ತದೆ. ಈ ನಿಟ್ಟಿನಲ್ಲಿ ಹೊಸಪೇಟೆ ನಗರಸಭೆ ಮತ್ತು ಕೂಡ್ಲಿಗಿ ಪಟ್ಟಣ ಪಂಚಾಯಿತಿಗಳ ವಾರ್ಡಿನ ಸದಸ್ಯರನ್ನು ಭೇಟಿ ಮಾಡಿದ ಮೇಲೆ ಹಣ-ಮಧ್ಯಪಾನ ನಗರ ಸ್ಥಳೀಯ ಸಂಸ್ಥೆಗಳ ಚುನಾವಣೆಗಳ ಮೇಲೆ ತಕ್ಕ ಮಟ್ಟಿಗೆ ಪ್ರಭಾವ ಬೀರುತ್ತವೆ ಎಂದು ಹೇಳಬಹುದು. ಭೇಟಿ ಮಾಡಿದ ಸಂದರ್ಭದಲ್ಲಿ ಸದಸ್ಯರನ್ನು ಚುನಾಯಿಸುವಾಗ ಹಣ – ಮಧ್ಯಪಾನ ಎಷ್ಟು ಪ್ರಭಾವ ಬೀರುತ್ತದೆ ಎಂದು ನಿಖರವಾಗಿ ಹೇಳಲು ಸಾಧ್ಯವಿಲ್ಲ. ನಗರಸಭೆ ಮತ್ತು ಪಟ್ಟಣ ಪಂಚಾಯಿತಿಗಳಲ್ಲಿ ಸದಸ್ಯರನ್ನು ಸಂದರ್ಶಿಸಿದಾಗ ವಾರ್ಡಿನ ಜನರು ಅಭ್ಯರ್ಥಿಗಳಿಗೆ ಮತ ಚಲಾಯಿಸುವಾಗ ಹಣ-ಮಧ್ಯಪಾನದ ಅಂಶವನ್ನು ಗಣನೆಗೆ ತೆಗೆದುಕೊಳ್ಳಲಾಗುತ್ತದೆ ಎಂಬುದರ ಬಗ್ಗೆ ನನಗೆ ಸ್ಪಷ್ಟವಾಗಿ ತಿಳಿಸಲಿಲ್ಲ. ಆದರೆ, ಹೊಸಪೇಟೆ ನಗರಸಭೆ ಶೇ. ೩೪.೨೯ರಷ್ಟು ಚುನಾಯಿತ ಸದಸ್ಯರ ಪ್ರಕಾರ ಪ್ರಭಾವ ಬೀರುತ್ತದೆ ಎಂದು ಉಳಿದ ಶೇ. ೬೫.೭೧ರಷ್ಟು ಸದಸ್ಯರು ಯಾವುದೇ ಪ್ರಭಾವ ಬೀರುವುದಿಲ್ಲವೆಂದು ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ಅದರಂತೆ ಕೂಡ್ಲಿಗಿ ಪಟ್ಟಣ ಪಂಚಾಯಿತಿಯ ಶೇ. ೭೫ರಷ್ಟು

ಚುನಾಯಿತ ಸದಸ್ಯರು ಚುನಾವಣೆಯ ಸಂದರ್ಭದಲ್ಲಿ ಅಭ್ಯರ್ಥಿಗಳ ಆಯ್ಕೆಯಲ್ಲಿ ಈ ಅಂಶಗಳು ಪ್ರಭಾವ ಬೀರುತ್ತವೆ ಎಂದರು. ಉಳಿದ ಶೇ. ೨೫ರಷ್ಟು ಜನಪ್ರತಿನಿಧಿಗಳು ಯಾವುದೇ ಪರಿಣಾಮ ಬೀರುವುದಿಲ್ಲವೆಂದು ತಮ್ಮ ಅಭಿಪ್ರಾಯದ ಮತ್ತು ತಮ್ಮ ಜಾತಿಗೆ ಸೇರಿದ ಹೆಚ್ಚಿನ ಅಭ್ಯರ್ಥಿಗಳು ಚುನಾಯಿತರಾಗಬೇಕೆಂಬುದು ಅವರ ಆಸೆಯಾಗಿತ್ತು. ತೀರಾ ಹಿಂದುಳಿದ ಪಟ್ಟಣ ಪಂಚಾಯಿತಿಯ ಚುನಾಯಿತ ಸದಸ್ಯರಿಗಿಂತ ಸಾಪೇಕ್ಷವಾಗಿ ಮುಂದುವರಿದ ನಗರಸಭೆಯ ಚುನಾಯಿತ ಪ್ರತಿನಿಧಿಗಳಲ್ಲಿ ಹಣ-ಮಧ್ಯಪಾನದ ಹಾವಳಿ ಕಡಿಮೆಯಿರುವುದು ಕಂಡುಬಂದಿದೆ. ಆದರೆ ಹಿಂದುಳಿದ ಪಟ್ಟಣ ಪಂಚಾಯಿತಿಯಲ್ಲಿ ಹಣ-ಮಧ್ಯಪಾನದ ಆಮಿಷದಿಂದ ಚುನಾಯಿತರಾಗಿ ವಾರ್ಡಿನ ಜನರನ್ನು ಸುಶಿಕ್ಷಿತರನ್ನಾಗಿ ಮಾಡದೆ, ಆರೋಗ್ಯ ಮತ್ತು ಅಭಿವೃದ್ಧಿ ಕಾರ್ಯಗಳಲ್ಲಿ ಭಾಗವಹಿಸದೆ ಉತ್ತಮ ಅಭ್ಯರ್ಥಿಗಳ ಆಯ್ಕೆಯಲ್ಲಿ ವಿಫಲರಾಗಿದ್ದರಿಂದ ಹಿಂದುಳಿಯಿತು ಎನ್ನಬಹುದಾಗಿದೆ. ಅಂದರೆ ಉತ್ತಮ ಅಭ್ಯರ್ಥಿಗಳನ್ನು ಆಯ್ಕೆ ಮಾಡಲು ವಾರ್ಡಿನ ಜನತೆಗೆ ವಿವಿಧ ನಿಟ್ಟಿನಲ್ಲಿ ಸ್ಥಳೀಯ ರಾಜಕೀಯದ ಬಗ್ಗೆ ಅರಿವು ಮೂಡಿಸುವ ಅವಶ್ಯಕತೆಯಿದೆ ಎಂದು ಹೇಳಬಹುದಾಗಿದೆ.

**ನೀವು ಚುನಾವಣೆಯಲ್ಲಿ ಖರ್ಚು ಮಾಡಿದ ಹಣದ ವಿವರ**

| ಚುನಾವಣೆಗೆ ಖರ್ಚು ಮಾಡಿದ ಹಣ | ಹೊಸಪೇಟೆ | | ಕೂಡ್ಲಿಗಿ | |
|---|---|---|---|---|
| ೩೬,೦೦೦-೫೦,೦೦೦ | ೨೦ | ೫೭.೧೪ | ೭ | ೩೫.೦೦ |
| ೫೧,೦೦೦-೭೫,೦೦೦ | ೧೩ | ೩೭.೧೪ | ೯ | ೪೫.೦೦ |
| ೭೬,೦೦೦-೧ಲಕ್ಷ ಮೇಲಿನ | ೨ | ೫.೭೨ | ೪ | ೨೦.೦೦ |
| **ಒಟ್ಟು** | ೩೫ | ೧೦೦ | ೨೦ | ೧೦೦ |

**ಮೂಲ: ಕ್ಷೇತ್ರ ಕಾರ್ಯದ ಮಾಹಿತಿ**

ಹೊಸಪೇಟೆ ನಗರಸಭೆಯಲ್ಲಿ ಶೇ. ೫೭.೧೪ರಷ್ಟು ಚುನಾಯಿತ ಸದಸ್ಯರು ತಮ್ಮ ವಾರ್ಡಿನ ಜನರಿಗಾಗಿ ಒಳ್ಳೆಯ ಕೆಲಸಗಳನ್ನು ಮಾಡಬೇಕೆಂಬ ಉದ್ದೇಶ ಹೊಂದಿ ಚುನಾವಣೆಯಲ್ಲಿ ಗೆಲ್ಲಲು ೩೬ ಸಾವಿರದಿಂದ ೫೦ ಸಾವಿರ ರೂಪಾಯಿಗಳನ್ನು ಚುನಾವಣೆಗಾಗಿ ಖರ್ಚು ಮಾಡಲಾಗಿದೆ ಎಂದು ತಿಳಿದು ಬಂದಿದೆ. ಇತರೆ ನಗರಸಭೆಯ ಶೇ. ೩೭.೧೪ರಷ್ಟು ಚುನಾಯಿತ ಸದಸ್ಯರು ತಮ್ಮನ್ನು ವಾರ್ಡಿನ ಜನರು ಅಭಿವೃದ್ಧಿ ಮಾಡುವವನು, ಯೋಗ್ಯ ವ್ಯಕ್ತಿಯೆಂದು ನಮ್ಮ ಮೇಲೆ ವಿಶ್ವಾಸವಿಟ್ಟು ಚುನಾವಣೆಗೆ ಸ್ಪರ್ಧಿಸುವಂತೆ ಹೇಳಿದ್ದಾರೆ. ಆದಕಾರಣ ೫೧ ಸಾವಿರದಂದ ೭೫ ಸಾವಿರ ಹಣವನ್ನು ಖರ್ಚು ಮಾಡಿಕೊಂಡು ಚುನಾಯಿತನಾಗಿದ್ದೇನೆ ಎಂಬ ಅಭಿಪ್ರಾಯವು ತಿಳಿದು ಬಂದಿದೆ. ಉಳಿದ ನಗರಸಭೆಯ ಶೇ. ೫.೭೨ರಷ್ಟು ಚುನಾಯಿತ ಸದಸ್ಯರು ೭೬ ಸಾವಿರದಿಂದ ೧ ಲಕ್ಷಕ್ಕಿಂತ ಹೆಚ್ಚು ಖರ್ಚಿನ ವಿವರ ಹೇಳಿ ಚುನಾಯಿತನಾಗಿರುವುದರ ಬಗ್ಗೆ ಯಾವುದೇ ಅಭಿಪ್ರಾಯವನ್ನು ಹೇಳಿರುವುದಿಲ್ಲ.

ಕೂಡ್ಲಿಗಿ ಪಟ್ಟಣ ಪಂಚಾಯಿತಿಯ ಶೇ. ೨೫ರಷ್ಟು ಚುನಾಯಿತ ಸದಸ್ಯರು ತಮ್ಮ ಹಿರಿಯರು ರಾಜಕೀಯದಲ್ಲಿದ್ದರಿಂದ ನಾನು ಸ್ಥಳೀಯ ಸಂಸ್ಥೆಯ ಚುನಾವಣೆಯಲ್ಲಿ ನಿಂತಿದ್ದೇನೆ ಎಂದರು. ಚುನಾವಣೆಯಾಗಿ ೩೬ ಸಾವಿರದಿಂದ ೫೦ ಸಾವಿರ ರೂಪಾಯಿಗಳವರೆಗೆ ಹಣವನ್ನು ಖರ್ಚು

ಮಾಡಿದ್ದೇನೆ ಎಂದು ತಿಳಿದು ಬಂದಿದೆ. ಅಲ್ಲದೇ ಇತರೆ ಪಟ್ಟಣ ಪಂಚಾಯಿತಿಯ ಶೇ. ೪೫ರಷ್ಟು ಜನಪ್ರತಿನಿಧಿಗಳು ಆಡಳಿತದ ಬಗ್ಗೆ ಅರಿವು ಇಲ್ಲದೇ ಮೀಸಲಾತಿ ಇರುವುದರಿಂದ ಪಕ್ಷದ ಮುಖಂಡರ ಒತ್ತಾಯದ ಮೇರೆಗೆ ಚುನಾವಣೆಯಲ್ಲಿ ಭಾಗವಹಿಸಿ ಚುನಾವಣೆಗಾಗಿ ಪಾರ್ಟಿಫಂಡ್, ಇತರೆ ಮೂಲದಿಂದ ೫೧ ಸಾವಿರದಿಂದ ೭೫ ಸಾವಿರದವರೆಗೆ ಹಣವನ್ನು ಖರ್ಚು ಮಾಡಿದ್ದೇನೆ ಎಂದು ತಿಳಿಸಿದರು. ಉಳಿದ ಪಟ್ಟಣ ಪಂಚಾಯಿತಿಯ ಶೇ. ೨೦ರಷ್ಟು ಚುನಾಯಿತ ಪ್ರತಿನಿಧಿಗಳು ಚುನಾವಣೆಗೆ ನಿಲ್ಲಲು ವಿವಿಧ ರೀತಿಯ ಕಾರಣಗಳನ್ನು (ಕ್ಷೇತ್ರವು ಮಹಿಳೆಗೆ ಮೀಸಲು, ಸ್ಥಳೀಯ ಜನರೊಂದಿಗೆ ಇದ್ದ ಸಂಬಂಧ) ನೀಡುತ್ತಾ ತಾವು ಚುನಾವಣೆಯಲ್ಲಿ ಅಭ್ಯರ್ಥಿಯಾಗಿ ಚುನಾವಣೆಗಾಗಿ ೭೬ ಸಾವಿರದಿಂದ ೧ ಲಕ್ಷಕ್ಕಿಂತ ಹೆಚ್ಚಿನ ಹಣವನ್ನು ಖರ್ಚು ಮಾಡಿದ್ದೇವೆ ಎಂದು ತಮ್ಮ ಅಭಿಪ್ರಾಯಗಳನ್ನು ವ್ಯಕ್ತಪಡಿಸಿರುವುದು ಅಧ್ಯಯಗಳಿಂದ ತಿಳಿದು ಬಂದಿದೆ. ಒಟ್ಟಾರೆಯಾಗಿ ವಿಶ್ಲೇಷಣೆಯಿಂದ ತಿಳಿದುಬರುವ ಸಂಗತಿಯೆಂದರೆ ಮುಂದುವರಿದ ನಗರಸಭೆಯ ಸದಸ್ಯರಿಗಿಂತ ತೀರಾ ಹಿಂದುಳಿದ ಪಟ್ಟಣ ಪಂಚಾಯಿತಿ ಸದಸ್ಯರು ಚುನಾವಣಾ ಅಭ್ಯರ್ಥಿಯಾಗಿ ಗೆಲ್ಲಲು ಹಲವಾರು ಆಮಿಷಗಳಿಗೆ ಬಲಿಯಾಗಿ ಹೆಚ್ಚಿನ ಹಣವನ್ನು ಖರ್ಚು ಮಾಡುವುದು ತಿಳಿದು ಬಂದಿದೆ. ಹೊಸಪೇಟೆ ನಗರಸಭೆಯು ಹೆಚ್ಚಿನ ಆದಾಯವನ್ನು ಹೊಂದಿದ್ದರು ಅವರು ಚುನಾವಣೆಯಲ್ಲಿ ಹೆಚ್ಚಿನ ಹಣವನ್ನು ಖರ್ಚು ಮಾಡದೆ ವಾರ್ಡಿನ ಅಭಿವೃದ್ಧಿಯನ್ನು ಮಾಡುವುದು ತಿಳಿದು ಬಂದಿದೆ. ಆದರೆ ಪಟ್ಟಣ ಪಂಚಾಯಿತಿಯು ಒಣಭೂಮಿ ಪ್ರದೇಶವನ್ನು ಹೊಂದಿ ಕಡಿಮೆ ಆದಾಯವನ್ನು ಹೊಂದಿದ್ದರೂ ಸ್ಥಳೀಯ ಸಂಸ್ಥೆಯು ಪ್ರತಿಷ್ಠೆಯ ಪ್ರಶ್ನೆಯನ್ನಾಗಿ ತಿಳಿದು ಚುನಾಯಿತನಾಗಲು ಹೆಚ್ಚಿನ ಆದಾಯವನ್ನು ಖರ್ಚು ಮಾಡಿ ಚುನಾಯಿತರಾದರೂ ಸಹಾ ಸ್ಥಳಿಯರು ಎದರುಸುತ್ತಿರುವ ಸಮಸ್ಯೆಗಳ ಮೇಲೆ ಬೆಳಕು ಚೆಲ್ಲುವಲ್ಲಿ ವಿಫಲವಾಗಿದ್ದರಿಂದ ಹಿಂದುಳಿಯಿತು ಎನ್ನಲಾಗಿದೆ. ಹಾಗಾಗಿ ಸ್ಥಳೀಯ ಚುನಾಯಿತ ಸದಸ್ಯರ ನಡುವೆ ಸಹಭಾಗಿತ್ವವನ್ನು ಹೊಂದುವ ಅವಶ್ಯಕತೆಯಿದೆ ಎಂದು ಹೇಳಲಾಗಿದೆ.

**ಚುನಾವಣೆಯ ವೇಳೆಯಲ್ಲಿ ಯಾವ ಮೂಲದಿಂದ ಹಣ ಹೊಂದಾಣಿಕೆ ಮಾಡಿದ್ದೀರಾ**

| **ಚುನಾವಣೆಗೆ ಹಣ ಹೊಂದಾಣಿಕೆಯ ಕುರಿತು** | **ಹೊಸಪೇಟೆ** | | **ಕೂಡ್ಲಿಗಿ** | |
|---|---|---|---|---|
| ವೈಯಕ್ತಿಕ ಸಂಪಾದನೆ | ೨ | ೫.೭೧ | ೧ | ೫.೦೦ |
| ಪಾರ್ಟಿಫಂಡ್, ವೈಯಕ್ತಿಕ ಸಂಪಾದನೆ | ೨೧ | ೬೦.೦೦ | ೧೨ | ೩೫.೦೦ |
| ವೈಯಕ್ತಿಕ ಸಂಪಾದನೆ, ಸಾಲ | ೧೨ | ೩೪.೨೯ | ೭ | ೬೦.೦೦ |
| **ಒಟ್ಟು** | ೩೫ | ೧೦೦ | ೨೦ | ೧೦೦ |

**ಮೂಲ: ಕ್ಷೇತ್ರ ಕಾರ್ಯದ ಮಾಹಿತಿ**

ನಗರ ಸ್ಥಳೀಯ ಸಂಸ್ಥೆಗಳ ಚುನಾವಣೆಗಾಗಿ ಹಣ ಹೊಂದಾಣಿಕೆಯ ಪ್ರಮಾಣವನ್ನು ತೋರಿಸಲಾಗಿದೆ. ಅದರಲ್ಲಿ ಹೊಸಪೇಟೆ ನಗರಸಭೆಯ ಶೇ. ೫.೭೧ರಷ್ಟು ಚುನಾಯಿತ ಪ್ರತಿನಿಧಿಗಳು ಮತ್ತು ಕೂಡ್ಲಿಗಿ ಪಟ್ಟಣ ಪಂಚಾಯಿತಿಯ ಶೇ. ೫ರಷ್ಟು ಚುನಾಯಿತ ಸದಸ್ಯರು ಚುನಾವಣೆಯಲ್ಲಿ ಗೆಲ್ಲಲು ಹಲವಾರು ರೀತಿಯ ಸ್ಪರ್ಧೆಗಳಿರುತ್ತವೆ. ಅಂತಹವುಗಳ ಸಾಲಿನಲ್ಲಿ ವಾರ್ಡಿನ ಅಭಿವೃದ್ಧಿಯ

ಉದ್ದೇಶವನ್ನಿಟ್ಟುಕೊಂಡು ಚುನಾವಣೆ ವೇಳೆಯಲ್ಲಿ ಯಾವುದೇ ಸಂಸ್ಥೆಯಿಂದ ಹಣವನ್ನು ಪಡೆಯದೇ ವೈಯಕ್ತಿಕ ಸಂಪಾದನೆಯಿಂದ ಚುನಾವಣೆಯಲ್ಲಿ ಆಯ್ಕೆಯಾಗಿದ್ದೇನೆ ಎಂದು ತಿಳಿದು ಬಂದಿದೆ. ಇತರ ಹೊಸಪೇಟೆ ನಗರಸಭೆಯ ಶೇ. ೬೦ರಷ್ಟು ಜನಪ್ರತಿನಿಧಿಗಳು ಮತ್ತು ಕೂಡ್ಲಿಗಿ ಪಟ್ಟಣ ಪಂಚಾಯಿತಿಯ ಶೇ. ೩೫ರಷ್ಟು ಚುನಾಯಿತ ಸದಸ್ಯರು ತಮ್ಮ ಚುನಾವಣೆಯಲ್ಲಿ ಪ್ರತಿಷ್ಠೆಯ ದೃಷ್ಟಿಯಿಂದ, ಪಕ್ಷದ ಮುಖಂಡರೊಂದಿಗಿನ ಸಂಬಂಧದ ಪರಿಣಾಮವಾಗಿ ಚುನಾವಣೆಗೆ ಸ್ಪರ್ಧಿಸಿ ಚುನಾಯಿತನಾಗಲು ತಮ್ಮ ಪಕ್ಷವು ಕೊಡುವ ಪಾರ್ಟಿಫಂಡ್ ಮತ್ತು ವೈಯಕ್ತಿಕವಾಗಿ ಸಂಪಾದಿಸಿದ ಹಣದಿಂದ ಚುನಾವಣೆಯ ಖರ್ಚನ್ನು ನಿಭಾಯಿಸಿದ್ದೇವೆ ಎಂದು ಕಂಡುಬಂದಿದೆ. ಅದಲ್ಲದೇ ಉಳಿದ ನಗರಸಭೆಯ ಶೇ. ೩೪.೨೯ರಷ್ಟು ಚುನಾಯಿತ ಸದಸ್ಯರು ಮತ್ತು ಪಟ್ಟಣ ಪಂಚಾಯಿತಿಯ ಶೇ. ೬೦ರಷ್ಟು ಚುನಾಯಿತ ಪ್ರತಿನಿಧಿಗಳು ವಾರ್ಡಿನಲ್ಲಿರುವ ಜನರ ಜೊತೆಗಿನ ಒಳ್ಳೆಯ ಸಂಬಂಧಕ್ಕಾಗಿ, ಗುಣಮಟ್ಟದ ಮೂಲಭೂತ ಸೌಕರ್ಯಗಳನ್ನು ಕಲ್ಪಿಸಿಕೊಡುವುದು ರಾಜಕೀಯ ಆಡಳಿತದಿಂದ ಮಾತ್ರ ಸಾಧ್ಯವೆಂದು ಚುನಾವಣೆಯಲ್ಲಿ ಚುನಾಯಿತನಾಗಲು ವಿವಿಧ ಮೂಲಗಳಿಂದ(ವೈಯಕ್ತಿಕ ಸಂಪಾದನೆ ಮತ್ತು ಸಾಲ) ಹೊಂದಾಣಿಕೆ ಮಾಡಿಕೊಂಡು ಚುನಾಯಿತರಾಗಿದ್ದೇವೆ. ಅದಲ್ಲದೇ ನಗರ ಸ್ಥಳೀಯ ಸಂಸ್ಥೆಗಳ ಇತರ ಸದಸ್ಯರನ್ನು ಕೂಡ ಅವರ ಮನೆಯಲ್ಲಿಯೇ ಭೇಟಿ ಮಾಡಿದ ಹಿನ್ನೆಲೆಯಲ್ಲಿ ಸಾಪೇಕ್ಷವಾಗಿ ಮುಂದುವರಿದ ಹೊಸಪೇಟೆ ನಗರಸಭೆ ಸದಸ್ಯರ ಆರ್ಥಿಕ ಪರಿಸ್ಥಿತಿ ತೀರಾ ಹಿಂದುಳಿದ ಕೂಡ್ಲಿಗಿ ಪಟ್ಟಣ ಪಂಚಾಯಿತಿಯ ಸದಸ್ಯರಿಗಿಂತ ಉತ್ತಮವಾಗಿದೆ ಎಂದು ಕಂಡುಬಂದಿದೆ. ಈ ನಿಟ್ಟಿನಲ್ಲಿ ಚುನಾಯಿತ ಸದಸ್ಯರಲ್ಲಿ ಹಲವು ಸಮಸ್ಯೆಗಳಿದ್ದು ಅವರು ಚುನಾವಣೆಯಲ್ಲಿ ಗೆಲ್ಲುವ ಪ್ರತಿಷ್ಠೆಯಿಂದ ತಮ್ಮ ಜೀವನಕ್ಕೆ ಇಟ್ಟ ಆದಾಯವನ್ನು ಚುನಾವಣೆಗಾಗಿ ಬಳಸಿ ತಮ್ಮ ಜೀವನವನ್ನು ಸಾಲದಲ್ಲಿ ದೂಡುತ್ತಾ ಮತ್ತೊಬ್ಬರ ಅಧೀನದಲ್ಲಿ ತಮ್ಮ ಅಧಿಕಾರವನ್ನು ಚಲಾಯಿಸುವುದರಿಂದ ಸ್ಥಳೀಯ ರಾಜಕೀಯದಲ್ಲಿ ನಿರ್ಣಯವನ್ನು ತೆಗೆದುಕೊಳ್ಳುವ ಅವಕಾಶವಿಲ್ಲದೆ ಹಿಂದುಳಿಯಿತು ಎನ್ನಬಹುದಾಗಿದೆ. ಹಾಗಾಗಿ ಚುನಾವಣೆಯಲ್ಲಿ ಹಣ ಮದ್ಯಪಾನವನ್ನು ನಿರ್ಮೂಲನೆ ಮಾಡುವ ಅವಶ್ಯಕತೆಯಿದೆ ಎನ್ನಬಹುದಾಗಿದೆ.

**ಚುನಾವಣೆ ಪ್ರಚಾರಕ್ಕೆ ಅಳವಡಿಸಿಕೊಂಡಿರುವ ವಿಧಾನಗಳು**

| **ಪ್ರಚಾರದ ವಿಧಾನಗಳು** | **ಹೊಸಪೇಟೆ** | | **ಕೂಡ್ಲಿಗಿ** | |
|---|---|---|---|---|
| ಬ್ಯಾನರಗಳು, ಕರಪತ್ರಗಳು, ಮನೆಮನೆಗೆ ಹೋಗಿ | ೨೭ | ೭೭.೧೪ | ೧೩ | ೬೫.೦೦ |
| ಮನೆ ಮನೆಗೆ ಹೋಗಿ, ಬ್ಯಾನರ್‌ಗಳು | ೮ | ೨೨.೮೫ | ೭ | ೩೫.೦೦ |
| **ಒಟ್ಟು** | ೩೫ | ೧೦೦ | ೨೦ | ೧೦೦ |

**ಮೂಲ: ಕ್ಷೇತ್ರ ಕಾರ್ಯದ ಮಾಹಿತಿ**

ಚುನಾವಣೆಯ ಸಮಯದಲ್ಲಿ ಪ್ರಚಾರ ಮಾಡಲು ಯಾವ ವಿಧಾನಗಳನ್ನು ಸದಸ್ಯರು ಅಳವಡಿಸಿಕೊಂಡಿರುವುದನ್ನು ಎರಡು ನಗರ ಸ್ಥಳೀಯ ಸಂಸ್ಥೆಗಳಲ್ಲೂ ಒಂದೇ ತರಹ ಇರುವುದು ಕಂಡುಬಂದಿದೆ. ಆದರೆ ಅನುಸರಿಸಿದ ಚುನಾವಣೆಯ ವಿಧಾನವು ಸ್ವಲ್ಪ ಭಿನ್ನವಾಗಿದೆ. ಹೊಸಪೇಟೆ ನಗರಸಭೆಯಲ್ಲಿ ಶೇ. ೭೭.೧೪ರಷ್ಟು ಚುನಾಯಿತ ಸದಸ್ಯರು ಮತ್ತು ಕೂಡ್ಲಿಗಿ ಪಟ್ಟಣ ಪಂಚಾಯಿತಿಯಲ್ಲಿ ಶೇ. ೬೫ರಷ್ಟು ಚುನಾಯಿತ ಪ್ರತಿನಿಧಿಗಳು ಬ್ಯಾನರುಗಳನ್ನು ಮತ್ತು ಮನೆ ಮನೆಗಳಿಗೆ ಹೋಗುವುದು

ಚುನಾವಣಾ ಪ್ರಚಾರಕ್ಕೆ ಉಪಯೋಗಿಸಿದ್ದರೆ ಹಾಗೂ ಕರಪತ್ರಗಳನ್ನು ಸಹ ಹಂಚುವುದರ ಮೂಲಕ ಪ್ರಚಾರ ಮಾಡಿದ್ದರು ಎಂಬ ಅಂಶವನ್ನು ತಿಳಿಸಿದರು. ಉಳಿದ ನಗರಸಭೆಯ ಶೇ. ೨೨.೮೫ರಷ್ಟು ಚುನಾಯಿತ ಪ್ರತಿನಿಧಿಗಳು ಮತ್ತು ಪಟ್ಟಣ ಪಂಚಾಯಿತಿಯ ಶೇ. ೩೫ರಷ್ಟು ಚುನಾಯಿತ ಸದಸ್ಯರುಗಳು ಮನೆಮನೆಗೆ ಹೋಗಿ ವಾರ್ಡಿನ ಜನರನ್ನು ಭೇಟಿ ಮಾಡುವ ಮೂಲಕ ಚುನಾವಣಾ ಪ್ರಚಾರ ಮಾಡಲಾಯಿತೆಂದು ತಿಳಿದುಬಂದಿತು ಹಾಗೂ ಓಣಿಗಳಲ್ಲಿ, ರಸ್ತೆಯ ಮುಖ್ಯ ಬೀದಿಗಳಲ್ಲಿ, ಕೂಡು ರಸ್ತೆಗಳಲ್ಲಿ ಬ್ಯಾನರ್‌ಗಳನ್ನು ಹಾಕುವುದರ ಮೂಲಕವು ಚುನಾವಣಾ ಪ್ರಚಾರ ಮಾಡಲಾಯಿತು. ವಾರ್ಡಿನ ಜನರ ಪ್ರಕಾರ ಚುನಾವಣಾ ಪ್ರಚಾರದ ಸಮಯದಲ್ಲಿ ಪದೇ ಪದೇ ಬಂದು ಅಭ್ಯರ್ಥಿಗಳು ಪ್ರಚಾರಕ್ಕಾಗಿ ಬಾಗಿಲು ತಟ್ಟುತ್ತಿದ್ದರು ಎಂಬ ಅಂಶವು ತಿಳಿದು ಬಂದಿದೆ. ಕ್ಷೇತ್ರಕಾರ್ಯ ಮಾಡಿದ ಕೆಲವು ವಾರ್ಡಿನಲ್ಲಿ ಕಂಡ ಆಶ್ಚರ್ಯಕರ ಅಂಶವೆಂದರೆ ಕೆಲವು ಅಭ್ಯರ್ಥಿಯ ಚುನಾವಣೆಯ ಚಿಹ್ನೆ ಗಾಳಿಪಟ ಆಗಿರುವುದರಿಂದ ಸೈಕಲುಗಳಿಗೆ ದೊಡ್ಡ ಪ್ರಮಾಣದ ಗಾಳಿಪಟವನ್ನು ಹಾಕಿಕೊಂಡು ಓಡಾಡುತ್ತಿದ್ದರು. ಇನ್ನೊಂದು ಮಾಹಿತಿಯ ಪ್ರಕಾರ ಅದೊಂದು ಚುನಾವಣಾ ಪ್ರಚಾರದ ಮತ್ತೊಂದು ವಿಧಾನವೆಂದರು. ಹೀಗೆ ಪ್ರಚಾರಕ್ಕೆ ಅಳವಡಿಸಿಕೊಂಡ ವಿಧಾನಗಳು ಹೆಚ್ಚು ಮತಗಳನ್ನು ಪಡೆದುಕೊಳ್ಳುವಂತೆ ಸಹಾಯ ಮಾಡಿದೆ ಹೊರತು, ಚುನಾವಣೆಯನ್ನು ಗೆಲ್ಲುವಲ್ಲಿ ಪ್ರಮುಖ ಪಾತ್ರವನ್ನು ವಹಿಸಿದವು ಎಂದು ಹೇಳಲು ಸಾಧ್ಯವಿಲ್ಲ. ಕೆಲವು ಸದಸ್ಯರು ಮೇಲೆ ಹೇಳಿರುವ ಮೂರು ವಿಧಾನಗಳನ್ನು ಅನುಸರಿಸಿದರು. ಮತ್ತೆ ಕೆಲವು ಸದಸ್ಯರು ಮನೆಗೆ ಹೋಗಿ, ಪ್ರಚಾರ ಮಾಡಿ ಒಂದೇ ವಿಧಾನವನ್ನು ಅನುಸರಿಸಿದ್ದಾರೆ. ಒಟ್ಟಾರೆಯಾಗಿ ಈ ವಿಶ್ಲೇಷಣೆಯಿಂದ ತಿಳಿದುಬರುವ ಸಂಗತಿಯೆಂದರೆ ತೀರಾ ಹಿಂದುಳಿದ ಪಟ್ಟಣ ಪಂಚಾಯಿತಿ ಸದಸ್ಯರಿಗಿಂತ ಸಾಪೇಕ್ಷವಾಗಿ ಮುಂದುವರಿದ ಹೊಸಪೇಟೆ ನಗರಸಭೆಯ ಸದಸ್ಯರು ಪ್ರತಿ ಮನೆಗೂ ಹೋಗಿ ಪ್ರಚಾರ ಮಾಡುವುದರಿಂದ ಅವರ ಸುಖ-ದುಃಖಗಳನ್ನು ಕೇಳುವುದರ ಜೊತೆಗೆ ವಾರ್ಡಿನ ಜನರ ಸಮಸ್ಯೆಗಳನ್ನು ಅರಿಯುವಂತಹ ಪ್ರಚಾರವನ್ನು ಮಾಡಿ ಚುನಾಯಿತನಾದ ನಂತರ ವಾರ್ಡಿನ ಜನರ ಅಭಿವೃದ್ಧಿಗಾಗಿ ಶ್ರಮಿಸುವ ಕೆಲಸಗಳನ್ನು ಮಾಡಿರುವುದು ತಿಳಿದು ಬಂದಿದೆ. ಮುಂದುವರಿದ ಸ್ಥಳೀಯ ಸಂಸ್ಥೆಯಂತೆ ಹಿಂದುಳಿದ ಪಂಚಾಯಿತಿಯು ಜನರ ಸಮಸ್ಯೆಗಳನ್ನು ತಿಳಿದುಕೊಂಡು ಪರಿಹಾರಿಸುವಂತಹ ಅರಿವಿನ ಅಗತ್ಯವಿದೆ ಎಂದು ಹೇಳಲಾಗಿದೆ.

**ಚುನಾವಣೆ ಸಮಯದಲ್ಲಿ ಸದಸ್ಯರುಗಳು ಕೊಟ್ಟ ಆಶ್ವಾಸನೆಗಳು**

| **ಸ್ಥಳೀಯ ಸದಸ್ಯರುಗಳು ಕೊಟ್ಟ ಆಶ್ವಾಸನೆಗಳು** | **ಹೊಸಪೇಟೆ** | | **ಕೂಡ್ಲಿಗಿ** | |
|---|---|---|---|---|
| ಕುಡಿಯುವ ನೀರಿನ ಸೌಲಭ್ಯ ಒದಗಿಸುವುದು, ವಾರ್ಡಿನ ಆಭಿವೃದ್ಧಿಗಾಗಿ ದುಡಿಯುವೆ. | ೨೭ | ೭೭.೧೪ | ೧೩ | ೬೫.೦೦ |
| ಚರಂಡಿ ನಿರ್ಮಾಣ ಮಾಡಿಸುವುದು, ಒಳ್ಳೆಯ ರಸ್ತೆಯ ನಿರ್ಮಾಣ ಹಾಗೂ ಅಭಿವೃದ್ಧಿ ಮಾಡುವೆನು. | ೮ | ೨೨.೮೫ | ೭ | ೩೫.೦೦ |
| **ಒಟ್ಟು** | ೩೫ | ೧೦೦ | ೨೦ | ೧೦೦ |

**ಮೂಲ: ಕ್ಷೇತ್ರ ಕಾರ್ಯದ ಮಾಹಿತಿ**

ಹೊಸಪೇಟೆ ನಗರಸಭೆ ಮತ್ತು ಕೂಡ್ಲಿಗಿ ಪಟ್ಟಣ ಪಂಚಾಯಿತಿಗಳ ಚುನಾವಣೆಯ ಸಮಯದಲ್ಲಿ ಪ್ರತಿನಿಧಿಗಳು ತಾವು ಸ್ಪರ್ಧಿಸುತ್ತಿರುವ ಕ್ಷೇತ್ರದ ಸಾರ್ವಜನಿಕರಿಗೆ ಕೊಟ್ಟ ಆಶ್ವಾಸನೆಗಳನ್ನು ನೀಡಲಾಗಿದೆ. ಇದಲ್ಲದೆ ಸದಸ್ಯರು ವೈಯಕ್ತಿಕವಾಗಿ ಕೆಲವು ಆಶ್ವಾಸನೆಗಳನ್ನು ತಮ್ಮ ಜನರಿಗೆ ಕೊಡುತ್ತಾರೆ ನಾವು ಈ ಎರಡು ರೀತಿಯ ಆಶ್ವಾಸನೆಗಳ ಬಗ್ಗೆ ಪ್ರಶ್ನಿಸಲಾಗಿದೆ. ಹೆಚ್ಚಿನ ಸದಸ್ಯರು ತಮ್ಮ ವಾರ್ಡಿನ ಜನರ ಸಮಸ್ಯೆಗಳನ್ನು ಬಗೆಹರಿಸುವುದೇ ಅವರು ಕೊಟ್ಟಿರುವ ಭರವಸೆ ಎಂದು ಹೇಳಿದರು. ಇನ್ನು ಬಹಳಷ್ಟು ಚುನಾಯಿತ ಸದಸ್ಯರು ಪ್ರಚಾರದ ಸಮಯದಲ್ಲಿ ಮಾತಿನ ಮೂಲಕ ಆಶ್ವಾಸನೆಯನ್ನು ಕೊಡುವುದನ್ನು ಹೊರತುಪಡಿಸಿದರೆ, ಯಾವುದೇ ಚುನಾವಣಾಗಳ ಪ್ರಣಾಳಿಕೆಯ ಮೂಲಕ ಲಿಖಿತ ಆಶ್ವಾಸನೆ ಮಾಡುವುದಿಲ್ಲ ಎಂದು ತಿಳಿದು ಬಂದಿದೆ.

ನಗರವಾರು ಸಂದರ್ಶಿಸಿದಾಗ ಹೊಸಪೇಟೆ ನಗರಸಭೆಯ ಶೇ. ೭೭.೧೪ರಷ್ಟು ಚುನಾಯಿತ ಸದಸ್ಯರು ಮತ್ತು ಕೂಡ್ಲಿಗಿ ಪಟ್ಟಣ ಪಂಚಾಯಿತಿಯ ಶೇ. ೬೫ರಷ್ಟು ಚುನಾಯಿತ ಸದಸ್ಯರು ಕುಡಿಯುವ ನೀರಿನ ಸೌಲಭ್ಯ ಒದಗಿಸುವುದು, ಪ್ರಮುಖ ವಿಷಯವಾದರು ಮತ್ತು ಚುನಾಯಿತ ಪ್ರತಿನಿಧಿಗಳು ಹಿಂದುಳಿದ ಜನರ ಅಭಿವೃದ್ಧಿಗಾಗಿ ಹಾಗೂ ವಾರ್ಡಿನ ಅಭಿವೃದ್ಧಿ ಮಾಡುತ್ತೇನೆಂದು ತಮ್ಮ ವಾರ್ಡಿನ ಜನರಿಗೆ ಭರವಸೆ ಕೊಟ್ಟಿದ್ದರು. ಹಾಗೆಯೇ ನಗರಸಭೆಯ ಶೇ. ೨೨.೮೫ರಷ್ಟು ಚುನಾಯಿತ ಸದಸ್ಯರು ಮತ್ತು ಪಟ್ಟಣ ಪಂಚಾಯಿತಿಯ ಶೇ. ೩೫ರಷ್ಟು ಚುನಾಯಿತ ಪ್ರತಿನಿಧಿಗಳು ಚರಂಡಿಯನ್ನು ನಿರ್ಮಿಸುವುದರೊಂದಿಗೆ ಸ್ವಚ್ಛತೆಯನ್ನು ಕಾಪಾಡುವುದು ಅತೀ ಮುಖ್ಯವಾದ್ದದೆಂದು ಸದಸ್ಯರು ಎಂಬುದಾಗಿ. ನಂತರ ಒಳ್ಳೆಯ ರಸ್ತೆಯ ನಿರ್ಮಾಣದ ವ್ಯವಸ್ಥೆಗೆ ಮೊದಲ ಆಧ್ಯತೆಯಾಗಿ ಕೆಲವು ಸದಸ್ಯರು ಮತ್ತು ಇನ್ನುಳಿದ ಸದಸ್ಯರು ಎರಡನೆಯ ಆದ್ಯತೆಯನ್ನಾಗಿ ತಮ್ಮ ವಾರ್ಡಿನ ಜನರಿಗೆ ಭರವಸೆಯನ್ನು ಕೊಟ್ಟಿದ್ದಾರೆ. ಅದಲ್ಲದೇ ವಾರ್ಡಿನ ಜನರ ಸಮಸ್ಯೆಗಳನ್ನು ಅರ್ಥಮಾಡಿಕೊಂಡು ವಸತಿರಹಿತರಿಗೆ ವಸತಿ ಕಲ್ಪಿಸುವುದು, ಬಡವರಿಗೆ ಆರೋಗ್ಯದ ಖರ್ಚಿಗಾಗಿ ಸಹಾಯಧನವನ್ನು ಕೊಡಿಸುವುದು ಮತ್ತು ಶಿಕ್ಷಣಕ್ಕೆ ಬೇಕಾದ ಪ್ರೋತ್ಸಾಹಧನವನ್ನು ಕೊಡಿಸುವುದು ಇತ್ಯಾದಿ ಕೆಲಸಗಳನ್ನು ಕೈಗೊಳ್ಳುವುದರೊಂದಿಗೆ ಸ್ಥಳೀಯ ಮಟ್ಟದಲ್ಲಿ ಅಭಿವೃದ್ಧಿಯನ್ನು ಮಾಡಿಸುತ್ತೇವೆ ಎಂದು ಸದಸ್ಯರು ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿರುವುದು ಅಧ್ಯಯನಗಳಿಂದ ತಿಳಿದು ಬಂದಿದೆ. ಒಟ್ಟಾರೆಯಾಗಿ ಸಾಪೇಕ್ಷವಾಗಿ ಮುಂದುವರಿದ ಹೊಸಪೇಟೆ ನಗರಸಭೆ ತೀರಾ ಹಿಂದುಳಿದ ಪಟ್ಟಣ ಪಂಚಾಯಿತಿ ಚುನಾಯಿತಿಯಲ್ಲಿನ ಚುನಾಯಿತ ಸದಸ್ಯರು ಒಂದೇ ರೀತಿಯಾದ ಆಶ್ವಾನೆಗಳನ್ನು ಕೊಟ್ಟಿರುವುದು ಕಂಡು ಬಂದಿದೆ. ಆದರೆ ಕೂಡ್ಲಿಗಿ ಪಟ್ಟಣ ಪಂಚಾಯಿತಿಗಿಂತ ಹೊಸಪೇಟೆ ನಗರಸಭೆಯು ಆಶ್ವಾನೆಗಳಿಗೆ ಅನುಸಾರವಾಗಿ ನಡೆದುಕೊಂಡು ಬಂದಿರುವುದರಿಂದ ಮುಂದುವರಿದಿದೆ ಎಂದು ಹೇಳಲಾಗಿದೆ. ಹಾಗಾಗಿ ಹಿಂದುಳಿದ ಪಂಚಾಯಿತಿಯು ಆಶ್ವಾಸನೆಗಳನುಗುಣವಾಗಿ ನಡೆದುಕೊಳ್ಳುವ ಅಗತ್ಯವಿದೆ ಎಂದು ಹೇಳಬಹುದಾಗಿದೆ.

೬.೬. ನಗರವಾರು ಸಂದರ್ಶನ ಮಾಡಿದ ಚುನಾಯಿತ ಪ್ರತಿನಿಧಿಗಳ ರಾಜಕೀಯ ಅರಿವು ಮತ್ತು ಭಾಗವಹಿಸುವಿಕೆ

| ಚುನಾಯಿತ ಪ್ರತಿನಿಧಿಗಳ ರಾಜಕೀಯ ಅರಿವು ಮತ್ತು ಭಾಗವಹಿಸುವಿಕೆ | ಹೊಸಪೇಟೆ ನಗರ ಸಭೆ | | ಕೂಡ್ಲಿಗಿ ಪಟ್ಟಣಪಂಚಾಯಿತಿ | |
|---|---|---|---|---|
| | ಸಂಖ್ಯೆಗಳು | ಶೇಕಡವಾರು | ಸಂಖ್ಯೆಗಳು | ಶೇಕಡವಾರು |
| ನೀವು ನಗರ ಸಭೆ/ಪಟ್ಟಣ ಪಂಚಾಯಿತಿಗೆ ದಿನಾಲು ಹೋಗುವಿರಾ | | | | |
| ಹೋಗುತ್ತೇವೆ | ೨೮ | ೮೦.೦೦ | ೮ | ೪೦.೦೦ |
| ವಾರದಲ್ಲಿ ೨-೩ಸಲ ಅಷ್ಟೇ ಹೊಗುತ್ತೇವೆ. | ೭ | ೨೦.೦೦ | ೧೨ | ೬೦.೦೦ |
| ಒಟ್ಟು | ೩೫ | ೧೦೦ | ೨೦ | ೧೦೦.೦೦ |

ಮೂಲ: ಕ್ಷೇತ್ರ ಕಾರ್ಯದ ಮಾಹಿತಿ

ಹೊಸಪೇಟೆ ನಗರಸಭೆಯಲ್ಲಿ ಒಟ್ಟು ೩೫ ಚುನಾಯಿತ ಪ್ರತಿನಿಧಿಗಳಿದ್ದು ಅದರಲ್ಲಿ ಶೇ. ೮೦ರಷ್ಟು ಚುನಾಯಿತ ಪ್ರತಿನಿಧಿಗಳನ್ನು ಮತ್ತು ಕೂಡ್ಲಿಗಿ ಪಟ್ಟಣ ಪಂಚಾಯಿತಿಯಲ್ಲಿ ಒಟ್ಟು ೨೦ ಸದಸ್ಯರಿದ್ದು, ಅದರಲ್ಲಿ ಶೇ. ೪೦ರಷ್ಟು ಚುನಾಯಿತ ಪ್ರತಿನಿಧಿಗಳು ಭೇಟಿ ಮಾಡಿದಾಗ ನಗರ ಸ್ಥಳೀಯ ಸಂಸ್ಥೆಗಳ ವಾರ್ಡಿಗೆ ಸಂಬಂಧಿಸಿದಂತೆ ಕ್ರಿಯಾಯೋಜನೆ ತಯಾರಿಸುವುದಿರಬಹುದು, ಯೋಜನೆಗಳ ಬಿಡುಗಡೆಯಾಗಿರಬಹುದು, ಅನುದಾನ ಹೊಂದಾಣಿಕೆಯಾಗಿರಬಹುದು. ಮೂಲಭೂತ ಸೌಲಭ್ಯದ ಬಗ್ಗೆ ಇರಬಹುದು, ಮನೆಯ ಕೆಲಸಗಳಲ್ಲಿ ಹೊಂದಾಣಿಕೆ ಮಾಡಿಕೊಂಡು ವಾರ್ಡಿನ ಉದ್ಧಾರಕ್ಕಾಗಿ, ಜನರ ಸಮಸ್ಯೆಗಾಗಿಯಾದರೂ ನಾವು ದಿನಾಲು ಹೋಗಲೇಬೇಕಾಗುತ್ತದೆ ಎಂದು ತಿಳಿಸಿದರು. ಉಳಿದ ನಗರಸಭೆಯ ಶೇ. ೨೦ರಷ್ಟು ಚುನಾಯಿತ ಸದಸ್ಯರು ಮತ್ತು ಕೂಡ್ಲಿಗಿ ಪಟ್ಟಣ ಪಂಚಾಯಿತಿಯಲ್ಲಿ ಶೇ. ೬೦ರಷ್ಟು ಚುನಾಯಿತ ಸದಸ್ಯರನ್ನು ಸಂದರ್ಶಿಸಿದಾಗ ಸ್ಥಳೀಯ ಸಂಸ್ಥೆಯ ಮಟ್ಟದಲ್ಲಿ ಬಹುಸಂಖ್ಯಾತ ಸದಸ್ಯರು ವ್ಯವಸಾಯದಲ್ಲಿ ತೊಡಗಿಕೊಂಡಿದ್ದರಿಂದ ಹಾಗೂ ಸಣ್ಣ ಮತ್ತು ಮಧ್ಯಮ ಉದ್ದಿಮೆಗಳಲ್ಲಿರುವುದರಿಂದ ಅದರಲ್ಲಿ ದಿನನಿತ್ಯ ದುಡಿದಾಗ ಮಾತ್ರ ನಮ್ಮ ಜೀವನವನ್ನು ಮುಂದುವರಿಯುತ್ತೆ ಇಲ್ಲಾ ಅಂದರೆ ಜೀವನ ನಿರ್ವಹಿಸುವುದು ಕಷ್ಟಸಾಧ್ಯ ಎಂದು ಹೇಳಿಕೊಂಡಿರುವುದು ಅಧ್ಯಯಗಳಿಂದ ತಿಳಿದು ಬಂದಿದೆ. ಕೆಲವು ವಾರ್ಡಿನ ಸದಸ್ಯರು ಇಂತಹ ವರ್ಗದಿಂದ ಆಯ್ಕೆಯಾದ ಸದಸ್ಯರು ಇವರು ತಮ್ಮ ಜವಾಬ್ದಾರಿಗಳನ್ನು ಸಮರ್ಥವಾಗಿ ನಿರ್ವಹಿಸಲು ವಿಫಲರಾಗಿದ್ದಾರೆ ಎಂಬ ಮಾತು ಕೇಳಿ ಬಂದಿತು. ಈ ವಿಫಲತೆಗೆ ಕಾರಣವನ್ನು ತಿಳಿದುಕೊಳ್ಳುವ ಅವಶ್ಯಕತೆಯಿಂದಲೇ ಮೊದಲನೆಯದಾಗಿ ವ್ಯವಸಾಯಕ್ಕೆ ಸೇರಿದ ಸದಸ್ಯರು ತಮ್ಮ ಜೀವನೋಪಾಯಕ್ಕಾಗಿ ಪ್ರತಿದಿನ ಸಂಬಳದ ಆಧಾರದ ಮೇಲೆ ಅವಲಂಬಿಸಿದ್ದಾರೆ. ನಗರ ಸ್ಥಳೀಯ ಸಂಸ್ಥೆಗಳಲ್ಲಿ ದಿನಾಲು ಹಾಜರಾಗುವುದರಿಂದ ಒಂದು ದಿನದ ಸಂಬಳವನ್ನು ಅವರು ಕಳೆದುಕೊಳ್ಳಬೇಕಾಗುತ್ತದೆ. ಹಾಗಾದರೆ, ವ್ಯವಸಾಯ ವರ್ಗಕ್ಕೆ ಸೇರಿದವರು ಸ್ಥಳೀಯ ಸರ್ಕಾರಕ್ಕೆ ಚುನಾಯಿತರಾಗಿರುವುದರಿಂದ ಆದ ಉಪಯೋಗವೇನು? ಎಂಬ ಪ್ರಶ್ನೆಯನ್ನು ಇಟ್ಟುಕೊಂಡು ಅವರ ಸ್ಥಿತಿಗತಿಯ ಬಗ್ಗೆ ಅಧ್ಯಯನ ಮಾಡುವುದಾಗಿತ್ತು. ಅವರು ಸ್ಥಳೀಯ ಸಂಸ್ಥೆಗಳಿಗೆ ದಿನಾಲು ಹಾಜರಾದರೆ ಅಲ್ಲಿ ಯಾವುದೇ

ಕೆಲಸಗಳಿರುವುದಿಲ್ಲ. ಅಲ್ಲಿ ನಾವು ದುಡಿಯುವ ಸಂಭಾವನೆ ನಮ್ಮ ಆರ್ಥಿಕ ಸ್ಥಿತಿಗತಿಯನ್ನು ಉತ್ತಮ ಸ್ಥಿತಿಯಲ್ಲಿಡುತ್ತದೆ ಎಂದರು. ಅದರಂತೆ ವಾರ್ಡಿನ ಅಭಿವೃದ್ಧಿಗಾಗಿ ತಿಂಗಳಿಗೊಮ್ಮೆ ನಡೆಸುವ ಸಾಮಾನ್ಯ ಸಭೆಗೆ ಮತ್ತು ವಾರ್ಡಿನ ಸಭೆಗಳಿಗೆ ಹೋಗಿ ಅಭಿವೃದ್ಧಿ ಕಾರ್ಯಗಳ ಬಗ್ಗೆ, ಯೋಜನೆಗಳ ಅನುಷ್ಠಾನದ ಬಗ್ಗೆ, ಅನುದಾನದ ಬಗ್ಗೆ ಚರ್ಚಿಸಲಿಕ್ಕೆ ಒಂದು ದಿನದ ಸಂಭಾವನೆಯನ್ನು ಲೆಕ್ಕಿಸದೆ ನಗರ ಸ್ಥಳೀಯ ಸಂಸ್ಥೆಗಳ ಸಭೆಗಳಿಗೆ ಹಾಜರಾಗುತ್ತೇವೆ ಎಂಬ ಅಂಶವು ತಿಳಿದು ಬಂದಿದೆ. ಒಟ್ಟಾರೆಯಾಗಿ ಹಿಂದುಳಿದ ಪಟ್ಟಣ ಪಂಚಾಯಿತಿ ಸದಸ್ಯರಿಗಿಂತ ಮುಂದುವರಿದ ನಗರಸಭೆಯ ಸದಸ್ಯರು ಸ್ಥಳೀಯ ಸಂಸ್ಥೆಗಳಿಗೆ ದಿನಾಲು ಹಾಜರಾಗುವುದು ಕಂಡು ಬಂದಿದೆ. ಸ್ಥಳೀಯ ಸಂಸ್ಥೆಗಳಿಗೆ ದಿನಾಲು ಹೋಗುವುದರಿಂದ ಅಧಿಕಾರಿಗಳ ಜೊತೆ ಉತ್ತಮ ಸಂಬಂಧ, ಸ್ಥಳೀಯ ರಾಜಕೀಯದ ಬಗ್ಗೆ ಅರಿವು ಮತ್ತು ಆಡಳಿತ ವ್ಯವಸ್ಥೆಯಲ್ಲಿ ಭಾಗವಹಿಸುವುದರಿಂದ ಮುಂದುವರೆದಿದೆ ಎಂದು ಹೇಳಲಾಗಿದೆ. ಹಾಗಾಗಿ ಹಿಂದುಳಿದ ಪಟ್ಟಣ ಪಂಚಾಯಿತಿಯು ಸ್ಥಳೀಯ ರಾಜಕೀಯದಲ್ಲಿ ಹೆಚ್ಚಿನ ರೀತಿಯಲ್ಲಿ ಅರಿವು ಮತ್ತು ಭಾಗವಹಿಸುವಂತಹ ಕೆಲಸಗಳಾಗುವ ಅಗತ್ಯವಿದೆ ಎನ್ನಲಾಗಿದೆ.

**ಸಾಮಾನ್ಯ ಸಭೆಯನ್ನು ವರ್ಷದಲ್ಲಿ ಎಷ್ಟು ಸಲ ಕರೆಯಬೇಕು**

| **ಸಾಮಾನ್ಯ ಸಭೆಯನ್ನು ಕರೆಯುವ ಕುರಿತು** | **ಹೊಸಪೇಟೆ** | | **ಕೂಡ್ಲಿಗಿ** | |
|---|---|---|---|---|
| ೧ –೨ ಸಲ | ೨೪ | ೬೮.೫೭ | ೩ | ೧೫.೦೦ |
| ಪ್ರತಿ ತಿಂಗಳು | ೪ | ೧೧.೪೨ | ೧೩ | ೬೫.೦೦ |
| ಗೊತ್ತಿಲ್ಲ | ೭ | ೨೦.೦೦ | ೪ | ೨೦.೦೦ |
| **ಒಟ್ಟು** | ೩೫ | ೧೦೦ | ೨೦ | ೧೦೦ |

**ಮೂಲ: ಕ್ಷೇತ್ರ ಕಾರ್ಯದ ಮಾಹಿತಿ**

ಹೊಸಪೇಟೆ ನಗರಸಭೆಯಲ್ಲಿ ಒಟ್ಟು ೩೫ ಚುನಾಯಿತ ಪ್ರತಿನಿಧಿಗಳು ಮತ್ತು ಕೂಡ್ಲಿಗಿ ಪಟ್ಟಣ ಪಂಚಾಯಿತಿಯಲ್ಲಿ ಒಟ್ಟು ೨೦ ಚುನಾಯಿತ ಸದಸ್ಯರನ್ನು ಸಂದರ್ಶಿಸಿದಾಗ ನಗರಸಭೆಯ ಶೇ. ೬೮.೫೭ರಷ್ಟು ಚುನಾಯಿತ ಸದಸ್ಯರು ಮತ್ತು ಪಟ್ಟಣ ಪಂಚಾಯಿತಿಯ ಶೇ. ೧೫ರಷ್ಟು ಚುನಾಯಿತ ಪ್ರತಿನಿಧಿಗಳಲ್ಲಿ ಆಡಳಿತ ನಿರ್ವಹಣೆಯ ಬಗ್ಗೆ ಉತ್ತಮ ಜ್ಞಾನವನ್ನು ಹೊಂದಿ ಸಾಮನ್ಯಸಭೆಯು ವರ್ಷದಲ್ಲಿ ಎರಡು ಸಲ ನಡೆಸಲಾಗುತ್ತದೆ ಅನಿವಾರ್ಯ ಸಂದರ್ಭದಲ್ಲಿ ವಿಶೇಷ ಸಭೆಯೆಂದು ಕರೆದು ಸಭೆಗಳನ್ನು ಕೈಗೊಳ್ಳಲಾಗುತ್ತದೆ ಎಂದು ತಿಳಿದುಬಂದಿದೆ. ಅದರಂತೆ ಹೊಸಪೇಟೆ ನಗರಸಭೆಯ ಶೇ. ೧೧.೪೨ರಷ್ಟು ಚುನಾಯಿತ ಸದಸ್ಯರು ಮತ್ತು ಕೂಡ್ಲಿಗಿ ಪಟ್ಟಣ ಪಂಚಾಯಿತಿಯ ಶೇ. ೬೫ರಷ್ಟು ಚುನಾಯಿತ ಸದಸ್ಯ ವಾರ್ಡಿನ ಸಮಸ್ಯೆಗಳನ್ನಿಟ್ಟುಕೊಂಡು ಕ್ರಿಯಾ ಯೋಜನೆಯ ತಯಾರಿಯಲ್ಲಿ, ತಮ್ಮ ವಾರ್ಡಿನ ಪೂರ್ಣ ವಿವರವನ್ನು ತಿಳಿದು, ಜನರ ಸಮಸ್ಯೆಗಳಿಗೆ ಸ್ಪಂಧಿಸುತ್ತಾ ಆಡಳಿತದ ಬಗ್ಗೆ ತಕ್ಕಮಟ್ಟಿಗೆ ಅನುಭವ ಹೊಂದಿದ್ದು, ಸಾಮಾನ್ಯ ಸಭೆಯು ನಿಯಮದ ಪ್ರಕಾರ ತಿಂಗಳಿಗೆ ಒಂದು ಬಾರಿ ನಡೆಯಬೇಕು ಎಂಬುದನ್ನು ಈ ಚುನಾಯಿತ ಸದಸ್ಯರು ವರ್ಷದಲ್ಲಿ ೧೨ ಬಾರಿ ಅಂದರೆ ಪ್ರತಿ ತಿಂಗಳಿಗೊಮ್ಮೆ ಸಾಮಾನ್ಯ ಸಭೆ ಕರೆಯಲಾಗುತ್ತದೆ ಎಂದು ಹೇಳಲಾಗಿದೆ. ಉಳಿದ ನಗರ

ಸ್ಥಳೀಯ ಸಂಸ್ಥೆಗಳ ಚುನಾಯಿತ ಸದಸ್ಯರಲ್ಲಿ ನಗರಸಭೆಯ ಶೇ. ೨೦ರಷ್ಟು ಚುನಾಯಿತ ಪ್ರತಿನಿಧಿಗಳು ಮತ್ತು ಪಟ್ಟಣ ಪಂಚಾಯಿತಿಯ ಶೇ. ೨೦ರಷ್ಟು ಚುನಾಯಿತ ಸದಸ್ಯರು ಯಾವುದೇ ಕಾರ್ಯಕ್ರಮಗಳ ಬಗ್ಗೆ ಕ್ರಿಯಾಯೋಜನೆಗಳ ಬಗ್ಗೆ, ಯೋಜನೆಗಳ ಅನುಷ್ಠಾನ ಬಗ್ಗೆ, ತಿಳಿಯದೆ ಮೀಸಲಾತಿಯು ಇರುವುದರಿಂದ ಅನಿವಾರ್ಯವಾಗಿ ಯಾವ ಅಭ್ಯರ್ಥಿಯು ನಿಲ್ಲದೆ ಇದ್ದುದರಿಂದ ತಾವು ನಿಲ್ಲುವ ಸಂದರ್ಭ ಬಂದದ್ದಕ್ಕೆ ಚುನಾಯಿತರಾಗಿರುತ್ತೇವೆ. ನಮ್ಮ ಕೆಲಸ ಕಾರ್ಯಗಳು ಏನ್ನಿದ್ದರು ನಮ್ಮ ಗಂಡಂದಿರು ಮಾಡುತ್ತಾರೆ. ನಮಗೆ ಏನೂ ಗೊತ್ತಿಲ್ಲ ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿರುವುದು ಅಧ್ಯಯನದಿಂದ ತಿಳಿದು ಬಂದಿದೆ. ಒಟ್ಟಾರೆಯಾಗಿ ತೀರಾ ಹಿಂದುಳಿದ ಪಟ್ಟಣ ಪಂಚಾಯಿತಿಯ ಚುನಾಯಿತ ಸದಸ್ಯರಿಗಿಂತ ಸಾಪೇಕ್ಷವಾಗಿ ಮುಂದುವರಿದ ನಗರಸಭೆಯ ಚುನಾಯಿತ ಸದಸ್ಯರಿಗೆ ಸ್ಥಳೀಯ ರಾಜಕೀಯ ಆಡಳಿತದ ಬಗ್ಗೆ ಹೆಚ್ಚಿನ ಅರಿವು ಮತ್ತು ಆಡಳಿತದಲ್ಲಿ ಸಕ್ರೀಯವಾಗಿ ಭಾಗವಹಿಸುವುದರಿಂದ ಮುಂದುವರಿದಿದೆ ಎನ್ನಲಾಗಿದೆ. ಹಾಗಾಗಿ ಹಿಂದುಳಿದ ಪಟ್ಟಣ ಪಂಚಾಯಿತಿಯಲ್ಲಿ ಚುನಾಯಿತಿ ಸದಸ್ಯರು ಆಥಿಕವಾಗಿ ದುರ್ಬಲರಾಗಿದ್ದು ಅವರು ತಮ್ಮ ಜೀವನ ನಿರ್ವಹಣೆಯೇ ಕಷ್ಟವಾದಾಗ ಅವರು ಸ್ಥಳೀಯ ಆಡಳಿತದಲ್ಲಿ ಅರಿವು ಮತ್ತು ಭಾಗವಹಿಸುವಿಕೆ ಕೆಳಮಟ್ಟದಲ್ಲಿರುವುದರಿಂದ ಹಿಂದುಳಿಯಿತು ಎನ್ನಬಹುದಾಗಿದೆ. ಹಾಗಾಗಿ ಹಿಂದುಳಿದ ಪಂಚಾಯಿತಿ ಜನಪ್ರತಿನಿಧಿಗಳಿಗೆ ನಗರಗಳ ಸರ್ವತೋಮುಖ ಬೆಳವಣಿಗಾಗಿ ಸ್ಥಳೀಯ ರಾಜಕೀಯದ ಬಗ್ಗೆ ಅರಿವು ಮತ್ತು ಭಾಗವಹಿಸುವಂತಹ ತರಬೇತಿ ಕಾರ್ಯಕ್ರಮಗಳನ್ನು ಹಿಚ್ಚಿನ ರೀತಿಯಲ್ಲಿ ಹಾಕಿಕೊಳ್ಳುವ ಅಗತ್ಯತೆಯಿದೆಯೆಂದು ಹೇಳಲಾಗಿದೆ.

**ಸಾಮಾನ್ಯಸಭೆಯನ್ನು ವರ್ಷದಲ್ಲಿ ಎಷ್ಟು ಸಲ ನಡೆದಿದೆ**

| **ವರ್ಷದಲ್ಲಿ ಎಷ್ಟು ಸಲ ನಡೆದಿದೆ** | **ಹೊಸಪೇಟೆ** | | **ಕೂಡ್ಲಿಗಿ** | |
|---|---|---|---|---|
| ೨ ಸಲ | ೨೪ | ೬೮.೫೩ | ೩ | ೧೫.೦೦ |
| ಪ್ರತಿ ತಿಂಗಳು | ೬ | ೧೭.೧೪ | ೯ | ೪೫.೦೦ |
| ಗೊತ್ತಿಲ್ಲ | ೫ | ೧೪.೨೮ | ೮ | ೪೦.೦೦ |
| **ಒಟ್ಟು** | ೩೫ | ೧೦೦ | ೨೦ | ೧೦೦ |

**ಮೂಲ: ಕ್ಷೇತ್ರ ಕಾರ್ಯದ ಮಾಹಿತಿ**

ಸಾಮಾನ್ಯಸಭೆ ನಡೆದಿರುವುದರ ಪ್ರಮಾಣವನ್ನು ತೋರಿಸಲಾಗಿದೆ. ಹೊಸಪೇಟೆ ನಗರಸಭೆಯ ಶೇ. ೬೮.೫೩ರಷ್ಟು ಚುನಾಯಿತ ಸದಸ್ಯರು ಮತ್ತು ಕೂಡ್ಲಿಗಿ ಪಟ್ಟಣ ಪಂಚಾಯಿತಿಯ ಶೇ. ೧೫ರಷ್ಟು ಜನಪ್ರತಿನಿಧಿಗಳು ಅವರೊಂದಿಗೆ ಸಾಮಾನ್ಯಸಭೆಯನ್ನು ವರ್ಷದಲ್ಲಿ ಎಷ್ಟು ಸಲ ನಡೆದಿರುವುದರ ಬಗ್ಗೆ ಚರ್ಚಿಸಲಾಯಿತು. ಅಕ್ಷರಸ್ಥರು ಮತ್ತು ಆಡಳಿತದ ಬಗ್ಗೆ ಅನುಭವ ಹೊಂದಿದ್ದರಿಂದ ನಿಯಮದ ಪ್ರಕಾರ ಇರುವುದನ್ನು ಸಮರ್ಥವಾದಂತಹ ಉತ್ತರವನ್ನು ಕೊಟ್ಟರು. ಸಾಮಾನ್ಯಸಭೆಯು ವರ್ಷದಲ್ಲಿ ಎರಡು ಸಲ ನಡೆಸಲಾಗುತ್ತದೆ ಎಂದು ತಿಳಿದುಬಂದಿತು. ಹಾಗೆಯೇ ಹೊಸಪೇಟೆ ನಗರಸಭೆಯ ಶೇ. ೧೭.೧೪ಷ್ಟು ಚುನಾಯಿತ ಸದಸ್ಯರು ಮತ್ತು ಕೂಡ್ಲಿಗಿ ಪಟ್ಟಣ ಪಂಚಾಯಿತಿಯ ಶೇ. ೪೫ರಷ್ಟು ಜನಪ್ರತಿನಿಧಿಗಳ ಹೇಳಿಕೆಯ ಪ್ರಕಾರ ಸಾಮಾನ್ಯಸಭೆಯ ಬಗ್ಗೆ ಮಾಹಿತಿ ತಿಳಿಯದೆ ವರ್ಷದಲ್ಲಿ ೧೦-೧೨ ಬಾರಿ ನಡೆಸಲಾಗುತ್ತದೆ ಎಂದರು. ಉಳಿದ ನಗರಸಭೆಯ ಶೇ. ೧೪.೨೮ರಷ್ಟು

ಜನಪ್ರತಿನಿಧಿಗಳು ಮತ್ತು ಕೂಡ್ಲಿಗಿಯ ಶೇ. ೪೦ರಷ್ಟು ಜನಪ್ರತಿನಿಧಿಗಳು ಅವರು ಸ್ಥಳೀಯ ಸಂಸ್ಥೆಗಳಲ್ಲಿ ಜವಾಬ್ದಾರಿಯನ್ನು ವಹಿಸಿಕೊಂಡು, ಅವರಿಗೆ ತಿಳಿಯದ ವಿಷಯಗಳನ್ನು ಅಂದರೆ ಸ್ಥಳೀಯ ಸಂಸ್ಥೆಗಳ ಆಡಳಿತಕ್ಕೆ ಸಂಬಂಧಪಟ್ಟ ವಿಷಯಗಳಲ್ಲಿ ತಮ್ಮ ಗಂಡಂದಿರು ಹಸ್ತಕ್ಷೇಪ ಮಾಡುತ್ತಿದ್ದರು ಹಾಗೂ ಕೆಲವು ಸದಸ್ಯೆಯರಿಗೆ ತಮ್ಮ ಗಂಡಂದಿರು ಇಲ್ಲದಿದ್ದರಿಂದ ಅವರ ಹಿರಿಯ ಮಗನು ಆಡಳಿತ ವಿಷಯಗಳನ್ನು ಸಮರ್ಥವಾಗಿ ನಿಭಾಯಿಸುತ್ತಿರುವ ಅಂಶ ತಿಳಿದುಬಂದಿತು. ಆದ್ದರಿಂದ ಇವರಿಗೆ ಆಡಳಿತದ ವಿಷಯಗಳನ್ನು ಕೇಳಿದಾಗ ಗೊತ್ತಿಲ್ಲ ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿರುವುದನ್ನು ಅಧ್ಯಯನಗಳಿಂದ ತಿಳಿದು ಬಂದಿದೆ. ಒಟ್ಟಾರೆಯಾಗಿ ತೀರಾ ಹಿಂದುಳಿದ ಪಟ್ಟಣ ಪಂಚಾಯಿತಿ ಜನಪ್ರತಿನಿಧಿಗಳಿಗಿಂತ ಮುಂದುವರಿದ ಹೊಸಪೇಟೆ ನಗರಸಭೆಯ ಚುನಾಯಿತ ಸದಸ್ಯರಿಗೆ ಅಭಿವೃದ್ಧಿ ಯೋಜನೆಗಳ ಬಗ್ಗೆ ಅರಿವಿನೊಂದಿಗೆ ಅವುಗಳನ್ನು ಅನುಷ್ಠಾನಗೊಳಿಸುವ ತಿಳುವಳಿಕೆಯು ಇರುವುದು ವಾರ್ಡಿನ ಜನರ ಸಮಸ್ಯೆಗಳಿಗೆ ಸ್ಪಂದಿಸುವಂತಹ ಅಂಶಗಳಿಂದ ಕಂಡು ಬಂದಿದೆ ಎಂದು ಹೇಳಲಾಗಿದೆ. ಹಿಂದುಳಿದ ಪಟ್ಟಣ ಪಂಚಾಯಿತಿಯಲ್ಲಿ ಚುನಾಯಿತ ಸದಸ್ಯರಿಗೆ ಅಭಿವೃದ್ಧ ಯೋಜನೆಗಳ ಬಗ್ಗೆ ಅರಿವು ಇದ್ದರೂ ಅವುಗಳಲ್ಲಿ ಭಾಗವಹಿಸಿ ಹೇಗೆ ಅನುಷ್ಠಾನಗೊಳಿಸುವ ತಿಳುವಳಕೆಯ ಕೊರತೆಯಿಂದ ಹಿಂದುಳಿಯಿತು ಎಂದು ಹೇಳಬಹುದಾಗಿದೆ. ಹಾಗಾಗಿ ಹಿಂದುಳಿದ ಪಂಚಾಯಿತ ಸದಸ್ಯರಿಗೆ ಸ್ಥಳೀಯ ರಾಜಕೀಯದಲ್ಲಿ ಭಾಗವಹಿಸಿ ಅಭಿವೃದ್ಧಿ ಕಾರ್ಯಗಳನ್ನು ಅನುಷ್ಠಾನಗೊಳಿಸುವ ರಾಜಕೀಯ ಇಚ್ಚಾಶಕ್ತಿಯನ್ನು ಬೆಳೆಸಲಿಕ್ಕೆ ಗಮನ ಕೊಡಬೇಕಾಗಿದೆ.

**ನೀವು ಇಲ್ಲಿಯವರೆಗೆ ಎಷ್ಟು ಸಾಮಾನ್ಯ ಸಭೆಯಲ್ಲಿ ಭಾಗವಹಿಸುವುದರ ಕುರಿತು**

| **ಎಷ್ಟು ಸಾಮಾನ್ಯ ಸಭೆಯಲ್ಲಿ ಭಾಗವಹಿಸಿದ್ದೀರಾ** | **ಹೊಸಪೇಟೆ** | | **ಕೂಡ್ಲಿಗಿ** | |
|---|---|---|---|---|
| ೨ ಸಲ | ೨೧ | ೬೦.೦೦ | ೩ | ೧೫.೦೦ |
| ಪ್ರತಿ ತಿಂಗಳು | ೯ | ೨೫.೭೧ | ೯ | ೪೫.೦೦ |
| ಗೊತ್ತಿಲ್ಲ | ೫ | ೧೪.೨೮ | ೮ | ೪೦.೦೦ |
| **ಒಟ್ಟು** | ೩೫ | ೧೦೦ | ೨೦ | ೧೦೦ |

**ಮೂಲ: ಕ್ಷೇತ್ರ ಕಾರ್ಯದ ಮಾಹಿತಿ**

ಹೊಸಪೇಟೆ ನಗರಸಭೆ ಮತ್ತು ಕೂಡ್ಲಿಗಿ ಪಟ್ಟಣ ಪಂಚಾಯಿತಿಯ ಚುನಾಯಿತ ಸದಸ್ಯರುಗಳು ನಗರ ಸ್ಥಳೀಯ ಸಂಸ್ಥೆಗಳ ಸಾಮಾನ್ಯ ಸಭೆ ಎಷ್ಟು ಸಲ ಭಾಗವಹಿಸಿರುವುದರ ಪ್ರಮಾಣವನ್ನು ತೋರಿಸಲಾಗಿದೆ. ನಗರವಾರು ಸಂದರ್ಶಿಸಿದ ಒಟ್ಟು ನಗರಸಭೆಯ ೩೫ ಚುನಾಯಿತ ಸದಸ್ಯರು ಶೇ. ೬೦ರಷ್ಟು ಜನಪ್ರತಿನಿಧಿಗಳು ಸ್ಥಳೀಯ ಮಟ್ಟದ ರಾಜಕೀಯ ಅರಿವು ಮತ್ತು ಆಡಳಿತದ ಅನುಭವದಿಂದ ನಿಯಮಿತವಾಗಿ ನಡೆಯುವ ಸಾಮಾನ್ಯಸಭೆಯಲ್ಲಿ ೨ ಸಲ ಮತ್ತು ವಿಶೇಷ ಸಭೆಗಳನ್ನು ಕರೆದಾಗ ಭಾಗವಹಿಸುತ್ತಾ ಮತ್ತು ದಿನಾಲು ಸ್ಥಳೀಯ ಸಂಸ್ಥೆಯ ಜೊತೆಗೆ ಸಂಬಂಧವನ್ನು ಇಟ್ಟುಕೊಳ್ಳಲಾಗಿದೆ ಎಂದು ತಿಳಿದುಬಂದಿದೆ. ಇತರ ಶೇ. ೨೫.೭೧ರಷ್ಟು ಚುನಾಯಿತ ಪ್ರತಿನಿಧಿಗಳು ಆಡಳಿತದ ಬಗ್ಗೆ ಅನುಭವ ಹೊಂದಿದ್ದು, ಅಕ್ಷರಸ್ಥರಾಗಿದ್ದರಿಂದ ವರ್ಷದ ಪ್ರತಿ ತಿಂಗಳು ನಡೆಯುವ ಸಾಮಾನ್ಯ ಸಭೆಯಲ್ಲಿ ಭಾಗವಹಿಸಿದ್ದೇನೆ ಎಂದು ಹೇಳಿದರು. ಅಲ್ಲದೇ ಉಳಿದ ಶೇ. ೧೪.೨೮ರಷ್ಟು ಚುನಾಯಿತ

ಪ್ರತಿನಿಧಿಗಳು ಆಡಳಿತದ ಅನುಭವದ ಕೊರತೆಯ ಜೊತೆಗೆ ಅನಿವಾರ್ಯ ಕಾರಣದಿಂದ ಚುನಾಯಿತರಾಗಿರುವ ಪರಿಣಾಮ ಸ್ಥಳೀಯ ಸಂಸ್ಥೆಗೆ ನಾವು ಹೆಚ್ಚಾಗಿ ಹೋಗದಿರಲು ನಮಗೆ ಸಾಮಾನ್ಯಸಭೆಯಲ್ಲಿ ಎಷ್ಟು ಬಾರಿ ಭಾಗವಹಿಸಿದ್ದೇವೆ ಎಂಬುದು ಗೊತ್ತಿಲ್ಲ ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ.

ಅದರೆ ಕೂಡ್ಲಿಗಿ ಪಟ್ಟಣ ಪಂಚಾಯಿತಿಯ ಒಟ್ಟು ಸಂದರ್ಶಿಸಿದ ೨೦ ಚುನಾಯಿತ ಸದಸ್ಯರಲ್ಲಿ ಶೇ. ೧೫ರಷ್ಟು ಚುನಾಯಿತ ಸದಸ್ಯರು ಕೂಡ ಸ್ಥಳೀಯ ಮಟ್ಟದ ರಾಜಕೀಯ ಅರಿವು ಮತ್ತು ಆಡಳಿತದ ಅನುಭವದಿಂದ ನಿಯಮಿತವಾಗಿ ನಡೆಯುವ ಸಾಮಾನ್ಯಸಭೆಯಲ್ಲಿ ೨ ಸಲ ಮತ್ತು ವಿಶೇಷ ಸಭೆಗಳನ್ನು ಕರೆದಾಗ ಭಾಗವಹಿಸುತ್ತಾ ಮತ್ತು ದಿನಾಲು ಸ್ಥಳೀಯ ಸಂಸ್ಥೆಯ ಜೊತೆಗೆ ಸಂಬಂಧವನ್ನು ಇಟ್ಟುಕೊಳ್ಳಲಾಗಿದೆ ಎಂದು ತಿಳಿದುಬಂದಿದೆ. ಅದರಂತೆ ಪಟ್ಟಣ ಪಂಚಾಯಿತಿಯ ಶೇ. ೪೫ರಷ್ಟು ಚುನಾಯಿತ ಸದಸ್ಯರಲ್ಲಿ ಕೃಷಿಕರಾಗಿದ್ದು, ಆರ್ಥಿಕವಾಗಿ ದುರ್ಬಲರಾಗಿದ್ದು ಅವರಲ್ಲಿ ಸ್ಥಳೀಯ ಸಂಸ್ಥೆಗಳ ಬಗ್ಗೆ ಅರಿವು ಮತ್ತು ಭಾಗವಹಿಸದೆ ಕಡಿಮೆ ಅಕ್ಷರ ಜ್ಞಾನದಿಂದ ಸಾಮಾನ್ಯಸಭೆಯಲ್ಲಿ ವರ್ಷದ ೧೨ ಬಾರಿ ಭಾಗವಹಿಸಿದ್ದೇನೆ ಎಂದು ತಿಳಿದು ಬಂದಿದೆ. ನಂತರ ಉಳಿದ ಪಟ್ಟಣ ಪಂಚಾಯಿತಿಯ ಶೇ. ೪೦ರಷ್ಟು ಚುನಾಯಿತ ಪ್ರತಿನಿಧಿಗಳು ಅನುಭವದ ಕೊರತೆ, ರೈತರಾಗಿದ್ದುಕೊಂಡು ಯಾವ ಆಡಳಿತದ ಬಗ್ಗೆ ಅನುಭವವನ್ನು ಪಡೆಯದೆ ತಮ್ಮ ಅಧಿಕಾರದಲ್ಲಿ ಯಾರೋ ಹಸ್ತಕ್ಷೇಪ ಮಾಡುವಂತಹದ್ದು, ಮೀಸಲಾತಿಯ ಅನಿವಾರ್ಯದಿಂದ ಸ್ಪರ್ಧೆಗಳಿದ್ದು ಯಾವ ಆಡಳಿತದ ಮಾಡದೇ ಆಡಳಿತದ ಬಗ್ಗೆ ಕೇಳಿದಾಗ ಯಾವ ವಿಷಯ ನಮಗೆ ಗೊತ್ತಿಲ್ಲ ಎಂಬ ಅಭಿಪ್ರಾಯವನ್ನು ಹೇಳುತ್ತಾರೆ. ಒಟ್ಟಾರೆಯಾಗಿ ಈ ವಿಶ್ಲೇಷಣೆಯಿಂದ ತಿಳಿದುಬರುವ ಸಂಗತಿಯೆಂದರೆ ಸಾಪೇಕ್ಷವಾಗಿ ಮುಂದುವರಿದ ನಗರಸಭೆಯ ಚುನಾಯಿತ ಸದಸ್ಯರು ತೀರಾ ಹಿಂದುಳಿದ ಪಟ್ಟಣ ಪಂಚಾಯಿತಿಯ ಚುನಾಯಿತ ಸದಸ್ಯರಿಗಿಂತ ಸಾಮಾನ್ಯಸಭೆಗಳ ಬಗ್ಗೆ ಹೆಚ್ಚಿನ ಅರಿವು ಮತ್ತು ಭಾಗವಹಿಸುವಿಕೆಯಿಂದ ಮುಂದುವರಿದಿರುವುದಾಗಿ ತಿಳಿದುಬಂದಿದೆ ಹಾಗಾಗಿ ಹಿಂದುಳಿದ ಪಟ್ಟಣ ಪಂಚಾಯಿತಿಯು ಕಳೆದ ವರ್ಷಗಳ ಅವಧಿಯಲ್ಲಿ ನಗರ ಪ್ರದೇಶಗಳ ವಾರ್ಡ್ ಸಭೆಗಳನ್ನು ಕಡ್ಡಾಯ ಎಂಬ ಕಾರಣಕ್ಕೆ ಆಯೋಜಿಸಿದ್ದರೂ ಅವು ಕಾಟಾಚಾರಕ್ಕೆ ನಡೆದದ್ದೇ ಹೆಚ್ಚು. ಜನರಿಗೆ ಅನಾನುಕೂಲವಾಗುವಂತಹ ಸಮಯದಲ್ಲಿ ಸಭೆ ನಿಗದಿಪಡಿಸುವುದು, ಸಂಬಂಧಪಟ್ಟ ಅಧಿಕಾರಿಗಳು ಸಭೆಗೆ ಹಾಜರಾಗದಿರುವುದು, ಸಾಮಾನ್ಯಸಭೆಯ ಬಗ್ಗೆ ಅರಿವುನ್ನು ಹೊಂದದೆ ಇರುವುದು ಹೀಗೆ ಹಲವು ಸಮಸ್ಯೆಗಳಿಂದ ವಾರ್ಡ್ ಸಭೆಗಳು ಪ್ರಾಮುಖ್ಯ ಕಳೆದುಕೊಂಡು ಯೋಜನೆಗಳ ಅನುಷ್ಠಾನ ಕುಂಠಿತಗೊಂಡಿದೆ, ನಗರಗಳ ಅಭಿವೃದ್ಧಿಯಲ್ಲಿ ಕೆಳಮಟ್ಟದ ಸಮುದಾಯದ ಭಾಗವಹಿಸುವಿಕೆಯಿಂದ ಹಿಂದುಳಿಯಿತು ಎಂದು ಹೇಳಬಹುದಾಗಿದೆ. ವಾರ್ಡ್ ಸಭೆಗಳಲ್ಲಿ ಚುನಾಯಿತ ಪ್ರತಿನಿಧಿಗಳ ಭಾಗವಹಿಸುವಿಕೆಯನ್ನು ಕಡ್ಡಾಯ ಮಾಡಬೇಕೆಂದರೆ, ಅವರನ್ನು ಯೋಜನಾ ಪ್ರಕ್ರಿಯೆಯಲ್ಲಿ ಸಕ್ರಿಯವಾಗಿ ತೊಡಗಿಸಿ ಅವರ ಅಭಿಪ್ರಾಯಗಳಿಗೂ ಮನ್ನಣೆ ಸಿಗಬೇಕೆಂದರೆ ಉತ್ತಮ ಆಯ್ಕೆಯಾಗಬೇಕು. ಅವರು ವಾರ್ಡ್ ಸಭೆಗಳ ಗುರುತರ ಮಹತ್ವವನ್ನು ಅರಿತಿರಬೇಕು. ಇಂತಹ ಸಮಸ್ಯೆಗಳಿಗೆ ಪರಿಹಾರ ಕಂಡುಕೊಳ್ಳಬೇಕಾರೆ ಸದಸ್ಯರಲ್ಲಿ ನಿರಂತರ ಅರಿವು, ತಮ್ಮ ಜವಾಬ್ದಾರಿಯ ಮನವರಿಕೆ, ಮಹಿಳೆಯರಿಗೆ ಚುನಾವಣಾ ಪೂರ್ವ ತರಬೇತಿ, ಮುಖ್ಯವಾಗಿ ಲಿಂಗ ತಾರತಮ್ಯ, ಅಸಮಾನತೆ, ಆಡಳಿತ ವ್ಯವಸ್ಥೆ, ಚುನಾವಣಾ

ಪ್ರಕ್ರಿಯೆ ಬಗ್ಗೆ ಆಂದೋಲನದ ರೀತಿಯಲ್ಲಿ ಪ್ರಯತ್ನಗಳು ಸರ್ಕಾರದಿಂದಲೇ ಆಗಬೇಕಾದ ಅನಿವಾರ್ಯತೆಯಿದೆ ಎಂದು ಹೇಳಬಹುದಾಗಿದೆ.

**ಸಾಮಾನ್ಯ ಸಭೆಯ ನಡಾವಳಿ ಪ್ರತಿ ನೀಡುವುದರ ವಿವರ**

| **ನಡಾವಳಿ ಪ್ರತಿ ನೀಡುವುದರ ಕುರಿತು** | **ಹೊಸಪೇಟೆ** | | **ಕೂಡ್ಲಿಗಿ** | |
|---|---|---|---|---|
| ನೀಡುತ್ತಾರೆ | ೨೭ | ೭೭.೧೪ | ೬ | ೩೦.೦೦ |
| ಇಲ್ಲಾ | ೮ | ೨೨.೮೬ | ೧೪ | ೭೦.೦೦ |
| **ಒಟ್ಟು** | ೩೫ | ೧೦೦ | ೨೦ | ೧೦೦ |

**ಮೂಲ: ಕ್ಷೇತ್ರ ಕಾರ್ಯದ ಮಾಹಿತಿ**

ಹೊಸಪೇಟೆ ನಗರಸಭೆಯ ಒಟ್ಟು ೩೫ ಚುನಾಯಿತ ಸದಸ್ಯರಿದ್ದು ಅದರಲ್ಲಿ ಶೇ. ೭೭.೧೪ರಷ್ಟು ಚುನಾಯಿತ ಸದಸ್ಯರು ಮತ್ತು ಕೂಡ್ಲಿಗಿ ಪಟ್ಟಣ ಪಂಚಾಯಿತಿಯ ಒಟ್ಟು ೨೦ ಚುನಾಯಿತ ಸದಸ್ಯರಿದ್ದು ಅದರಲ್ಲಿ ಶೇ. ೩೦ರಷ್ಟು ಚುನಾಯಿತ ಪ್ರತಿನಿಧಿಗಳು ನಗರ ಸ್ಥಳೀಯ ಸಂಸ್ಥೆಗಳ ಆಡಳಿತದ ಬಗ್ಗೆ ಮೊದಲೇ ಹೆಚ್ಚಿನ ಅನುಭವವನ್ನು ಪಡೆದಿದ್ದು ಮತ್ತು ಅಕ್ಷರಸ್ಥರಾಗಿರುವುದರಿಂದ ಅವರೊಂದಿಗೆ ಸರ್ಕಾರಿ ಅಧಿಕಾರಿಗಳು ಸರಿಯಾದ ರೀತಿಯಲ್ಲಿ ಸ್ಪಂದಿಸುತ್ತಾ ಬಂದಿರುತ್ತಾರೆ. ಈ ಹಿನ್ನೆಲೆಯಲ್ಲಿ ಯಾವುದೇ ಆಡಳಿತ ಕೊರತೆಯು ಕಂಡುಬರದೇ ನಡಾವಳಿ ಪ್ರತಿಗಳನ್ನು ನಿಡುತ್ತಾ ಬಂದಿರುತ್ತಾರೆ ಎಂಬ ಅಂಶವು ತಿಳಿದುಬರುತ್ತದೆ. ಉಳಿದ ಹೊಸಪೇಟೆ ನಗರಸಭೆಯ ಶೇ. ೨೨.೮೬ರಷ್ಟು ಚುನಾಯಿತ ಸದಸ್ಯರು ಮತ್ತು ಕೂಡ್ಲಿಗಿ ಪಟ್ಟಣ ಪಂಚಾಯಿತಿಯ ಶೇ. ೭೦ರಷ್ಟು ಚುನಾಯಿತ ಸದಸ್ಯರು ಸಾಮಾನ್ಯ ಸಭೆಯ ನಡಾವಳಿಯನ್ನು ನೀಡುವ ಬಗ್ಗೆ ಕೇಳಿದಾಗ ಇಲ್ಲ ಎಂದು ತಿಳಿಸಿರುವುದು ಕಂಡುಬರುತ್ತದೆ. ಆದರೆ ಹೆಚ್ಚು ಹಿಂದುಳಿದಿರುವ ಕೂಡ್ಲಿಗಿ ಪಟ್ಟಣ ಪಂಚಾಯಿತಿ ಜನಪ್ರತಿನಿಧಿಗಳಿಗಿಂತ ಸಾಪೇಕ್ಷವಾಗಿ ಮುಂದುವರೆದ ಹೊಸಪೇಟೆ ನಗರಸಭೆಯ ಪ್ರತಿನಿಧಿಗಳು ಅಕ್ಷರಸ್ಥರು, ಹೆಚ್ಚು ಮಾತುಗಾರಿಕೆ, ಯೋಜನೆಗಳ ಅನುಷ್ಠಾನದಲ್ಲಿ ಅರಿವುನ್ನು ಹೊಂದಿದವರು, ಮೂಲ ಅಭಿವೃದ್ಧಿಯ ಬಗ್ಗೆ ತಿಳುವಳಿಕೆ ಹೊಂದಿರುವುದಾಗಿ ತಿಳಿದು ಬಂದಿದೆ. ಒಟ್ಟಾರೆಯಾಗಿ ಈ ವಿಶ್ಲೇಷಣೆಯಿಂದ ತಿಳಿಯುವ ಸಂಗತಿಯೆಂದರೆ ಹೊಸಪೇಟೆ ನಗರಸಭೆ ಮತ್ತು ಕೂಡ್ಲಿಗಿ ಪಟ್ಟಣ ಪಂಚಾಯಿತಿಗೆ ಹೋಲಿಸಿದರೆ ನಗರಸಭೆಯ ಸದಸ್ಯರಿಗೆ ಕಡಿಮೆ ಸದಸ್ಯರಲ್ಲಿ ಆಡಳಿತದ ಅನುಭವ ಕೊರತೆ ಇದ್ದು ಉಳಿದ ಸದಸ್ಯರು ಸೌಲಭ್ಯಗಳ ಬಗ್ಗೆ ಹೆಚ್ಚಿನ ಮಾಹಿತಿ ತಿಳಿದುಕೊಂಡು ಅವುಗಳನ್ನು ಸದುಪಯೋಗ ಮಾಡಿಕೊಳ್ಳುತ್ತಿರುವುದು ತಿಳಿದುಬರುತ್ತದೆ. ಆದರೂ ಹಿಂದುಳಿದ ಪಟ್ಟಣ ಪಂಚಾಯಿತಿಯಲ್ಲಿ ಹೆಚ್ಚಿನ ಸದಸ್ಯರಿಗೆ ಸಮರ್ಪಕ ಆಡಳಿತ ನಿರ್ವಹಣೆ ಕೊರತೆ, ರಾಜಕೀಯ ಇಚ್ಛಾಶಕ್ತಿಯ ಕೊರತೆ ಇರುವುದು ಕ್ಷೇತ್ರಾಧಾಯದಿಂದ ತಿಳಿದುಬಂದಿದೆ. ಒಟ್ಟಾರೆ ಚುನಾಯಿತ ಸದಸ್ಯರು ಜನರ ಉತ್ತಮ ಜೀವನಮಟ್ಟವನ್ನು ರೂಪಿಸಲು ಸರ್ಕಾರಿ ಯೋಜನೆಗಳನ್ನು ಸಮರ್ಪಕವಾಗಿ ಬಳಸಿಕೊಂಡು ಸಮಾನತೆಯಿಂದ ಅನುಷ್ಠಾನಗೊಳಿಸುವಲ್ಲಿ ವಿಫಲವಾಗಿರುವುರ ಹಿನ್ನೆಲೆಯಲ್ಲಿ ವಾರ್ಡಿನ ಸಾಮಾಜಿಕ ಸಮಸ್ಯೆಗಳ ಕುರಿತು ಅರಿವು ಮೂಡಿಸುವ ಅಗತ್ಯವಿದೆ ಎನ್ನಬಹುದಾಗಿದೆ.

**ಸಾಮಾನ್ಯ ಸಭೆ ನಡಾವಳಿ ಪ್ರತಿ ನೀಡಿದಿದ್ದಾರೆ ನಿಮ್ಮ ಪ್ರತಿಕ್ರಿಯೆ**

| ನಡಾವಳಿ ಪ್ರತಿ ನೀಡದಿದ್ದಾರೆ ನಿಮ್ಮ ಪ್ರತಿಕ್ರಿಯೆ | ಹೊಸಪೇಟೆ | | ಕೂಡ್ಲಿಗಿ | |
|---|---|---|---|---|
| ಕೇಳಿ ತೊಂಗತ್ತೀವಿ | ೫ | ೧೪.೨೮ | ೯ | ೨೫.೭೧ |
| ಕೇಳುವುದಿಲ್ಲಾ | ೩ | ೮.೫೭ | ೫ | ೧೪.೨೮ |
| ಒಟ್ಟು | ೮ | ೨೨.೮೫ | ೧೪ | ೩೯.೯೯ |

**ಮೂಲ: ಕ್ಷೇತ್ರ ಕಾರ್ಯದ ಮಾಹಿತಿ**

ಮೇಲಿನ ಅಂಶದೊಂದಿಗೆ ಕೋಷ್ಟಕವನ್ನು ಗಮನಿಸಿದಾಗ ಸಾಮಾನ್ಯಸಭೆ ನಡಾವಳಿಯ ಪ್ರತಿಯನ್ನು ನೀಡದಿರುವಲ್ಲಿ ಚುನಾಯಿತ ಸದಸ್ಯರ ಪ್ರತಿಕ್ರಿಯೆ ಪ್ರಮಾಣವನ್ನು ತೋರಿಸಲಾಗಿದೆ. ನಗರವಾರು ಅಧ್ಯಯನದಲ್ಲಿ ನಗರಸಭೆ ಶೇ. ೧೪.೨೮ರಷ್ಟು ಚುನಾಯಿತ ಸದಸ್ಯರು ಮತ್ತು ಕೂಡ್ಲಿಗಿ ಪಟ್ಟಣ ಪಂಚಾಯಿತಿಯ ಶೇ. ೨೫.೭೧ರಷ್ಟು ಚುನಾಯಿತ ಸದಸ್ಯರು ನಡಾವಳಿಯನ್ನು ನೀಡದಿದ್ದರೆ ಕೇಳಿ ಪಡೆಯುತ್ತೇವೆ ಎಂದರು. ಉಳಿದ ನಗರಸಭೆಯ ಶೇ. ೮.೫೭ರಷ್ಟು ಚುನಾಯಿತ ಸದಸ್ಯರು ಮತ್ತು ಪಟ್ಟಣ ಪಂಚಾಯಿತಿಯ ಶೇ. ೧೪.೨೮ರಷ್ಟು ಚುನಾಯಿತ ಸದಸ್ಯರು ನಡಾವಳಿ ಪ್ರತಿಯನ್ನು ಕೇಳುವುದಿಲ್ಲಾ ಎಂದು ಹೇಳಿರುವುದು ಕಂಡುಬಂದಿದೆ. ಸದಸ್ಯರ ಸಂದರ್ಶನ ಸಂದರ್ಭದಲ್ಲಿ ಯಾಕೆ ನೀವು ನಡಾವಳಿ ಪ್ರತಿ ಕೇಳುವುದಿಲ್ಲ ಎನ್ನವಂತಹ ಪ್ರಶ್ನೆಯನ್ನು ಕೇಳಿದಾಗ ಸಭೆಗಳು ನಡೆಯುವುದು ನಮ್ಮ ಗಮನಕ್ಕೆ ಬರುವುದಿಲ್ಲ. ಕೆಲವು ಸದಸ್ಯೆಯರ ಗಂಡಂದಿರು ಸಭೆಗಳಿಗೆ ಹೋಗುತ್ತಾರೆ ಅಲ್ಲಿ ಸಭೆಗೆ ಮಾತ್ರ ಕೂಡುತ್ತೇವೆ ಅದು ಮುಗಿದ ಬಳಿಕ ಯಾವ ರೀತಿಯ ಚರ್ಚೆಗೆ ಏನು ಪರಿಹಾರ ಸಿಕ್ಕಿದೆ ಎಂಬುದು ನಮಗೆ ಗೊತ್ತಾಗುದಿಲ್ಲ ಎಂಬ ಅಂಶವು ಅಧ್ಯಯನದಿಂದ ತಿಳಿದುಬಂದಿದೆ. ಹೆಚ್ಚು ಹಿಂದುಳಿದ ಪಟ್ಟಣ ಪಂಚಾಯಿತಿಯ ಸದಸ್ಯರಿಗಿಂತ ಸಾಪೇಕ್ಷವಾಗಿ ಮುಂದುವರೆದ ನಗರಸಭೆಯ ಚುನಾಯಿತ ಸದಸ್ಯರು ನಡಾವಳಿಯನ್ನು ಹೆಚ್ಚಿನ ಪ್ರಮಾಣದಲ್ಲಿ ಕೇಳಿ ಪಡೆಯುತ್ತೇವೆ ಎಂದು ತಿಳಿಸಿದ್ದಾರೆ. ಒಟ್ಟಾರೆಯಾಗಿ ಪಟ್ಟಣ ಪಂಚಾಯಿತಿ ಚುನಾಯಿತ ಸದಸ್ಯರು ಆರ್ಥಿಕವಾಗಿ ದುರ್ಬಲರಾಗಿದ್ದು, ಅನಕ್ಷರತೆಯ ಪರಿಣಾಮದಿಂದ ಹಿಂದುಳಿಯಿತು ಎಂದು ಹೇಳಲಾಗಿದೆ. ಈ ವಿಶ್ಲೇಷಣೆಯನ್ನು ಗಮನಿಸಿದಾಗ ಕೆಲವು ಚುನಾಯಿತ ಸದಸ್ಯರಲ್ಲಿ ಹೆಚ್ಚಿನ ಆಡಳಿತದ ಅನುಭವ ಮತ್ತು ಒತ್ತಾಯದಿಂದ ಸಂಸ್ಥೆಗಳಿಗೆ ಆಯ್ಕೆಯಾಗಿರುವುದು ಗೊತ್ತಾಗುತ್ತದೆ. ನಗರ ಸ್ಥಳೀಯ ಚುನಾವಣೆಗಳಲ್ಲಿ ಚುನಾಯಿತರಾದ ಸದಸ್ಯರು ಜನರ ಸೇವೆಗಾಗಿ ಬಂದಿರುವಂತವರು ಅವರಲ್ಲಿ ಈ ರೀತಿಯ ಕೊರತೆಯನ್ನು ನೀಗಿಸಲು ಅವರಿಗೆ ಸರ್ಕಾರದಿಂದ ಕಾಲ–ಕಾಲಕ್ಕೆ ಸಮರ್ಪಕವಾದ ತರಬೇತಿಯನ್ನು ಕೊಡಿಸುವಂತಹ ಅಗತ್ಯತೆ ಕಂಡುಬರುತ್ತದೆ.

**ನಗರ ಸಭೆಗಳನ್ನು ಕರೆಯುವಾಗ ಅಧಿಕಾರಿಯು ನಿಮ್ಮ ಜೊತೆ ಚರ್ಚಿಸುತ್ತಾರೆಯೇ**

| **ಅಧಿಕಾರಿಯ ಜೊತೆ ಚರ್ಚಿಸುವುದರ ವಿವರ** | **ಹೊಸಪೇಟೆ** | | **ಕೂಡ್ಲಿಗಿ** | |
|---|---|---|---|---|
| ಚರ್ಚಿಸುತ್ತಾರೆ | ೨೯ | ೮೨.೮೪ | ೧೨ | ೬೦.೦೦ |
| ಇಲ್ಲಾ | ೬ | ೧೭.೧೬ | ೮ | ೪೦.೦೦ |
| **ಒಟ್ಟು** | ೩೫ | ೧೦೦ | ೨೦ | ೧೦೦ |

**ಮೂಲ: ಕ್ಷೇತ್ರ ಕಾರ್ಯದ ಮಾಹಿತಿ**

ನಗರವಾರು ಸಭೆಗಳನ್ನು ಕರೆಯುವಾಗ ಅಧಿಕಾರಿಯು ನಮ್ಮ ಜೊತೆಗೆ ಚರ್ಚಿಸುವ ಕುರಿತ ವಿವರವನ್ನು ತೋರಿಸಲಾಗಿದೆ. ಹೊಸಪೇಟೆ ನಗರಸಭೆಯ ಶೇ. ೮೨.೮೪ರಷ್ಟು ಚುನಾಯಿತ ಸದಸ್ಯರು ಮತ್ತು ಕೂಡ್ಲಿಗಿ ಪಟ್ಟಣ ಪಂಚಾಯಿತಿಯ ಶೇ. ೬೦ರಷ್ಟು ಚುನಾಯಿತ ಸದಸ್ಯರು ಚರ್ಚಿಸಲಾಗುತ್ತದೆ ಎಂದಿದ್ದಾರೆ ಇದು ಗುಣಮಟ್ಟದ ಅಭಿಪ್ರಾಯ ಎನ್ನಬಹುದು. ಉಳಿದ ಹೊಸಪೇಟೆ ನಗರಸಭೆಯ ಶೇ. ೧೭.೧೬ರಷ್ಟು ಚುನಾಯಿತ ಸದಸ್ಯರು ಮತ್ತು ಕೂಡ್ಲಿಗಿ ಪಟ್ಟಣ ಪಂಚಾಯಿತಿಯ ಶೇ. ೪೦ರಷ್ಟು ಚುನಾಯಿತ ಸದಸ್ಯರು ಚರ್ಚೆಯನ್ನೇ ಮಾಡದಿರುವುದು ಅಂಶವು ಅಧ್ಯಯನದಿಂದ ತಿಳಿದುಬಂದಿದೆ. ಹೆಚ್ಚು ಹಿಂದುಳಿದ ಸ್ಥಳೀಯ ಸಂಸ್ಥೆಯಾದ ಪಟ್ಟಣ ಪಂಚಾಯಿತಿಯ ಸದಸ್ಯರು ಸಾಪೇಕ್ಷ ಮುಂದುವರೆದ ನಗರಸಭೆಯ ಸದಸ್ಯರಿಗಿಂತ ಕಡಿಮೆ ಪ್ರಮಾಣದಲ್ಲಿ ಚರ್ಚಿಸುತ್ತಾರೆ ಎಂದಿರುವುದು ಕಂಡುಬರುತ್ತದೆ. ಅಂದರೆ ಇಲ್ಲಿನ ಚುನಾಯಿತ ಸದಸ್ಯರ ಪ್ರದೇಶವು ಒಣಭೂಮಿಯಿಂದ ಕೂಡಿದ್ದು ಆರ್ಥಿಕವಾಗಿ ದುರ್ಬಲರಾಗಿದ್ದು, ಹೆಚ್ಚಿನ ಪ್ರಮಾಣದಲ್ಲಿ ಅಭ್ಯಾಸ ಕಲಿಯದರಾಗಿದ್ದು, ಅಧಿಕಾರಿಗಳು ಇವರ ಮಾತಿಗೆ ಹೆಚ್ಚಿನ ಬೆಲೆ ಕೊಡದೆ, ಇಲ್ಲಿ ಆಡಳಿತ ಅನುಭವದ ಕೊರತೆಯಿಂದ ಸ್ತ್ರೀಯು ಅನಿವಾರ್ಯವಾಗಿ ರಾಜಕೀಯ ಪಕ್ಷದಲ್ಲಿ ಭಾಗವಹಿಸುವಂತಹ ಸಂದರ್ಭಗಳು ಎದುರಾಗಿ ಅನಿವಾರ್ಯತೆಯಿಂದ ಹಿರಿಯರ, ಪಕ್ಷದ ಒತ್ತಾಯಕ್ಕೆ ನಿಂತಿರುವುದು, ಎರಡನೆಯ ಬಾರಿ ಚುನಾಯಿತರಾಗಿ ಆಡಳಿತ ನಿರ್ವಹಣೆಯಲ್ಲಿ ಅನುಭವವಿರದೆ ಹಾಗೂ ಇವರ ಅಧಿಕಾರ ನಿರ್ವಹಣೆಯನ್ನು ತಮ್ಮಲ್ಲಿ ಕೇಂದ್ರೀಕರಿಸಿರುವುದಲ್ಲದೆ, ಸಭೆಗೆ ಹಾಜರಾಗದಂತೆ, ವಿರೋಧ ವ್ಯಕ್ತಪಡಿಸದಂತೆ, ಜಾತಿ ನಿಂದನೆ, ಕನಿಷ್ಠ ಮಟ್ಟದ ಜ್ಞಾನ, ಆತ್ಮವಿಶ್ವಾಸದ ಕೊರತೆ ಮುತಾಂದ ಕೃತ್ಯಗಳ ಮೂಲಕ ಚುನಾಯಿತ ಸದಸ್ಯರು ಸ್ಥಳೀಯ ರಾಜಕೀಯದಲ್ಲಿ ಸಕ್ರೀಯಾವಾಗಿ ಭಾಗವಹಿಸದೆ ಇರುವತಂಹ ಹಲವು ಸಮಸ್ಯೆಗಳಿಂದ ಹಿಂದುಳಿಯಿತು ಎನ್ನಬಹುದಾಗಿದೆ. ಹಾಗಾಗಿ ಹಿಂದುಳಿಯಲಿಕ್ಕೆ ಹಲವು ರೀತಿಯ ಸಮಸ್ಯೆಗಳ ಪೈಕಿ ಒಂದಾದ ಚುನಾಯಿತ ಸದಸ್ಯರ ರಾಜಕೀಯ ಅರಿವು ಮತ್ತು ಭಾಗವಹಿಸುವಿಕೆಯಂತಹ ಸಮಸ್ಯೆಗೆ ಪರಿಹಾರ ಕಂಡುಕೊಳ್ಳುವ ನಿಟ್ಟಿನಲ್ಲಿ ಭಾರತ ಸರ್ಕಾರವು ಹಲವು ರೀತಿಯ ಯೋಜನೆಗಳ ಕಡೆಗೆ ಗಮನಹರಿಸುವ ಅವಶ್ಯಕತೆಯಿದೆ ಎಂದು ಹೇಳಲಾಗಿದೆ.

**ನಿಮ್ಮ ನಗರಸಭೆ/ಪಟ್ಟಣ ಪಂಚಾಯಿತಿಗಳಲ್ಲಿ ಸ್ಥಾಯಿ ಸಮಿತಿಗಳ ಅರಿವು**

| **ಸ್ಥಾಯಿ ಸಮಿತಿಗಳ ಅರಿವು ಕುರಿತು** | **ಹೊಸಪೇಟೆ** | | **ಕೂಡ್ಲಿಗಿ** | |
|---|---|---|---|---|
| ಸಾಮಾನ್ಯ ಸ್ಥಾಯಿ ಸಮಿತಿ. | ೧೬ | ೪೫.೭೧ | ೪ | ೨೦.೦೦ |
| ಆರೋಗ್ಯ, ನಗರ ಯೋಜನಾ ಸಮಿತಿ, ಹಣಕಾಸು. | ೭ | ೨೦.೦೦ | ೬ | ೩೦.೦೦ |
| ಗೊತ್ತಿಲ್ಲ | ೧೨ | ೩೪.೨೯ | ೧೦ | ೫೦.೦೦ |
| **ಒಟ್ಟು** | ೩೫ | ೧೦೦ | ೨೦ | ೧೦೦ |

**ಮೂಲ: ಕ್ಷೇತ್ರ ಕಾರ್ಯದ ಮಾಹಿತಿ**

ಮೇಲಿನ ಅಂಶವನ್ನು ಗಮನಿಸಿದಾಗ ಸಾಮಾನ್ಯ ಸ್ಥಾಯಿ ಸಮಿತಿ, ಬಗ್ಗೆ ಅರಿವು ಇರುವುದನ್ನು ಹೊಸಪೇಟೆ ನಗರಸಭೆಯ ಶೇ. ೪೫.೭೧ರಷ್ಟು ಚುನಾಯಿತ ಸದಸ್ಯರು ಮತ್ತು ಕೂಡ್ಲಿಗಿ ಪಟ್ಟಣ ಪಂಚಾಯಿತಿಯ ಶೇ. ೨೦ರಷ್ಟು ಜನಪ್ರತಿನಿಧಿಗಳು ತಿಳಿಸಿರುತ್ತಾರೆ. ಇತರ ಹೊಸಪೇಟೆ ನಗರಸಭೆಯ ಶೇ. ೨೦ರಷ್ಟು ಚುನಾಯಿತ ಸದಸ್ಯರು ಮತ್ತು ಕೂಡ್ಲಿಗಿ ಪಟ್ಟಣ ಪಂಚಾಯಿತಿಯ ಶೇ. ೩೦ರಷ್ಟು ಜನ ಪ್ರತಿನಿಧಿಗಳು ಆರೊಗ್ಯ, ನಗರ ಯೋಜನಾ ಸಮಿತಿ, ಹಣಕಾಸು ಸ್ಥಾಯಿ ಸಮಿತಿಗಳ ಬಗ್ಗೆ ಅರಿವು ಇರುವುದನ್ನು ತಿಳಿದುಬಂದಿದೆ ಇದೊಂದು ಉತ್ತಮ ಅಭಿಪ್ರಾಯ ಎನ್ನಬಹುದು. ಉಳಿದ ನಗರಸಭೆಯ ಶೇ. ೩೪.೨೯ ಚುನಾಯಿತ ಸದಸ್ಯರು ಮತ್ತು ಪಟ್ಟಣ ಪಂಚಾಯಿತಿಯ ಶೇ. ೫೦ರಷ್ಟು ಚುನಾಯಿತ ಸದಸ್ಯರು ಸ್ಥಾಯಿ ಸಮಿತಿಗಳ ಬಗ್ಗೆ ಯಾವ ಅರಿವು ಇಲ್ಲ ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿರುತ್ತಾರೆ. ಒಟ್ಟಾರೆಯಾಗಿ ತೀರಾ ಹಿಂದುಳಿದ ಸ್ಥಳೀಯ ಚುನಾಯಿತ ಸದಸ್ಯರಿಗಿಂತ ಸಾಪೇಕ್ಷವಾಗಿ ಮುಂದುವರೆದ ಸ್ಥಳೀಯ ಸಂಸ್ಥೆಯ ಚುನಾಯಿತ ಸದಸ್ಯರಲ್ಲಿ ಆಡಳಿತದ ಬಗ್ಗೆ ಅರಿವು, ಸ್ಥಳೀಯ ರಾಜಕೀಯದ ಅರಿವು ಮತ್ತು ಭಾಗವಹಿಸುವಂತಹ ಸ್ವಾಗರ್ತಾಹ ಅಂಶಗಳನ್ನು ಕಾಣಬಹುದಾಗಿದೆ. ಆದರೆ ಚುನಾಯಿತ ಸದಸ್ಯರಲ್ಲಿ ಲಿಂಗ ಸಂಬಂಧಿ ಮತ್ತು ಜಾತಿ ಸಂಬಂಧಿಯಾಗಿ ಹೆಚ್ಚಿನ ರೀತಿಯಲ್ಲಿ ತಾರತಮ್ಯದಿಂದ ಹೆಚ್ಚಿನ ರೀತಿಯಲ್ಲಿತಮ್ಮ ಸಮುದಾಯಕ್ಕೆ ಅಗತ್ಯಸೇವೆಗಳಾದ ಕುಡಿಯುವ ನೀರು, ಬೀದಿ ದೀಪದ ವ್ಯವಸ್ಥೆ, ರಸ್ತೆಗಳು ಪರ್ಯಾಯ ಅಭಿವೃದ್ಧಿ ಮಾರ್ಗಗಳನ್ನು ವಿತರಿಸುವಲ್ಲಿ ಸಾಧ್ಯವಾಗದೆ ಇರುವುದರಿಂದ ಹಿಂದುಳಿಯಿತು ಎನ್ನಬಹುದಾಗಿದೆ ಒಟ್ಟಾರೆ ೧೮ ವರ್ಷ ಮೇಲ್ಪಟ್ಟ ಯುವಜನರನ್ನು ಆಯ್ಕೆ ಮಾಡಿ ಅವರಿಗೆ ಅಭಿವೃದ್ಧಿ ಹಾಗೂ ಲಿಂಗ ಸಮಾನತೆಯ ಅರಿವು ಮೂಡಿಸು ಪ್ರಕ್ರೀಯೆ, ಸಮುದಾಯ ಚಟುವಟಿಕೆಗಳಲ್ಲಿ ತೊಡಗಿಸುವ ಮೂಲಕ ನಾಯಕತ್ವ ಗುಣ ಬೆಳಸುವುದು ಹಾಗೂ ವಿವಿಧ ಸ್ಥಾಯಿ ಸಮಿತಿಗಳಲ್ಲಿ ಕೆಲಸ ಮಾಡುವುದರಿಂದ ಭವಿಷ್ಯದಲ್ಲಿ ಉತ್ತಮ ಸದಸ್ಯರು ಆಯ್ಕೆಯಾಗುವುದರ ಮೂಲಕ ನಗರ/ವಾರ್ಡಿನಲ್ಲಿರುವ ತೊಂದರೆಗಳ ಬಗ್ಗೆ ಹೆಚ್ಚಿನ ಅರಿವು ಹೊಂದಿ ಸ್ಥಾಯಿ ಸಮಿತಿಗಳ ಮೀಟಿಂಗ್‌ನಲ್ಲಿ ವಿವಿಧ ವಾರ್ಡಿಗೆ ಸಂಬಂಧಪಟ್ಟ ವಿಷಯಗಳನ್ನು ಚರ್ಚಿಸಲಾಗುತ್ತದೆ. ಈ ಸ್ಥಾಯಿ ಸಮಿತಿಯಲ್ಲಿರುವ ಸದಸ್ಯರು ತಮ್ಮ ಚುನಾವಣಾ ವಾರ್ಡಿನ ಅಭಿವೃದ್ಧಿಯ ಬಗ್ಗೆ ಚರ್ಚಿಸುತ್ತಾರೆ. ಈ ಸಮಿತಿಯಲ್ಲಿ ಕೆಲಸ ಮಾಡುವುದರಿಂದ ಸದಸ್ಯರಿಗೆ ಸ್ಥಳೀಯ ಸಮಸ್ಯೆಗಳ ಬಗ್ಗೆ ಸಾಕಷ್ಟು ಅರಿವಾಗುತ್ತದೆ ಅದರಲ್ಲೂ ಮಹಿಳಾ ಸದಸ್ಯರು

ಬದ್ಧತೆಯಿಂದ ಕೆಲಸ ಮಾಡಲು ಸಾಧ್ಯವಾಗುವಂತಹ ಕೆಲಸಗಳು ಆಗುವ ಅಗತ್ಯವಿದೆ ಎಂದು ಹೇಳಲಾಗಿದೆ.

**ವಿವಿಧ ಸ್ಥಾಯಿ ಸಮಿತಿಗಳಲ್ಲಿ ಕಾರ್ಯನಿರ್ವಹಿಸಿದ ಸದಸ್ಯರು**

| ಸ್ಥಾಯಿ ಸಮಿತಿಗಳಲ್ಲಿ ಕಾರ್ಯನಿರ್ವಹಣೆಯ ಬಗ್ಗೆ | ಹೊಸಪೇಟೆ | | ಕೂಡ್ಲಿಗಿ | |
|---|---|---|---|---|
| ಸಾಮಾನ್ಯ ಸ್ಥಾಯಿ ಸಮಿತಿ | ೧೬ | ೪೫.೭೯ | ೫ | ೨೫.೦೦ |
| ಆರೋಗ್ಯ, ಯೋಜನಾ ಸಮಿತಿ, ಹಣಕಾಸು | ೧೨ | ೩೪.೨೧ | ೧೧ | ೫೫.೦೦ |
| ಇರಲಿಲ್ಲ | ೭ | ೨೦.೦೦ | ೪ | ೨೦.೦೦ |
| **ಒಟ್ಟು** | ೩೫ | ೧೦೦ | ೨೦ | ೧೦೦ |

**ಮೂಲ: ಕ್ಷೇತ್ರ ಕಾರ್ಯದ ಮಾಹಿತಿ**

ನಗರ ಸ್ಥಳೀಯ ಸಂಸ್ಥೆಗಳಲ್ಲಿನ ಚುನಾಯಿತ ಸದಸ್ಯರು ಯಾವ ಸ್ಥಾಯಿ ಸಮಿತಿಗಳಲ್ಲಿ ಸದಸ್ಯರಾಗಿದ್ದಾರೆಂದು ಮೇಲಿನ ಹೇಳಿಕೆಯಿಂದ ನೋಡಬಹುದಾಗಿದೆ. ಅದರಂತೆ ಹೊಸಪೇಟೆ ನಗರಸಭೆಯ ೩೫ ಸದಸ್ಯರಲ್ಲಿ ಶೇ. ೪೫.೭೯ರಷ್ಟು ಚುನಾಯಿತ ಸದಸ್ಯರು ಹಾಗೂ ಕೂಡ್ಲಿಗಿ ಪಟ್ಟಣ ಪಂಚಾಯಿತಿಯ ಶೇ. ೨೫ರಷ್ಟು ಚುನಾಯಿತ ಸದಸ್ಯರು ನಗರದ ವಸತಿಗಳು, ನಗರ ವಿಸ್ತಾರ, ನೈಸರ್ಗಿಕ ವಿಕೋಪಕ್ಕೆ ಪರಿಹಾರ ಇತ್ಯಾದಿ ವಿಷಯಗಳಿಗೆ ಸಂಬಂಧಿಸಿದ ಸಾಮಾನ್ಯ ಸ್ಥಾಯಿ ಸಮಿತಿಯಲ್ಲಿ ಸದಸ್ಯರಾಗಿರುವುದು ಕಂಡುಬರುತ್ತದೆ. ಇತರ ನಗರಸಭೆಯ ಶೇ. ೩೪.೨೧ರಷ್ಟು ಚುನಾಯಿತ ಪ್ರತಿನಿಧಿಗಳು ಮತ್ತು ಪಟ್ಟಣ ಪಂಚಾಯಿತಿಯ ಶೇ. ೫೫ರಷ್ಟು ಚುನಾಯಿತ ಪ್ರತಿನಿಧಿಗಳು ಆರೋಗ್ಯ, ಯೋಜನಾ ಸಮಿತಿ ಹಣಕಾಸು ಸ್ಥಾಯಿ ಸಮಿತಿಯ ಇನ್ನಿತರ ಕೆಲಸಗಳೆಂದರೆ ಅಭಿವೃದ್ಧಿ ಕಾರ್ಯಗಳಿಗೆ ಹಣವನ್ನು ಒದಗಿಸುವುದು, ನಡೆಯುತ್ತಿರುವ ಕೆಲಸಗಳ ಉಸ್ತುವಾರಿ, ಸಣ್ಣ ಉಳಿತಾಯದ ಮೇಲಿರುವ ಕಾರ್ಯಕ್ರಮಗಳ ಸಮೀಕ್ಷೆ ಮಾಡುವುದು ಇತ್ಯಾದಿಗಳಲ್ಲಿ ಕಾರ್ಯನಿರ್ವಹಿಸುವುದು ತಿಳಿದುಬಂದಿದೆ. ಉಳಿದ ನಗರಸಭೆಯ ಶೇ. ೨೦ರಷ್ಟು ಚುನಾಯಿತ ಸದಸ್ಯರು ಮತ್ತು ಪಟ್ಟಣ ಪಂಚಾಯಿತಿಯ ಶೇ. ೨೦ರಷ್ಟು ಚುನಾಯಿತ ಸದಸ್ಯರು ಯಾವುದೇ ಸಮಿತಿಯಲ್ಲಿ ಕಾರ್ಯನಿರ್ವಹಿಸುತ್ತಿಲ್ಲ ಎಂಬ ಅಭಿಪ್ರಾಯವನ್ನು ತಿಳಿಸಿರುತ್ತಾರೆ. ಅಂದರೆ ಹಿಂದುಳಿದ ಕೂಡ್ಲಿಗಿ ಸ್ಥಳೀಯ ಸಂಸ್ಥೆ ಸದಸ್ಯರಿಗಿಂತ ಮುಂದುವರೆದ ನಗರಸಭೆ ಚುನಾಯಿತ ಸದಸ್ಯರು ಹೆಚ್ಚಿನ ಪ್ರಮಾಣದಲ್ಲಿ ಈ ಸ್ಥಾಯಿ ಸಮಿತಿಗಳಲ್ಲಿ ಕ್ರಿಯಾತ್ಮಕವಾಗಿ ಕಾರ್ಯನಿರ್ವಹಿಸುವುದು ಅಧ್ಯಯನಗಳಿಂದ ತಿಳಿದುಬಂದಿದೆ. ಅಂದರೆ ಸಾಮಾಜಿಕ ಸ್ಥಾಯಿ ಸಮಿತಿ, ನಗರ ಯೋಜನೆಯ ಸಮಿತಿ, ಶಿಕ್ಷಣ ಮತ್ತು ಆರೋಗ್ಯ ಸಮಿತಿ ಮೊದಲಾದ ಸ್ಥಾಯಿ ಸಮಿತಿಗಳಲ್ಲಿ ನಗರ ಮಟ್ಟದಲ್ಲಿರುವ ವಿವಿಧ ತೊಂದರೆಗಳ ಬಗ್ಗೆ ಚರ್ಚಿಸಲಾಗುತ್ತದೆ. ಆದುದರಿಂದ ವಿವಿಧ ಸ್ಥಾಯಿ ಸಮಿತಿಗಳಲ್ಲಿ ಹೆಚ್ಚಿನ ರೀತಿಯಲ್ಲಿ ಭಾಗವಹಿಸಿದಾಗ ನಗರ ಮಟ್ಟದಲ್ಲಿರುವ ತೊಂದರೆಗಳ ಬಗ್ಗೆ ಹೆಚ್ಚಿನ ಅರಿವು ಉಂಟಾಗುತ್ತದೆ. ಜೊತೆಗೆ ತಮ್ಮ ಚುನಾವಣಾ ಕ್ಷೇತ್ರದ ಅಭಿವೃದ್ಧಿಯ ಬಗ್ಗೆ ಕ್ರೀಯಾತ್ಮಕವಾಗಿ ಚರ್ಚಿಸಿದಾಗ ಮಾತ್ರ ಮುಂದುವರಿಯಲು ಸಾಧ್ಯ. ಒಟ್ಟಾರೆಯಾಗಿ, ಎರಡು ನಗರ ಸ್ಥಳೀಯ ಸಂಸ್ಥೆಗಳ ಚುನಾಯಿತ ಸದಸ್ಯರ ಚುನಾವಣೆ ಸಮಯದ ಆಯ್ಕೆ

ಪ್ರಕ್ರಿಯೆಯಲ್ಲಿ ಈಗಾಗಲೇ ಮಹಿಳಾ ಸಶಕ್ತತೆಯ ಚೌಕಟ್ಟಿನಲ್ಲಿ ಸಂಘಟಿತರಾದ ಹಾಗೂ ಸ್ವ ಸಹಾಯ ಗುಂಪುಗಳಲ್ಲಿ ಸದಸ್ಯರಾಗಿರುವ ಮಹಿಳೆಯರ ಬಗ್ಗೆ ಗಮನಹರಿಸಬೇಕಾದುದು ಮತ್ತೊಂದು ಸಕಾರಾತ್ಮಕವಾದ ಅಂಶ. ಈ ಮಹಿಳೆಯರು ಸಮುದಾಯಕ್ಕಾಗಿ ಸಕ್ರಿಯವಾಗಿ ಕೆಲಸ ಮಾಡಿದ ಅನುಭವವುಳ್ಳವರು. ಈಗಾಗಲೇ, ಒಂದು ಸಾಂಸ್ಥಿಕ ವ್ಯವಸ್ಥೆಯ ಒಳಹೊಕ್ಕು ಅರಿವಿರುವವರು. ಇಂತಹ ಹಿನ್ನೆಲೆಯ ಜೊತೆಗೆ ಸಾಮಾಜಿಕ ಕಳಕಳಿಯೂ ಇರುವ ಮಹಿಳೆಯರು ಗೆದ್ದು ಬಂದರೆ ಉತ್ತಮ ಆಡಳಿತ ಕೊಡಲು ಸಮರ್ಥರಾಗುತ್ತಾರೆ ಎಂದು ಹೇಳಬಹುದು.

**ಸಭಾ ನಡಾವಳಿಗೆ ನಿರ್ದಿಷ್ಟ ಕೊರಂ ಇಲ್ಲವೆಂದು ಸಭೆಯನ್ನು ಮುಂದೂಡಲಾಗಿದೆಯೇ**

| **ಸಭೆಯನ್ನು ಮುಂದೂಡಲಾಗಿರುವ ವಿವರ** | **ಹೊಸಪೇಟೆ** | | **ಕೂಡ್ಲಿಗಿ** | |
|---|---|---|---|---|
| ಹೌದು | ೩೫ | ೧೦೦.೦೦ | ೨೦ | ೧೦೦.೦೦ |
| ಇಲ್ಲ | ೦ | ೦.೦೦ | ೦ | ೦.೦೦ |
| **ಒಟ್ಟು** | ೩೫ | ೧೦೦ | ೨೦ | ೧೦೦ |

**ಮೂಲ: ಕ್ಷೇತ್ರ ಕಾರ್ಯದ ಮಾಹಿತಿ**

ಹೊಸಪೇಟೆಯ ನಗರಸಭೆಯ ಒಟ್ಟು ೩೫ ಸದಸ್ಯರಲ್ಲಿ ಶೇ. ೧೦೦ರಷ್ಟು ಸದಸ್ಯರು ಮತ್ತು ಕೂಡ್ಲಿಗಿ ಪಟ್ಟಣ ಪಂಚಾಯಿತಿಯ ಒಟ್ಟು ೨೦ ಚುನಾಯಿತ ಸದಸ್ಯರಲ್ಲಿ ಶೇ. ೧೦೦ರಷ್ಟು ಸದಸ್ಯರು ನಿರ್ದಿಷ್ಟ ಕೊರಂವಿಲ್ಲವೆಂದು ಸಭೆಯನ್ನು ಮುಂದೂಡಲಾಗಿದೆ ಎಂದು ತಿಳಿಸಿರುತ್ತಾರೆ. ಒಟ್ಟಾರೆಯಾಗಿ ಸಾಪೇಕ್ಷವಾಗಿ ಮುಂದುವರೆದ ಮತ್ತು ತೀರಾ ಹಿಂದುಳಿದ ಪಟ್ಟಣ ಪಂಚಾಯಿತಿ ಸದಸ್ಯರು ಈ ಸಭೆಯನ್ನು ಯಾವ ದಿನ ನಡೆಸಲಾಗುವುದು ಹಾಗೂ ಯಾವ ವಿಷಯಗಳನ್ನು ಚರ್ಚಿಸಲಾಗುತ್ತದೆ ಎನ್ನುವುದರ ಕಾರ್ಯಸೂಚಿಯನ್ನು ಮೊದಲೇ ಎಲ್ಲಾ ಸದಸ್ಯರಿಗೆ ಸುತ್ತೋಲೆಯನ್ನು ಕಳುಹಿಸುತ್ತಾರೆ ಎಂಬ ಅಂಶವನ್ನು ಹೇಳಿಕೊಂಡಿರುವುದು ಕಂಡುಬಂದಿದೆ. ಅಂದರೆ ಹಿಂದುಳಿದ ಪಟ್ಟಣ ಪಂಚಾಯಿತಿಯ ವಾಸ್ತವದಲ್ಲಿ ಸಮರ್ಥ ಸ್ವಸಹಾಯ ಸಂಘದ ಪುರುಷ ಮತ್ತು ಮಹಿಳೆಯರ ಆಯ್ಕೆಗೆ ಬಹಳಷ್ಟು ಅಡ್ಡಿಗಳಿವೆ. ತಿಳಿವಳಿಕೆಯಿರುವ, ಪ್ರಶ್ನಿಸುವ ಮನೋಭಾವದ, ಅವಲಂಬನೆಯಿಲ್ಲದೇ ಕೆಲಸ ಮಾಡುವವರಿಗೆ ಮುಖಂಡರು ಅವರ ಆಯ್ಕೆಯನ್ನು ಬಯಿಸುತ್ತಿಲ್ಲ. ಕಾರಣ ತಮ್ಮ ಅಧಿಕಾರ ಹಾಗೂ ಅವ್ಯವಹಾರಗಳನ್ನು ಪ್ರಶ್ನಿಸಬಹುದು ಎಂಬ ಭಯದ ಜೊತೆಗೆ ಅಭದ್ರತೆ. ಹೀಗಾಗಿ ಸಮರ್ಥ ಪುರುಷ ಮತ್ತು ಮಹಿಳೆಯರು ಆರಿಸಿಬರದಂತೆ ತಡೆಯಲು ಮತದಾರರಿಗೆ ಎಲ್ಲ ಆಮಿಷಗಳನ್ನೂ ಒಡ್ಡುವ ಎಲ್ಲಾ ಪ್ರಯತ್ನ ಬಲವಾಗಿ ನಡೆಯುವುದರಿಮದ ಹಿಂದುಳಿಯಿತು ಎನ್ನಬಹುದಾಗಿದೆ. ಈ ಹಿನ್ನೆಲೆಯಲ್ಲಿ ಸರಿಯಾದ ರೀತಿಯಲ್ಲಿ ಸಭೆಗಳಿಗೆ ಹಾಜರಾಗದೆ ತಮ್ಮ ಆಡಳಿತವನ್ನು ಶಿಕ್ಷಿತರ, ಧನಿಕರ ಕೈಯಲ್ಲಿ ಕೊಟ್ಟು ದೀರ್ಘಕಾಲದ ಅಭಿವೃದ್ಧಿಯ ದೃಷ್ಟಿಕೋನವನ್ನು ಬದಲಾಯಿಸಿಕೊಳ್ಳುತ್ತಿರುವುದು ಅಭಿವೃದ್ಧಿಗೆ ಮಾರಕ ಎನ್ನಲಾಗುತ್ತದೆ. ಅಂದರೆ, ಚುನಾವಣಾ ಪ್ರಕ್ರಿಯೆಗಳು ಅವ್ಯವಹಾರ ಹಾಗೂ ಹಣ ಚೆಲ್ಲುವಿಕೆಯಿಂದ ಹೊರತಾಗಿ, ಆಮಿಷಗಳಿಗೆ ಮಾರು ಹೋಗದೇ, ಸ್ವಚ್ಛವಾಗಿ ನಡೆದಲ್ಲಿ ಉತ್ತಮ ಸದಸ್ಯರು ಆಯ್ಕೆಯಾಗುತ್ತಾರೆ. ಇದರಿಂದ ಉತ್ತಮ ಆಡಳಿತ ಸಾಧ್ಯವಾಗಿ, ಒಳ್ಳೆಯ ಕೆಲಸ-ಕಾರ್ಯಗಳು ನಡೆದು ನಗರಾಭಿವೃದ್ಧಿ ಸಾಕಾರಗೊಳ್ಳುತ್ತದೆ ಎಂದು ಹೇಳಬಹುದಾಗಿದೆ.

**ಸಭೆಯ ನಡಾವಳಿಯ ಅಜೆಂಡಾವನ್ನು ಸೂಚನಾ ಫಲಕದಲ್ಲಿ ಹಾಕಲಾಗುತ್ತದೆ**

| **ಸಭೆಯ ನಡಾವಳಿಯ ಅಜೆಂಡಾದ ಕುರಿತು** | **ಹೊಸಪೇಟೆ** | | **ಕೂಡ್ಲಿಗಿ** | |
|---|---|---|---|---|
| ಹಾಕುತ್ತಾರೆ | ೨೯ | ೮೨.೮೫ | ೦೭ | ೨೦.೦೦ |
| ಹಾಕಲ್ಲ | ೬ | ೧೭.೧೪ | ೧೩ | ೮೦.೦೦ |
| **ಒಟ್ಟು** | ೩೫ | ೧೦೦ | ೨೦ | ೧೦೦ |

**ಮೂಲ: ಕ್ಷೇತ್ರ ಕಾರ್ಯದ ಮಾಹಿತಿ**

ಚುನಾಯಿತ ಸದಸ್ಯರನ್ನು ಸಂದರ್ಶಿಸಿದ ನಂತರ ಹೊಸಪೇಟೆ ಒಟ್ಟು ನಗರಸಭೆ ಶೇ. ೮೨.೮೫ರಷ್ಟು ಚುನಾಯಿತ ಸದಸ್ಯರು ಮತ್ತು ಕೂಡ್ಲಿಗಿ ಪಟ್ಟಣ ಪಂಚಾಯಿತಿಯ ಶೇ. ೨೦ರಷ್ಟು ಚುನಾಯಿತ ಸದಸ್ಯರು ಸಭೆಯ ನಡಾವಳಿಯ ಅಜೆಂಡಾವನ್ನು ಸೂಚನಾ ಫಲಕದಲ್ಲಿ ಹಾಕಲಾಗುತ್ತದೆ ಎಂದಿದ್ದಾರೆ. ಅಲ್ಲದೇ, ಹೊಸಪೇಟೆ ನಗರಸಭೆ ಚುನಾಯಿತ ಸದಸ್ಯರು ಶೇ. ೧೭.೧೪ರಷ್ಟು ಮತ್ತು ಕೂಡ್ಲಿಗಿ ಪಟ್ಟಣ ಪಂಚಾಯಿತಿ ಚುನಾಯಿತ ಸದಸ್ಯರು ಶೇ. ೮೦ರಷ್ಟು ಸಭೆಯ ನಡಾವಳಿಯಾದ ಸಭೆಯಲ್ಲಿ ನಡೆದ ಚರ್ಚೆಗಳು, ಅಭಿವೃದ್ಧಿ ಕಾರ್ಯಗಳ ಬಗ್ಗೆ ತೀರ್ಮಾನಗಳು ಯಾವುದೇ ಮಾಹಿತಿ ಸಾರ್ವಜನಿಕವಾಗಿ ಸೂಚನಾಫಲಕದಲ್ಲಿ ಹಾಕಲಾಗುವುದಿಲ್ಲ ಎಂದು ಹೇಳಿರುವುದು ಅಧ್ಯಯನಗಳಿಂದ ತಿಳಿದುಬಂದಿದೆ. ಒಟ್ಟಾರೆ ಸಾಪೇಕ್ಷವಾಗಿ ಮುಂದುವರಿದ ಹೊಸಪೇಟೆ ನಗರಸಭೆ ಸದಸ್ಯರಿಗಿಂತ ತೀರಾ ಹಿಂದುಳಿದ ಕೂಡ್ಲಿಗಿ ಪಟ್ಟಣ ಪಂಚಾಯಿತಿ ಚುನಾಯಿತ ಸದಸ್ಯರಲ್ಲಿ ಅರಿವು ಮತ್ತು ಸ್ಥಳೀಯ ಸಂಸ್ಥೆಗಳಲ್ಲಿ ಹೆಚ್ಚಿನ ರೀತಿಯಲ್ಲಿ ಭಾಗವಹಿಸದೆ ಇರುವುದೆಯಿರುವುದರಿಂದ ಸ್ಥಳೀಯ ರಾಜಕೀಯ ಇಚ್ಛಾಶಕ್ತಿಯಿಂದ ಹಿಂದುಳಿಯಿತು ಎನ್ನಬಹುದಾಗಿದೆ. ಹಿಂದುಳಿದ ಪ್ರದೇಶವು ಪ್ರಬಲ ರಾಜಕೀಯ ಇಚ್ಛಾಶಕ್ತಿಯ ಮೂಲಕ ಆರೋಗ್ಯ, ಶಿಕ್ಷಣ, ಮತ್ತು ಆಧುನಿಕ ಸೌಲಭ್ಯಗಳನ್ನು ಜನರ ಮನೆ ಬಾಗಿಲಿಗೆ ತಲುಪಿಸುವ ಹಿನ್ನೆಲೆಯಲ್ಲಿ ಅಭಿವೃದ್ಧಿ ನಗರವನ್ನಾಗಿ ಮಾಡುವ ಅಗತ್ಯವಿದೆ ಎಂದು ಹೇಳಬಹುದಾಗಿದೆ.

**ಸದಸ್ಯರು ಈ ಮೊದಲು ಸ್ಥಳೀಯ ಸಂಸ್ಥೆಗಳಲ್ಲಿ ಎಷ್ಟು ಬಾರಿ ಪ್ರತಿನಿಧಿಸಿದ್ದಾರೆ**

| **ಸ್ಥಳೀಯ ಸಂಸ್ಥೆಗಳಲ್ಲಿ ಪ್ರತಿನಿಧಿಸಿರುವುದರ ಕುರಿತು** | **ಹೊಸಪೇಟೆ** | | **ಕೂಡ್ಲಿಗಿ** | |
|---|---|---|---|---|
| ಮೊದಲ ಬಾರಿ | ೨೭ | ೭೭.೧೪ | ೧೬ | ೮೦.೦೦ |
| ಒಂದಕ್ಕಿಂತ ಹೆಚ್ಚು ಬಾರಿ | ೮ | ೨೨.೮೫ | ೪ | ೨೦.೦೦ |
| **ಒಟ್ಟು** | ೩೫ | ೧೦೦ | ೨೦ | ೧೦೦ |

**ಮೂಲ: ಕ್ಷೇತ್ರ ಕಾರ್ಯದ ಮಾಹಿತಿ**

ನಗರದ ಚುನಾಯಿತ ಸದಸ್ಯರುಗಳು ಸ್ಥಳೀಯ ಸಂಸ್ಥೆಗಳಿಗೆ ಎಷ್ಟು ಬಾರಿ ಪ್ರತಿನಿಧಿಸಿರುವುದರ ಶೇಕಡವಾರು ತೋರಿಸಲಾಗಿದೆ. ನಗರವಾರು ನೋಡಿದಾಗ ಹೊಸಪೇಟೆ ನಗರಸಭೆಯ ಒಟ್ಟು ೩೫ ಸದಸ್ಯರಲ್ಲಿ ಶೇ. ೭೭.೧೫ರಷ್ಟು ಚುನಾಯಿತ ಸದಸ್ಯರು ಮತ್ತು ಕೂಡ್ಲಿಗಿ ಪಟ್ಟಣ ಪಂಚಾಯಿತಿಯ ಒಟ್ಟು ೨೦ ಸದಸ್ಯರಲ್ಲಿ ಶೇ. ೮೦ರಷ್ಟು ಚುನಾಯಿತ ಸದಸ್ಯರಲ್ಲಿ ಮೊದಲ ಬಾರಿ ಎಂಬುದಾಗಿ. ಉಳಿದ ನಗರಸಭೆ ಶೇ. ೨೨.೮೫ರಷ್ಟು ಚುನಾಯಿತ ಸದಸ್ಯರು ಮತ್ತು ಪಟ್ಟಣ ಪಂಚಾಯಿತಿಯ

ಶೇ. ೨೦ರಷ್ಟು ಚುನಾಯಿತ ಸದಸ್ಯರು ಒಂದಕ್ಕಿಂತ ಹೆಚ್ಚು ಬಾರಿ ಸ್ಥಳೀಯ ಸಂಸ್ಥೆಗಳಿಗೆ ಆಯ್ಕೆಯಾಗಿರುವುದು ಅಧ್ಯಯನಗಳಿಂದ ತಿಳಿದುಬಂದಿದೆ. ಕೆಲವು ಆಡಳಿತ ನಿರ್ವಹಣೆಯ ಕೊರತೆಯಿಂದ ಬೇರೊಬ್ಬರ ನಿಯಂತ್ರಣದಲ್ಲಿದ್ದು ನಾಮಕವಸ್ತೆಯಾದ ಸೇವೆಯನ್ನು ಮಾಡುತ್ತಿರುವುದು ಕಂಡುಬಂದಿತ್ತು. ಹೆಚ್ಚು ಹಿಂದುಳಿದ ಕೂಡ್ಲಿಗಿ ಪಟ್ಟಣ ಪಂಚಾಯಿತಿ ಸದಸ್ಯರಿಗಿಂತ ಮುಂದುವರಿದ ಹೊಸಪೇಟೆ ನಗರಸಭೆ ಸದಸ್ಯರು ಹೆಚ್ಚು ಪ್ರಮಾಣದಲ್ಲಿ ಮೊದಲ ಬಾರಿ ಆಯ್ಕೆಯಾಗಿದ್ದು, ಆದರೂ ಹೊಸಪೇಟೆಯ ಸದಸ್ಯರು ಅಕ್ಷಸ್ಥರು, ರಾಜಕೀಯ ಅನುಭವ ಇರುವಂತಹವರು, ಆಡಳಿತ ನಿರ್ವಹಣೆಯನ್ನು ಸಮರ್ಥವಾಗಿ ನಡೆಸಿಕೊಂಡು ಹೋಗುತ್ತಾರೆ. ಆದರೆ ಕೂಡ್ಲಿಗಿ ಸದಸ್ಯರಲ್ಲಿ ವ್ಯವಸಾಯ ವರ್ಗ ಹೆಚ್ಚಾಗಿದ್ದು, ಅನಿವಾರ್ಯದಿಂದ ಮೀಸಲಾತಿಯ ಮೇಲೆ ಆಯ್ಕೆಯಾಗಿದ್ದು, ಅಧಿಕಾರಿಗಳು ಇವರಿಗೆ ಸರಿಯಾದ ಮಾಹಿತಿಯನ್ನು ನೀಡದ ಹಿನ್ನೆಲೆಯಲ್ಲಿ ಆಡಳಿತ ನಿರ್ವಹಣೆ ಮತ್ತು ಸ್ಥಳೀಯ ಮೂಲಭೂತ ಸೌಲಭ್ಯಗಳನ್ನು ಒದಗಿಸುವಲ್ಲಿ ವಿಫಲಗೊಂಡಿದ್ದು ಇಂತಹ ಹಲವಾರು ಸಮಸ್ಯೆಗಳಿಗೆ ಪರಿಹಾರ ಇಲ್ಲದೆ ಹಿಂದುಳಿಯಿತು ಎನ್ನಬಹುದಾಗಿದೆ. ಒಟ್ಟಾರೆಯಾಗಿ ಹಿಂದುಳಿದ ಪಟ್ಟಣ ಪಂಚಾಯಿತಿಯು ಒಂದು ಬಾರಿ ಮತ್ತು ಒಂದಕ್ಕಿಂತ ಹೆಚ್ಚಾಗಿ ಪ್ರತಿನಿಧಿಸಿದ್ದರೂ ಅವರಲ್ಲಿ ಆಡಳಿತ ನಿರ್ವಹಣೆ ಮತ್ತು ರಾಜಕೀಯ ಇಚ್ಛಾಶಕ್ತಿ ಕೊರತೆಯಿಂದ ಸ್ಥಳೀಯ ರಾಜಕೀಯದಲ್ಲಿ ಭಾಗವಹಿಸದೆಯಿರುವುದು ಹಾಗಾಗಿ ನಗರ ಪ್ರದೇಶಗಳಲ್ಲಿ ಉತ್ತಮ ಆಡಳಿತ ನೀಡುವ ದೃಷ್ಟಿಯಿಂದ ಆಡಳಿತದಲ್ಲಿ ಜನರ ಪ್ರಾತಿನಿಧ್ಯವನ್ನು ಇನ್ನಷ್ಟು ಶಕ್ತಿಶಾಲಿಗೊಳಿಸುವುದು ಅವಶ್ಯವಿದೆ ಎಂದು ಹೇಳಲಾಗಿದೆ.

**ಚುನಾಯಿತ ಸದಸ್ಯರ ಜವಾಬ್ದಾರಿಗಳು**

| ಸದಸ್ಯರ ಜವಾಬ್ದಾರಿಗಳು | ಹೊಸಪೇಟೆ | | ಕೂಡ್ಲಿಗಿ | |
|---|---|---|---|---|
| ಸ್ಥಳೀಯ ಸಮಸ್ಯೆಗಳನ್ನು ಬಗೆಹರಿಸುವುದು | ೧೫ | ೪೨.೮೬ | ೨ | ೧೦.೦೦ |
| ವಾರ್ಡ್‌ನ್ ಅಭಿವೃದ್ಧಿ ಮಾಡುವುದು. | ೧೩ | ೩೭.೧೪ | ೬ | ೩೦.೦೦ |
| ಮೂಲಭೂತ ಸೌಲಭ್ಯಗಳನ್ನು ಒದಗಿಸುವುದು | ೫ | ೧೪.೨೯ | ೯ | ೪೫.೦೦ |
| ಯಾವುದೇ ಉತ್ತರವಿಲ್ಲ | ೨ | ೫.೭೧ | ೩ | ೧೫.೦೦ |
| ಒಟ್ಟು | ೩೫ | ೧೦೦ | ೨೦ | ೧೦೦ |

**ಮೂಲ: ಕ್ಷೇತ್ರ ಕಾರ್ಯದ ಮಾಹಿತಿ**

ಹೊಸಪೇಟೆ ನಗರಸಭೆಯ ಒಟ್ಟು ೩೫ ಸದಸ್ಯರಲ್ಲಿ ಶೇ. ೪೨.೮೬ ಚುನಾಯಿತ ಸದಸ್ಯರು ಮತ್ತು ಕೂಡ್ಲಿಗಿ ಪಟ್ಟಣ ಪಂಚಾಯಿತಿಯಲ್ಲಿನ ಒಟ್ಟು ೨೦ ಸದಸ್ಯರಲ್ಲಿ ಶೇ. ೧೦ರಷ್ಟು ಚುನಾಯಿತ ಸದಸ್ಯರ ಪ್ರಕಾರ ನಗರದ ಸ್ಥಳೀಯ ಸಮಸ್ಯೆಗಳನ್ನು ಬಗೆಹರಿಸುವುದಕ್ಕೆ ಪ್ರಾಮುಖ್ಯತೆಯನ್ನು ಕೊಡುತ್ತಾರೆ. ಅದೇ ರೀತಿಯಲ್ಲಿ ನಗರಸಭೆಯ ಶೇ. ೩೭.೧೪ರಷ್ಟು ಚುನಾಯಿತ ಸದಸ್ಯರು ಮತ್ತು ಪಟ್ಟಣ ಪಂಚಾಯಿತಿಯ ಶೇ. ೩೦ರಷ್ಟು ಚುನಾಯಿತ ಸದಸ್ಯರು ಹೇಳಿರುವಂತೆ ವಾರ್ಡಿನ ಅಭಿವೃದ್ಧಿಗೆ ಸಂಬಂಧಪಟ್ಟ ರಸ್ತೆಗಳ ನಿರ್ಮಾಣ, ಉತ್ತಮ ಕುಡಿಯುವ ನೀರಿನ ಪೊರೈಕೆ, ಆರೋಗ್ಯ ಸೇವೆ, ಶಿಕ್ಷಣಕ್ಕೆ ಸಂಬಂಧಿಸಿದಂತೆ ವಿವಿಧ ಸೌವಲತ್ತು ಮೊದಲಾದವುಗಳ ಆದ್ಯತೆಯ ಇರುವ

ಕೆಲಸಗಳೆಂದು ತಿಳಿಸಿದರು. ಇತರ ಹೊಸಪೇಟೆ ನಗರಸಭೆಯ ಶೇ. ೧೪.೨೯ರಷ್ಟು ಚುನಾಯಿತ ಸದಸ್ಯರು ಮತ್ತು ಕೂಡ್ಲಿಗಿಯ ಪಟ್ಟಣ ಪಂಚಾಯಿತಿಯ ಶೇ. ೪೫ರಷ್ಟು ಚುನಾಯಿತ ಸದಸ್ಯರು ಪ್ರಕಾರ ಮೂಲಭೂತ ಸೌಲಭ್ಯಗಳಾದ ಕುಡಿಯುವ ನೀರಿನ ಸೌಲಭ್ಯ, ಬೀದಿ ದೀಪ, ಚರಂಡಿ ವ್ಯವಸ್ಥೆ ಮುಂತಾದವುಗಳನ್ನು ಒದಿಗಸುವುದು ಜವಾಬ್ದಾರಿಯಾಗಿದೆ ಎಂದು ತಿಳಿಸಿದರು. ಉಳಿದ ಪಟ್ಟಣ ಪಂಚಾಯಿತಿಯ ಶೇ. ೧೫ರಷ್ಟು ಚುನಾಯಿತ ಸದಸ್ಯರು ಮತ್ತು ನಗರಸಭೆಯ ಶೇ. ೫.೭೧ರಷ್ಟು ಚುನಾಯಿತ ಸದಸ್ಯರು ತಮ್ಮ ಜವಾಬ್ದಾರಿಯ ಬಗ್ಗೆ ಯಾವ ಅಭಿಪ್ರಾಯವನ್ನು ನೀಡದಿರುವುದು ಕಂಡುಬಂದಿತ್ತು. ಇದರಿಂದ ನಮಗೆ ತಿಳಿದುಬರುವ ಸಂಗತಿಯೆಂದರೆ ಸಾಪೇಕ್ಷ ಮುಂದುವರಿದ ಹೊಸಪೇಟೆ ನಗರಸಭೆಯ ಸದಸ್ಯರಿಗಿಂತ ತೀರಾ ಹಿಂದುಳಿದ ಪಟ್ಟಣ ಪಂಚಾಯಿತಿಯ ಸದಸ್ಯರು ತಮ್ಮ ಜವಾಬ್ದಾರಿಗಳನ್ನು ನಿರ್ವಹಿಸುವುದರ ಬಗ್ಗೆ ಹೆಚ್ಚಿನ ಅರಿವು ಇಲ್ಲದಿರುವುದರ ಜೊತೆಗೆ ಅಭಿವೃದ್ಧಿಯ ಮೂಲ ಗುರಿ ಯಾವುದು ಎಂಬುದು ಅವರಿಗೆ ಸರಿಯಾದ ತಿಳಿವಳಿಕೆ ಇಲ್ಲದೇ ಕೆಲವೇ ಕೆಲವು ಕನಿಷ್ಟ ಮೂಲಭೂತ ಸೌಲಭ್ಯಗಳನ್ನು ಮಾತ್ರ ಒದಗಿಸುವುದಾಗಿರುತ್ತದೆ. ನಗರಸಭೆಯ ಹೆಚ್ಚಿನ ಚುನಾಯಿತ ಸದಸ್ಯರು ಸ್ಥಳೀಯ ಸಮಸ್ಯೆಗಳು, ಅಭಿವೃದ್ಧಿಯನ್ನು ನಿರ್ವಹಿಸುವುದರಲ್ಲಿ ಉತ್ತಮವಾದ ತರಬೇತುದಾರರಾಗಿದ್ದಾರೆ. ಆದರೆ ಕೂಡ್ಲಿಗಿ ಪಟ್ಟಣ ಪಂಚಾಯಿತಿಯಲ್ಲಿ ಬೆರಳೆಣಿಕೆಯಷ್ಟು ಚುನಾಯಿತ ಸದಸ್ಯರು ಸಮಸ್ಯೆಗಳಿಗೆ ಸ್ಪಂದಿಸುತ್ತಾ ಹೆಚ್ಚಿನ ಸಂಖ್ಯೆಯಲ್ಲಿ ಭಾಗವಹಿಸದೆಯಿರುವುದರಿಂದ ಹಿಂದುಳಿಯಿತು ಎನ್ನಬಹುದಾಗಿದೆ. ಹಿಂದುಳಿದ ಸ್ಥಳೀಯ ಸಂಸ್ಥೆಯ ಚುನಾಯಿತ ಸದಸ್ಯರಿಗೆ ಜನರನ್ನು ಉತ್ತಮ ಜೀವನಮಟ್ಟವನ್ನು ನೀಡಲು ಯಾವ ರೀತಿಯ ಸೇವೆ ಬೇಕು ಅದನ್ನು ಕೊಡಿಸುವ ಅಗತ್ಯವಿದೆ ಎಂದು ಮನಗಾಣಲಾಗಿದೆ.

**ಫಲಾನುಭವಿಗಳ ಆಯ್ಕೆ ವಿಧಾನ**

| ಆಯ್ಕೆಯ ವಿಧಾನ | ಹೊಸಪೇಟೆ | | ಕೂಡ್ಲಿಗಿ | |
|---|---|---|---|---|
| ಗೊತ್ತಿದೆ. | ೨೬ | ೭೪.೨೮ | ೧೩ | ೬೫.೦೦ |
| ಗೊತ್ತಿಲ್ಲ | ೯ | ೨೫.೭೨ | ೭ | ೩೫.೦೦ |
| ಒಟ್ಟು | ೩೫ | ೧೦೦ | ೨೦ | ೧೦೦ |

**ಮೂಲ: ಕ್ಷೇತ್ರ ಕಾರ್ಯದ ಮಾಹಿತಿ**

ನಗರ ಪ್ರದೇಶಗಳಲ್ಲಿ ವಾಸ ಮಾಡುವ ಜನರು ಇವತ್ತು ವಸತಿ ರಹಿತರಾಗಿದ್ದುಕೊಂಡು ಜೀವನ ಸಾಗಿಸುತ್ತಿದ್ದಾರೆ. ಇದಕ್ಕಾಗಿ ಸರ್ಕಾರ ಅವರಿಗಾಗಿ ಸಾಕಷ್ಟು ರೀತಿಯ ಪ್ರಯತ್ನಗಳನ್ನು ಅಳವಡಿಸಿದೆ. ಇದರ ಬಗ್ಗೆ ಹೆಚ್ಚಿನ ಜನಕ್ಕೆ ಸರಿಯಾದ ಮಾಹಿತಿಯಿಲ್ಲದೆ ಫಲಾನುಭವಿಗಳಿಗೆ ಅರ್ಹತೆ ಇದ್ದರೂ ಇವತ್ತು ಸಮರ್ಪಕವಾದ ವಸತಿಯನ್ನು ಕಲ್ಪಿಸಿಕೊಡಲು ಆಗುತ್ತಿಲ್ಲ. ಹಾಗಾಗಿ ಎರಡು ನಗರಗಳಲ್ಲಿ ವಸತಿ ಫಲಾನುಭವಿಗಳ ಆಯ್ಕೆ ವಿಧಾನದ ಪ್ರಮಾಣವನ್ನು ನೀಡಲಾಗಿದೆ. ಹೊಸಪೇಟೆ ನಗರಸಭೆಯ ಒಟ್ಟು ೩೫ ಸದಸ್ಯರಲ್ಲಿ ಶೇ. ೭೪.೨೮ರಷ್ಟು ಚುನಾಯಿತ ಸದಸ್ಯರು ಮತ್ತು ಕೂಡ್ಲಿಗಿ ಪಟ್ಟಣ ಪಂಚಾಯಿತಿ ಒಟ್ಟು ೨೦ ಸದಸ್ಯರಲ್ಲಿ ಶೇ. ೬೫ರಷ್ಟು ಚುನಾಯಿತ ಸದಸ್ಯರು ಫಲಾನುಭವಿಗಳ ಆಯ್ಕೆಯ ವಿಧಾನ ಸೇವಾ ಸೌಲಭ್ಯಗಳ ಬಗ್ಗೆ ಗೊತ್ತಿರುವುದು ಎಂದು ತಿಳಿದುಬಂದಿದೆ. ಉಳಿದ

ನಗರಸಭೆಯ ಶೇ. ೨೫.೭೨ರಷ್ಟು ಚುನಾಯಿತ ಸದಸ್ಯರು ಮತ್ತು ಪಟ್ಟಣ ಪಂಚಾಯಿತಿಯ ಶೇ. ೩೫ರಷ್ಟು ಚುನಾಯಿತ ಸದಸ್ಯರು ಫಲಾನುಭವಿಗಳ ಆಯ್ಕೆ ವಿಧಾನ ಗೊತ್ತಿಲ್ಲ ಎಂದಿರುವವರು. ಇದರಿಂದ ಸರ್ಕಾರವು ನೀಡುವಂತಹ ಸೇವಾ ಸೌಲಭ್ಯಗಳ ಬಗ್ಗೆ ತಕ್ಕಮಟ್ಟಿನ ಪ್ರಮಾಣದಲ್ಲಿ ತಿಳಿವಳಿಕೆಯನ್ನು ಹೊಂದಿವುದು ತಿಳಿದುಬಂದಿದೆ. ಸಾಪೇಕ್ಷವಾಗಿ ಮುಂದುವರಿದ ಹೊಸಪೇಟೆ ನಗರಸಭೆ ಸದಸ್ಯರಿಗಿಂತ ಹಿಂದುಳಿದ ಕೂಡ್ಲಿಗಿ ಪಟ್ಟಣ ಪಂಚಾಯಿತಿಯ ಸದಸ್ಯರು ಫಲಾನುಭವಿಗಳನ್ನು ಆಯ್ಕೆ ಮಾಡಿ ಸಮರ್ಪಕವಾದ ಕನಿಷ್ಠ ಮೂಲಭೂತಸೌಲಭ್ಯಗಳನ್ನು ಒದಗಿಸುವುದರಲ್ಲಿ ವಿಫಲವಾಗಿರುವುದರಿಂದ ಹಿಂದುಳಿದಿದೆ ಎನ್ನಬಹುದಾಗಿದೆ. ನಗರಾಡಳಿತವನ್ನು ಯಶಸ್ವಿಯಾಗಿ ನಿರ್ವಹಿಸುವುದಕ್ಕೆ ಅವರಿಗೆ ಸಂಪನ್ಮೂಲ ಮತ್ತು ರಾಜಕೀಯ ಅಧಿಕಾರವೂ ಕಾರಣವಾಗಿದೆ. ಇದರ ಪರಿಣಾಮ ಮೂಲ ಅಗತ್ಯವಾದ ವಸತಿ ಸಮಸ್ಯೆ ಅವಗಣೆನೆಗೆ ತುತ್ತಾಗಿವೆ. ಆದ್ದರಿಂದ ನಗರಗಳು ಮಾನವ ಸಂಪನ್ಮೂಲ ಅಭಿವೃದ್ಧಿಯ ಕೇಂದ್ರಗಳಾಗುವ ಮುನ್ನೋಟ ಇಟ್ಟುಕೊಳ್ಳಬೇಕೇ ಹೊರತು ಅವು ಕೆಲವೇ ಕೆಲವರ ಸಂಪತ್ತಿನ ಕೋಶಗಳಂತೆಯಾಗಬಾರದು. ಇದರಿಂದ ನಗರ ಸ್ಥಳೀಯ ಸಂಸ್ಥೆಗಳಲ್ಲಿ ವ್ಯವಸ್ಥಿತ ಯೋಜನೆ ಫಲಾನುಭವಿಗಳನ್ನೂ ಒಳಗೊಂಡು, ಅವರ ಸಮಸ್ಯೆ ಮತ್ತು ಆತಂಕವನ್ನೂ ಗಮನದಲ್ಲಿಟ್ಟುಕೊಂಡು ರೂಪಗೊಳ್ಳುವ ಅಗತ್ಯವಿದೆ ಎಂದು ತಿಳಿಯಲಾಗಿದೆ.

**ಅಧಿಕಾರಿಗಳು ಸದಸ್ಯರಿಗೆ ಆಡಳಿತಕ್ಕೆ ಸಂಬಂಧಿಸಿದ ವಿಷಯಗಳನ್ನು ತಿಳಿಸುತ್ತಾರೆ**

| **ಅಧಿಕಾರಿಗಳು ಸದಸ್ಯರಿಗೆ ಆಡಳಿತಕ್ಕೆ ಸಂಬಂಧಿಸಿದಂತೆ** | **ಹೊಸಪೇಟೆ** | | **ಕೂಡ್ಲಿಗಿ** | |
|---|---|---|---|---|
| ತಿಳಿಸುತ್ತಾರೆ | ೨೯ | ೮೨.೮೫ | ೯ | ೪೫.೦೦ |
| ತಿಳಿಸುವುದಿಲ್ಲ | ೬ | ೧೭.೧೪ | ೧೧ | ೬೫.೦೦ |
| **ಒಟ್ಟು** | ೩೫ | ೧೦೦ | ೨೦ | ೧೦೦ |

**ಮೂಲ: ಕ್ಷೇತ್ರ ಕಾರ್ಯದ ಮಾಹಿತಿ**

ನಗರ ಆಡಳಿತದ ಸರ್ಕಾರಿ ಅಧಿಕಾರಿಗಳು ಚುನಾಯಿತ ಸದಸ್ಯರಿಗೆ ಆಡಳಿತಕ್ಕೆ ಸಂಬಂಧಿಸಿದ ವಿಷಯ ತಿರ್ಮಾನ, ನಡಾವಳಿ, ಸಭೆಗಳು, ಚರ್ಚೆ ನಂತರ ಬೆಳವಣಿಗೆ, ತುರ್ತು ಸಭೆ ಇತ್ಯಾದಿಗಳನ್ನು ತಿಳಿಸಬೇಕು. ಆದರೆ ಅಧ್ಯಯನದ ಮಾಹಿತಿಯಿಂದ ಹೊಸಪೇಟೆ ನಗರಸಭೆಯ ಶೇ. ೮೨.೮೫ ಮತ್ತು ಕೂಡ್ಲಗಿ ಪಟ್ಟಣ ಪಂಚಾಯಿತಿಯ ಶೇ. ೪೫ರಷ್ಟು ಚುನಾಯಿತ ಸದಸ್ಯರು ಆಡಳಿತಕ್ಕೆ ಸಂಬಂಧಿಸಿದ ವಿಷಯಗಳನ್ನು ತಿಳಿಸುತ್ತಾರೆ ಎಂದು ಹೇಳಿಕೊಂಡಿರುತ್ತಾರೆ. ಉಳಿದ ನಗರಸಭೆಯ ಶೇ. ೧೭.೧೪ರಷ್ಟು ಚುನಾಯಿತ ಸದಸ್ಯರು ಮತ್ತು ಪಟ್ಟಣ ಪಂಚಾಯಿತಿಯ ಶೇ. ೬೫ರಷ್ಟು ಚುನಾಯಿತ ಸದಸ್ಯರು ಕೆಲವು ವಿಷಯಗಳನ್ನು ತಿಳಿಸುವುದಿಲ್ಲ ಎಂದಿರುತ್ತಾರೆ. ಒಟ್ಟಾರೆಯಾಗಿ ಈ ವಿಶ್ಲೇಷಣೆಯಿಂದ ತಿಳಿದುಬರುವ ಅಂಶವೆಂದರೆ, ತೀರಾ ಹಿಂದುಳಿದ ಪಟ್ಟಣ ಪಂಚಾಯಿತಿ ಚುನಾಯಿತ ಸದಸ್ಯರಿಗಿಂತ ಸಾಪೇಕ್ಷವಾಗಿ ಮುಂದುವರಿದ ಹೊಸಪೇಟೆ ನಗರಸಭೆ ಚುನಾಯಿತ ಸದಸ್ಯರು ಅಧಿಕಾರಿಗಳ ಜೊತೆಗೆ ಒಳ್ಳೆ ಸಂಬಂಧವನ್ನು ಹೊಂದಿ ಹಲವಾರು ವಿಷಯ, ಚರ್ಚೆಗಳಲ್ಲಿ ಭಾಗವಹಿಸುತ್ತಾ ತಮ್ಮ ವಾರ್ಡಿನ ಅಭಿವೃದ್ಧಿಗಾಗಿ ಶ್ರಮವಹಿಸುತ್ತಾರೆ ಎಂದು ತಿಳಿದುಬಂದಿದೆ.

ಅದರಂತೆ ಕೂಡ್ಲಿಗಿಯ ಪಟ್ಟಣ ಪಂಚಾಯಿತಿಯ ಸದಸ್ಯರು ಅನಿವಾರ್ಯತೆಯಿಂದ ಚುನಾಯಿತರಾಗಿದ್ದು, ವ್ಯವಸಾಯದ ಮೇಲೆ ಅವಲಂಬಿತರಾಗಿದ್ದು, ಹಾಗೂ ಅನಕ್ಷರಸ್ಥರಾಗಿರುವ ಕಾರಣದಿಂದಲೋ ಅಧಿಕಾರಿಗಳು ಅವರನ್ನು ತಿರಸ್ಕರಿಸುತ್ತಾ ಯಾವುದೇ ಆಡಳಿತ ವಿಷಯಗಳನ್ನು ಹೆಚ್ಚಿನ ಸದಸ್ಯರಿಗೆ ತಿಳಿಸದಿರುವುದು ಕಂಡುಬಂದಿದೆ. ಇದರಿಂದ ಪಟ್ಟಣ ಪಂಚಾಯಿತಿಯ ಚುನಾಯಿತ ಸದಸ್ಯರು ಮತ್ತು ಅಧಿಕಾರಿಗಳ ನಡುವಿನ ಅನ್ಯೋನ್ಯ ಸಂಬಂಧದ ಕೊರತೆ ಹಿಂದುಳಿಯಲಿಕ್ಕೆ ಕಾರಣವಾಗಿದೆ ಎನ್ನಬಹುದು. ಜನರ ಸಹಭಾಗಿತ್ವ, ಸ್ಥಳೀಯ ಅಧಿಕಾರಿಗಳ ಮತ್ತು ಚುನಾಯಿತ ಸದಸ್ಯರ ನಡುವಿನ ಉತ್ತಮ ಸಂಬಂಧವಿಲ್ಲದೆ ಅಲ್ಲಿಯವರಿಗೆ ಸ್ಥಳೀಯ ಸಂಸ್ಥೆಗಳು ದುರ್ಬಲವಾಗಿರುತ್ತವೆ ಹಾಗಾಗಿ ಅಧಿಕಾರಿಗಳು ಮತ್ತು ಚುನಾಯಿತ ಸದಸ್ಯರ ಮಧ್ಯೆ ಅನ್ಯೋನ್ಯ ಸಂಬಂಧವನ್ನು ಬೆಳಸವಂತಹ ಕಾರ್ಯಕ್ರಮಗಳು ಆಗುವ ಅವಶ್ಯಕತೆಯಿದೆ ಎಂದು ಹೇಳಲಾಗಿದೆ.

**ಚುನಾಯಿತ ಸದಸ್ಯರು ಮತ್ತು ಅಧಿಕಾರಿಗಳ ನಡುವಿನ ಸಂಬಂಧ**

| **ಪ್ರತಿನಿಧಿಗಳೊಂದಿಗೆ ಅಧಿಕಾರಿಗಳ ಸಂಬಂಧ** | **ಹೊಸಪೇಟೆ** | | **ಕೂಡ್ಲಿಗಿ** | |
|---|---|---|---|---|
| ಉತ್ತಮವಾಗಿದೆ | ೩೨ | ೯೧.೪೩ | ೪ | ೨೦.೦೦ |
| ಉತ್ತಮವಾಗಿಲ್ಲ | ೩ | ೮.೫೭ | ೧೬ | ೮೦.೦೦ |
| **ಒಟ್ಟು** | ೩೫ | ೧೦೦ | ೨೦ | ೧೦೦ |

**ಮೂಲ: ಕ್ಷೇತ್ರ ಕಾರ್ಯದ ಮಾಹಿತಿ**

ನಗರ ಪ್ರದೇಶದಲ್ಲಿ ಮೇಲಿನ ಅಂಶವನ್ನು ಗಣನೆಗೆ ತೆಗೆದುಕೊಂಡಾಗ ಎರಡು ನಗರ ಸ್ಥಳೀಯ ಸಂಸ್ಥೆಗಳ ಚುನಾಯಿತ ಸದಸ್ಯರು ಮತ್ತು ಅಧಿಕಾರಿಗಳ ನಡುವಿನ ಸಂಬಂಧವನ್ನು ನೋಡಿದಾಗ ಹೆಚ್ಚು ವಿರುದ್ಧವಾಗಿರುವುದು ಕಂಡುಬರುತ್ತದೆ. ಅದೇ ರೀತಿ ಹೊಸಪೇಟೆ ನಗರಸಭೆಯ ಶೇ. ೯೧.೪೩ರಷ್ಟು ಸದಸ್ಯರು ಮತ್ತು ಕೂಡ್ಲಿಗಿ ಪಟ್ಟಣ ಪಂಚಾಯಿತಿಯ ಶೇ. ೨೦ರಷ್ಟು ಚುನಾಯಿತ ಸದಸ್ಯರು ಅಧಿಕಾರಿಗಳು ಮತ್ತು ನಮ್ಮ ನಡುವಿನ ಸಂಬಂಧಗಳು ಉತ್ತಮವಾಗಿದೆ ಎಂದು ಹೇಳಿಕೊಂಡರು. ಉಳಿದ ನಗರಸಭೆಯ ಶೇ. ೮.೫೭ರಷ್ಟು ಚುನಾಯಿತ ಸದಸ್ಯರು ಮತ್ತು ಪಟ್ಟಣ ಪಂಚಾಯಿತಿಯ ಶೇ. ೮೦ರಷ್ಟು ಚುನಾಯಿತ ಸದಸ್ಯರು ನಮ್ಮ ನಡುವಿನ ಸಂಬಂಧಗಳು ಉತ್ತಮವಾಗಿರುವುದಿಲ್ಲ ಎಂದು ಹೇಳಿಕೊಂಡಿರುವುದು ಅಧ್ಯಯಗಳಿಂದ ತಿಳಿದುಬಂದಿದೆ. ಒಟ್ಟಾರೆಯಾಗಿ ಸಾಪೇಕ್ಷವಾಗಿ ಮುಂದುವರಿದ ಹೊಸಪೇಟೆ ನಗರಸಭೆ ಜನಪ್ರತಿನಿಧಿಗಳು ತೀರಾ ಹಿಂದುಳಿದ ಪಟ್ಟಣ ಪಂಚಾಯಿತಿ ಸದಸ್ಯರಿಗಿಂತ ಅಧಿಕಾರಿಗಳ ಜೊತೆಗೆ ಉತ್ತಮ ಸಂಬಂಧವನ್ನು ಹೊಂದಿರುವುದು ಅಧ್ಯಯದಿಂದ ಗೊತ್ತಾಗುತ್ತದೆ. ಸ್ಥಳೀಯ ಮಟ್ಟದ ಚುನಾಯಿತ ಸದಸ್ಯರು ಅಧಿಕಾರಿಗಳ ಜೊತೆಗೆ ಉತ್ತಮ ಸಂಬಂಧವನ್ನು ಹೊಂದಿದರೆ ವಾರ್ಡಿನ ಸದಸ್ಯರು ಸ್ಥಳೀಯ ಸಂಸ್ಥೆಯಲ್ಲಿ ಭಾಗವಹಿಸಿ ಜನರ ಸಮಸ್ಯೆಗಳನ್ನು ಆದಷ್ಟೂ ಬೇಗ ಪರಿಹಾರಿಸಬಹುದೆಂದು ತಿಳಿಯಲಾಗಿದೆ. ಆದರೆ ಕೂಡ್ಲಿಗಿ ಪಟ್ಟಣ ಪಂಚಾಯಿತಿಯ ಸದಸ್ಯರಲ್ಲಿ ಅಧಿಕಾರಿ ಮತ್ತು ಚುನಾಯಿತ ಸದಸ್ಯರ ನಡುವಿನ ಉತ್ತಮ ಸಂಬಂಧದ ಪ್ರಮಾಣ ಕೆಳಮಟ್ಟದಲ್ಲಿಯಿರುವುದರಿಂದ ಅಭಿವೃದ್ಧಿ ಸಾಧಿಸದೆ ಹಿಂದುಳಿಯಲಿಕ್ಕೆ

ಕಾರಣವಾಗಿದೆ ಎನ್ನಬಹುದಾಗಿದೆ. ತಳಮಟ್ಟದ ಆಡಳಿತದ ಘಟಕಗಳಾಗಿ ಸ್ಥಳೀಯ ಸಂಸ್ಥೆಗಳನ್ನು ಬಲಗೊಳಿಸಲಿಕ್ಕಾಗಿ ಅಧಿಕಾರಿ ಮತ್ತು ಚುನಾಯಿತ ಸದಸ್ಯರ ನಡುವೆ ಬಾಂಧವ್ಯಗಳನ್ನು ಉತ್ತಮಪಡಿಸುವ ಅಗತ್ಯವಿದೆ ಎಂದು ತಿಳಿಯಲಾಗಿದೆ.

**೬.೭. ನಗರವಾರು ಸಂದರ್ಶನ ಮಾಡಿದ ಚುನಾಯಿತ ಪ್ರತಿನಿಧಿಗಳ ಸಾಮಾನ್ಯಸಭೆ/ಸಮಿತಿಯ ಬಗ್ಗೆ ಅಭಿಪ್ರಾಯಗಳು**

**ನಿಮ್ಮ ನಗರಸಭೆ/ಪಟ್ಟಣ ಪಂಚಾಯಿತಿಯಲ್ಲಿ ಸಾಮಾನ್ಯಸಭೆ ನಡೆಸಲು ಪ್ರತ್ಯೇಕ ಸಭಾಂಗಣ ಹಾಗೂ ಪೀಠೋಪಕರಣ ಸೌಲಭ್ಯ ಕುರಿತು**

| ಚುನಾಯಿತ ಪ್ರತಿನಿಧಿಗಳ ಸಾಮಾನ್ಯಸಭೆ/ ಸಮಿತಿಯ ಬಗ್ಗೆ ಅಭಿಪ್ರಾಯಗಳು | ಹೊಸಪೇಟೆ ನಗರ ಸಭೆ | | ಕೂಡ್ಲಿಗಿ ಪಟ್ಟಣಪಂಚಾಯಿತಿ | |
|---|---|---|---|---|
| | ಸಂಖ್ಯೆಗಳು | ಶೇಕಡವಾರು | ಸಂಖ್ಯೆಗಳು | ಶೇಕಡವಾರು |
| ನಿಮ್ಮ ನಗರ ಸಭೆ/ಪಟ್ಟಣ ಪಂಚಾಯಿತಿಯಲ್ಲಿ ಸಾಮಾನ್ಯಸಭೆ ನಡೆಸಲು ಪ್ರತ್ಯೇಕ ಸಭಾಂಗಣ ಹಾಗೂ ಪೀಠೋಪಕರಣ ಸೌಲಭ್ಯ ಕುರಿತು | | | | |
| ಇದೆ | ೩೫ | ೧೦೦.೦೦ | ೨೦ | ೧೦೦.೦೦ |
| ಇಲ್ಲಾ | ೦ | ೦.೦೦ | ೦ | ೦.೦೦ |
| **ಒಟ್ಟು** | ೩೫ | ೧೦೦ | ೨೦ | ೧೦೦ |

**ಮೂಲ: ಕ್ಷೇತ್ರ ಕಾರ್ಯದ ಮಾಹಿತಿ**

ಹೊಸಪೇಟೆ ನಗರಸಭೆಯ ೩೫ ಚುನಾಯಿತ ಸದಸ್ಯರು ಮತ್ತು ಕೂಡ್ಲಿಗಿ ಪಟ್ಟಣ ಪಂಚಾಯಿತಿ ೨೦ ಚುನಾಯಿತ ಸದಸ್ಯರು ಪ್ರಕಾರ ಪ್ರತ್ಯೇಕ ಸಭಾಂಗಣ ಮತ್ತು ಪೀಠೋಪಕರಣಗಳ ವ್ಯವಸ್ಥೆಯನ್ನು ಮಾಡಲಾಗಿದೆ ಎಂದರು. ಹೊಸಪೇಟೆಯ ನಗರಸಭೆಯ ಸಭಾಂಗಣ ಮತ್ತು ಪೀಠೋಪಕರಣಕ್ಕಿಂತ ಪಟ್ಟಣ ಪಂಚಾಯಿತಿಯ ಸಭಾಂಗಣ ಮತ್ತು ಪೀಠೋಪಕರಣಗಳು ಹಳೆಯ ವ್ಯವಸ್ಥೆಯನ್ನು ಹೊಂದಿದ್ದು, ಸಮರ್ಪಕವಾದ ಕಟ್ಟಡಗಳಿಲ್ಲದೆ ಹಳೆಯ ವ್ಯವಸ್ಥೆಯಲ್ಲಿ ಇರುವುದು ಕಂಡುಬರುತ್ತದೆ. ಸಾಪೇಕ್ಷವಾಗಿ ಮುಂದುವರಿದ ನಗರಸಭೆಗಿಂತ ಹೆಚ್ಚು ಹಿಂದುಳಿದ ಪಟ್ಟಣ ಪಂಚಾಯಿತಿಯು ಸುಧಾರಣೆಯಲ್ಲಿ ಹಿಂದುಳಿದಿರುವುದು ಗೊತ್ತಾಗುತ್ತದೆ.

**ನಿಮ್ಮ ಸಾಮಾನ್ಯಸಭೆ ನಡೆಯುವ ಸಮಯದಲ್ಲಿ ಎಲ್ಲಿ ಕುಳಿತು ಕೊಳ್ಳುವಿರಿ**

| ಸಾಮಾನ್ಯ ಸಭೆ ನಡೆಯುವಾಗ ಎಲ್ಲಿ ಕುಳಿತುಕೊಳ್ಳುವಿರಿ | ಹೊಸಪೇಟೆ | | ಕೂಡ್ಲಿಗಿ | |
|---|---|---|---|---|
| ಮುಂದೆ | ೧೪ | ೪೦.೦೦ | ೫ | ೨೫.೦೦ |
| ಮಧ್ಯೆ | ೮ | ೨೨.೮೬ | ೬ | ೩೦.೦೦ |
| ಹಿಂದುಗಡೆ | ೧೩ | ೩೭.೧೪ | ೯ | ೪೫.೦೦ |
| **ಒಟ್ಟು** | ೩೫ | ೧೦೦ | ೨೦ | ೧೦೦ |

**ಮೂಲ: ಕ್ಷೇತ್ರ ಕಾರ್ಯದ ಮಾಹಿತಿ**

ಹೊಸಪೇಟೆ ನಗರಸಭೆಯ ಶೇ. ೪೦ರಷ್ಟು ಚುನಾಯಿತ ಸದಸ್ಯರು ಮತ್ತು ಕೂಡ್ಲಿಗಿ ಪಟ್ಟಣ ಪಂಚಾಯಿತಿಯ ಶೇ. ೨೫ರಷ್ಟು ಚುನಾಯಿತ ಸದಸ್ಯರು ಸಾಮಾನ್ಯಸಭೆ ನಡೆಯುವ ಸಮಯದಲ್ಲಿ ಮುಂದೆ ಕುಳಿತುಕೊಳ್ಳುತ್ತೇವೆ ಎಂಬುದಾಗಿ, ಅದರಂತೆ ನಗರಸಭೆಯ ಶೇ. ೨೨.೮೬ ಚುನಾಯಿತ ಸದಸ್ಯರು ಮತ್ತು ಪಟ್ಟಣ ಪಂಚಾಯಿತಿಯ ಶೇ. ೩೦ರಷ್ಟು ಚುನಾಯಿತ ಸದಸ್ಯರ ಪ್ರಕಾರ ನಾವು ಹೆಚ್ಚಾಗಿ ಮಧ್ಯನೇ ಕುಳಿತುಕೊಳ್ಳುತ್ತೇವೆ ಎಂಬುದಾಗಿ, ಉಳಿದ ನಗರಸಭೆಯ ಶೇ. ೩೭.೧೪ರಷ್ಟು ಚುನಾಯಿತ ಸದಸ್ಯರು ಮತ್ತು ಕೂಡ್ಲಿಗಿ ಪಟ್ಟಣ ಪಂಚಾಯಿತಿಯ ಶೇ. ೪೫ರಷ್ಟು ಚುನಾಯಿತ ಸದಸ್ಯರು ನಾವು ಹಿಂದುಗಡೆ ಕುಳಿತುಕೊಳ್ಳುತ್ತೇವೆ ಎಂದು ಹೇಳಿಕೊಂಡಿರುತ್ತಾರೆ. ಅಂದರೆ ಸಭೆ ನಡೆಯುವ ಒಳಾಂಗಣದಲ್ಲಿ ಸದಸ್ಯರುಗಳು ಯಾವ ರೀತಿಯಲ್ಲಿ ಕುಳಿತುಕೊಳ್ಳಬೇಕೆಂದು ನಿಯಮವಿಲ್ಲ. ಆದರೂ ಮಹಿಳಾ ಸದಸ್ಯರೆಲ್ಲಾ ಒಂದು ಕಡೆ, ಪುರುಷ ಸದಸ್ಯರು ಒಂದು ಕಡೆ ಕುಳಿತುಕೊಳ್ಳುತ್ತಾರೆ. ಸಾಪೇಕ್ಷವಾಗಿ ಮುಂದುವರಿದ ಹೊಸಪೇಟೆ ನಗರಸಭೆಗಿಂತ ಹಿಂದುಳಿದ ಕೂಡ್ಲಿಗಿ ಪಟ್ಟಣ ಪಂಚಾಯಿತಿಯ ಸದಸ್ಯರು ಕಡಿಮೆ ಸಂಖ್ಯೆಯಲ್ಲಿ ತಮ್ಮ ಸಮುದಾಯಕ್ಕೆ ಸೌಲಭ್ಯಗಳನ್ನು ಒದಗಿಸಿಕೊಡುವಲ್ಲಿ ಯಶಸ್ವಿಯಾಗಿರುವುದು ತಿಳಿದುಬಂದಿದೆ. ಅಂದರೆ ಕೆಲವರು ಸಂಕೋಚದಿಂದ ಮುಂದೆ ಕೂರುವುದಿಲ್ಲ, ಅನಕ್ಷರಸ್ಥರೆಂದು ಸುಮ್ನೆ ಹಿಂದೆ ಕುಳಿತುಕೊಳ್ಳಲಾಗುತ್ತೆ ಇದರಿಂದ ಬಹುತೇಕ ದಲಿತ ಪ್ರತಿನಿಧಿಗಳು ತಮ್ಮ ಸಮುದಾಯದ ಹಿತಾಸಕ್ತಿಯನ್ನು ರಕ್ಷಿಸಲು ಸಾಧ್ಯವಾಗಿಲ್ಲ ಎಂದು ತಿಳಿಯಲಾಗಿದೆ. ಪುರುಷ–ಮಹಿಳೆ, ಅಕ್ಷರಸ್ಥರು–ಅನಕ್ಷರಸ್ಥರು ಎಂಬ ಪ್ರತ್ಯೇಕರಣದಿಂದ ಮಹಿಳೆ ಮತ್ತು ಹಿಂದುಳಿದ ಪಂಚಾಯಿತಿಗೆ ಆಯ್ಕೆಯ ಪ್ರಕ್ರೀಯೆಯಿಲ್ಲದೆ ತೀರ್ಮಾನಗಳಲ್ಲಿ ಮುಂದೆ ಕುಂತು ಚರ್ಚೆಯಲ್ಲಿ ಭಾಗವಹಿಸದೇ ಹಿಂದುಳಿಯಿತು ಎಂದು ಹೇಳಬಹುದಾಗಿದೆ. ನಗರಡಾಳಿತದಲ್ಲಿ ದಕ್ಷತೆ, ಪಾರದರ್ಶಕತೆ ಮತ್ತು ಉತ್ತರದಾಯಿತ್ವ ಆಧಾರಿತ ಸುಧಾರಣೆಗಳನ್ನು ಕೈಗೊಳ್ಳುವ ಅವಶ್ಯಕತೆಯಿದೆ ಎಂದು ಹೇಳಲಾಗಿದೆ.

**ಒಂದು ವೇಳೆ ಹಿಂದುಗಡೆ ಕುಳಿತರೆ ಯಾಕೆ**

| ಹಿಂದುಗಡೆ ಕುಳಿತುಕೊಳ್ಳಲು ಇರುವ ಕಾರಣಗಳು | ಹೊಸಪೇಟೆ | | ಕೂಡ್ಲಿಗಿ | |
|---|---|---|---|---|
| ಜಾತಿ ಕಾರಣ | ೫ | ೧೪.೨೮ | ೯ | ೪೫.೦೦ |
| ಸಂಕೋಚ | ೬ | ೧೭.೧೬ | ೪ | ೨೦.೦೦ |
| ಸಾಮಾನ್ಯವಾಗಿ | ೨೪ | ೬೮.೫೭ | ೭ | ೩೫.೦೦ |
| **ಒಟ್ಟು** | ೩೫ | ೧೦೦ | ೨೦ | ೧೦೦ |

**ಮೂಲ: ಕ್ಷೇತ್ರ ಕಾರ್ಯದ ಮಾಹಿತಿ**

ಹೊಸಪೇಟೆ ನಗರಸಭೆಯ ಒಟ್ಟು ೩೫ ಸದಸ್ಯರಲ್ಲಿ ಶೇ. ೧೪.೨೮ರಷ್ಟು ಚುನಾಯಿತ ಸದಸ್ಯರು ಮತ್ತು ಕೂಡ್ಲಿಗಿ ಪಟ್ಟಣ ಪಂಚಾಯಿತಿಯ ಒಟ್ಟು ೨೦ ಸದಸ್ಯರಲ್ಲಿ ಶೇ. ೪೫ರಷ್ಟು ಚುನಾಯಿತ ಸದಸ್ಯರು ಹಿಂದುಗಡೆ ಕುಳಿತುಕೊಳ್ಳುವುದಕ್ಕೆ ಕಾರಣವನ್ನಾಗಿ ಜಾತಿಯ ಅಂಶವೆಂಬುದಾಗಿ, ಅದೇ ರೀತಿಯಾಗಿ ನಗರಸಭೆಯ ಶೇ. ೧೭.೧೬ರಷ್ಟು ಚುನಾಯಿತ ಸದಸ್ಯರು ಮತ್ತು ಪಟ್ಟಣ ಪಂಚಾಯಿತಿಯ ಶೇ. ೨೦ರಷ್ಟು ಚುನಾಯಿತ ಸದಸ್ಯರು ಸಂಕೋಚದಿಂದ ಕೆಲವು ಬಾರಿ ಹಿಂದುಗಡೆ ಕುಳಿತುಕೊಳ್ಳಲಾಗುತ್ತದೆ ಎಂಬುದಾಗಿ, ಉಳಿದ ನಗರಸಭೆಯ ಶೇ. ೬೮.೫೭ರಷ್ಟು ಚುನಾಯಿತ

ಸದಸ್ಯರು ಮತ್ತು ಪಟ್ಟಣ ಪಂಚಾಯಿತಿಯ ಶೇ. ೩೫ರಷ್ಟು ಚುನಾಯಿತ ಸದಸ್ಯರು ಸಾಮಾನ್ಯವಾಗಿ ಹಿಂದೆ ಕುಳಿತುಕೊಳ್ಳುತ್ತೇವೆ ಎಂಬುದಾಗಿ, ಅಂದರೆ ಮುಂದುವರಿದ ಹೊಸಪೇಟೆ ನಗರಸಭೆಯ ಸದಸ್ಯರಿಗಿಂತ ಹಿಂದುಳಿದ ಕೂಡ್ಲಿಗಿ ಪಟ್ಟಣ ಪಂಚಾಯಿತಿ ಸದಸ್ಯರಲ್ಲಿ ಹೆಚ್ಚಾಗಿ ಜಾತಿಯ ಕಾರಣದಿಂದ ಹಿಂದೆ ಕುಳಿತುಕೊಳ್ಳುತ್ತೇವೆ ಎಂಬುದು ಅಧ್ಯಯನದಿಂದ ತಿಳಿದುಬಂದಿದೆ. ಒಟ್ಟಾರೆಯಾಗಿ ಈ ವಿಶ್ಲೇಷಣೆಯಿಂದ ತಿಳಿಯುವ ಅಂಶವೆಂದರೆ ಇತರೆ ಸಮುದಾಯಗಳ ಪ್ರತಿನಿಧಿಗಳ ಹಸ್ತಕ್ಷೇಪದಿಂದ ದಲಿತಾ ಪ್ರತಿನಿಧಿಗಳಿಗೆ ಆದ್ಯತೆ ಸಿಗುತ್ತಿಲ್ಲ ಸ್ಥಳೀಯ ಸಂಸ್ಥೆಯಲ್ಲಿ ತಾರತಮ್ಯ, ಶೋಷಣೆಗಳಿಂದಾಗಿ ಪರಿಶಿಷ್ಟರ ಅಭಿವೃದ್ಧಿಗಾಗಿ ಇತರ ಸಮುದಾಯದ ಪ್ರತಿನಿಧಿಗಳು ಒಡ್ಡುವ ವಿರೋಧದಿಂದ ಅಲ್ಲದೆ ಅನಕ್ಷರತೆಯ ಹಿನ್ನೆಲೆಯಾಗಿ ಅವರು ಹೆಚ್ಚಾಗಿ ಚರ್ಚೆಯಲ್ಲಿ ಭಾಗವಹಿಸದೇ ಇರುವುದಕ್ಕೆ ಅಭಿವೃದ್ಧಿ ಸಾಧ್ಯವಾಗದೆ ಹಿಂದುಳಿದಿದೆ ಎಂದು ತಿಳಿಯಬಹುದಾಗಿದೆ. ದಲಿತ ನಾಯಕತ್ವದ ಮೂಲಕ ತಮ್ಮ ಸಮುದಾಯದ ಹಿತಾಸಕ್ತಿಯನ್ನು ಕಾಯುವ ಹಾಗು ವಾರ್ಡಿನ ಜನರ ಅಭಿವೃದ್ಧಿಯನ್ನು ಕಾಣುವ ಅಗತ್ಯವಿದೆ ಎಂದು ಹೇಳಲಾಗಿದೆ.

**ಸಾಮಾನ್ಯಸಭೆಯ ಚರ್ಚೆಯಲ್ಲಿ ಯಾವ ಜಾತಿಯವರು ಹೆಚ್ಚು ಮಾತನಾಡುವರು**

| **ಚರ್ಚೆಯಲ್ಲಿ ಯಾರು ಹೆಚ್ಚು ಮಾತನಾಡುವುದರ ಕುರಿತು** | **ಹೊಸಪೇಟೆ** | | **ಕೂಡ್ಲಿಗಿ** | |
|---|---|---|---|---|
| ಪರಿಶಿಷ್ಟರು(ಎಸ್.ಸಿ./ಎಸ್.ಟಿ.) | ೧೫ | ೩೪.೨೮ | ೫ | ೨೫.೦೦ |
| ಹಿಂದುಳಿದವರು | ೧೩ | ೩೭.೧೬ | ೭ | ೩೫.೦೦ |
| ಸಾಮಾನ್ಯರು, | ೭ | ೨೦.೦೦ | ೮ | ೪೦.೦೦ |
| **ಒಟ್ಟು** | ೩೫ | ೧೦೦ | ೨೦ | ೧೦೦ |

**ಮೂಲ: ಕ್ಷೇತ್ರ ಕಾರ್ಯದ ಮಾಹಿತಿ**

ನಗರ ಪ್ರದೇಶಗಳಾದ ಹೊಸಪೇಟೆ ನಗರಸಭೆಯ ಒಟ್ಟು ೩೫ ಸದಸ್ಯರಲ್ಲಿ ಶೇ. ೩೪.೨೮ರಷ್ಟು ಚುನಾಯಿತ ಸದಸ್ಯರು ಮತ್ತು ಕೂಡ್ಲಿಗಿ ಪಟ್ಟಣ ಪಂಚಾಯಿತಿಯ ಒಟ್ಟು ೨೦ ಸದಸ್ಯರಲ್ಲಿ ಶೇ. ೬೦ರಷ್ಟು ಚುನಾಯಿತ ಸದಸ್ಯರು ಸಭೆಯ ಚರ್ಚೆಯಲ್ಲಿ ಪರಿಶಿಷ್ಟರು ಹೆಚ್ಚು ಮಾತನಾಡುತ್ತೇವೆ ಎಂಬುದಾಗಿ, ಅದೇ ರೀತಿ ನಗರಸಭೆ ಶೇ. ೩೭.೧೬ರಷ್ಟು ಚುನಾಯಿತ ಸದಸ್ಯರು ಮತ್ತು ಪಟ್ಟಣ ಪಂಚಾಯಿತಿಯ ಶೇ. ೩೦ರಷ್ಟು ಚುನಾಯಿತ ಸದಸ್ಯರಲ್ಲಿ ಸಭೆಯ ಚರ್ಚೆಯಲ್ಲಿ ಹಿಂದುಳಿದವರು ಹೆಚ್ಚು ಮಾತನಾಡುತ್ತಾರೆ ಎಂಬುದಾಗಿ, ಉಳಿದ ನಗರಸಭೆಯ ಶೇ. ೨೦ರಷ್ಟು ಚುನಾಯಿತ ಸದಸ್ಯರು ಮತ್ತು ಪಟ್ಟಣ ಪಂಚಾಯಿತಿಯ ಶೇ. ೧೦ರಷ್ಟು ಚುನಾಯಿತ ಸದಸ್ಯರು ಸಭೆಯ ಚರ್ಚೆಯಲ್ಲಿ ಸಾಮಾನ್ಯರು ಹೆಚ್ಚು ಮಾತನಾಡುತ್ತೇವೆ ಎಂದು ಅಧ್ಯಯನದಿಂದ ತಿಳಿದುಬಂದಿದೆ. ಸಾಪೇಕ್ಷವಾಗಿ ಮುಂದುವರಿದ ನಗರಸಭೆಯ ಸದಸ್ಯಗಿಂತ ಹಿಂದುಳಿದ ಕೂಡ್ಲಿಗಿ ಪಟ್ಟಣ ಪಂಚಾಯಿತಿಯ ಪರಿಶಿಷ್ಟ ಸದಸ್ಯರು ಕಡಿಮೆ ಪ್ರಮಾಣದಲ್ಲಿ ಮಾತನಾಡುವವರು ಇದ್ದಾರೆ. ಒಟ್ಟಾರೆಯಾಗಿ ವಿಶ್ಲೇಷಣೆಯಿಂದ ಗಮನಿಸುವ ಅಂಶವೆಂದರೆ ಮುಂದುವರಿದ ಹೊಸಪೇಟೆ ನಗರಸಭೆ ಪರಿಶಿಷ್ಟ ಸದಸ್ಯರು ತಕ್ಕಮಟ್ಟಿಗೆ ಅಕ್ಷರ ಕಲಿತವರು ಹಾಗೂ ಆಡಳಿತದ ಬಗ್ಗೆ ಅನುಭವವನ್ನು ಹೊಂದಿರುವುದು ಕ್ಷೇತ್ರಾಧ್ಯಾಯದಿಂದ ಗೊತ್ತಾಗುತ್ತದೆ. ಆದರೆ ಹೆಚ್ಚು ಹಿಂದುಳಿದಿರುವ ಕೂಡ್ಲಿಗಿ ಪಟ್ಟಣ ಪಂಚಾಯಿತಿಯ ಪರಿಶಿಷ್ಟ

ಸದಸ್ಯರು ಅಕ್ಷರ, ಆಡಳಿತ ಅನುಭವದಿಂದ ವಂಚಿತರಾಗಿ ಕೃಷಿಯನ್ನೇ ಅವಲಂಬಿಸಿ ಜಾತಿ ತಾರತಮ್ಯಗಳಿಂದ ದಲಿತಾ ಸಮುದಾಯಗಳು ತಮಗಿರುವ ಅಡ್ಡಿ ಆತಂಕಗಳ ಬಗ್ಗೆ ಜಾತಿ ಸಂಬಂಧಿ ತಾರತಮ್ಯಗಳನ್ನು ವಿರೋಧಿಸುವುದು ಸಾಧ್ಯವಿಲ್ಲವೆಂದು ಭಾವಿಸಲಾಗಿದೆ. ಹಾಗು ದಲಿತಾ ಸಮುದಾಯಗಳು ಪ್ರಬಲ ಜಾತಿಯವರ ಪ್ರತಿಕ್ರೀಯೆಗೆ ಎದುರುತ್ತಾರೆ ಮತ್ತು ಕೆಲವು ದಲಿತಾ ಮಹಿಳೆಯರು ತಮ್ಮ ಕುಟುಂಬದ ಸಹಕಾರದಿಂದ ಅಡ್ಡಿ ಆತಂಕಗಳನ್ನು ನಿವಾರಿಸಿಕೊಳ್ಳವುದು ಸಾಧ್ಯವೆಂದು ಭಾವಿಸಲಾಗಿದೆ. ಈ ನಿಟ್ಟಿನಲ್ಲಿ ವಿವಿಧ ಆಡಳಿತದ ವಿರೋಧಗಳನ್ನು ಹೆದರಿಸಲಾಗದೆ ಅಭಿವೃದ್ಧಿಯಿಂದ ಹಿಂದುಳಿದಿದೆ ಎನ್ನಬಹುದಾಗಿದೆ. ಒಟ್ಟಾರೆ ಪರಿಶಿಷ್ಟರು ರಾಜಕೀಯದಲ್ಲಿ ಸಕ್ರೀಯವಾಗಿ ಭಾಗವಹಿಸವುದರೊಂದಿಗೆ ಅಕ್ಷರ ತಿಳುವಳಿಕೆಯ ಅನಿವಾರ್ಯತೆ ಇರುವುದು ಕಂಡುಬಂದಿದೆ.

**ಸಾಮಾನ್ಯಸಭೆಯ ಚರ್ಚೆಯಲ್ಲಿ ಯಾವ ಲಿಂಗದವರು ಹೆಚ್ಚು ಮಾತನಾಡುವರು**

| **ಯಾವ ಲಿಂಗದವರು ಹೆಚ್ಚು ಮಾತನಾಡುತ್ತಾರೆ** | **ಹೊಸಪೇಟೆ** | | **ಕೂಡ್ಲಿಗಿ** | |
|---|---|---|---|---|
| ಗಂಡು | ೨೭ | ೭೭.೧೬ | ೧೪ | ೭೦.೦೦ |
| ಹೆಣ್ಣು | ೮ | ೨೨.೮೪ | ೬ | ೩೦.೦೦ |
| **ಒಟ್ಟು** | ೩೫ | ೧೦೦ | ೨೦ | ೧೦೦ |

**ಮೂಲ: ಕ್ಷೇತ್ರ ಕಾರ್ಯದ ಮಾಹಿತಿ**

ಸಾಮಾನ್ಯಸಭೆಯ ಚರ್ಚೆಯಲ್ಲಿ ಯಾವ ಲಿಂಗದವರು ಹೆಚ್ಚು ಮಾತನಾಡುವರು ಎಂಬುದರ ಪ್ರಮಾಣವನ್ನು ಈ ಕೆಳಗಿನಂತೆ ನೀಡಲಾಗಿದೆ. ಹೊಸಪೇಟೆ ನಗರಸಭೆಯ ಶೇ. ೭೭.೧೬ರಷ್ಟು ಚುನಾಯಿತ ಸದಸ್ಯರು ಮತ್ತು ಕೂಡ್ಲಿಗಿ ಪಟ್ಟಣ ಪಂಚಾಯಿತಿಯ ಶೇ. ೭೦ರಷ್ಟು ಚುನಾಯಿತ ಸದಸ್ಯರ ಪ್ರಕಾರ ಗಂಡು ಮಕ್ಕಳು ಹೆಚ್ಚು ಮಾತನಾಡುವುದಾಗಿ ಉಳಿದ ನಗರಸಭೆಯ ಶೇ. ೨೨.೮೪ ಚುನಾಯಿತ ಸದಸ್ಯರು ಮತ್ತು ಪಟ್ಟಣ ಪಂಚಾಯಿತಿಯ ಶೇ. ೩೦ರಷ್ಟು ಚುನಾಯಿತ ಸದಸ್ಯರು ಪ್ರಕಾರ ಸಭೆಯ ಚರ್ಚೆಯಲ್ಲಿ ಹೆಣ್ಣು ಮಕ್ಕಳು ಹೆಚ್ಚು ಮಾತನಾಡುತ್ತಾರೆ ಎಂದು ತಿಳಿದುಬಂದಿದೆ. ಸಾಪೇಕ್ಷವಾಗಿ ಮುಂದುವರಿದ ಹೊಸಪೇಟೆ ನಗರಸಭೆಯ ಚುನಾಯಿತ ಸದಸ್ಯರಿಗಿಂತ ತೀರಾ ಹಿಂದುಳಿದ ಕೂಡ್ಲಿಗಿ ಪಟ್ಟಣ ಪಂಚಾಯಿತಿ ಮಹಿಳಾ ಸದಸ್ಯರು ಸಭೆ ಚರ್ಚೆಯಲ್ಲಿ ಭಾಗವಹಿಸುವುದರ ಪ್ರಮಾಣ ಕೆಳಮಟ್ಟದಲ್ಲಿರುವುದು ಅಧ್ಯಯಗಳಿಂದ ತಿಳಿದುಬಂದಿದೆ. ಎರಡು ನಗರ ಸ್ಥಳೀಯ ಸಂಸ್ಥೆಗಳಲ್ಲಿ ಮಹಿಳಾ ಸದಸ್ಯರು ಸಭೆಯ ಚರ್ಚೆಯಲ್ಲಿ ಹೆಚ್ಚು ಮಾತನಾಡದೆ ಸ್ಥಳೀಯ ಸಂಸ್ಥೆಗಳ ವಿವಿಧ ಆಯ್ಕೆ ಪ್ರಕ್ರೀಯೆಯಲ್ಲಿ ಭಾಗವಹಿಸದೆ ಮಹಿಳಾ ಸಬಲೀಕರಣ ಸಾಧ್ಯವಾಗದು ಹಾಗಾಗಿ ಮಹಿಳೆಯರು ಸ್ಥಳೀಯ ಸಂಸ್ಥೆಗಳಲ್ಲಿ ಸಕ್ರೀಯವಾಗಿ ಪಾಲ್ಗೋಳ್ಳದೆಯಿರುವುದು ಹಾಗು ವಾರ್ಡಿನ ಬಗ್ಗೆ ಚರ್ಚಿಸುವ ಸಂದರ್ಭದಲ್ಲಿಯೂ ಕೂಡ ಮಹಿಳೆಯರಿಗೆ ಹೆಚ್ಚಿನ ಪ್ರಾಧ್ಯಾನ್ಯತೆಯನ್ನು ಕೊಡದೆ ಮಹಿಳೆಯರು ಮೀಸಲಾತಿಯ ಅನಿವಾರ್ಯದಿಂದ ಆಯ್ಕೆಯಾಗುವುದರ ಮೂಲಕ ಮಹಿಳಾ ಪ್ರತಿನಿಧಿಗಳು ವಾರ್ಡಿನ ಅಭಿವೃದ್ಧಿಗಾಗಿ ವಿವಿಧ ಕಾರ್ಯಕ್ರಮಗಳ ಬಗ್ಗೆ ಮನವಿ ಮಾಡಿದರೂ ಅಧಿಕಾರಿಗಳು ಅವರ ಮನವಿಗೆ ಮನ್ನಿಸದೆಯಿರುವುದಕ್ಕಾಗಿ ಹಿಂದುಳಿದಿದೆ ಎಂದು ತಿಳಿಯಲಾಗಿದೆ.

ಒಟ್ಟಾರೆಯಾಗಿ ಮಹಿಳಾ ಚುನಾಯಿತ ಸದಸ್ಯೆಯು ಕೇವಲ ರಾಜಕೀಯದಲ್ಲಿ ಪಾಲ್ಗೋಳ್ಳುವಂತೆ ಆಗಿದೆಯೇ ಹೊರತು ಲಿಂಗ ಸಂಬಂಧಿ ತಾರತಮ್ಯಗಳನ್ನು ವಿರೋಧಿಸುವುದು ಸಾಧ್ಯವಿಲ್ಲವೆಂದು ಅಧ್ಯಯಗಳಿಂದ ತಿಳಿಯಬಹುದಾಗಿದೆ. ಮಹಿಳೆಯರಲ್ಲಿ ಲಿಂಗ ಸೂಕ್ಷ್ಮತೆಯನ್ನು ತರುವ ಕಾರ್ಯಕ್ರಮಗಳನ್ನು ಆಯೋಜಿಸುವ ಹಾಗು ಪುರುಷರು ತಮ್ಮ ಮಹಿಳೆಯರಿಗೆ ಕುಟುಂಬದಲ್ಲಿ ಹೆಚ್ಚು ಸ್ವಾತಂತ್ರವನ್ನು ನೀಡಿ ಮತ್ತು ದಲಿತ ಆಯ್ಕೆಗೊಂಡ ಮಹಿಳೆಯರಿಗೆ ಸ್ಥಳೀಯ ಸಂಸ್ಥೆಗಳ ಒಳಗೆ ಹಾಗೂ ಹೊರಗೆ ಗೌರವಿಸುವಂತೆ ನೋಡಿಕೊಳ್ಳತಕ್ಕದ್ದು, ಆಯ್ಕೆಗೊಂಡ ಪುರುಷ ಪ್ರತಿನಿಧಿಗಳಿಗೆ ಲಿಂಗ ಸಂಬಂಧಿ ಮತ್ತು ಜಾತಿ ಸಂಬಂಧಿ ಸೂಕ್ಷ್ಮತೆಗಳನ್ನು ಅರ್ಥ ಮಾಡಿಕೊಳ್ಳಲು ಪ್ರತ್ಯೇಕ ತರಬೇತಿಗಳನ್ನು ನೀಡುವ ಅಗತ್ಯವಿದೆ ಎಂದು ಹೇಳಲಾಗಿದೆ.

**ಸಾಮಾನ್ಯಸಭೆಯ ಚರ್ಚೆಯಲ್ಲಿ ಯಾವ ವರ್ಗದವರು ಹೆಚ್ಚು ಮಾತನಾಡುವರು**

| **ಯಾವ ವರ್ಗದವರು ಹೆಚ್ಚು ಮಾತನಾಡುವರು** | **ಹೊಸಪೇಟೆ** | | **ಕೂಡ್ಲಿಗಿ** | |
|---|---|---|---|---|
| ಮೇಲ್ವಾರ್ಗದವರು | ೬ | ೧೭.೧೬ | ೩ | ೧೫.೦೦ |
| ಹಿಂದೂಳಿದವರು | ೧೮ | ೫೧.೪೭ | ೧೧ | ೫೫.೦೦ |
| ಕೆಳವರ್ಗದವರು(ಅಕ್ಷರಸ್ಥರು) | ೧೧ | ೩೧.೪೭ | ೬ | ೩೦.೦೦ |
| **ಒಟ್ಟು** | ೩೫ | ೧೦೦ | ೨೦ | ೧೦೦ |

**ಮೂಲ: ಕ್ಷೇತ್ರ ಕಾರ್ಯದ ಮಾಹಿತಿ**

ನಗರ ಸ್ಥಳೀಯ ಸಂಸ್ಥೆಗಳಾದ ಹೊಸಪೇಟೆ ನಗರಸಭೆಯ ಶೇ. ೧೭.೧೬ರಷ್ಟು ಚುನಾಯಿತ ಸದಸ್ಯರು ಮತ್ತು ಕೂಡ್ಲಿಗಿ ಪಟ್ಟಣ ಪಂಚಾಯಿತಿಯ ಶೇ. ೧೫ರಷ್ಟು ಚುನಾಯಿತ ಸದಸ್ಯರು ಮೇಲ್ವರ್ಗದವರಾದ ನಾವು ಚರ್ಚೆಯಲ್ಲಿ ಹೆಚ್ಚು ಮಾತನಾಡುವುದು, ಇತರ ಹೊಸಪೇಟೆಯ ಶೇ. ೫೧.೪೭ರಷ್ಟು ಚುನಾಯಿತ ಸದಸ್ಯರು ಮತ್ತು ಕೂಡ್ಲಿಗಿಯ ಶೇ. ೫೫ರಷ್ಟು ಚುನಾಯಿತ ಸದಸ್ಯರ ಪ್ರಕಾರ ಸಭೆಯ ಚರ್ಚೆಯಲ್ಲಿ ಹಿಂದುಳಿದ ವರ್ಗಕ್ಕೆ ಸೇರಿದ ನಾವುಗಳು ಹೆಚ್ಚು ಚರ್ಚೆಯಲ್ಲಿ ಭಾಗವಹಿಸುತ್ತೇವೆ ಎಂದಿರುವರು. ಉಳಿದ ನಗರಭೆಯ ಶೇ. ೩೧.೪೭ರಷ್ಟು ಚುನಾಯಿತ ಸದಸ್ಯರು ಮತ್ತು ಪಟ್ಟಣ ಪಂಚಾಯಿತಿಯ ಶೇ. ೩೦ರಷ್ಟು ಚುನಾಯಿತ ಸದಸ್ಯರು ಹೇಳಿಕೊಂಡಿರುವಂತೆ ಸಭೆಯಲ್ಲಿ ಕೆಳವರ್ಗದವರಾದ ನಾವು ಹೆಚ್ಚು ಮಾತನಾಡುತ್ತ ಚರ್ಚೆಯಲ್ಲಿ ಭಾಗವಹಿಸುತ್ತೇವೆ ಎಂದು ತಿಳಿದುಬಂದಿದೆ. ಮೇಲಿನ ಸೂಚಿಗಳು ತೋರಿಸಿರುವಂತೆ ಸಾಪೇಕ್ಷವಾಗಿ ಮುಂದುವರಿದ ಹೊಸಪೇಟೆ ನಗರಸಭೆಗಿಂತ ತೀರಾ ಹಿಂದುಳಿದ ಕೂಡ್ಲಿಗಿ ಪಟ್ಟಣ ಪಂಚಾಯಿತಿಯಲ್ಲಿ ಸಭೆಯ ಚರ್ಚೆಯಲ್ಲಿ ಕೆಳವರ್ಗದವರು ಕಡಿಮೆ ಪ್ರಮಾಣದಲಿದ್ದು ಸಭೆಯ ಚರ್ಚೆಯಲ್ಲಿ ಹೆಚ್ಚು ಮಾತನಾಡುವುದು ಅಧ್ಯಯಗಳಿಂದ ತಿಳಿದುಬಂದಿದೆ. ಇಲ್ಲಿ ಸೂಕ್ಷ್ಮವಾಗಿ ಗಮಿನಿಸಬೇಕಾದ ಸಂಗತಿಯೆಂದರೆ ವರಮಾನದಲ್ಲಿ ಹಿಂದುಳಿದಿದ್ದು ಅಲ್ಲದೆ ಜನರ ಬದುಕು ತುಂಬ ಶೋಚನೀಯವಾಗಿರುವ ಹಿನ್ನೆಲೆಯಲ್ಲಿ ಅಲ್ಲಿನ ಆರೋಗ್ಯ, ಶಿಕ್ಷಣ, ಉತ್ತಮ ಜೀವನ ಸುಧಾರಣೆ ಬಗ್ಗೆ ಯೋಚಿಸುವಾಗ ನಾವು ಪ್ರಧಾನವಾಗಿ ಜನರನ್ನು ಕೇಂದ್ರವಾಗಿ ಇಟ್ಟುಕೊಂಡು ವಾರ್ಡಿನ ಜನರಿಗೆ ಅಗತ್ಯವಾದ ಕನಿಷ್ಠ ಮೂಲಭೂತ ಸೌಕರ್ಯಗಳನ್ನು ಒದಗಿಸುವ ನಿಟ್ಟಿನಲ್ಲಿ ಸಾಮಾನ್ಯಸಭೆಯ ಚರ್ಚೆಯ ಸಂದರ್ಭದಲ್ಲಿ ಹೆಚ್ಚು

ಮಾತನಾಡುವುದರ ಮೂಲಕ ಸ್ಥಳೀಯ ಸಂಸ್ತೆಯನ್ನು ಮುಂದುವರಿಸಲು ಸಾಧ್ಯವಾಗುತ್ತದೆ ಎಂದು ತಿಳಿಯಲಾಗಿದೆ. ಸಮುದಾಯದ ಅಭಿವೃದ್ಧಿಗೆ ರಾಜಕೀಯ ಭಾಗವಹಿಸುವಿಕೆ ಎಷ್ಟು ಮುಖ್ಯವೋ ಎಂಬುದನ್ನು ಮನವರಿಕೆ ಮಾಡಿಕೊಡುವ ಅಗತ್ಯವಿದೆ ಎಂದು ಹೇಳಲಾಗಿದೆ.

**ಸಾಮಾನ್ಯಸಭೆಯ ಚರ್ಚೆಯಲ್ಲಿ ಯಾವ ಲಿಂಗದ ಸದಸ್ಯರ ಮಾತಿಗೆ ಹೆಚ್ಚು ಬೆಲೆ ಕೊಡುವರು**

| **ಯಾವ ಲಿಂಗದ ಸದಸ್ಯರ ಮಾತಿಗೆ ಹೆಚ್ಚು ಬೆಲೆ ಕೊಡುವರು** | **ಹೊಸಪೇಟೆ** | | **ಕೂಡ್ಲಿಗಿ** | |
|---|---|---|---|---|
| ಗಂಡು | ೨೧ | ೬೦.೦೦ | ೧೭ | ೮೫.೦೦ |
| ಹೆಣ್ಣು | ೧೪ | ೪೦.೦೦ | ೩ | ೧೫.೦೦ |
| **ಒಟ್ಟು** | ೩೫ | ೧೦೦ | ೨೦ | ೧೦೦ |

**ಮೂಲ: ಕ್ಷೇತ್ರ ಕಾರ್ಯದ ಮಾಹಿತಿ**

ನಗರ ಪ್ರದೇಶವಾರು ಮೇಲಿನ ಅಂಶಕ್ಕೆ ಸಂಬಂಧಿಸಿದಂತೆ ಸಾಮಾನ್ಯಸಭೆಯ ಚರ್ಚೆಯಲ್ಲಿ ಯಾವ ಲಿಂಗದ ಸದಸ್ಯರು ಮಾತಿಗೆ ಹೆಚ್ಚು ಬೆಲೆ ಕೊಡುವರು ಎಂಬ ಸಂಗತಿ ಪ್ರಮಾಣವನ್ನು ತೋರಿಸಲಾಗಿದೆ. ಹೊಸಪೇಟೆ ನಗರಸಭೆಯ ಶೇ. ೬೦ರಷ್ಟು ಚುನಾಯಿತ ಸದಸ್ಯರು ಮತ್ತು ಕೂಡ್ಲಿಗಿ ಪಟ್ಟಣ ಪಂಚಾಯಿತಿಯ ಶೇ. ೮೫ರಷ್ಟು ಚುನಾಯಿತ ಸದಸ್ಯರು ಗಂಡು ಮಕ್ಕಳ ಮಾತಿಗೆ ಹೆಚ್ಚು ಬೆಲೆ ಕೊಡಲಾಗುತ್ತದೆ. ಉಳಿದ ನಗರಸಭೆಯ ಶೇ. ೪೦ರಷ್ಟು ಮತ್ತು ಪಟ್ಟಣ ಪಂಚಾಯಿತಿಯ ಶೇ. ೧೫ರಷ್ಟು ಚುನಾಯಿತ ಮಹಿಳಾ ಸದಸ್ಯರ ಮಾತಿಗೆ ಹೆಚ್ಚು ಬೆಲೆ ಕೊಡುತ್ತಾರೆ ಎಂಬುದು ತಿಳಿದುಬಂದಿದೆ. ಒಟ್ಟಾರೆಯಾಗಿ ವಿಶ್ಲೇಷಣೆಯಿಂದ ತಿಳಿದುಬರುವ ಸಂಗತಿಯೆಂದರೆ ಸಾಪೇಕ್ಷವಾಗಿ ಮುಂದುವರಿದ ಹೊಸಪೇಟೆ ನಗರಸಭೆಯ ಸದಸ್ಯರಿಗಿಂತ ತೀರಾ ಹಿಂದುಳಿದ ಕೂಡ್ಲಿಗಿ ಪಟ್ಟಣ ಪಂಚಾಯಿತಿಯ ಮಹಿಳಾ ಸದಸ್ಯರ ಮಾತಿಗೆ ಬೆಂಬಲ ಸಿಗುವುದು ಕೆಳಮಟ್ಟದಲ್ಲಿರುವುದು ತಿಳಿದುಬಂದಿದೆ. ಇಲ್ಲಿ ನಾವು ಸೂಕ್ಷ್ಮವಾಗಿ ಗಮನಿಸಬೇಕಾದ ಅಂಶವೆಂದರೆ ಮಹಿಳೆಯರಿಗೆ ಮೀಸಲಾತಿಯು ಇರುವುದರಿಂದ ರಾಜಕೀಯದ ಪ್ರವೇಶವಾಗಿರುವುದರ ಪರಿಣಾಮವಾಗಿ ಲಿಂಗ ಅಸಮಾನತೆ ಮತ್ತು ಅಭಿವೃದ್ಧಿಯ ಗತಿಗಳ ನಡುವೆ ಸಂಬಂಧವಿರುವುದು ಗಮನಿಸಬಹುದಾಗಿದೆ. ಸ್ಥಳೀಯ ಸಂಸ್ಥೆಗಳಲ್ಲಿ ಹೆಚ್ಚಾಗಿ ಮಹಿಳೆಯರ ಸದಸ್ಯತ್ವದ ಸ್ಥಾನವನ್ನು ಅವರ ಗಂಡಂದಿರೇ ನಿಭಾಯಿಸುವುದನ್ನು ನೋಡುತ್ತಿದ್ದೇವೆ. ಅಂದರೆ ಪುರುಷ ಮಹಿಳೆಯ ನಡುವೆ ರಾಜಕೀಯ ಭಾಗವಹಿಸುವಿಕೆಯಲ್ಲಿ ತೀವ್ರ ವ್ಯತ್ಯಾಸವಿರುವುದರಿಂದ ಪಟ್ಟಣ ಪಂಚಾಯಿತಿಯುಲ್ಲಿ ಮಹಿಳೆಗೆ ಹೆಚ್ಚಿನ ಪ್ರಾತಿನಿಧ್ಯ ಸಿಗದೆ ಅಭಿವೃದ್ಧಿಯಿಂದ ವಂಚಿತಗೊಂಡಿರುವುದರ ಹಿನ್ನೆಲೆಯಾಗಿ ಹಿಂದುಳಿಯಿತು ಎಂದು ತಿಳಿಯಬಹುದಾಗಿದೆ. ಸಾಂಪ್ರದಾಯಿಕ ಲಿಂಗ ಶ್ರೇಣಿ ವ್ಯವಸ್ಥೆಯಿಂದ ಮಹಿಳೆಯರಿಗೆ ಅತ್ಯಂತ ಕೆಳಮಟ್ಟದ ಸ್ಥಾನವನ್ನು ನೀಡುತ್ತಿರುವುದು ವಿವಿಧ ಅಧ್ಯಯಗಳಿಂದ ಗಮನಿಸಬಹುದಾಗಿದೆ. ಅಂದರೆ, ಸ್ಥಳೀಯ ಸಂಸ್ಥೆಗಳು ಸಮಾಜದ ಅಂಚಿಗೆ ದೂಡಲ್ಪಟ್ಟ ಮಹಿಳೆಯನ್ನು ಸ್ಥಳೀಯ ಸಂಸ್ಥೆಗಳ ಆಯ್ಕೆಯ ಪ್ರಕ್ರಿಯೆಯಲ್ಲಿ ಒಳಗೊಳ್ಳುವುದಾಗಿದೆ. ಆದರೆ ಅವಕಾಶಗಳನ್ನು ಒಂದು ಕಡೆ ವಿಸ್ತರಿಸಿದಂತೆ ಇನ್ನೊಂದು ಕಡೆ ಅವುಗಳನ್ನು ಅಳವಡಿಸಿಕೊಳ್ಳುವಲ್ಲಿ ಅವಶ್ಯವಾದ ಮಹಿಳೆಯರ ಸಾಮರ್ಥ್ಯವನ್ನು ಉತ್ತಮಪಡಿಸಬೇಕಾದ ತರಬೇತಿ ಕಾರ್ಯಕ್ರಮಗಳ ಅವಶ್ಯಕತೆಯಿದೆ ಎಂದು ತಿಳಿಯಲಾಗಿದೆ.

| ಸಾಮಾನ್ಯಸಭೆಯ ಚರ್ಚೆಯಲ್ಲಿ ಯಾವ ಜಾತಿ ಸದಸ್ಯರ ಮಾತಿಗೆ ಹೆಚ್ಚು ಬೆಲೆ ಕೊಡುವರು | | | | |
|---|---|---|---|---|
| **ಯಾವ ಜಾತಿ ಸದಸ್ಯರ ಮಾತಿಗೆ ಹೆಚ್ಚು ಬೆಲೆ ಕೊಡುವರು** | **ಹೊಸಪೇಟೆ** | | **ಕೂಡ್ಲಿಗಿ** | |
| ಪರಿಶಿಷ್ಟರು(ಎಸ್.ಸಿ./ಎಸ್.ಟಿ.) | ೧೬ | ೪೫.೭೯ | ೭ | ೩೫.೦೦ |
| ಸಾಮಾನ್ಯರಿಗೆ | ೧೩ | ೩೭.೧೬ | ೯ | ೪೫.೦೦ |
| ಹಿಂದುಳಿದ | ೬ | ೧೭.೧೬ | ೪ | ೨೦.೦೦ |
| ಒಟ್ಟು | ೩೫ | ೧೦೦ | ೨೦ | ೧೦೦ |

**ಮೂಲ: ಕ್ಷೇತ್ರ ಕಾರ್ಯದ ಮಾಹಿತಿ**

ನಗರ ಪ್ರದೇಶಗಳ ಮೇಲಿನ ಅಂಶಕ್ಕೆ ಸಂಬಂಧಿಸಿದಂತೆ ಸಾಮಾನ್ಯ ಸಭೆಯ ಚರ್ಚೆಯಲ್ಲಿ ಯಾವ ಜಾತಿ ಸದಸ್ಯರ ಮಾತಿಗೆ ಹೆಚ್ಚು ಬೆಲೆ ಕೊಡುವುದರ ಪ್ರಮಾಣವನ್ನು ನೀಡಲಾಗಿದೆ. ಹೊಸಪೇಟೆ ನಗರಸಭೆಯ ಶೇ. ೪೫.೭೯ ಪರಿಶಿಷ್ಟ ಚುನಾಯಿತ ಸದಸ್ಯರ ಮತ್ತು ಕೂಡ್ಲಿಗಿ ಪಟ್ಟಣ ಪಂಚಾಯಿತಿಯ ಶೇ. ೩೫ರಷ್ಟು ಪರಿಶಿಷ್ಟ ಚುನಾಯಿತ ಸದಸ್ಯರು ನಮ್ಮ ಮಾತಿಗೆ ಬೆಲೆ ಕೊಡುತ್ತಾರೆಂದು ತಿಳಿಸಿರುತ್ತಾರೆ. ಅದೇ ರೀತಿಯಾಗಿ ನಗರಸಭೆಯ ಶೇ. ೩೭.೧೬ರಷ್ಟು ಸಾಮಾನ್ಯ ಚುನಾಯಿತ ಸದಸ್ಯರು ಮತ್ತು ಪಟ್ಟಣ ಪಂಚಾಯಿತಿಯ ಶೇ. ೪೫ರಷ್ಟು ಸಾಮಾನ್ಯ ಚುನಾಯಿತ ಸದಸ್ಯರ ಮಾತಿಗೆ ಹೆಚ್ಚಿನ ಬೆಲೆ ನೀಡುತ್ತಾರೆ ಎಂದು ಹೇಳಿಕೊಂಡಿರುವುದಾಗಿ ಉಳಿದ ನಗರಸಭೆಯ ಶೇ. ೧೭.೧೬ರಷ್ಟು ಚುನಾಯಿತ ಸದಸ್ಯರು ಮತ್ತು ಪಟ್ಟಣ ಪಂಚಾಯಿತಿಯ ಶೇ. ೨೦ರಷ್ಟು ಚುನಾಯಿತ ಸದಸ್ಯರ ಮಾತಿಗೆ ಬೆಲೆ ಕೊಡುತ್ತಾರೆ ಎಂದು ಅಧ್ಯಯಗಳಿಂದ ತಿಳಿದುಬಂದಿದೆ. ಒಟ್ಟಾರೆ ಸಾಪೇಕ್ಷವಾಗಿ ಮುಂದುವರಿದ ಹೊಸಪೇಟೆ ನಗರಸಭೆಯ ಎಲ್ಲಾ ಚುನಾಯಿತ ಸದಸ್ಯರ ಮಾತಿಗೆ ತಕ್ಕಮಟ್ಟಿಗೆಯಾದರೂ ಹೆಚ್ಚಿನ ಬೆಲೆ ಕೊಟ್ಟಿರುವುದು ನೋಡಬಹುದಾಗಿದೆ. ಆದರೆ ಹಿಂದುಳಿದ ಕೂಡ್ಲಿಗಿ ಪಟ್ಟಣ ಪಂಚಾಯಿತಿ ಪರಿಶಿಷ್ಟ ಚುನಾಯಿತ ಸದಸ್ಯರ ಮಾತಿಗೆ ಬೆಲೆ ಕೊಡುವುದರ ಪ್ರಮಾಣವನ್ನು ನೋಡಿದಾಗ ಕೆಳಮಟ್ಟದಲ್ಲಿರುವುದು ತಿಳಿಯಬಹುದಾಗಿದೆ. ಇಲ್ಲಿ ಗಮನಿಸಬಹುದಾದ ಅಂಶವೆಂದರೆ ಹಿಂದುಳಿದ ಪಟ್ಟಣ ಪಂಚಾಯಿತಿ ಪರಿಶಿಷ್ಟ ಚುನಾಯಿತ ಸದಸ್ಯರು ಜಾತಿ ಕಾರಣದಿಂದ, ಅಕ್ಷರ ವಂಚಿತರಾಗಿದ್ದರಿಂದ ಶೋಷಣೆಗೆ ಒಳಗಾಗಿ ಅವರು ರಾಜಕೀಯದಲ್ಲಿ ಭಾಗವಹಿಸುವುದು ಒಂದು ಸವಾಲಾಗಿದೆ. ಆದರೆ ಸಾಂಪ್ರದಾಯಿಕವಾಗಿ ಪಟ್ಟಣ ಪಂಚಾಯಿತಿ ನಾಯಕತ್ವವು ನಗರ ಗಣ್ಯರ ಕೈಯಲ್ಲಿ ಕೇಂದ್ರೀಕೃತವಾಗಿದೆ. ಸಾಮಾನ್ಯವಾಗಿ ಹೇಳುವುದಾದರೆ ಅವರು ಮೇಲ್ಜಾತಿಗೆ ಸೇರಿದವರು ಮತ್ತು ವಯಸ್ಸಿನಲ್ಲಿ ಹಿರಿಯರಾಗಿದ್ದಾರೆ ಎಂಬುದನ್ನು ಗಮನಿಸಲಾಗಿದೆ. ಪಟ್ಟಣ ಪಂಚಾಯಿತಿ ಗಣ್ಯರ ಪ್ರಧಾನವಾದ ಲಕ್ಷಣವೆಂದರೆ ಭೂಮಾಲಿಕತ್ವವು ಅವರ ಹೆಚ್ಚಿನ ಆದಾಯದ ಮೂಲವಾಗಿದ್ದು ಅಧಿಕಾರ ಸಂರಚನೆಯಲ್ಲಿ ಆದಾಯವು ಪ್ರಧಾನವಾದ ಪಾತ್ರವನ್ನು ವಹಿಸುತ್ತದೆ ಎಮದು ತಿಳಿಯಲಾಗಿದೆ. ಭೂಮಾಲಿಕತ್ವವು ಭೂರಹಿತ ಕೆಳಜಾತಿ ಕಾರ್ಮಿಕರಿಗೆ ಪರಾವಲಂಬನೆಯನ್ನು ಸೃಷ್ಟಸುತ್ತದೆ. ಅದರ ಜೊತೆಗೆ ದಲಿತರಿಗೂ ಈ ಉನ್ನತ ಜಾತಿಯವರು, ಪ್ರಭಾವಿಗಳು ಅಧಿಕಾರಗಳ ಮಧ್ಯೆ ಭಿನ್ನಭಿಪ್ರಾಯಗಳು ಇರುವುದು ತಿಳಿದುಬಂದಿದೆ. ಸ್ಥಳೀಯ ಮಟ್ಟದಲ್ಲಿ ಅಧಿಕಾರ ರಚನೆಯೂ ಆಳ್ವಿಕೆ ಮಾಡುವ, ಬಲವಂತಿಕೆ ಮಾಡುವ ಮತ್ತು ಬಲವಂತದ ಶೊಷಣೆ ಮಾಡುವ ರೂಪದಲ್ಲಿ ಕಂಡು ಬಂದಿದೆ. ಇದು ಜಾತಿ

ತಾರತಮ್ಯದ ಸೂಕ್ಷ್ಮ ಸಂಗತಿಗಳನ್ನು ಇಲ್ಲಿ ಗುರುತಿಸಬಹುದಾಗಿದೆ. ಇದರಿಂದಾಗಿ, ನಗರ ಪ್ರದೇಶಗಳಲ್ಲಿ ಉತ್ತಮ ಆಡಳಿತ ನೀಡುವ ದೃಷ್ಟಿಯಿಂದ ಆಡಳಿತದಲ್ಲಿ ಚುನಾಯಿತ ಸದಸ್ಯರ ಪ್ರಾತಿನಿಧ್ಯವನ್ನು ಇನ್ನಷ್ಟು ಶಕ್ತಿಶಾಲಿಗೊಳಿಸುವ ಅವಶ್ಯವಿದೆ ಎಂದು ತಿಳಿಯಲಾಗಿದೆ.

**೬.೮. ನಗರವಾರು ಸಂದರ್ಶನ ಮಾಡಿದ ಚುನಾಯಿತ ಪ್ರತಿನಿಧಿಗಳ ತೆರಿಗೆಯ ಬಗ್ಗೆ ಅಭಿಪ್ರಾಯಗಳು**

**ನಿಮ್ಮ ಪಟ್ಟಣದಲ್ಲಿ ಎಲ್ಲಾ ಜನರಿಗೆ ತೆರಿಗೆ ಪಾವತಿ ಮಾಡುವುದು**

| ನಿಮ್ಮ ಚುನಾಯಿತ ಪ್ರತಿನಿಧಿಗಳ ತೆರಿಗೆಯ ಬಗ್ಗೆ ಅಭಿಪ್ರಾಯಗಳು | ಹೊಸಪೇಟೆ ನಗರ ಸಭೆ | | ಕೂಡ್ಲಿಗಿ ಪಟ್ಟಣಪಂಚಾಯಿತಿ | |
|---|---|---|---|---|
| | ಸಂಖ್ಯೆಗಳು | ಶೇಕಡವಾರು | ಸಂಖ್ಯೆಗಳು | ಶೇಕಡವಾರು |
| ನಿಮ್ಮ ಪಟ್ಟಣದಲ್ಲಿ ಎಲ್ಲಾ ಜನರು ಸರಿಯಾಗಿ ತೆರಿಗೆ ಪಾವತಿ ಕುರಿತು | | | | |
| ಕಟ್ಟುತ್ತಾರೆ | ೨೩ | ೬೫.೭೧ | ೧೭ | ೮೫.೦೦ |
| ಇಲ್ಲಾ | ೧೨ | ೩೪.೨೯ | ೩ | ೧೫.೦೦ |
| ಒಟ್ಟು | ೩೫ | ೧೦೦ | ೨೦ | ೧೦೦ |

**ಮೂಲ: ಕ್ಷೇತ್ರ ಕಾರ್ಯದ ಮಾಹಿತಿ**

ನಗರ ಪ್ರದೇಶದಲ್ಲಿ ಮೇಲಿನ ಅಂಶಕ್ಕೆ ಸಂಬಂಧಿಸಿದಂತೆ ಪಟ್ಟಣದಲ್ಲಿ ಎಲ್ಲಾ ಜನರು ತೆರಿಗೆ ಪಾವತಿ ಮಾಡುವ ಸಂಗತಿಯನ್ನು ತೋರಿಸಲಾಗಿದೆ. ಹೊಸಪೇಟೆ ನಗರಸಭೆಯ ಶೇ. ೬೫.೭೧ರಷ್ಟು ಮತ್ತು ಕೂಡ್ಲಿಗಿ ಪಟ್ಟಣ ಪಂಚಾಯಿತಿಯ ಶೇ. ೮೫ರಷ್ಟು ಸದಸ್ಯರ ಪ್ರಕಾರ ಜನರು ತೆರಿಗೆಯನ್ನು ಪಾವತಿಸುತ್ತಾರೆ ಎಂಬುದಾಗಿ ತಿಳಿಸಿರುತ್ತಾರೆ. ಉಳಿದ ನಗರಸಭೆಯ ಶೇ. ೩೪.೨೯ರಷ್ಟು ಚುನಾಯಿತ ಸದಸ್ಯರು ಮತ್ತು ಕೂಡ್ಲಿಗಿ ಪಟ್ಟಣ ಪಂಚಾಯಿತಿಯ ಶೇ. ೧೫ರಷ್ಟು ಚುನಾಯಿತ ಸದಸ್ಯರ ಪ್ರಕಾರ ಜನರು ತೆರಿಗೆ ಪಾವತಿ ಮಾಡುತ್ತಾರೆ ಎಂದು ತಿಳಿದುಬಂದಿದೆ. ಒಟ್ಟಾರೆ ಸಾಪೇಕ್ಷವಾಗಿ ಮುಂದುವರಿದ ಹೊಸಪೇಟೆ ನಗರಸಭೆಯ ಚುನಾಯಿತ ಸದಸ್ಯರಿಗಿಂತ ಹಿಂದುಳಿದ ಕೂಡ್ಲಿಗಿ ಪಟ್ಟಣ ಪಂಚಾಯಿತಿ ಸದಸ್ಯರು ಜನರಿಂದ ನಿಯಾಮಿತವಾಗಿ ತೆರಿಗೆ ಸಂಗ್ರಹವಾಗುತ್ತದೆ ಎಂದು ತಿಳಿದುಬಂದಿದೆ. ಆದರೂ ಪಟ್ಟಣ ಪಂಚಾಯಿತಿಯು ಹೆಚ್ಚು ಹಿಂದುಳಿದಿರುವ ಅಂಶ ಹಲವಾರು ಅಂಕಿ ಅಂಶಗಳಿಂದ ಗೊತ್ತಾಗುತ್ತದೆ. ಇದರಿಂದ ನಮಗೆ ಗೊತ್ತಾಗುವ ಸಂಗತಿಯೇನೆಂದರೆ ಕೇವಲ ಸರಿಯಾಗಿ ತೆರಿಗೆ ಸಂಗ್ರಹಿಸುವುದರಿಂದ ಅಭಿವೃದ್ಧಿಯಾಗುತ್ತದೆ ಎಂಬ ನಂಬಿಕೆ ಸುಳ್ಳು ಪಟ್ಟಣ ಪಂಚಾಯಿತಿಯಲ್ಲಿ ಚುನಾಯಿತ ಸದಸ್ಯರು ರಾಜಕೀಯದಲ್ಲಿ ಭಾಗವಹಿಸವುದರರೊಂದಿಗೆ ಸ್ಥಳೀಯ ಸಂಸ್ಥೆಯಿಂದ ಸಂಗ್ರಹಗೊಂಡ ತೆರಿಗೆಯನ್ನು ನಿಯಮಿತವಾಗಿ ಬಳಕೆ ಮಾಡುವುದರ ಜೊತೆಗೆ ವಾರ್ಡಿ ಜನಭಾಗವಹಿಸುವುದರ ಮೂಲಕ ಅದರಲ್ಲೂ ಯುವಕರು, ಮಹಿಳೆಯರು ಮತ್ತು ಅಂಚಿಗೊತ್ತರಿಸಲ್ಪಟ್ಟವರು ಸಕ್ರಿಯವಾಗಿ ಭಾಗವಹಿಸಿ ಯೋಜನೆಗಳನ್ನು ವೈಜ್ಞಾನಿಕವಾಗಿ ಹೇಗೆ ತಯಾರಿಸಬಹುದು ಎನ್ನುವ ಬಗ್ಗೆ ಚುನಾಯಿತ ಸದಸ್ಯರಿಗೆ ಅರಿವು ಮೂಡಿಸುವ ಮೂಲಕ ಅಭಿವೃದ್ಧಿ ನಗರವನ್ನಾಗಿ ಮಾಡುವ ಅಗತ್ಯವಿದೆ ಎಂದು ತಿಳಿಯಲಾಗಿದೆ.

ಹೌದಾದರೆ ವರ್ಷದಲ್ಲಿ ಎಷ್ಟು ಸಲ ಕಟ್ಟುತ್ತಾರೆ

| ವರ್ಷದಲ್ಲಿ ಎಷ್ಟು ಸಲ ಕಟ್ಟುತ್ತಾರೆ | ಹೊಸಪೇಟೆ | | ಕೂಡ್ಲಿಗಿ | |
|---|---|---|---|---|
| ೧ ಸಲ | ೨೩ | ೬೫.೭೧ | ೧೭ | ೮೫.೦೦ |
| ೨ ಸಲ | ೦ | ೦.೦೦ | ೦ | ೦.೦೦ |
| ಒಟ್ಟು | ೨೩ | ೬೫.೭೧ | ೨೦ | ೧೦೦ |

ಮೂಲ: ಕ್ಷೇತ್ರ ಕಾರ್ಯದ ಮಾಹಿತಿ

ನಗರವಾರು ಸಂದರ್ಶಿದಾಗ ಮೇಲಿನ ಅಂಶಕ್ಕೆ ಸಂಬಂಧಿಸಿದಂತೆ ತೆರಿಗೆಯನ್ನು ವರ್ಷದಲ್ಲಿ ಎಷ್ಟು ಸಲ ಕಟ್ಟುವುದರ ಹೇಳಿಕೆಗಳನ್ನು ತೋರಿಸಲಾಗಿದೆ. ಹೊಸಪೇಟೆ ನಗರಸಭೆಯ ಶೇ. ೬೫.೭೧ರಷ್ಟು ಚುನಾಯಿತ ಸದಸ್ಯರು ಮತ್ತು ಕೂಡ್ಲಿಗಿಯ ಶೇ. ೮೫ರಷ್ಟು ಚುನಾಯಿತ ಸದಸ್ಯರು ತೆರಿಗೆಯನ್ನು ವರ್ಷದಲ್ಲಿ ಒಂದು ಬಾರಿ ಎಂದು ತಿಳಿಸಿರುತ್ತಾರೆ. ಒಟ್ಟಾರೆಯಾಗಿ ಮುಂದುವರಿದ ಹೊಸಪೇಟೆ ನಗರಸಭೆಯ ಸದಸ್ಯರಿಗಿಂತ ಹಿಂದುಳಿದ ಕೂಡ್ಲಿಗಿ ಪಟ್ಟಣ ಪಂಚಾಯಿತಿಯ ಚುನಾಯಿತ ಸದಸ್ಯರು ತೆರಿಗೆಯನ್ನು ವಸೂಲಿ ಮಾಡುವುದರಲ್ಲಿ ಹೆಚ್ಚು ಆಸಕ್ತಿವಹಿಸಿ ಒಂದೇ ಬಾರಿಗೆ ಹೆಚ್ಚಿನ ಪ್ರಮಾಣದಲ್ಲಿ ಸಂಗ್ರಹಿಸುತ್ತಿರುವುದು ಸ್ವಾಗತಾರ್ಹ ಸಂಗತಿಯಾಗಿದೆ. ಇಲ್ಲಿ ಗಮನಿಸುವ ಅಂಶವೇನೆಂದರೆ ಪಟ್ಟಣ ಪಂಚಾಯಿತಿ ಸ್ಥಳೀಯ ಆದಾಯವು ಸಮೃದ್ಧವಾಗಿದ್ದರು ಅಲ್ಲಿಯ ಜನರಿಗೆ ಉತ್ತಮ ಜೀವನ ಮಟ್ಟವನ್ನು ಒದಗಿಸಿಕೊಡುವ ಗುರಿಯನ್ನು ಈಡೇರಿಸದಾಗಿದೆ. ಆದರೆ ಶಿಕ್ಷಣ ಮತ್ತು ಸಂಪತ್ತಿನ ಆಧಾರದ ಮೇಲೆ ಅಧಿಕಾರವು ಕಳೆಗುಂದಿ ಚುನಾಯಿತ ಸದಸ್ಯರ ನಿರ್ಲಕ್ಷಿತ ಸ್ಥಾನಮಾನದಿಂದಾಗಿ ಪ್ರಯೋಜನೆಯನ್ನು ಪಡೆದುಕೊಳ್ಳಲು ವಿಫಲರಾಗಿ ಮೇಲಾಗಿ ಇಂತಹ ಸಾಮಾಜಿಕ ಮತ್ತು ರಾಜಕೀಯ ಬದಲಾವಣೆಗಳನ್ನು ಸದಸ್ಯರು ಮುಟ್ಟುವುದು ಸಾಧ್ಯವಾಗದೆ ಹಿಂದುಳಿದಿದೆ ಎಂದು ತಿಳಿಯಲಾಗಿದೆ. ಅಂದಹಾಗೆ ಪಟ್ಟಣ ಪಂಚಾಯಿತಿ ಚುನಾಯಿತ ಸದಸ್ಯರಲ್ಲಿ ಆರ್ಥಿಕ ಸ್ಥಿತಿಗತಿಗಳನ್ನು ಸುಧಾರಿಸುವ ಜೊತೆಗೆ ಅದರ ಮೂಲಕ ಮೇಲ್ಜಾತಿಗಳ ವಿರೋಧವನ್ನು ಪ್ರಶ್ನಿಸುವ ಶಕ್ತಿಯನ್ನು ಒದಗಿಸುವಂತಹ ತರಬೇತಿಗಳನ್ನು ಏರ್ಪಡಿಸುವ ಅಗತ್ಯವಿದೆ ಎಂದು ತಿಳಿಯಲಾಗಿದೆ.

ನಗರಸಭೆ/ಪಟ್ಟಣ ಪಂಚಾಯಿತಿಯ ಆದಾಯದ ಮೂಲಗಳ ಕುರಿತು

| ಎರಡು ಸ್ಥಳೀಯ ಸಂಸ್ಥೆಗಳಲ್ಲಿ ಆದಾಯದ ಮೂಲಗಳು | ಹೊಸಪೇಟೆ | | ಕೂಡ್ಲಿಗಿ | |
|---|---|---|---|---|
| ನೀರು, ಆಸ್ತಿ, ಮಳಿಗೆ, ಖಾಲಿ ಜಾಗ, ಸಂತೆ, ಹೊಸ ಕಟ್ಟಡ, ಸಿನಿಮಾ ಮಂದಿರಗಳ ಮೇಲೆ ಹಾಗೂ ಜಾತ್ರೆ. | ೨೬ | ೭೪.೨೯ | ೧೧ | ೫೫.೦೦ |
| ಸ್ಥಳೀಯ ಸಂಸ್ಥೆಗಳಿಗೆ ವಾರ್ಷಿಕ ಅನುದಾನವನ್ನು ನೀರಿನ ಸೌಲಭ್ಯ ಒದಗಿಸಲು, ವಿದ್ಯುತ್ಛಕ್ತಿ ತುಂಬಲು, | | | | |

| ನೈರ್ಮಲೀಕರಣ. | ೪ | ೧೧.೪೩ | ೪ | ೨೦.೦೦ |
|---|---|---|---|---|
| ರಾಜ್ಯ ಸರ್ಕಾರವು ೧೧ನೇ ಹಣಕಾಸಿನ ಆಯೋಗದಲ್ಲಿ ಅನುದಾನವನ್ನು ಬಿಡುಗಡೆ ಮಾಡುತ್ತದೆ.(ಎಸ್.ಎಫ್.ಸಿ) | ೫ | ೧೪.೨೯ | ೫ | ೨೫.೦೦ |
| ಒಟ್ಟು | ೩೫ | ೧೦೦ | ೨೦ | ೧೦೦ |

ಮೂಲ: ಕ್ಷೇತ್ರ ಕಾರ್ಯದ ಮಾಹಿತಿ

ನಗರ ಸ್ಥಳೀಯ ಸಂಸ್ಥೆಗಳ ವಿವಿಧ ಆದಾಯದ ಮೂಲಗಳ ವಿವರವನ್ನು ನೀಡಲಾಗಿದೆ. ಹೊಸಪೇಟೆ ನಗರಸಭೆಯ ಶೇ. ೪೭.೭೯ರಷ್ಟು ಚುನಾಯಿತ ಸದಸ್ಯರು ಮತ್ತು ಕೂಡ್ಲಿಗಿ ಪಟ್ಟಣ ಪಂಚಾಯಿತಿಯ ಶೇ. ೫೫ರಷ್ಟು ಚುನಾಯಿತ ಸದಸ್ಯರು ಸ್ಥಳೀಯ ಸಂಸ್ಥೆಗಳಿಗೆ ನೀರು, ಆಸ್ತಿ, ಮಳಿಗೆ ಇತರೆ (ಖಾಲಿ ಜಾಗ, ಸಂತೆ, ಹೊಸ ಕಟ್ಟಡ, ಸಿನಿಮಾ ಮಂದಿರಗಳ ಮೇಲೆ ಹಾಗೂ ಜಾತ್ರೆ) ಎಂಬ ಮೂಲಗಳನ್ನು ಹೆಸರಿಸಿರುತ್ತಾರೆ. ಅದೇ ರೀತಿ ನಗರಸಭೆಯ ಶೇ. ೧೧.೪೩ರಷ್ಟು ಚುನಾಯಿತ ಸದಸ್ಯರು ಮತ್ತು ಪಟ್ಟಣ ಪಂಚಾಯಿತಿಯ ಶೇ. ೨೦ರಷ್ಟು (ಸ್ಥಳೀಯ ಸಂಸ್ಥೆಗಳಿಗೆ ವಾರ್ಷಿಕ ಅನುದಾನ, ನೀರು, ನೈರ್ಮಲ್ಯೀಕರಣ, ವಿದ್ಯುಚ್ಛಕ್ತಿ ತುಂಬಲು) ಎನ್ನುವ ಮೂಲಗಳನ್ನು ತಿಳಿಸಿರುತ್ತಾರೆ. ಉಳಿದ ನಗರಸಭೆಯ ಶೇ. ೧೪.೨೯ರಷ್ಟು ಚುನಾಯಿತ ಸದಸ್ಯರು ಮತ್ತು ಪಟ್ಟಣ ಪಂಚಾಯಿತಿಯ ಶೇ. ೨೫ರಷ್ಟು ಚುನಾಯಿತ ಸದಸ್ಯರು ಹಣದ ಮೂಲಗಳನ್ನು (ಎಸ್.ಎಫ್.ಸಿ)ಯ ಬಗ್ಗೆ ತಿಳಿಸಿರುತ್ತಾರೆ. ಒಟ್ಟಾರೆ ಮುಂದುವರಿದ ಹೊಸಪೇಟೆ ನಗರಸಭೆ ಸದಸ್ಯರು ತೀರಾ ಹಿಂದುಳಿದ ಪಟ್ಟಣ ಪಂಚಾಯಿತಿಯ ಸದಸ್ಯರ ಪ್ರಮಾಣ ಸರಿಸುಮಾರು ಸಮನಾಗಿರುವುದು ಕಂಡುಬರುತ್ತದೆ. ಇದು ಉತ್ತಮವಾದ ಬೆಳವಣಿಗೆ ಎನ್ನಬಹುದು. ಅಲ್ಲದೆ ಕೆಲವು ಸದಸ್ಯರು ಮಾತ್ರ ಕ್ರಿಯಾಶೀಲರಾಗಿ ಭಾಗವಹಿಸುವುದು, ವಾರ್ಡಿನ ಜನರು ಸದಸ್ಯರೊಂದಿಗೆ ಸಹಕರಿಸದೆಯಿರುವುದು, ಸಾಮಾನ್ಯ ಸಭೆಯ ಚರ್ಚೆಯಲ್ಲಿ ನಗರದ ಜನತೆ ಭಾಗವಹಿಸದೆ ಇರುವುದು, ಮುಂತಾದ ಅಭಿವೃದ್ಧಿಯ ಕಾರ್ಯಗಳ ಮೇಲೆ ವ್ಯತಿರಿಕ್ತ ಪರಿಣಾಮದಿಂದಾಗಿ ಹಿಂದುಳಿಯಿತು ಎನ್ನಲಾಗಿದೆ. ಸ್ಥಳೀಯ ರಾಜಕೀಯದಲ್ಲಿ ಇಚ್ಛಾಶಕ್ತಿಯ ಮೂಲಕ ಪರಿಸ್ಥಿತಿಯನ್ನು ಉತ್ತಮಗೊಳಿಸುವ ಕೆಲವು ಕ್ರಮಗಳನ್ನು ತೆಗೆದುಕೊಳ್ಳುವ ಅಗತ್ಯವಿದೆ.

**ಪ್ರತಿ ಮೂಲದಿಂದ ವರ್ಷಕ್ಕೆ ಬರುವ ಆದಾಯ**

| ವರ್ಷಕ್ಕೆ ಬರುವ ಆದಾಯದ ವಿವರ | ಹೊಸಪೇಟೆ | | ಕೂಡ್ಲಿಗಿ | |
|---|---|---|---|---|
| ೧೦,೦೦೦-೧ಲಕ್ಷ | ೧೩ | ೩೭.೧೬ | ೭ | ೩೫.೦೦ |
| ೧ ಲಕ್ಷದಿಂದ-೨ಲಕ್ಷ | ೧೮ | ೫೧.೪೭ | ೨ | ೧೦.೦೦ |
| ಗೊತ್ತಿಲ್ಲ | ೪ | ೧೧.೪೭ | ೧೧ | ೫೫.೦೦ |
| ಒಟ್ಟು | ೩೫ | ೧೦೦ | ೨೦ | ೧೦೦ |

ಮೂಲ: ಕ್ಷೇತ್ರ ಕಾರ್ಯದ ಮಾಹಿತಿ

ಮೇಲಿನ ಅಂಶಕ್ಕೆ ಸಂಬಂಧಿಸಿದಂತೆ ವರ್ಷಕ್ಕೆ ಬರುವ ಆದಾಯದ ವಿವರಗಳನ್ನು ತೋರಿಸಲಾಗಿದೆ. ಸ್ಥಳೀಯ ಮಟ್ಟದಲ್ಲಿ ತೆರಿಗೆ ಸಂಗ್ರಹಿಸದೆ ಇದ್ದರೆ ನಮಗೆ ಉತ್ತರದಾಯಿ ನಗರ ಸ್ಥಳೀಯ ಸಂಸ್ಥೆಗಳು ಸಿಗಲು ಸಾಧ್ಯವಿಲ್ಲ. ಆಸ್ತಿ ತೆರಿಗೆ ಸಂಗ್ರಹದ ಅಧಿಕಾರವನ್ನು ರಾಜ್ಯದಲ್ಲಿನ ಸ್ಥಳೀಯ ಸಂಸ್ಥೆಗಳು

ಪೂರ್ಣ ಪ್ರಮಾಣದಲ್ಲಿ ಬಳಸಿಕೊಳ್ಳುತ್ತಿಲ್ಲ. ಮತದಾರರಿಂದ ತೆರಿಗೆ ಸಂಗ್ರಹಿಸಿದ್ದೇ ಆದರೆ ಅಂತಹ ಹಣದ ದುರ್ಬಳಕೆಯನ್ನು ಜನ ಖಂಡಿತಾ ಸಹಿಸಲಾರರು ಎಂಬುದು ಚೆನ್ನಾಗಿ ಗೊತ್ತಿದೆ. ತೆರಿಗೆ ಸಂಗ್ರಹಕ್ಕೂ ಉತ್ತರದಾಯಿತ್ವಕ್ಕೂ ಇರುವ ಸಂಬಂಧ ಎಂತಹುದು ಎಂಬುದು ರಾಜ್ಯಮಟ್ಟದಲ್ಲೇ ಗೊತ್ತಿರುವ ಸಂಗತಿ. ಹಾಗಾಗಿ, ಹೊಸಪೇಟೆ ನಗರಸಭೆಯ ಶೇ. ೩೭.೧೬ರಷ್ಟು ಚುನಾಯಿತ ಸದಸ್ಯರು ಮತ್ತು ಕೂಡ್ಲಿಗಿ ಪಟ್ಟಣ ಪಂಚಾಯಿತಿಯ ಶೇ. ೩೫ರಷ್ಟು ಚುನಾಯಿತ ಸದಸ್ಯರ ಪ್ರಕಾರ ವರ್ಷಕ್ಕೆ ನಗರ ಸ್ಥಳೀಯ ಸಂಸ್ಥೆಗಳಿಗೆ ಹತ್ತು ಸಾವಿರದಿಂದ ಒಂದು ಲಕ್ಷದವರೆಗೆ ಎಂಬುದಾಗಿ ಅದೇ ರೀತಿ ಹೊಸಪೇಟೆ ನಗರಸಭೆಯ ಶೇ. ೫೧.೪೭ರಷ್ಟು ಚುನಾಯಿತ ಸದಸ್ಯರು ಮತ್ತು ಕೂಡ್ಲಿಗಿ ಪಟ್ಟಣ ಪಂಚಾಯಿತಿಯ ಶೇ. ೧೦ರಷ್ಟು ಚುನಾಯಿತ ಸದಸ್ಯರು ಸ್ಥಳೀಯ ಸಂಸ್ಥೆಗಳಿಗೆ ವರ್ಷಕ್ಕೆ ಒಂದು ಲಕ್ಷದಿಂದ ೨ ಲಕ್ಷದವರೆಗೆ ಆದಾಯ ಸಂಗ್ರಹವಾಗುತ್ತದೆ ಎಂಬುದಾಗಿ ಉಳಿದ ಹೊಸಪೇಟೆ ನಗರಸಭೆಯ ಶೇ. ೧೧.೪೭ರಷ್ಟು ಮತ್ತು ಕೂಡ್ಲಿಗಿ ಪಟ್ಟಣ ಪಂಚಾಯಿತಿಯ ಶೇ. ೫೫ರಷ್ಟು ಚುನಾಯಿತ ಸದಸ್ಯರು ಆದಾಯ ಪ್ರಮಾಣದ ಬಗ್ಗೆ ಗೊತ್ತಿಲ್ಲ ಎಂಬ ಅಭಿಪ್ರಾಯವನ್ನು ಹೇಳಿಕೊಂಡಿರುವುದನ್ನು ಅಧ್ಯಯಗಳಿಂದ ತಿಳಿದುಬಂದಿದೆ. ಒಟ್ಟಾರೆ ಮುಂದುವರಿದ ನಗರಸಭೆಯ ಸದಸ್ಯರಿಗಿಂತ ಹಿಂದುಳಿದ ಪಟ್ಟಣ ಪಂಚಾಯಿತಿಯ ಸದಸ್ಯರು ಸ್ಥಳೀಯ ಆದಾಯ ಮೂಲಗಳ ಬಗ್ಗೆ ಗೊತ್ತಿಲ್ಲದಿರುವುದು ಹೆಚ್ಚಾಗಿ ಕಂಡುಬಂದಿದೆ. ಇಲ್ಲಿ ಗಮನಿಸಬೇಕಾದ ಅಂಶವೆಂದರೆ ಹಿಂದುಳಿದ ಪಟ್ಟಣ ಪಂಚಾಯಿತಿಯಲ್ಲಿ ಬಂಡವಾಳವು ಸಮೃದ್ಧಿಯಾಗಿದೆ. ಸರ್ಕಾರದಿಂದ ಸಮರ್ಪಕವಾಗಿ ಅನುದಾನವು ಬರುತ್ತೆ ಆದರೆ ಅದನ್ನು ಸಮರ್ಥ ರೀತಿಯಲ್ಲಿ ಬಳಕೆಯಾಗದೆ ಯೋಜನೆಯ ಅನುದಾನಗಳು ಪುನಃ ಹಣಕಾಸು ನಿಧಿಗೆ ಸಲ್ಲಿಕೆಯಾಗುವುದರಿಂದ ಆದಾಯದ ಕೊರತೆಯಿಂದ ಹಿಂದುಳಿಯಿತು ಎನ್ನಲಾಗಿದೆ. ಸ್ಥಳೀಯ ಆದಾಯ ಮೂಲಗಳ ನಿಯಮಿತವಾಗಿ ಬಳಸದೆ ಚುನಾಯಿತ ಸದಸ್ಯರಲ್ಲಿ ಜ್ಞಾನದ ಕೊರತೆ ತೀವ್ರವಾಗಿಯಿರುವುದು ಕಂಡುಬಂದಿದೆ. ಇದರಿಂದ ಹಿಂದುಳಿದ ಪ್ರದೇಶದ ಸದಸ್ಯರಿಗೂ ವ್ಯವಸ್ಥಿತವಾದ ತರಬೇತಿಯನ್ನು ಕಾಲ-ಕಾಲಕ್ಕೆ ನೀಡುವ ಅಗತ್ಯವಿದೆ.

**ಸ್ಥಳೀಯ ಸಂಸ್ಥೆಯ ಸಿಬ್ಬಂದಿ ವರ್ಗದವರು ತೆರಿಗೆ ಸಂಗ್ರಹ ಮಾಡುವಾಗ ನೀವು ಸಹಕರಿಸುವುದು**

| ತೆರಿಗೆ ಸಂಗ್ರಹ ಮಾಡುವಾಗ ಅಧಿಕಾರ ಸಹಕಾರ | ಹೊಸಪೇಟೆ | | ಕೂಡ್ಲಿಗಿ | |
|---|---|---|---|---|
| ಸಹಕರಿಸುತ್ತೇವೆ. | ೨೩ | ೬೫.೭೧ | ೯ | ೪೫.೦೦ |
| ಇಲ್ಲ ಅವರೇ ಕಟ್ಟಿಸಿಕೊಳ್ಳುತ್ತಾರೆ | ೧೨ | ೩೪.೨೯ | ೧೧ | ೫೫.೦೦ |
| ಒಟ್ಟು | ೩೫ | ೧೦೦ | ೨೦ | ೧೦೦ |

**ಮೂಲ: ಕ್ಷೇತ್ರ ಕಾರ್ಯದ ಮಾಹಿತಿ**

ಮೇಲಿನ ಅಂಶಕ್ಕೆ ಸಂಬಂಧಿಸಿದಂತೆ ಅಧಿಕಾರಿಗಳು ತೆರಿಗೆ ಸಂಗ್ರಹಿಸುವಾಗ ಸದಸ್ಯರು ಸಹಕರಿಸುತ್ತಿರುವ ಸಂಗತಿಯನ್ನು ತೋರಿಸಲಾಗಿದೆ. ಹೊಸಪೇಟೆ ನಗರಸಭೆಯ ಶೇ. ೬೫.೭೧ರಷ್ಟು ಚುನಾಯಿತ ಸದಸ್ಯರು ಮತ್ತು ಕೂಡ್ಲಿಗಿ ಪಟ್ಟಣ ಪಂಚಾಯಿತಿಯ ಶೇ. ೪೫ರಷ್ಟು ಚುನಾಯಿತ ಸದಸ್ಯರು ತೆರಿಗೆ ಸಂಗ್ರಹಿಸುವಾಗ ಅವರೊಂದಿಗೆ ಸಹಕರಿಸುತ್ತೇವೆ ಎಂಬುದಾಗಿ, ಅದೇ ರೀತಿ ನಗರಸಭೆಯ ಶೇ. ೩೪.೨೯ರಷ್ಟು ಚುನಾಯಿತ ಸದಸ್ಯರು ಮತ್ತು ಪಟ್ಟಣ ಪಂಚಾಯಿತಿಯ ಶೇ.

೫೫ರಷ್ಟು ಚುನಾಯಿತ ಸದಸ್ಯರು ತೆರಿಗೆಯ ಸಂಗ್ರಹದ ಸಂದರ್ಭದಲ್ಲಿ ಅಧಿಕಾರಿಗಳಿಗೆ ಬಂದು ಕಟ್ಟಿಸಿಕೊಳ್ಳುತ್ತಾರೆ. ಆದರೆ ನಾವುಗಳು ಹೋಗುವುದಿಲ್ಲ ಎಂದು ತಿಳಿದುಬಂದಿದೆ. ಒಟ್ಟಾರೆ ಸಾಪೇಕ್ಷವಾಗಿ ಮುಂದುವರಿದ ನಗರಸಭೆಯ ಸದಸ್ಯರಿಗಿಂತ ತೀರಾ ಹಿಂದುಳಿದ ಪಟ್ಟಣ ಪಂಚಾಯಿತಿಯ ಸದಸ್ಯರು ತೆರಿಗೆ ಸಂಗ್ರಹ ಸಂದರ್ಭದಲ್ಲಿ ಹೆಚ್ಚಿನ ಪ್ರಮಾಣದಲ್ಲಿ ಸಹಕರಿಸುವ ಮನೋಭಾವನೆ ಹೊಂದದಿರುವುದು ಗೊತ್ತಾಗುತ್ತದೆ. ಕೂಡ್ಲಿಗಿ ಪಟ್ಟಣ ಪಂಚಾಯಿತಿಯ ಸದಸ್ಯರು ಅಧಿಕಾರಿಗಳೊಂದಿಗೆ ಉತ್ತಮವಾದ ಸಂಬಂಧವು ಒಂದು ಅಭಿವೃದ್ಧಿಯ ಮಾನದಂಡವಾಗಿದೆ ಆದ್ದರಿಂದ ಅದನ್ನು ಸಮರ್ಥವಾಗಿ ಬಳಸಿಕೊಳ್ಳದಿರುವುದು ಅಧ್ಯಯಗಳಿಂದ ತಿಳಿದುಬಂದಿದೆ. ಒಟ್ಟಾರೆಯಾಗಿ ವಿಶ್ಲೇಷಣೆಯಿಂದ ಗಮನಿಸಬೇಕಾದ ಅಂಶವೆಂದರೆ ಅಧಿಕಾರಿಗಳು ಮತ್ತು ಚುನಾಯಿತ ಸದಸ್ಯರೊಂದಿಗೆ ಉತ್ತಮ ಸಂಬಂಧದ ಕೊರತೆಯಿರುವುದರಿಂದ ಹಿಂದುಳಿಯಿತು ಎಂದು ತಿಳಿಯಲಾಗಿದೆ. ಅಧಿಕಾರಿಗಳು ಮತ್ತು ಚುನಾಯಿತ ಸದಸ್ಯರ ನಡುವೆ ಉತ್ತಮ ಸಂಬಂಧವಿಲ್ಲದೆ ಹಲವಾರು ಆರ್ಥಿಕ ಮತ್ತು ಸಾಮಾಜಿಕ ಸಮಸ್ಯೆಗಳ ಜೊತೆಗೆ ನಂಟು ಬೆಳೆಯುತ್ತದೆ. ಹಾಗಾಗಿ ಇಂತಹ ಸಮಸ್ಯೆಗಳಿಗೆ ಉತ್ತಮ ಇವರಿಬ್ಬರ ನಡುವೆ ಸಹಭಾಗಿತ್ವದ ವಾತಾವರಣವನ್ನು ನಿರ್ಮಾಣ ಮಾಡುವಂತಹ ರಾಜಕೀಯ ಇಚ್ಛಾಶಕ್ತಿಯ ಅಗತ್ಯವಿರುತ್ತದೆ.

**ನಗರಸಭೆ/ಪಟ್ಟಣ ಪಂಚಾಯಿತಿಯ ಆದಾಯ ಮತ್ತು ವೆಚ್ಚಗಳ ಬಗ್ಗೆ ಚರ್ಚೆ ಮಾಡುತ್ತಾರೆಯೇ**

| ಆದಾಯ ಮತ್ತು ವೆಚ್ಚಗಳ ಬಗ್ಗೆ ಚರ್ಚೆಯ ವಿವರ | ಹೊಸಪೇಟೆ | | ಕೂಡ್ಲಿಗಿ | |
|---|---|---|---|---|
| ಚರ್ಚಿಸುತ್ತಾರೆ | ೧೭ | ೪೮.೫೭ | ೯ | ೪೫.೦೦ |
| ಇಲ್ಲ | ೧೮ | ೫೧.೪೨ | ೧೧ | ೫೫.೦೦ |
| ಒಟ್ಟು | ೩೫ | ೧೦೦ | ೨೦ | ೧೦೦ |

**ಮೂಲ: ಕ್ಷೇತ್ರ ಕಾರ್ಯದ ಮಾಹಿತಿ**

ಮೇಲಿನ ಅಂಶಕ್ಕೆ ಸಂಬಂಧಪಟ್ಟಂತೆ ನಗರ ಸ್ಥಳೀಯ ಸಂಸ್ಥೆಗಳ ಆದಾಯ ಮತ್ತು ವೆಚ್ಚ ಬಗ್ಗೆ ಚರ್ಚೆ ಮಾಡುವ ಸಂಗತಿಗಳನ್ನು ತೋರಿಸಲಾಗಿದೆ. ಹೊಸಪೇಟೆ ನಗರಸಭೆಯ ಶೇ. ೪೮.೫೭ರಷ್ಟು ಚುನಾಯಿತ ಪ್ರತಿನಿಧಿಗಳು ಮತ್ತು ಕೂಡ್ಲಿಗಿ ಪಟ್ಟಣ ಪಂಚಾಯಿತಿಯ ಶೇ. ೪೫ರಷ್ಟು ಚುನಾಯಿತ ಪ್ರತಿನಿಧಿಗಳು ಆದಾಯ ಮತ್ತು ವೆಚ್ಚ ಬಗ್ಗೆ ಚರ್ಚೆ ಮಾಡುವಾಗ ಇರುತ್ತೇವೆ ಎಂಬುದಾಗಿ ಉಳಿದ ನರಸಭೆಯ ಶೇ. ೫೧.೪೨ರಷ್ಟು ಮತ್ತು ಪಟ್ಟಣ ಪಂಚಾಯಿತಿಯ ಶೇ. ೫೫ರಷ್ಟು ಚುನಾಯಿತ ಪ್ರತಿನಿಧಿಗಳು ಆದಾಯ ಮತ್ತು ವೆಚ್ಚಗಳ ಬಗ್ಗೆ ಚರ್ಚೆ ಮಾಡುವುದಿಲ್ಲ ಎಂದು ಅಧ್ಯಯನದಿಂದ ತಿಳಿಯಲಾಗಿದೆ. ಒಟ್ಟಾರೆ ಮುಂದುವರಿದ ಹೊಸಪೇಟೆ ನಗರಸಭೆ ಚುನಾಯಿತ ಸದಸ್ಯರಿಗಿಂತ ಹಿಂದುಳಿದ ಕೂಡ್ಲಿಗಿ ಪಟ್ಟಣ ಪಂಚಾಯಿತಿಯ ಚುನಾಯಿತ ಸದಸ್ಯರು ಆದಾಯ ಮತ್ತು ವೆಚ್ಚಗಳ ಚರ್ಚೆಯಲ್ಲಿ ಕೆಳಮಟ್ಟದಲ್ಲಿರುವುದು ಗಮನಿಸಬಹುದಾಗಿದೆ. ತೀರಾ ಹಿಂದುಳಿದ ಪಟ್ಟಣ ಪಂಚಾಯಿತಿ ಚುನಾಯಿತ ಸದಸ್ಯರಿಗೆ ಸಭೆಯಲ್ಲಿ ಚರ್ಚಿಸುವ ವಿಷಯಗಳ ವಿಚಾರ ಅರಿವುಯಿಲ್ಲದಿರುವುದು ಕಂಡುಬಂದಿದೆ. ಒಟ್ಟಾರೆಯಾಗಿ ಈ ವಿಶ್ಲೇಷಣೆಯಿಂದ ಗಮನಿಸಬೇಕಾದ

ಅಂಶವೆಂದರೆ ಸಭೆಯ ಚರ್ಚೆಯಲ್ಲಿ ಹೆಚ್ಚಿನ ರೀತಿಯಲ್ಲಿ ಭಾಗವಹಿಸದಿರುವುದರಿಂದ ಸ್ಥಳೀಯ ರಾಜಕೀಯದ ಅರಿವು ಇಲ್ಲದಿರುವುದರಿಂ ದ ಹಿಂದುಳಿದಿರುವುದಕ್ಕೆ ಕಾರಣವಾಗಿದೆ ಎಂದು ತಿಳಿಯಲಾಗಿದೆ. ಈ ರೀತಿಯ ಸಭೆಯಲ್ಲಿ ಹೆಚ್ಚು ಹೆಚ್ಚು ಭಾಗವಹಿಸಿ ಸಮರ್ಥವಾಗಿ ಚರ್ಚೆಯಲ್ಲಿ ಚರ್ಚಿಸುವ ಆತ್ಮವಿಶ್ವಾಸ ಬೇಳೆಸುವಂತಹ ತರಬೇತಿಗಳ ಅಗತ್ಯವಿದೆ ಎನ್ನಬಹುದಾಗಿದೆ. ನಗರಾಭಿವೃದ್ಧಿಯಲ್ಲಿ ಗುಣಾತ್ಮಕ ಬದಲಾವಣೆ ತರುವ ನಿಟ್ಟಿನಲ್ಲಿ ರಾಜ್ಯ ಸರ್ಕಾರವು ನಗರ ಪ್ರದೇಶಗಳ ಜನಸಾಮಾನ್ಯರ ಸರ್ವಾಂಗೀಣ ಅಭಿವೃದ್ಧಿಪಡಿಸಲು ಹಾಗೂ ಸ್ಥಳೀಯ ಸಂಸ್ಥೆಗಳನ್ನು ಕ್ರಿಯಾಶೀಲಗೊಳಿಸುವಲ್ಲಿ ಅಧಿಕಾರಿಗಳ, ಚುನಾಯಿತ ಸದಸ್ಯರು ಮತ್ತು ವಾರ್ಡಿನ ಕುಟುಂಬದ ಸದಸ್ಯರು ಪಾಲ್ಗೋಳ್ಳವಿಕೆ ಹಾಗೂ ಮಾರ್ಗದರ್ಶನ ಮಹತ್ವದ್ದಾಗಿರುತ್ತದೆ ಎನ್ನಬಹುದಾಗಿದೆ.

**೬.೯. ನಗರವಾರು ಸಂದರ್ಶನ ಮಾಡಿದ ಚುನಾಯಿತ ಪ್ರತಿನಿಧಿಗಳ ಕುಡಿಯುವ ನೀರಿನ ಬಗ್ಗೆ ಅಭಿಪ್ರಾಯಗಳು**

**ನಿಮ್ಮ ನಗರಸಭೆ/ ಪಟ್ಟಣ ಪಂಚಾಯಿತಿಯಲ್ಲಿ ಕುಡಿಯುವ ನೀರಿನ ಸೌಲಭ್ಯ**

| ಚುನಾಯಿತ ಪ್ರತಿನಿಧಿಗಳ ಕುಡಿಯುವ ನೀರಿನ ಬಗ್ಗೆ ಅಭಿಪ್ರಾಯಗಳು | ಹೊಸಪೇಟೆ ನಗರ ಸಭೆ | | ಕೂಡ್ಲಿಗಿ ಪಟ್ಟಣಪಂಚಾಯಿತಿ | |
|---|---|---|---|---|
| | ಸಂಖ್ಯೆಗಳು | ಶೇಕಡವಾರು | ಸಂಖ್ಯೆಗಳು | ಶೇಕಡವಾರು |
| ನಿಮ್ಮ ನಗರ ಸಭೆ/ಪಟ್ಟಣ ಪಂಚಾಯಿತಿಯಲ್ಲಿ ಕುಡಿಯುವ ನೀರಿನ ಸೌಲಭ್ಯ ಇದೆಯಾ | | | | |
| ಇದೆ | ೩೫ | ೧೦೦.೦೦ | ೨೦ | ೧೦೦.೦೦ |
| ಇಲ್ಲಾ | ೦ | ೦.೦೦ | ೦ | ೦.೦೦ |
| ಒಟ್ಟು | ೩೫ | ೧೦೦ | ೨೦ | ೧೦೦ |

**ಮೂಲ: ಕ್ಷೇತ್ರ ಕಾರ್ಯದ ಮಾಹಿತಿ**

ವಿಶ್ವಸಂಸ್ಥೆಯ ಸಾಮಾನ್ಯ ಸಭೆಯು ಜುಲೈ ೨೦೧೦ರಲ್ಲಿ ಕುಡಿಯುವ ನೀರು ಮತ್ತು ನೈರ್ಮಲ್ಯದ ಹಕ್ಕನ್ನು ಮೂಲಭೂತ ಹಕ್ಕಾಗಿ ಗುರುತಿಸಲಾಗಿದೆ. ಸ್ವಚ್ಛ ಕುಡಿಯುವ ನೀರು ಮತ್ತು ಸುಧಾರಿತ ಶೌಚ ವ್ಯವಸ್ಥೆ ಇವೆರೆಡು ಬಡತನ ನಿವಾರಣೆಯಲ್ಲಿ ಪ್ರಮುಖ ಪಾತ್ರ ವಹಿಸುವುದಲ್ಲದೆ ಎಲ್ಲಾ ಮೂಲಭೂತ ಹಕ್ಕುಗಳ ಸಾಧನೆಗೂ ತಳಪಾಯ ಒದಗಿಸುತ್ತದೆ. ಇದರ ಜೊತೆಗೆ ನಗರಗಳಲ್ಲಿ ಮುನಿಸಿಪಾಲಿಟಿ ಮತ್ತು ರಾಜ್ಯ ಸರ್ಕಾರಗಳೆರೆಡು ಇದಕ್ಕೆ ಹೊಣೆದಾರರು. ಅಂತೆಯೇ, ಕುಡಿಯುವ ನೀರು ನಗರಸಭೆ/ಪಟ್ಟಣ ಪಂಚಾಯಿತಿಯಲ್ಲಿ ಕುಡಿಯುವ ನೀರಿನ ಸೌಲಭ್ಯದ ವಿವರವನ್ನು ಕೆಳಗಿನಂತೆ ನೀಡಲಾಗಿದೆ. ಹೊಸಪೇಟೆ ನಗರಸಭೆಯ ಶೇ. ೧೦೦ರಷ್ಟು ಚುನಾಯಿತ ಸದಸ್ಯರು ಮತ್ತು ಕೂಡ್ಲಗಿ ಪಟ್ಟಣ ಪಂಚಾಯಿತಿ ಶೇ. ೧೦೦ರಷ್ಟು ಚುನಾಯಿತ ಸದಸ್ಯರು ಕುಡಿಯುವ ನೀರಿನ ಸೌಲಭ್ಯ ಸಮರ್ಪಕವಾಗಿ ಇರುವುದು ಎಂದು ಹೇಳಿಕೊಂಡಿದ್ದಾರೆ. ಸಾಪೇಕ್ಷವಾಗಿ ಮುಂದುವರಿದ ಹೊಸಪೇಟೆ ನಗರಸಭೆಯ ಸದಸ್ಯರ ಹೇಳಿಕೆಗೂ ಹಿಂದುಳಿದ ಕೂಡ್ಲಿಗಿ ಪಟ್ಟಣ ಪಂಚಾಯಿತಿ ಸದಸ್ಯರ ಹೇಳಿಕೆಗಳನ್ನು ಸೂಕ್ಷ್ಮವಾಗಿ ಗಮನಿಸಿದಾಗ ಸಮರ್ಥವಾಗಿ ನೀರಿನ ಸೌಲಭ್ಯ ನೀಡುವುದರಲ್ಲಿ ಹೊಸಪೇಟೆ ಸದಸ್ಯರಿಗಿಂತ ಕೂಡ್ಲಿಗಿಯ ಸದಸ್ಯರು ಗುಣಮಟ್ಟದ ಕುಡಿಯುವ ನೀರನ್ನು ಹೊದಗಿಸುವಲ್ಲಿ ವಿಫಲವಾಗಿದ್ದಾರೆ ಎಂಬುದು ತಿಳಿದುಬಂದಿದೆ. ಹೊಸಪೇಟೆ ನಗರಸಭೆ ಮತ್ತು ಕೂಡ್ಲಿಗಿ ಪಟ್ಟಣ ಪಂಚಾಯಿತಿಯು

ಎರಡು ಸ್ಥಳೀಯ ಸಂಸ್ಥೆಗಳು ಸರಿಸುಮಾರು ಸಮಪ್ರಮಾಣದಲ್ಲಿ ಉತ್ತಮ ಕುಡಿಯುವ ನೀರಿನ ಪೂರೈಸುವುದರಲ್ಲಿ ವಿಫಲವಾಗಿರುವುದು ಅಧ್ಯಯಗಳಿಂದ ತಿಳಿಯಲಾಗಿದೆ. ಆದರೆ ಈಗಿರುವ ನೀರಿನ ಬೇಡಿಕೆಯನ್ನು ಪೂರೈಸಲು ಕನಿಷ್ಠ ಹೆಚ್ಚಿನ ರೀತಿಯಲ್ಲಿ ದೊಡ್ಡ ಟ್ಯಾಂಕ್‌ಗಳು, ಅಲ್ಲಲ್ಲಿ ನೀರಿನ ಪೈಪುಗಳ ಸೋರುವಿಕೆಯನ್ನು ನೀರಿನ ಬಗ್ಗೆ ಸರಿಯಾದ ನಿರ್ವಹಣೆ ಮಾಡಬೇಕಾದ ಅಗತ್ಯವಿದೆ ಎಂದು ಗುರುತಿಸಲಾಗಿದೆ.

**ಇದೆ ಎಂದಾದರೆ ನಗರದಲ್ಲಿ ನೀರು ಸರಬರಾಜು ಯಾವ ಮೂಲದಿಂದ ಮಾಡಲಾಗಿದೆ**

| **ನೀರು ಪೂರೈಕೆ ಕುರಿತು** | **ಹೊಸಪೇಟೆ** | | **ಕೂಡ್ಲಿಗಿ** | |
|---|---|---|---|---|
| ನಳ, ಡ್ಯಾಂ | ೨೭ | ೭೭.೧೪ | ೧೬ | ೮೦.೦೦ |
| ಕೊಳವೆಬಾವಿ (ಬೋರ್ ವೆಲ್) | ೮ | ೨೨.೮೬ | ೪ | ೨೦.೦೦ |
| **ಒಟ್ಟು** | ೩೫ | ೧೦೦ | ೨೦ | ೧೦೦ |

**ಮೂಲ: ಕ್ಷೇತ್ರ ಕಾರ್ಯದ ಮಾಹಿತಿ**

ಮೇಲಿನ ಅಂಶಕ್ಕೆ ಸಂಬಂಧಿಸಿದಂತೆ ನಗರದಲ್ಲಿ ನೀರು ಸರಬರಾಜು ಮಾಡಲು ಯಾವ ಮೂಲವನ್ನು ಬಳಸಲಾಗುತ್ತದೆ ಎಂಬುದನ್ನು ತೋರಿಸಲಾಗಿದೆ. ೨೦೧೧ನೆಯ ಇಸವಿ ಕೇಂದ್ರ ಸರ್ಕಾರದ ನೆರವಿನ ನೀರು ಸರಬುರಾಜು ಮತ್ತು ನೈರ್ಮಲ್ಯ ಯೋಜನೆಯಡಿಯಲ್ಲಿ ಹೊಸಪೇಟೆ ನಗರಸಭೆ ಮತ್ತು ಕೂಡ್ಲಿಗಿ ಪಟ್ಟಣ ಪಂಚಾಯಿತಿಯಲ್ಲಿ ಕುಡಿಯುವ ನೀರಿನ ಯೋಜನೆ ಅಸ್ತಿತ್ವಕ್ಕೆ ಬಂದಿತು. ಇದರ ಬಳಿಕ ನಗರ ಕೇಂದ್ರದಿಂದ ದೂರದ ವಾರ್ಡ್‌ಗಳಿಗೆ ವ್ಯವಸ್ಥೆಯನ್ನು ಮಾಡಲಾಯಿತು. ಇದು ಸಮುದಾಯದ ಸಹಭಾಗಿತ್ವದಲ್ಲಿ ಜಾರಿಗೊಳ್ಳುವ ಹೊಸ ಮಾದರಿಯ ಯೋಜನೆಗಳಾದವು. ಈ ಮೊದಲು ಕುಡಿಯುವ ನೀರಿನ ಯೋಜನೆಗಳು ಜಾರಿಯಾಗಿದ್ದರೂ ನೀರಿನ ಕೊರತೆಯಿಂದ ನಿಯಮಿತವಾಗಿ ದೊರೆಯುತ್ತಿರಲಿಲ್ಲ ಎಂಬ ಮಾಹಿತಿಯು ತಿಳಿದುಬಂದಿದೆ. ಹಾಗಾಗಿ ನಿಯಮಿತವಾಗಿ ನೀರು ಪೊರೈಸುವುದರೊಂದಿಗೆ ಹೊಸಪೇಟೆ ನಗರಸಭೆಯ ಶೇ. ೭೭.೧೪ರಷ್ಟು ಚುನಾಯಿತ ಸದಸ್ಯರು ಮತ್ತು ಕೂಡ್ಲಿಗಿ ಪಟ್ಟಣ ಪಂಚಾಯಿತಿಯ ಶೇ. ೮೦ರಷ್ಟು ಚುನಾಯಿತ ಸದಸ್ಯರು ನೀರನ್ನು ದೊಡ್ಡ ಟ್ಯಾಂಕಿನ ಮೂಲಕ ನಳ, ಡ್ಯಾಂನಿಂದ ಎಂಬುದಾಗಿ ಉಳಿದ ನಗರಸಭೆಯ ಶೇ. ೨೨.೮೬ರಷ್ಟು ಚುನಾಯಿತ ಸದಸ್ಯರು ಮತ್ತು ಕೂಡ್ಲಿಗಿ ಪಟ್ಟಣ ಪಂಚಾಯಿತಿಯ ಶೇ. ೨೦ರಷ್ಟು ಚುನಾಯಿತ ಸದಸ್ಯರು ಕುಡಿಯುವ ನೀರನ್ನು ಕೊಳವೆಬಾಯಿಗಳಿಂದ ಒದಗಿಸಲಾಗುತ್ತದೆ ಎಂಬ ಅಂಶವನ್ನು ತಿಳಿಯಲಾಗಿದೆ. ಸಾಪೇಕ್ಷವಾಗಿ ಮುಂದುವರಿದ ನಗರಸಭೆಯ ಸದಸ್ಯರಿಗಿಂತ ಹಿಂದುಳಿದ ಪಟ್ಟಣ ಪಂಚಾಯಿತಿಯ ಸದಸ್ಯರು ಕುಡಿಯುವ ನೀರಿನ ವ್ಯವಸ್ಥೆಗೆ ಇತರ ಸೌಲಭ್ಯಗಳಿಗಿಂತ ಕಡಿಮೆ ಪ್ರಮಾಣದಲ್ಲಿ ಮಹತ್ವ ನೀಡಿರುವುದು ಕಾಣಲಾಗಿದೆ. ಎರಡು ನಗರ ಸ್ಥಳೀಯ ಸಂಸ್ಥೆಗಳ ಚುನಾಯಿತ ಸದಸ್ಯರು ನೀರನ್ನು ಸಂಗ್ರಹಿಸಲು ಕೆರೆ, ಕೈ ಪಂಪು ಹಾಗೂ ನದಿಗಳನ್ನು ಹೊರತುಪಡಿಸಿ ಮತ್ಯಾವ ವಿಧಾನಗಳು ಅಳವಡಿಸಿಕೊಳ್ಳದಿರುವು ನೋಡಲಾಗಿದೆ. ಇಲ್ಲಿ ಗಮನಿಸಬೇಕಾದ ಅಂಶವೆಂದರೆ ಇವುಗಳ ಕೆಲವು ತಾಂತ್ರಿಕ ಕಾರಣಗಳಿಂದ ಕ್ರಮಬದ್ಧ ದುರಸ್ತಿಗಾಗಿ ಮುಂದುವರಿದ ಸದಸ್ಯರಿಗಿಂತ ಹಿಂದುಳಿದ ಕೂಡ್ಲಿಗಿ ಸದಸ್ಯರು ಸರಿಯಾದ ವಿಧಾನವನ್ನು ಅಳವಡಿಸಿಕೊಳ್ಳುವುದರಲ್ಲಿ ಕೆಳಮಟ್ಟದಲ್ಲಿರುವುದು ಅಧ್ಯಯಗಳಿಂದ ಕಂಡುಬಂದಿದೆ. ಒಟ್ಟಾರೆಯಾಗಿ ಪಟ್ಟಣ ಪಂಚಾಯಿತಿಯಲ್ಲಿ ಸರಿಯಾದ ನಿರ್ವಹಣೆಯ

ಕೊರತೆ, ಯೋಜನೆಗಳ ಸಮರ್ಥ ಅನುಷ್ಠಾನವಿಲ್ಲದಿರುವುದು, ಆಡಳಿತದ ಅರಿವಿನ ಕೊರತೆಯಿಂದಾಗಿ ಸ್ಥಳೀಯ ಸಂಸ್ಥೆಗಳಲ್ಲಿ ಸದಸ್ಯರು ದಕ್ಷವಾಗಿ ಭಾಗವಹಿಸದೆಯಿರುವುದರಿಂದ ಹಿಂದುಳಿದಿದೆ ಎಂದು ಗ್ರಹಿಸಲಾಗಿದೆ. ಕುಡಿಯುವ ನೀರು ಸರಬರಾಜಿಗೆ ಸಂಬಂಧಪಟ್ಟಂತೆ ಕ್ರಮಬದ್ಧ ಕೆಲಸಗಳು ಇನ್ನು ಮಾಡಬೇಕಾಗಿದೆ. ಚುನಾಯಿತ ಪ್ರತಿನಿಧಿಗಳು ಮತ್ತು ಕುಟುಂಬದ ಎಲ್ಲಾ ಸದಸ್ಯರು ತಪ್ಪದೇ ನೀರಿನ ಕರ ಪಾವತಿಸಿದ ಹಿನ್ನೆಲೆಯಲ್ಲಿ ಸಹಭಾಗಿತ್ವದ ಮೂಲಕ ಪ್ರಶ್ನಿಸುವಂತಹ ಮನೋಭಾವನೆ ಅಗತ್ಯವಿದೆ ಎಂದು ಕಂಡುಕೊಳ್ಳಲಾಗಿದೆ.

**ನಿಮ್ಮ ನಗರದಲ್ಲಿ ನೀರಿನ ಸಮಸ್ಯೆ ಉಂಟಾಗುತ್ತದೆಯಾ**

| ನಗರದಲ್ಲಿ ನೀರಿನ ಸಮಸ್ಯೆ ವಿವರ | ಹೊಸಪೇಟೆ | | ಕೂಡ್ಲಿಗಿ | |
|---|---|---|---|---|
| ಉಂಟಾಗುತ್ತದೆ | ೧೯ | ೫೪.೨೯ | ೧೨ | ೬೦.೦೦ |
| ಇಲ್ಲ | ೧೬ | ೪೫.೭೧ | ೮ | ೪೦.೦೦ |
| **ಒಟ್ಟು** | ೩೫ | ೧೦೦ | ೨೦ | ೧೦೦ |

**ಮೂಲ: ಕ್ಷೇತ್ರ ಕಾರ್ಯದ ಮಾಹಿತಿ**

ಪ್ರಸ್ತುತ ನೀರಿನ ವ್ಯವಸ್ಥೆಯಲ್ಲಿ ಬಹಳಷ್ಟು ನ್ಯೂನತೆಗಳಿವೆ–ಸೋರಿಕೆ ಮತ್ತು ಕೆಟ್ಟ ನಿರ್ವಹಣೆಯಿಂದಾಗಿ ವಿತರಣಾ ವ್ಯವಸ್ಥೆಯಲ್ಲಿ ನಷ್ಟಕ್ಕೆ ಕಾರಣವಾಗುತ್ತಿದೆ. ಇದರಿಂದಾಗಿ ನೀರಿನ ಸಮಸ್ಯೆಯಪ್ರಮಾಣವನ್ನು ಉಲ್ಲೇಖಿಸಲಾಗಿದೆ. ಹೊಸಪೇಟೆಯ ನಗರಸಭೆಯ ಶೇ. ೫೪.೨೯ರಷ್ಟು ಚುನಾಯಿತ ಸದಸ್ಯರು ಮತ್ತು ಕೂಡ್ಲಿಗಿ ಪಟ್ಟಣ ಪಂಚಾಯಿತಿಯ ಶೇ. ೬೦ರಷ್ಟು ಚುನಾಯಿತ ಸದಸ್ಯರು ತಮ್ಮ ವಾರ್ಡಿನಲ್ಲಿ ನೀರಿನ ಸಮಸ್ಯೆ ಉಂಟಾಗುತ್ತದೆ ಎಂದಿರುವರು. ಉಳಿದ ನಗರಸಭೆಯ ಶೇ. ೪೫.೭೧ರಷ್ಟು ಚುನಾಯಿತ ಸದಸ್ಯರು ಮತ್ತು ಪಟ್ಟಣ ಪಂಚಾಯಿತಿಯ ಶೇ. ೪೦ರಷ್ಟು ಚುನಾಯಿತ ಸದಸ್ಯರು ವಾರ್ಡಿನಲ್ಲಿ ನೀರಿನ ಸಮಸ್ಯೆ ಉಂಟಾಗುವುದಿಲ್ಲ ಎಂಬುದಾಗಿ ತಿಳಿದುಬಂದಿದೆ. ಸಾಪೇಕ್ಷವಾಗಿ ಮುಂದುವರಿದ ಹೊಸಪೇಟೆ ನಗರಸಭೆ ಸದಸ್ಯರಿಗಿಂತ ತೀರಾ ಹಿಂದುಳಿದ ಪಟ್ಟಣ ಪಂಚಾಯಿತಿಯ ಸದಸ್ಯರಲ್ಲಿ ತಮ್ಮ ವಾರ್ಡಿನಲ್ಲಿ ನೀರಿನ ಸಮಸ್ಯೆ ಹೆಚ್ಚಿನ ಪ್ರಮಾಣದಲ್ಲಿ ಉಂಟಾಗುತ್ತದೆ ಎಂದು ತಿಳಿಸಿರುತ್ತಾರೆ. ಎರಡು ಸ್ಥಳೀಯ ಸಂಸ್ಥೆಗಳನ್ನು ಸೂಕ್ಷ್ಮವಾಗಿ ಗಮನಿಸಿದಾಗ ಹೆಚ್ಚಿನ ಅನುದಾನದ ಸೌಲಭ್ಯಗಳನ್ನು ಹೊಂದಿದ್ದರೂ ಪಟ್ಟಣ ಪಂಚಾಯಿತಿಯು ಹಿಂದುಳಿದಿದೆ. ಒಟಾರೆಯಾಗಿ ವಿಶ್ಲೇಷಣೆಯಿಂದ ಪಟ್ಟಣ ಪಂಚಾಯಿತಿ ಒಣಭೂಮಿಯನ್ನು ಹೊಂದಿದ್ದು, ಆರ್ಥಿಕವಾಗಿ ದುರ್ಬಲರಾಗಿದ್ದು ವ್ಯವಸಾಯ ವರ್ಗಕ್ಕೆ ಸೇರಿದ, ಆಡಳಿತದಲ್ಲಿ ಅರಿವಿನ ಕೊರತೆ, ಸಮಸ್ಯೆಗಳ ಬಗ್ಗೆ ಹೆಚ್ಚು ಗಮನಹರಿಸದಿರುವುದು, ಅಧಿಕಾರಿಗಳು ಮತ್ತು ಸದಸ್ಯರ ನಡುವೆ ಸರಿಯಾದ ಸಂಬಂಧವಿಲ್ಲದಿರುವುದು, ಶ್ರೀಮಂತ ವರ್ಗಕ್ಕೆ ಸೇರಿದವರು ವಾರ್ಡಿನ ನೀರಿನ ಸಮಸ್ಯೆಯನ್ನು ಪರಿಹರಿಸುವುದರ ಬಗ್ಗೆ ಹೆಚ್ಚಿನ ಗಮನ ಕೊಡದಿರುವುದು ಹಿಂದುಳಿದಿರುವುದಕ್ಕೆ ಕಾರಣ ಎಂದು ತಿಳಿಯಲಾಗಿದೆ. ಕುಡಿಯುವ ನಿರಿನ ಯೋಜನೆಗಳನ್ನು ಯಶಸ್ವಿಯಾಗಿ ನಿಭಾಯಿಸಿ ಯೋಜನೆಗಳ ಫಲಶೃತಿಗಳನ್ನು ಫಲಾನುಭವಿಗಳಿಗೆ ಸಮರ್ಪಕವಾಗಿ ಮೂಲ ಮಟ್ಟದವರಿಗೂ ಮುಟ್ಟಿಸಲು ಅಧಿಕಾರಿ, ಸಿಬ್ಬಂದಿಗಳು ಹಾಗೂ ಸ್ಥಳೀಯ ಚುನಾಯಿತ ಸದಸ್ಯರು ಪರಸ್ಪರ ಸಹಕಾರ ಮತ್ತು ಸೇವಾ ಮನೋಭಾವನೆಯನ್ನು ಬೆಳೆಸಿಕೊಳ್ಳುವ ಅವಶ್ಯಕತೆಯಿದೆ ಎಂದು ತಿಳಿಯಲಾಗಿದೆ.

**ಕುಡಿಯುವ ನೀರಿನ ಸಮಸ್ಯೆಗೆ ಯಾವ ಪರಿಹಾರ ಮಾಡಿದ್ದಾರೆ**

| **ಕುಡಿಯುವ ನೀರಿನ ಸಮಸ್ಯೆಗೆ ಪರಿಹಾರ** | **ಹೊಸಪೇಟೆ** | | **ಕೂಡ್ಲಿಗಿ** | |
|---|---|---|---|---|
| ಕೈಪಂಪು, ಟ್ಯಾಂಕ್‌ನ ಮೂಲಕ | ೨೯ | ೮೨.೮೫ | ೧೩ | ೬೫.೦೦ |
| ಸಮರ್ಪಕ ಕುಡಿಯುವ ನೀರಿನ ಯೋಜನೆ ಅನುಷ್ಠಾನ ಮಾಡುವುದು. | ೬ | ೧೭.೧೫ | ೭ | ೩೫.೦೦ |
| **ಒಟ್ಟು** | ೩೫ | ೧೦೦ | ೨೦ | ೧೦೦ |

**ಮೂಲ: ಕ್ಷೇತ್ರ ಕಾರ್ಯದ ಮಾಹಿತಿ**

ಕುಡಿಯುವ ನೀರಿಗೆ ಸಂಬಂಧಿಸಿದಂತೆ ಎರಡು ನಗರ ಸ್ಥಳೀಯ ಸಂಸ್ಥೆಗಳು ಯಾವ ರೀತಿಯಲ್ಲಿ ಪರಿಹಾರವನ್ನು ಕಂಡುಕೊಂಡಿರುವುದರ ಪ್ರಮಾಣವನ್ನು ಉಲ್ಲೇಖಿಸಲಾಗಿದೆ. ಹೊಸಪೇಟೆ ನಗರಸಭೆ ಶೇ. ೮೨.೮೫ ಚುನಾಯತ ಸಸದಸ್ಯರು ಮತ್ತು ಕೂಡ್ಲಿಗಿ ಪಟ್ಟಣ ಪಂಚಾಯಿತಿಯ ಶೇ. ೬೫ರಷ್ಟು ಚುನಾಯಿತ ಸದಸ್ಯರು ಕುಡಿಯುವ ನೀರಿನ ಸಮಸ್ಯೆಯು ಉಂಟಾದಾಗ ಕೈಪಂಪು, ಟ್ಯಾಂಕರ್‌ನ ಮೂಲಕ ಪರಿಹರಿಸುತ್ತೇವೆ ಎಂಬುದಾಗಿ ಉಳಿದ ನಗರಸಭೆಯ ಶೇ. ೧೭.೧೫ರಷ್ಟು ಚುನಾಯಿತ ಸದಸ್ಯರು ಮತ್ತು ಪಟ್ಟಣ ಪಂಚಾಯಿತಿಯ ಶೇ. ೩೫ರಷ್ಟು ಚುನಾಯಿತ ಸದಸ್ಯರು ಕುಡಿಯುವ ನೀರಿನ ಸಮಸ್ಯೆಯನ್ನು ಈಡೇರಿಸಲು ಸಮರ್ಪಕ ಕುಡಿಯುವ ನೀರಿನ ಯೋಜನೆಗಳನ್ನು ಅನುಷ್ಠಾನ ಮಾಡಿಸುತ್ತೇವೆ ಎಂದು ಅಧ್ಯಯಗಳಿಂದ ತಿಳಿದುಬಂದಿದೆ. ಒಟ್ಟಾರೆ ಮುಂದುವರಿದ ನಗರಸಭೆಯ ಸದಸ್ಯರಿಗಿಂತ ತೀರಾ ಹಿಂದುಳಿದ ಪಟ್ಟಣ ಪಂಚಾಯಿತಿಯ ಸದಸ್ಯರು ನೀರಿನ ಸಮಸ್ಯೆಗೆ ಸಂಬಂಧಿಸಿದ ಕ್ರಮಬದ್ಧವಾದ ಪರಿಹಾರವನ್ನು ಒದಗಿಸುವುದರಲ್ಲಿ ಕೆಳಮಟ್ಟದಲ್ಲಿರುವುದು ಕಂಡುಕೊಳ್ಳಲಾಗಿದೆ. ನಗರಸಭೆಯ ಸದಸ್ಯರು ನೀರಿನ ಸಮಸ್ಯೆಗೆ ಹೆಚ್ಚಿನ ಪ್ರಾಮುಖ್ಯತೆಯನ್ನು ಕೊಡುವುದಲ್ಲದೆ ಕುಡಿಯುವ ನೀರಿನ ಸಮಸ್ಯೆಗೆ ಸಂಬಂಧಿಸಿದ್ದಂತೆ ದೊಡ್ಡ ಟ್ಯಾಂಕ್‌ನ ಮೂಲಕ ನೀರನ್ನು ಒದಗಿಸಲಾಗುತ್ತೆ ಎಂದು ನಾವು ಇತ್ತೀಚಿಗೆ ವಾರ್ಡಿಗೆ ಭೇಟಿ ನೀಡಿದಾಗ ಗಮನಿಸಲಾಯಿತು. ಆದರೆ ಈ ರೀತಿಯ ತಾತ್ಕಾಲಿಕ ವ್ಯವಸ್ಥೆ ಹೆಚ್ಚು ದಿನಗಳವರೆಗೆ ಮುಂದುವರಿಸಲು ಸಾಧ್ಯವಿಲ್ಲವೆಂದು ಸದಸ್ಯರು ತಿಳಿಸಿದರು. ಆದರೆ ಪಟ್ಟಣ ಪಂಚಾಯಿತಿಯು ಇಂತಹ ನೀರಿನ ಸಮಸ್ಯೆಗೆ ಪ್ರಾಮುಖ್ಯತೆಯನ್ನು ಹೆಚ್ಚಾಗಿ ಕೊಡದಿರಲು ಕನಿಷ್ಠ ಮೂಲಭೂತ ಸೌಲಭ್ಯಗಾಳನ್ನು ಒದಗಿಸದಿರುವುದಕ್ಕೆ ಹಿಂದುಳಿಯಿತು ಎನ್ನಬಹುದು. ಸ್ಥಳೀಯ ಸಂಸ್ಥೆಗಳ ಬಗ್ಗೆ ಅರಿವಿನ ನೆಲೆಯಲ್ಲಿ ಜನ ಸಮೂಹ ನಡೆದರೆ ಅದು ರಾಜಕೀಯವಾಗಿ ಯಶಸ್ವಿಯಾಗಬಲ್ಲದಾಗಿದೆ. ಆದ್ದರಿಂದ ಇಂತಹ ಹಿಂದುಳಿದ ಪ್ರದೇಶಗಳಿಗೆ ವಿಶೇಷ ಕಾರ್ಯಯೋಜನೆ ರೂಪಿಸುವ ಅಗತ್ಯವಿದೆ ಎಂದು ಮನಗಾಣಲಾಗಿದೆ.

**ಉಂಟಾಗುತ್ತದೆ ಎಂದಾದರೆ ಯಾವ ಸಮಯದಲ್ಲಿ ಎದರಾಗುತ್ತದೆ**

| **ಯಾವ ಸಮಯದಲ್ಲಿ ಸಮಸ್ಯೆ ಬರುತ್ತದೆ** | **ಹೊಸಪೇಟೆ** | | **ಕೂಡ್ಲಿಗಿ** | |
|---|---|---|---|---|
| ಬೇಸಿಗೆ, ವಿದ್ಯುತ್ ಸಮಸ್ಯೆಯಾದಾಗ | ೧೯ | ೫೪.೨೧ | ೧೨ | ೬೦.೦೦ |
| ಬೋರ್‌ವೆಲ್ ಕೆಟ್ಟಾಗ, ವಿದ್ಯುತ್ ಸಮಸ್ಯೆಯಾದಾಗ. | ೧೬ | ೪೫.೭೯ | ೮ | ೪೦.೦೦ |
| **ಒಟ್ಟು** | ೩೫ | ೧೦೦.೦೦ | ೨೦ | ೧೦೦ |

**ಮೂಲ: ಕ್ಷೇತ್ರ ಕಾರ್ಯದ ಮಾಹಿತಿ**

ನಗರ ಸ್ಥಳೀಯ ಸಂಸ್ಥೆಗಳಾದ ಹೊಸಪೇಟೆ ನಗರಸಭೆಯ ಶೇ. ೫೪.೨೧ರಷ್ಟು ಚುನಾಯಿತ ಸದಸ್ಯರು ಮತ್ತು ಕೂಡ್ಲಿಗಿ ಪಟ್ಟಣ ಪಂಚಾಯಿತಿಯ ಶೇ. ೬೦ರಷ್ಟು ಚುನಾಯಿತ ಸದಸ್ಯರು ನೀರಿನ ಸಮಸ್ಯೆಯು ಬೇಸಿಗೆ, ವಿದ್ಯುತ್ ಸಮಸ್ಯೆಯಾದಾಗ ಉಂಟಾಗುತ್ತದೆ ಎಂದು ತಿಳಿಸಿರುತ್ತಾರೆ. ಉಳಿದ ನಗರಸಭೆಯ ಶೇ. ೪೫.೭೯ರಷ್ಟು ಚುನಾಯಿತ ಸದಸ್ಯರು ಮತ್ತು ಪಟ್ಟಣ ಪಂಚಾಯಿತಿಯ ಶೇ. ೪೦ರಷ್ಟು ಚುನಾಯಿತ ಸದಸ್ಯರು ಬೋರ್ವೆಲ್(ಕೊಳವೆ) ಕೆಟ್ಟಾಗ, ನೀರಿನ ಸಮಸ್ಯೆಯಾಗುತ್ತದೆ ಎಂದು ತಿಳಿಸಿರುತ್ತಾರೆ. ಒಟ್ಟಾರೆ ಸಾಪೇಕ್ಷವಾಗಿ ಮುಂದುವರಿದ ಹೊಸಪೇಟೆ ನಗರಸಭೆಯ ಸದಸ್ಯರಿಗಿಂತ ತೀರಾ ಹಿಂದುಳಿದ ಕೂಡ್ಲಿಗಿ ಪಟ್ಟಣ ಪಂಚಾಯಿತಿಯ ಸದಸ್ಯರಲ್ಲಿ ಹೆಚ್ಚಿನ ಪ್ರಮಾಣದಲ್ಲಿ ನೀರಿನ ಸಮಸ್ಯೆಯು ತಾತ್ಕಾಲಿಕ ಸಮಸ್ಯೆಯಾಗಿದ್ದು, ಆದರೂ ಅದನ್ನು ಸಮರ್ಥವಾಗಿ ನಿರ್ವಹಣೆ ಮಾಡುವುದರಲ್ಲಿ ವಿಫಲರಾಗಿದ್ದಾರೆ. ಅಂದರೆ ಮುಂದುವರಿದ ನಗರಸಭೆಯಲ್ಲಿಯೂ ತಾತ್ಕಾಲಿಕ ಸಮಸ್ಯೆಯಾಗಿದ್ದರೂ ಇವರು ನೀರಿನ ಸಮಸ್ಯೆಗೆ ಹೆಚ್ಚಿನ ಪ್ರಾಮುಖ್ಯತೆ ಕೊಡುತ್ತಾರೆ ಅಂದರೆ ಇದರ ಅರ್ಥ ಜನರಲ್ಲಿ ಈ ಎಲ್ಲಾ ಸೌಕರ್ಯಗಳ ಪಾಲುದಾರರು ನಾವೇ ಎಂಬ ಮನೋಭವ ಬಂದಿದೆ. ನೀರಿನ ಸಮಸ್ಯೆ ಬಂದರೆ ಹೊಣೆಗಾರರು ನಾವೇ ಎಂಬ ಅರಿವು ಮೂಡಿದೆ. ಹೀಗೆ ಮನೋಭಾವನೆಯಲ್ಲಿ ಬದಲಾವಣೆ ಬಂದಿರುವುದು ಸ್ವಾಗರ್ತಾಹ ಅಂಶವಾಗಿದೆ ಎನ್ನಬಹುದಾಗಿದೆ ಆದರೆ ಹಿಂದುಳಿದ ಪಟ್ಟಣ ಪಂಚಾಯಿತಿಯ ಹಿಂದುಳಿಯಲು ಕಾರಣವೆಂದರೆ ಪಟ್ಟಣ ಪಂಚಾಯಿತಿ ಎದುರಿಸುತ್ತಿರುವ ಆಡಳಿತ ತೊಂದರೆಗಳು, ತೊಂದರೆಗಳನ್ನು ಬಗೆಹರಿಸಲು ಅನುಸರಿಸುವ ವಿಧಾನ, ನಗರ ಸ್ಥಳೀಯ ಸಂಸ್ಥೆಯ (ಪಟ್ಟಣ ಪಂಚಾಯಿತಿ) ಕಾರ್ಯಕ್ರಮಗಳಲ್ಲಿ ಹೆಚ್ಚಿನ ರೀತಿಯ ಸದಸ್ಯರ ಮತ್ತು ಸದಸ್ಯೆಯರ ಭಾಗವಹಿಸುವಿಕೆ ಮತ್ತು ಮೂಲಭೂತ ಸೌಲಭ್ಯಗಳ ಬಗ್ಗೆ ಅರಿವಿನ ಕೊರತೆಯಿರುವುದು ಅಧ್ಯಯಗಳಿಂದ ಗಮನಿಸಬಹುದಾಗಿದೆ. ನಗರ ಸ್ಥಳೀಯ ಸಂಸ್ಥೆಗಳಲ್ಲಿ ಜನಸಮೂಹವು–ಜನಪ್ರತಿನಿಧಿಗಳ ಸಹಭಾಗಿತ್ವದ ಹಿನ್ನೆಲೆಯಾಗಿ ವಾರ್ಡಿನ ಜನತೆಗೆ ಸರ್ಕಾರದಿಂದ ಬರುವ ಯೋಜನೆಗಳ ಬಗ್ಗೆ ಅರಿವು ಮೂಡಿಸುವುದ ಜೊತೆಗೆ ಅಭಿವೃದ್ಧಿಯಲ್ಲಿ ಭಾಗವಹಿಸುವಂತಹ ತರಬೇತಿಗಳನ್ನು ಕೊಡಿಸುವ ಅಗತ್ಯವಿದೆ.

**೬.೧೦. ನಗರವಾರು ಸಂದರ್ಶನ ಮಾಡಿದ ಚುನಾಯಿತ ಪ್ರತಿನಿಧಿಗಳ ಶೌಚಾಲಯ, ಆರೋಗ್ಯ, ಶಿಕ್ಷಣ, ಬೀದಿ ದೀಪ, ಚರಂಡಿ ಸಮಸ್ಯೆ ಮತ್ತು ರಸ್ತೆ ಪರಿಹಾರ ಕುರಿತ ಅಭಿಪ್ರಾಯಗಳು**

| ಚುನಾಯಿತ ಪ್ರತಿನಿಧಿಗಳ ಶೌಚಾಲಯ, ಆರೋಗ್ಯ, ಶಿಕ್ಷಣ, ಬೀದಿದೀಪ, ಚರಂಡಿ ಮತ್ತು ರಸ್ತೆ ಸಮಸ್ಯೆ ಪರಿಹಾರ | ಹೊಸಪೇಟೆ ನಗರ ಸಭೆ | | ಕೂಡ್ಲಿಗಿ ಪಟ್ಟಣಪಂಚಾಯಿತಿ | |
|---|---|---|---|---|
| | ಸಂಖ್ಯೆಗಳು | ಶೇಕಡವಾರು | ಸಂಖ್ಯೆಗಳು | ಶೇಕಡವಾರು |
| ನಿಮ್ಮ ನಗರ ಸಭೆ/ಪಟ್ಟಣ ಪಂಚಾಯಿತಿ ವ್ಯಾಪ್ತಿಯಲ್ಲಿ ಬರುವ ಸಮಸ್ಯೆಗಳನ್ನು ಪರಿಹಾರ ಮಾಡುದ್ದೀರಾ | | | | |
| ಶೌಚಾಲಯ ಸಮಸ್ಯೆ ಪರಿಹಾರ | | | | |
| ಸ್ಥಳೀಯ ಸಂಸ್ಥೆಗಳಿಂದ ಸಹಾಯಧನ ಕೊಟ್ಟು ಶೌಚಾಲಯ ಕಟ್ಟಿಸಿಕೊಡುವುದು | ೧೫ | ೪೨.೮೬ | ೧೨ | ೬೦.೦೦ |
| ಸಮುದಾಯದ ಶೌಚಾಲಯ | | | | |

| ಕಟ್ಟಿಸಿ ಕೊಡುವುದು | ೧೩ | ೩೭.೧೪ | ೮ | ೪೦.೦೦ |
|---|---|---|---|---|
| ಸಂಚಾರಿ ಶೌಚಾಲಯ ನಿರ್ಮಿಸುವುದು | ೫ | ೧೪.೨೯ | ೦ | ೦.೦೦ |
| ಶೌಚಾಲಯದ ಬಳಕೆಯಿಂದ ಆಗುವ ಉಪಯೋಗವನ್ನು ಹೇಳುವುದು | ೨ | ೫.೭೧ | ೦ | ೦.೦೦ |
| **ಒಟ್ಟು** | ೩೫ | ೧೦೦ | ೨೦ | ೧೦೦ |

**ಮೂಲ: ಕ್ಷೇತ್ರ ಕಾರ್ಯದ ಮಾಹಿತಿ**

**ಶೌಚಾಲಯದ ಸಮಸ್ಯೆ ಪರಿಹಾರ**

ವಿಶ್ವದಲ್ಲಿ ಶೌಚಾಲಯ ಸೌಲಭ್ಯವಿಲ್ಲದ ಒಟ್ಟು ೨.೬ ಶತಕೋಟಿ ಜನರ ಪೈಕಿ ೬೫೦ ದಶಲಕ್ಷ ಜನರು ಭಾರತದಲ್ಲಿ ವಾಸಿಸುತ್ತಿದ್ದಾರೆ. ದೇಶವನ್ನು ಕಾಡುತ್ತಿರುವ ದೊಡ್ಡ ಸಮಸ್ಯೆಗಳ ಪೈಕಿ ಒಂದಾದ ನೈರ್ಮಲ್ಯದ ಸಮಸ್ಯೆಗೆ ಪರಿಹಾರ ಕಂಡುಕೊಳ್ಳುವ ನಿಟ್ಟಿನಲ್ಲಿ ಭಾರತ ಸರ್ಕಾರ ಮಹಾತ್ಮ ಗಾಂಧಿ ಸ್ವಚ್ಛ ಭಾರತ ಕಾರ್ಯಕ್ರಮವನ್ನು ಆರಂಭಿಸಿದೆ. (ಗ್ರೇಗೊರಿ ಪೀಯರ್ಸ್, ಕನ್ನಡಕ್ಕೆ: ಮಹೇಶ್, ಸಂಪೂರ್ಣ ಶೌಚಾಲಯ, ಯೋಜನಾ, ಜನವರಿ ೨೦೧೫, ಬೆಂಗಳೂರು, ಪು-೯.) ಹಾಗಾಗಿ ಈ ನಿಟ್ಟಿನಲ್ಲಿ ಎರಡು ಸ್ಥಳೀಯ ಸಂಸ್ಥೆಗಳಲ್ಲಿ ಚುನಾಯಿತ ಸದಸ್ಯರ ಶೌಚಾಲಯ ಸಮಸ್ಯೆಗೆ ಕೇಂದ್ರ ಪ್ರಾಯೋಜಿತ ಕಡಿಮೆ ವೆಚ್ಚದ ಸಮಗ್ರ ಶೌಚವ್ಯವಸ್ಥೆ ಯೋಜನೆ(ಐಎಲ್‌ಸಿಎಸ್) ಮತ್ತು ಎಸ್‌ಎಫ್‌ಸಿ ಯೋಜನೆಯಡಿಯಲ್ಲಿ ಸದ್ಯ ಇರುವ ಒಣ ಪಾಯಿಖಾನೆಗಳನ್ನು ನೀರು-ಸಹಿತ ಪಾಯಾಖಾನೆಯುಕ್ತ ಶೌಚವ್ಯವಸ್ಥೆಯಾಗಿ ಪರಿವರ್ತಿಸುವುದು ಮತ್ತು ಪಾಯಾಖಾನೆ ಹೊಂದಿಲ್ಲದ ಆರ್ಥಿಕವಾಗಿ ಹಿಂದುಳಿದ ವರ್ಗಕ್ಕೆ ಸೇರಿದ ಕುಟುಂಬದ ಮನೆಗಳಲ್ಲಿ ಹೊಸ ಪಾಯಖಾನೆಗಳ ನಿರ್ಮಾಣ ಈ ಯೋಜನೆಯ ಉದ್ದೇಶ. ಈ ಯೋಜನೆಗಳಡಿಯಲ್ಲಿ ನಗರ ಪ್ರದೇಶಗಳಲ್ಲಿ ಶೌಚಾಲಯ ಒದಗಿಸುವುದು, ಶೌಚಾಲಯದ ಬಳಕೆ, ಸಮುದಾಯ ಶೌಚಾಲಯ ಮತ್ತು ಸಂಚಾರಿ ಶೌಚಾಲಯ ಈ ಅಧ್ಯಯನದಲ್ಲಿ ಭಾಗಿಯಾದ ಪ್ರತಿಯೊಬ್ಬ ಚುನಾಯಿತ ಸದಸ್ಯರು ಮಾಡಿರುವ ಪರಿಹಾರದ ಪ್ರಮಾಣ ಕೆಳಗಿನಂತೆ ಉಲ್ಲೇಖಿಸಲಾಗಿದೆ. ನಗರ ಪ್ರದೇಶಗಳಲ್ಲಿ ಶೌಚ ವ್ಯವಸ್ಥೆ ಅಸಮರ್ಪಕವಾಗಿದೆ, ಎಂಬುದನ್ನು ಸುಲಭವಾಗಿ ಗ್ರಹಿಸಬಹುದು. ಅಂದರೆ, ತೆರೆದ ಬಯಲಿನಲ್ಲಿ ಮಲ ವಿಸರ್ಜನೆ ಮಾಡುವ ಅಭ್ಯಾಸವು ಮುಂದುವರಿಯಲು ನೀರು ಸಿಗದಿರುವುದೂ ಕೂಡ ಪ್ರಮುಖ ಕಾರಣಗಳಲ್ಲೊಂದು. ಸಾಕಷ್ಟು ನೀರನ್ನು ಸಿಗದಿರುವುದರಿಂದ ಶೌಚಾಲಯಗಳು ದುರಸ್ಥಿಯಲ್ಲಿರುವುದರಿಂದ ಚೆನ್ನಾಗಿ ರೂಪಿಸಿದ ಶೌಚಾಲಯಗಳನ್ನು ಕೆಲವೇ ವಾರಗಳಲ್ಲಿ ಬಳಸದಿರುವುದನ್ನು ನೋಡಬಹುದಾಗಿದೆ. ಈ ನಿಟ್ಟಿನಲ್ಲಿ ಹೊಸಪೇಟೆ ನಗರಸಭೆಯ ಒಟ್ಟು ೩೫ ಸದಸ್ಯರಲ್ಲಿ ಶೇ. ೪೨.೮೬ರಷ್ಟು ಚುನಾಯಿತ ಸದಸ್ಯರು ಮತ್ತು ಕೂಡ್ಲಿಗಿ ಪಟ್ಟಣ ಪಂಚಾಯಿತಿಯ ಒಟ್ಟು ೨೦ ಸದಸ್ಯರಲ್ಲಿ ಶೇ. ೬೦ರಷ್ಟು ಚುನಾಯಿತ ಸದಸ್ಯರು ಶೌಚಾಲಯದ ಸಮಸ್ಯೆಗೆ ಸ್ಥಳೀಯ ಸಂಸ್ಥೆಗಳಿಂದ ಸಹಾಯಧನ ಕೊಟ್ಟು ಶೌಚಾಲಯ ಕಟ್ಟಿಸಿಕೊಡುತ್ತೇವೆ ಎಂಬುದಾಗಿ ಅದೇ ರೀತಿಯಲ್ಲಿ ನಗರಸಭೆಯ ಶೇ. ೩೭.೧೪ರಷ್ಟು ಚುನಾಯಿತ ಸದಸ್ಯರು ಮತ್ತು ಪಟ್ಟಣ ಪಂಚಾಯಿತಿಯ ಶೇ. ೪೦ರಷ್ಟು ಚುನಾಯಿತ ಸದಸ್ಯರು ಶೌಚಾಲಯ ಹೆಚ್ಚು-ಹೆಚ್ಚಾಗಿ ಉಪಯೋಗಿಸಲು ಸಮುದಾಯ ಶೌಚಾಲಯಗಳನ್ನು ಕಟ್ಟಿಸಿಕೊಡಲಾಗುವುದು ಎಂಬುದಾಗಿ ಉಳಿದ ಹೊಸಪೇಟೆ ನಗರಸಭೆಯ ಶೇ. ೧೪.೨೯ರಷ್ಟು ಹಾಗೂ ಶೇ. ೫.೭೧ರಷ್ಟು ಚುನಾಯಿತ ಸದಸ್ಯರು ಸಂಚಾರಿ ಶೌಚಾಲಯ ನಿರ್ಮಿಸುವುದರ ಜೊತೆಗೆ ಶೌಚಾಲಯದ ಬಳಕೆಯಿಂದ ಆಗುವ ಉಪಯೋಗವನ್ನು

ತಿಳಿಸಿ ಹೇಳುತ್ತಾ ತಮ್ಮ ಅಭಿಪ್ರಾಯವನ್ನು ಹೇಳಿಕೊಂಡಿರುವುದು ಅಧ್ಯಯಗಳಿಂದ ತಿಳಿಯಬಹುದಾಗಿದೆ. ಒಟ್ಟಾರೆ ಮುಂದುವರಿದ ಹೊಸಪೇಟೆ ನಗರಸಭೆ ಸದಸ್ಯರಿಗಿಂತ ಹಿಂದುಳಿದ ಕೂಡ್ಲಿಗಿ ಪಟ್ಟಣ ಪಂಚಾಯಿತಿಯ ಸದಸ್ಯರು ಶೌಚಾಲಯದ ಸಮಸ್ಯೆಗೂ ಪರಿಹಾರ ನೀಡುವುದರಲ್ಲಿ ಹೆಚ್ಚಿನ ಪ್ರಾಮುಖ್ಯತೆಯನ್ನು ಕೊಡದಿರುವುದನ್ನು ಅಧ್ಯಯಗಳಿಂದ ಗ್ರಹಿಸಲಾಗಿದೆ. ಹಿಂದುಳಿದ ಕೂಡ್ಲಿಗಿ ಪಟ್ಟಣ ಪಂಚಾಯಿತಿಯಲ್ಲಿ ತಕ್ಕಮಟ್ಟಿಗೆ ಪರಿಹಾರವನ್ನು ಮಾಡಿಕೊಟ್ಟಿರುತ್ತಾರೆ. ಆದರೆ ಮುಂದುವರಿದ ಹೊಸಪೇಟೆ ನಗರಸಭೆಯು ಸಮರ್ಪಕ ನೀರು ಪೂರೈಕೆ ಯಾಕೆಂದರೆ, ಅವುಗಳು ಕೆಲವೇ ವಾರಗಳಲ್ಲಿ ಕಟ್ಟಿಕೊಳ್ಳುವಂತಾದರೆ ಕೇವಲ ಶೌಚಾಲಯಗಳನ್ನು ಕಟ್ಟುವುದರಲ್ಲಿ ಪ್ರಯೋಜನವಿರುವುದಿಲ್ಲ ಜೊತೆಗೆ ನೈರ್ಮಲೀಕರಣದ ಬಗ್ಗೆ ಕಾಳಜಿ ವಹಿಸಿರುವುದನ್ನು ನೋಡಿದಾಗ ನೈರ್ಮಲೀಕರಣದಿಂದಾಗುವ ಸಮಸ್ಯಗಳ ಬಗ್ಗೆ ಅರಿವು ಹೊಂದಿರುವುದು ತಿಳಿದುಬರುತ್ತದೆ. ಹಿಂದುಳಿದ ಪಟ್ಟಣ ಪಂಚಾಯಿತಿಯು ಪ್ರತಿಯೊಂದು ಮನೆಗೂ ಶೌಚಾಲಯಗಳಿರಬೇಕೆಂದು ಒಂದು ಯೋಜನೆಯನ್ನು ಸಮರ್ಥ ಅನುಷ್ಠಾನಗೊಳಿಸುವುದರ ಜೊತೆಗೆ ಅದರ ಉಪಯೋಗ, ನೈರ್ಮಲೀಕರಣಕ್ಕೆ ಕೊಟ್ಟಿರುವ ಸಹಾಯಧನವನ್ನು ಅದಕ್ಕಾಗಿ ಉಪಯೋಗಿಸಿ ಶೌಚಾಲಯ ನಿರ್ಮಿಸಿಕೊಳ್ಳುವುದು. ಇದಲ್ಲದೇ ಸಾರ್ವಜನಿಕರು ಯೋಜನೆಗಳ ಅನುಷ್ಠಾನದಲ್ಲಿ ಸಕ್ರಿಯವಾಗಿ ಭಾಗವಹಿಸದೆ ಹಿಂದುಳಿದಿದೆ ಎನ್ನಬಹುದಾಗಿದೆ. ಹಿಂದುಳಿದ ಪಟ್ಟಣ ಪಂಚಾಯಿತಿಯಲ್ಲಿ ಜನರ ಬದುಕನ್ನು ಉತ್ತಮಪಡಿಸಿಕೊಳ್ಳಲು ಕೇವಲ ಶೌಚಾಲಯ ನಿರ್ಮಾಣದಿಂದ ಮಾತ್ರ ಸಮಸ್ಯೆ ಪರಿಹಾರ ಆಗದು, ಶೌಚಾಲಯಗಳ ಬಗ್ಗೆಯೂ ಜನರ ನಡವಳಿಕೆಯಲ್ಲಿ ಬದಲಾವಣೆ ಆಗುವುದು, ಶೌಚಾಲಯಗಳ ಬಗ್ಗೆ ಜನರಲ್ಲಿ ಜನಜಾಗೃತಿ ಮೂಡಿಸುವ ಮೂಲಕ ಸುರಕ್ಷಿತ ಶೌಚವ್ಯವಸ್ಥೆಯ ಬಳಕೆಯನ್ನು ಉತ್ತೇಜಿಸುವುದರ ಜೊತೆಗೇ ಶೌಚಾಲಯ ಸೌಲಭ್ಯವಿಲ್ಲದ ವಾರ್ಡಿನ ಜನರಿಗೆ ಸಂಪೂರ್ಣ ಶೌಚಾಲಯ ಕಲ್ಪಿಸುವುದು ಹಾಗೂ ಶೌಚ ಗೃಹಗಳಿಗೆ ನಿಗದಿತ ಪ್ರಮಾಣದಲ್ಲಿ ನೀರು ಪೂರೈಕೆಯಾಗುವುದನ್ನು ಖಾತ್ರಿಪಡಿಸಿಕೊಳ್ಳುವ ಅಗತ್ಯವಿದೆ ಮನಗಾಣಲಾಗಿದೆ.

**ಆರೋಗ್ಯ ಸಮಸ್ಯೆಯ ಪರಿಹಾರ**

| ಆರೋಗ್ಯ ಸಮಸ್ಯೆ ವಿವರ | ಹೊಸಪೇಟೆ | | ಕೂಡ್ಲಿಗಿ | |
|---|---|---|---|---|
| ನೈರ್ಮಲೀಕರಣದ ಬಗ್ಗೆ ಜಾಗೃತಿ ಮೂಡಿಸುವಂತಹ ಕಾರ್ಯಕ್ರಮಗಳನ್ನು ಕೈಗೊಳ್ಳವುದು | ೫ | ೧೪.೨೧ | ೨ | ೧೦.೦೦ |
| ಸಹಾಯ ಧನವನ್ನು ಚಿಕಿತ್ಸೆಗಾಗಿ ಕೊಡುವುದು, ಉಚಿತ ಶಸ್ತ್ರ ಚಿಕಿತ್ಸೆ ಕೊಡಿಸುವುದು | ೧೭ | ೪೮.೫೩ | ೬ | ೩೦ .೦೦ |
| ಸರ್ಕಾರಿ ಯೋಜನೆಗಳನ್ನು ಸಮರ್ಪಕ ವಾಗಿ ಅನುಷ್ಠಾನಗೊಳಿಸುವುದು | ೬ | ೧೭.೧೬ | ೪ | ೨೦.೦೦ |
| ಏನೂ ಹೇಳಿಲ್ಲ | ೭ | ೨೦.೦೦ | ೮ | ೪೦.೦೦ |
| **ಒಟ್ಟು** | ೩೫ | ೧೦೦ | ೨೦ | ೧೦೦ |

**ಮೂಲ: ಕ್ಷೇತ್ರ ಕಾರ್ಯದ ಮಾಹಿತಿ**

ನಗರ ಪ್ರದೇಶವಾರು ಮೇಲಿನ ಅಂಶಕ್ಕೆ ಸಂಬಂಧಿಸಿದಂತೆ ಆರೋಗ್ಯದ ಸಂಗತಿಗಳಿಗೆ ಪ್ರತಿಯೊಬ್ಬ ಚುನಾಯಿತ ಸದಸ್ಯರು ನೀಡಿದಂತಹ ಪರಿಹಾರದ ಪ್ರಮಾಣವನ್ನು ನೀಡಲಾಗಿದೆ. ಜನಸಂಖ್ಯೆ ಏರಿಕೆ ಮತ್ತು ನಗರೀಕರಣದ ನಾಗಲೋಟವೇ ನೈರ್ಮಲ್ಯದ ಸಂಪೂರ್ಣ ಕುಸಿತ ಮತ್ತು ಅದರ ಫಲಿತಾಂಶವಾಗಿ ಜನರ ಆರೋಗ್ಯ ಮಟ್ಟದ ಕುಸಿತದಂತಹ ಪ್ರಮುಖ ಸಮಸ್ಯೆಗೆ ಕಾರಣವಾಗಿರಬಹುದು. ಅಂತೆಯೇ, ಹೊಸಪೇಟೆ ನಗರಸಭೆಯ ಶೇ. ೧೪.೨೧ರಷ್ಟು ಚುನಾಯಿತ ಸದಸ್ಯರು ಮತ್ತು ಕೂಡ್ಲಿಗಿ ಪಟ್ಟಣ ಪಂಚಾಯಿತಿಯ ಶೇ. ೧೦ರಷ್ಟು ಚುನಾಯಿತ ಸದಸ್ಯರು ವಾರ್ಡಿನಲ್ಲಿ ಆರೋಗ್ಯದ ಸಮಸ್ಯೆ ಉಂಟಾದಾಗ ಅದರ ಬಗ್ಗೆ ಜಾಗೃತಿ ಮೂಡಿಸುವಂತಹ ಕಾರ್ಯಕ್ರಮಗಳನ್ನು ಕೈಗೊಳ್ಳುತ್ತೇವೆ ಎಂಬುದಾಗಿ ಅದೇ ರೀತಿ ಹೊಸಪೇಟೆ ನಗರಸಭೆಯ ಶೇ. ೪೮.೫೩ರಷ್ಟು ಚುನಾಯಿತ ಪ್ರತಿನಿಧಿಗಳು ಮತ್ತು ಕೂಡ್ಲಿಗಿ ಪಟ್ಟಣ ಪಂಚಾಯಿತಿಯ ಶೇ. ೩೦ರಷ್ಟು ಚುನಾಯಿತ ಪ್ರತಿನಿಧಿಗಳು ಆನಾರೋಗ್ಯದ ವಿಚಾರಬಂದಾಗ ವಾರ್ಡಿನ ಜನರಿಗೆ ಚಿಕಿತ್ಸೆಗಾಗಿ ಸಹಾಯಧನ, ಉಚಿತ ಶಸ್ತ್ರ ಚಿಕಿತ್ಸೆ ಮಾಡಿಸಿಕೊಡಲಾಗುತ್ತದೆ ಎಂಬುದಾಗಿ ಇತರೆ ನಗರಸಭೆಯ ಶೇ. ೧೭.೧೬ರಷ್ಟು ಚುನಾಯಿತ ಸದಸ್ಯರು ಮತ್ತು ಪಟ್ಟಣ ಪಂಚಾಯಿತಿಯ ಶೇ. ೨೦ರಷ್ಟು ಚುನಾಯಿತ ಸದಸ್ಯರು ಆರೋಗ್ಯಕ್ಕಿರುವ ಸೌಲಭ್ಯಗಳನ್ನು ಸಮರ್ಪಕವಾಗಿ ಬಳಸುತ್ತೇವೆ ಎಂಬುದಾಗಿ ಉಳಿದ ನಗರಸಭೆಗಳು ಶೇ. ೨೦ರಷ್ಟು ಚುನಾಯಿತ ಸದಸ್ಯರು ಮತ್ತು ಪಟ್ಟಣ ಪಂಚಾಯಿತಿಯ ಶೇ. ೪೦ರಷ್ಟು ಚುನಾಯಿತ ಸದಸ್ಯರು ಸಮಸ್ಯೆ ಬಂದಾಗ ಯಾವ ಉತ್ತರವನ್ನು ನೀಡದಿರುವುದು ಅಧ್ಯಯಗಳಿಂದ ಕಂಡುಬಂದಿದೆ. ಒಟ್ಟಾರೆಯಾಗಿ ಈ ವಿಶ್ಲೇಷಣೆಯಿಂದ ಮುಂದುವರಿದ ಹೊಸಪೇಟೆ ನಗರಸಭೆಯ ಸದಸ್ಯರಿಗಿಂತ ತೀರಾ ಹಿಂದುಳಿದ ಕೂಡ್ಲಿಗಿ ಪಟ್ಟಣ ಪಂಚಾಯಿತಿಯ ಸದಸ್ಯರು ಆರೋಗ್ಯದ ಸಮಸ್ಯೆ ಬಂದಾಗ ಜನಪ್ರತಿನಿಧಿಗಳಾಗಿ ಪರಿಹಾರ ನೀಡುವುದರಲ್ಲಿ ಕೆಳಮಟ್ಟದಲ್ಲಿಯಿರುವುದು ತಿಳಿಯಬಹುದಾಗಿದೆ. ವಾರ್ಡಿನಲ್ಲಿ ಕುಡಿಯುವ ನೀರು ಯೋಗ್ಯವಾಗಿಲ್ಲದಿರುವುದು, ಆರೋಗ್ಯ ಕೇಂದ್ರಗಳಲ್ಲಿ ಸರಿಯಾದ ಸೌಲಭ್ಯವಿಲ್ಲದಿರುವುದು ಚಿಕಿತ್ಸೆಗಾಗಿ ಬೇರೊಂದು ಕೇಂದ್ರಕ್ಕೆ ಹೋಗುವುದು, ಸದಸ್ಯರು ನೈರ್ಮಲ್ಯೀಕರಣಕ್ಕೆ ಸಂಬಂಧಿಸಿದ ಕೆಲಸಗಳು ವಾರ್ಡಿನಲ್ಲಿ ಸಮರ್ಥ ರೀತಿಯಲ್ಲಿ ಕೈಗೊಳ್ಳಲಾಗದೆ ಇರುವುದು, ಯೋಜನೆಯ ಹಣವನ್ನು ಸಮರ್ಥ ರೀತಿಯಲ್ಲಿ ಬಳಸಿ ತುರ್ತು ಕೆಲಸ ನಿರ್ವಹಣೆ, ಒಳಚರಂಡಿಗೆ ಸಂಬಂಧಪಟ್ಟ ಕೆಲಸಗಳನ್ನು ಮಾಡುವುದು, ಸಂಚಾರ ರಸ್ತೆಗಳು ಸರಿಯಾಗಿರದೇ ಧೂಳಿನ ಮೂಲಕ ಅನಾರೋಗ್ಯಕ್ಕೆ ತುತ್ತಾಗುವುದು, ಅನುದಾನದ ಸಮಸ್ಯೆ ಮುಂತಾದ ಮೂಲಭೂತ ಸೌಲಭ್ಯಗಳನ್ನು ಒದಗಿಸುವಲ್ಲಿ ಹಿಂದುಳಿದ ಕೂಡ್ಲಿಗಿ ಪಟ್ಟಣ ಪಂಚಾಯಿತಿಯು ಹೆಚ್ಚು ವಿಫಲವಾಗಿರುವುದು ತಿಳಿದು ಬಂದಿದೆ. ಇದರಿಂದ ನಮಗೆ ತಿಳಿಯಬಹುದಾದ ಸಂಗತಿಯೆಂದರೆ, ನಗರಸಭೆ ಸದಸ್ಯರು ಇಂತಹ ಮೂಲಭೂತ(ಆರೋಗ್ಯ) ಸೌಲಭ್ಯಗಳು ಸಮರ್ಥವಾಗಿ ಒದಗಿಸುವುದರಲ್ಲಿ ಪಟ್ಟಣ ಪಂಚಾಯಿತಿ ಸದಸ್ಯರಿಗಿಂತ ಉತ್ತಮವಾದ ಸೇವೆಯನ್ನು ನೀಡುತ್ತಿರುವುದು ಕಂಡುಬರುತ್ತದೆ. ಇಂತಹ ಜೀವನಾವಶ್ಯಕ ಸೌಲಭ್ಯಗಳನ್ನು ಒದಗಿಸಲಾಗದೇ ಇರುವುದಕ್ಕೆ ಕೂಡ್ಲಿಗಿ ಪಟ್ಟಣ ಪಂಚಾಯಿತಿಯು ಹಿಂದುಳಿಯಲಿಕ್ಕೆ ಕಾರಣ ಎಂದು ಗುರುತಿಸಲಾಗಿದೆ. ಹಾಗಾಗೀ ಹಿಂದುಳಿದ ಪಟ್ಟಣ ಪಂಚಾಯಿತಿಯಲ್ಲಿ ನೈರ್ಮಲೀಕರಣದ ಕೊರತೆಯಿಂದ ಆರೋಗ್ಯದ ಬಹುದೊಡ್ಡ ಸಮಸ್ಯೆಯ ನಿವಾರಣೆಗೆ ಸರ್ಕಾರ ಮತ್ತು ಸರ್ಕಾರೇತರ ಸಂಘಟನೆ ಎನ್‌ಜಿಓಗಳ ಸಹಭಾಗಿತ್ವದ ದ್ವಿಮುಖ ಯೋಜನೆಯು ಅತ್ಯವಶ್ಯಕ ಎಂದು ಕಾಣಿಸುತ್ತದೆ.

**ಬೀದಿ ದೀಪದ ಸಮಸ್ಯೆಗೆ ಪರಿಹಾರ**

| **ಬೀದಿ ದೀಪ ವ್ಯವಸ್ಥೆಗಾಗಿ** | **ಹೊಸಪೇಟೆ** | | **ಕೂಡ್ಲಿಗಿ** | |
|---|---|---|---|---|
| ವ್ಯವಸ್ಥಿತವಾಗಿ ಬೀದಿ ದೀಪಗಳನ್ನ ಅಳವಡಿಸುವುದು | ೧೬ | ೪೫.೭೧ | ೭ | ೩೫.೦೦ |
| ಸ್ಥಳೀಯ ನಾಗರಿಕರನ್ನ ಒಳಗೊಂಡತೆ ಬೀದಿ ದೀಪ ನಿರ್ವಹಣಾ ಸಮಿತಿ ರಚನೆ ಮಾಡುವುದು | ೭ | ೨೦.೦೦ | ೫ | ೨೫.೦೦ |
| ಬೀದಿ ದೀಪ ಮತ್ತು ಸಿಎಫ್ಎಲ್ ಬಲ್ಬ್ ಬಗ್ಗೆ ಜಾಗೃತಿ ಮೂಡಿಸುವುದು | ೧೨ | ೩೪.೨೯ | ೮ | ೪೦.೦೦ |
| **ಒಟ್ಟು** | ೩೫ | ೧೦೦ | ೨೦ | ೧೦೦ |

**ಮೂಲ: ಕ್ಷೇತ್ರ ಕಾರ್ಯದ ಮಾಹಿತಿ**

ನಗರ ಪ್ರದೇಶವಾರು ಮೇಲಿನ ವಿಷಯಕ್ಕೆ ಸಂಬಂಧಿಸಿದಂತೆ ನಗರ ಸ್ಥಳೀಯ ಸಂಸ್ಥೆಗಳಲ್ಲಿ ಮೂಲಭೂತ ಸೌಲಭ್ಯಗಳಲ್ಲೊಂದಾದ ಬೀದಿ ದೀಪದ ವ್ಯವಸ್ಥೆಯ ಕುರಿತು ಮಾಹಿತಿ ತಿಳಿಯಲು ಸಹಾಯಕವಾಗಿದೆ. ಹೊಸಪೇಟೆ ನಗರಸಭೆಯ ಶೇ. ೪೫.೭೧ರಷ್ಟು ಚುನಾಯಿತ ಪ್ರತಿನಿಧಿಗಳು ಮತ್ತು ಕೂಡ್ಲಿಗಿ ಪಟ್ಟಣ ಪಂಚಾಯಿತಿಯ ಶೇ. ೩೫ರಷ್ಟು ಚುನಾಯಿತ ಪ್ರತಿನಿಧಿಗಳ ಪ್ರಕಾರ ವ್ಯವಸ್ಥಿತವಾಗಿ ಬೀದಿ ದೀಪಗಳನ್ನು ಅಳವಡಿಸುತ್ತೇವೆ ಎಂಬುದಾಗಿ. ಅದೇ ರೀತಿಯಾಗಿ ನಗರಸಭೆಯ ಶೇ. ೨೦ರಷ್ಟು ಚುನಾಯಿತ ಸದಸ್ಯರು ಮತ್ತು ಪಟ್ಟಣ ಪಂಚಾಯಿತಿಯ ಶೇ. ೨೫ರಷ್ಟು ಚುನಾಯಿತ ಸದಸ್ಯರು ಹೇಳಿದಂತೆ ಸ್ಥಳೀಯ ನಾಗರೀಕರನ್ನ ಒಳಗೊಂಡಂತೆ ಬೀದಿ ದೀಪ ನಿರ್ವಹಣಾ ಸಮಿತಿ ರಚನೆಯನ್ನು ಮಾಡುವುದರ ಕುರಿತು ತಿಳಿಸಿರುತ್ತಾರೆ. ಉಳಿದ ನಗರಸಭೆಯ ಶೇ. ೩೪.೨೯ರಷ್ಟು ಚುನಾಯಿತ ಪ್ರತಿನಿಧಿಗಳು ಮತ್ತು ಪಟ್ಟಣ ಪಂಚಾಯಿತಿಯ ಶೇ. ೪೦ರಷ್ಟು ಚುನಾಯಿತ ಪ್ರತಿನಿಧಿಗಳು ಬೀದಿ ದೀಪ ಮತ್ತು ಸಿ.ಎಫ್.ಎಲ್. ಬಲ್ಬ್ ಹಾಕುವುದರಿಂದ ಯಾವವ ಉಪಯೋಗ ಆಗುವುದು ಎಂದು ಜಾಗೃತಿ ಮೂಡಿಸಲಾಗಿದೆ ಎಂಬುದಾಗಿ ಒಟ್ಟಾರೆಯಾಗಿ ಮುಂದುವರಿದ ನಗರಸಭೆಯ ಸದಸ್ಯರಿಗಿಂತ ಹಿಂದುಳಿದ ಪಟ್ಟಣ ಪಂಚಾಯಿತಿಯ ಚುನಾಯಿತ ಸದಸ್ಯರು ಬೀದಿ ದೀಪ ನಿರ್ವಹಣೆ ಮಾಡುವುದರಲ್ಲು ವಿಫಲವಾಗಿರುವುದು ಅಧ್ಯಯಗಳಿಂದ ತಿಳಿಯಲಾಗಿದೆ. ಒಟ್ಟಾರೆಯಾಗಿ ಈ ವಿಶ್ಲೇಷಣೆಯಿಂದ ತಿಳಿಯಬಹುದಾದ ಅಂಶವೆಂದರೆ ಮುಂದುವರಿಯಲು ಮೂಲಭೂತ ಸೌಲಭ್ಯಗಳನ್ನು ಸಮರ್ಥವಾಗಿ ಬಳಕೆಯಾಗುವುದರಿಂದಲ್ಲೂ ಆ ಪ್ರದೇಶ ಅಭಿವೃದ್ಧಿ ಕಾಣುತ್ತದೆ. ಹಾಗಾಗಿ ಹಿಂದುಳಿದ ಪಟ್ಟಣ ಪಂಚಾಯಿತಿ ಚುನಾಯಿತ ಸದಸ್ಯರಿಗಿಂತ ಮುಂದುವರಿದ ನಗರಸಭೆ ಸದಸ್ಯರು ಸಮರ್ಥ ಕಾರ್ಯನಿರ್ವಹಣೆಯಲ್ಲಿ ತೆಗೆದುಕೊಳ್ಳುವ ನಿರ್ಧಾರದಲ್ಲಿ ಉತ್ತಮ ಹೆಜ್ಜೆಯನ್ನಿಟ್ಟಿರುವುದು ತಿಳಿದುಕೊಳ್ಳಲಾಗಿದೆ. ಆದರೆ ಹಿಂದುಳಿದ ಪಟ್ಟಣ ಪಂಚಾಯಿತಿಯು ಆಡಳಿತದ ನಿರ್ಲಕ್ಷತೆಯಿಂದಾಗಿ ಹಿಂದುಳಿಯಿತು ಎನ್ನಲಾಗಿದೆ. ಈ ನಿಟ್ಟಿನಲ್ಲಿ ಚುನಾಯಿತ ಸದಸ್ಯರು ಆಡಳಿತ ನಿರ್ವಹಣೆಯಲ್ಲಿ ತೆಗೆದುಕೊಳ್ಳುವ ನಿರ್ಧಾರಗಳ ಕಡೆಗೂ ಹೆಚ್ಚಿನ ಗಮನಹರಿಸಬೇಕಾದ ಕಾರ್ಯಕ್ರಮಗಳನ್ನು ಹೆಚ್ಚಿನ ಸಂಖ್ಯೆಯಲ್ಲಿ ರೂಪಿಸುವ ಅಗತ್ಯವಿದೆ ಎಂದು ತಿಳಿಯಲಾಗಿದೆ.

**ಶಿಕ್ಷಣ ಸಂಬಂಧಿ ಸಮಸ್ಯೆಯ ಪರಿಹಾರ**

| **ಶಿಕ್ಷಣ ಸಂಬಧಿ ಸಮಸ್ಯೆಗಾಗಿ** | **ಹೊಸಪೇಟೆ** | | **ಕೂಡ್ಲಿಗಿ** | |
|---|---|---|---|---|
| ವಿದ್ಯಾರ್ಥಿಗಳಿಗೆ ಸಹಾಯಧನ, ಕಂಪ್ಯೂಟರ್ ತರಬೇತಿ ಕೊಡಿಸುವುದು | ೧೭ | ೪೮.೫೭ | ೭ | ೩೫.೦೦ |
| ಏನೂ ಹೇಳಿಲ್ಲ | ೪ | ೧೧.೪೩ | ೫ | ೨೫.೦೦ |
| ಕಂಪ್ಯೂಟರ್ ತರಬೇತಿ ಕೊಡಿಸುವುದು | ೮ | ೨೨.೮೬ | ೮ | ೪೦.೦೦ |
| ಸ್ಪರ್ದಾತ್ಮಕ ಪರೀಕ್ಷೆಗಳಿಗೆ ಹೊರಗಡೆ ಕಳುಹಿಸುವುದು | ೬ | ೧೭.೧೪ | ೦ | ೦ |
| **ಒಟ್ಟು** | ೩೫ | ೧೦೦ | ೨೦ | ೧೦೦ |

**ಮೂಲ: ಕ್ಷೇತ್ರ ಕಾರ್ಯದ ಮಾಹಿತಿ**

ಈ ಮೇಲಿನ ವಿಷಯವು ಸೂಚಿಸುವಂತೆ ಶಿಕ್ಷಣದಲ್ಲಿ ಸ್ಥಳೀಯ ಸಂಸ್ಥೆಗಳಿಂದ ದೊರೆಯುವ ಸೌಲಭ್ಯಗಳ ಮೂಲಕ ಅಭಿವೃದ್ಧಿಯ ಪ್ರಮಾಣವನ್ನು ತೋರಿಸಲಾಗಿದೆ. ಹೊಸಪೇಟೆ ನಗರಸಭೆಯ ಶೇ. ೪೮.೫೭ರಷ್ಟು ಚುನಾಯಿತ ಸದಸ್ಯರು ಮತ್ತು ಕೂಡ್ಲಿಗಿ ಪಟ್ಟಣ ಪಂಚಾಯಿತಿಯ ಶೇ. ೩೫ರಷ್ಟು ಚುನಾಯಿತ ಸದಸ್ಯರು ಶಿಕ್ಷಣಕ್ಕೆ ಅನುಕೂಲವಾಗಲೆಂದು ವಿದ್ಯಾರ್ಥಿಗಳಿಗೆ ಸಹಾಯಧನವನ್ನು ಕೊಡಿಸುವುದು ಹಾಗೂ ಕಂಪ್ಯೂಟರ್ ತರಬೇತಿಗಾಗಿ ಪ್ರೋತ್ಸಾಹಿಸುವುದಕ್ಕೆ ಪ್ರಾಮುಖ್ಯತೆ ಕೊಟ್ಟಿರುವುದಾಗಿದೆ. ಅದೇ ರೀತಿಯಾಗಿ ನಗರಸಭೆಯ ಶೇ. ೨೨.೮೩ರಷ್ಟು ಚುನಾಯಿತ ಸದಸ್ಯರು ಮತ್ತು ಪಟ್ಟಣ ಪಂಚಾಯಿತಿಯ ಶೇ. ೪೦ರಷ್ಟು ಚುನಾಯಿತ ಸದಸ್ಯರು ವಿದ್ಯಾರ್ಥಿಗಳಿಗೆ ಕಂಪ್ಯೂಟರ್ ತರಬೇತಿ ಒಂದಕ್ಕೆ ಹೆಚ್ಚಾಗಿ ಪ್ರಾಮುಖ್ಯತೆ ಕೊಟ್ಟಿರುವುದಾಗಿದೆ ಇತರೆ ನಗರಸಭೆಯ ಶೇ. ೧೭,೧೪ರಷ್ಟು ಚುನಾಯಿತ ಸದಸ್ಯರು ಮಾತ್ರ ಸ್ಪರ್ದಾತ್ಮಕ ಪರೀಕ್ಷೆಗಳಿಗೆ ಹೊರಗಡೆಗೆ ಕಳುಹಿಸುವುದನ್ನು ಸಹಿತ ಮುಂದುವರಿದ ಹೊಸಪೇಟೆ ನಗರಸಭೆಯಲ್ಲಿ ಮಾತ್ರ ಪ್ರೋತ್ಸಾಹಿಸುವುದನ್ನು ನೋಡಬಹುದಾಗಿದೆ. ಹೊಸಪೇಟೆ ನಗರಸಭೆಯ ಶೇ. ೧೧.೪೩ರಷ್ಟು ಚುನಾಯಿತ ಸದಸ್ಯರು ಮತ್ತು ಕೂಡ್ಲಿಗಿ ಪಟ್ಟಣ ಪಂಚಾಯಿತಿಯ ಶೇ. ೨೫ರಷ್ಟು ಚುನಾಯಿತ ಸದಸ್ಯರ ಪ್ರಕಾರ ತಾವು ಶಿಕ್ಷಣ ಸಂಬಂಧಿ ಸಮಸ್ಯೆಗೆ ಯಾವ ರೀತಿಯ ಪರಿಹಾರವನ್ನು ಕೈಗೊಳ್ಳುತ್ತೀರಿ ಎಂದು ಪ್ರಶ್ನಿಸಿದಾಗ ಹೇಳಲು ಅಸಮರ್ಥರಾಗಿದದ್ದು ಕಂಡು ಬಂದಿದೆ. ನಗರ ಸ್ಥಳೀಯ ಸಂಸ್ಥೆಗಳ ಚುನಾಯಿತ ಸದಸ್ಯರು, ಅಧ್ಯಕ್ಷರು ತಾವೇ ಸ್ವತಃ ಸ್ಥಳೀಯ ವಾರ್ಡಿನ ಜನರ ಅಕ್ಷರದ ಜವಾಬ್ದಾರಿಯನ್ನು ತೆಗೆದುಕೊಂಡು ಕೆಲಸ ಮಾಡಿ ಉಳಿದ ಸದಸ್ಯರಿಗೆ ಶಿಕ್ಷಣದ ಬಗ್ಗೆ ಅರಿವು ಮೂಡಿಸುವ ಮೂಲಕ ನಿರ್ದೇಶನ ನೀಡಿರುವುದು ತಿಳಿದುಬಂದಿದೆ. ಒಟ್ಟಾರೆಯಾಗಿ ಈ ವಿಶ್ಲೇಷಣೆಯಿಂದ ತಿಳಿಯಬಹುದಾದ ಸಂಗತಿಯೆಂದರೆ ನಗರಸಭೆ ಸದಸ್ಯರಿಗಿಂತ ಪಟ್ಟಣ ಪಂಚಾಯಿತಿ ಸದಸ್ಯರು ಶಿಕ್ಷಣಕ್ಕೆ ಸಂಬಂಧಿಸಿದ ಸೌಲಭ್ಯಗಳನ್ನು ಕೊಡುವುದರ ಜೊತೆಗೆ ಸಾಕ್ಷರತೆಯ ಪ್ರಮಾಣವನ್ನು ಹೆಚ್ಚಿಸುವುದರ ಮೂಲಕ ಉತ್ತಮ ಜೀವನಮಟ್ಟವನ್ನ ರೂಪಿಸಲು ಶ್ರಮವಹಿಸಿದ್ದಾರೆಯೆಂದು ತಿಳಿಯಲಾಗಿದೆ. ನಗರಗಳ ಅಭಿವೃದ್ಧಿಯಲ್ಲಿ ಶಿಕ್ಷಣವು ಒಂದು ಸಾಧನವಾಗಿ ಅದರ ಮೂಲಕ ಹಿಂದುಳಿದ ಪಟ್ಟಣ ಪಂಚಾಯಿತಿಯ ಚುನಾಯಿತ ಸದಸ್ಯರು ಸ್ಥಳೀಯ ರಾಜಕೀಯದಲ್ಲಿ ಅರಿವು ಮತ್ತು ಭಾಗವಹಿಸುವಂತಹ ವಾತಾವರಣವನ್ನು ನಿರ್ಮಾಣ ಮಾಡುವ ಅಗತ್ಯವಿದೆ ಎಂದು ತಿಳಿಯಲಾಗಿದೆ.

**ಚರಂಡಿ ಸಮಸ್ಯೆಯ ಪರಿಹಾರ**

| **ಚಂರಡಿ ಸಮಸ್ಯೆಗಾಗಿ** | **ಹೊಸಪೇಟೆ** | | **ಕೂಡ್ಲಿಗಿ** | |
|---|---|---|---|---|
| ಆಗಾಗ ಚರಂಡಿ ಸ್ವಚ್ಛಗೊಳಿಸುವುದು | ೭ | ೨೦.೦೦ | ೧೦ | ೫೦.೦೦ |
| ನಿಗದಿತ ಜಾಗಕ್ಕೆ ಹಾಕುವಂತೆ ನಿರ್ವಹಿಸುವುದು | ೯ | ೨೫.೭೧ | ೫ | ೨೫.೦೦ |
| ಅವರಿಗೆ ಅದರ ಬಗ್ಗೆ ಅರಿವುನ್ನು ಮೂಡಿಸುವುದು | ೧೪ | ೪೦.೦೦ | ೩ | ೧೫.೦೦ |
| ಆಗಾಗ ಸ್ವಚ್ಛತೆಯಲ್ಲಿ ಜನರು ಭಾಗವಹಿಸುವಂತೆ ನೋಡಿಕೊಳ್ಳಬೇಕು | ೫ | ೧೪.೨೯ | ೨ | ೧೦.೦೦ |
| **ಒಟ್ಟು** | ೩೫ | ೧೦೦ | ೨೦ | ೧೦೦ |

**ಮೂಲ: ಕ್ಷೇತ್ರ ಕಾರ್ಯದ ಮಾಹಿತಿ**

ನಗರ ಪ್ರದೇಶವಾರು ಚರಂಡಿ ಸಮಸ್ಯೆಯ ಪ್ರಮಾಣವನ್ನು ನೋಡಿದಾಗ ಹೊಸಪೇಟೆ ನಗರಸಭೆ ಶೇ. ೨೦ರಷ್ಟು ಚುನಾಯಿತ ಸದಸ್ಯರು ಮತ್ತು ಕೂಡ್ಲಿಗಿ ಪಟ್ಟಣ ಪಂಚಾಯಿತಿಯ ಶೇ. ೫೦ರಷ್ಟು ಚುನಾಯಿತ ಸದಸ್ಯರ ಪ್ರಕಾರ ನೈರ್ಮಲ್ಯವನ್ನಾಗಿ ಇಟ್ಟುಕೊಳ್ಳುವುದಕ್ಕೆ ಚರಂಡಿಯನ್ನು ಆಗಾಗ ಸ್ವಚ್ಛತೆ ಮಾಡಿಸುವುದಕ್ಕೆ ಹೆಚ್ಚಿನ ಪ್ರಾಮುಖ್ಯತೆಯನ್ನು ನೀಡಿರುವುದಾಗಿದೆ. ಅದೇ ರೀತಿ ನಗರಸಭೆಯ ಶೇ. ೨೫.೭೧ರಷ್ಟು ಚುನಾಯಿತ ಸದಸ್ಯರು ಮತ್ತು ಕೂಡ್ಲಿಗಿ ಪಟ್ಟಣ ಪಂಚಾಯಿತಿಯ ಶೇ. ೨೫ರಷ್ಟು ಚುನಾಯಿತ ಸದಸ್ಯರ ಪ್ರಕಾರ ಚರಂಡಿ ಸಮಸ್ಯೆಗಾಗಿ ನಿಗದಿತ ಜಾಗಕ್ಕೆ ಕಸವನ್ನು ಹಾಕುವಂತೆ ನಿರ್ವಹಿಸುವುದು ಪರಿಹಾರ ಸಿಕ್ಕಂತೆ ಎಂಬುದಾಗಿ ಇತರೆ ನಗರಸಭೆಯ ಶೇ. ೪೦ರಷ್ಟು ಚುನಾಯಿತ ಸದಸ್ಯರು ಮತ್ತು ಪಟ್ಟಣ ಪಂಚಾಯಿತಿಯ ಶೇ. ೧೫ರಷ್ಟು ಚುನಾಯಿತ ಸದಸ್ಯರು ನೈರ್ಮಲೀಕರಣಕ್ಕಾಗಿ ಇವರು ಸಾರ್ವಜನಿಕರಿಗೆ ಚರಂಡಿಯಿಂದ ಆಗುವ ಆನಾನುಕೂಲತೆಗಳನ್ನು ತಿಳಿಸುವುದರ ಮೂಲಕ ಸ್ವಚ್ಚತೆಯ ಬಗ್ಗೆ ಅರಿವು ಮೂಡಿಸುತ್ತೇವೆ ಎಂಬುದಾಗಿ ಉಳಿದ ನಗರಸಭೆಯ ಶೇ. ೧೪,೨೯ರಷ್ಟು ಚುನಾಯಿತ ಸದಸ್ಯರು ಮತ್ತು ಪಟ್ಟಣ ಪಂಚಾಯಿತಿಯ ಶೇ. ೧೦ರಷ್ಟು ಚುನಾಯಿತ ಸದಸ್ಯರು ಸ್ವಚ್ಛತೆಯಲ್ಲಿ ಜನರನ್ನು ಕೂಡ ಭಾಗವಹಿಸುವಂತೆ ನೋಡಿಕೊಳ್ಳಲಾಗುತ್ತದೆ ಎಂದು ಅಧ್ಯಯಗಳಿಂದ ತಿಳಿದುಬಂದಿದೆ. ಒಟ್ಟಾರೆಯಾಗಿ ವಿಶ್ಲೇಷಣೆಯಿಮದ ತಿಳಿಯಬಹುದಾದ ಸಂಗತಿಯೆಂದರೆ ಸಾಪೇಕ್ಷವಾಗಿ ಮುಂದುವರಿದ ಹೊಸಪೇಟೆ ನಗರಸಭೆಯ ಸದಸ್ಯರಿಗಿಂತ ತೀರಾ ಹಿಂದುಳಿದ ಕೂಡ್ಲಿಗಿ ಪಟ್ಟಣ ಪಂಚಾಯಿತಿಯ ಸದಸ್ಯರಲ್ಲಿ ನೈರ್ಮಲೀಕರಣದ ಬಗ್ಗೆ ತಿಳುವಳಿಕೆಯ ಕೊರತೆ ಹೆಚ್ಚಾಗಿರುವುದು ಗಮನಿಸಬಹುದಾಗಿದೆ. ಪಟ್ಟಣ ಪಂಚಾಯಿತಿಯು ನಾಗರೀಕರನ್ನು ಆರೋಗ್ಯವಾಗಿ ಇಡಲು ಚರಂಡಿ ಸ್ವಚ್ಛತೆ, ನಿಗದಿತ ಜಾಗಕ್ಕೆ ಹಾಕುವಂತೆ ಮಾಡುವುದು ಒಂದು ಭಾಗ ಆದರೆ ಇದರ ಪ್ರಮಾಣ ಪಟ್ಟಣ ಪಂಚಾಯಿತಿಯಲ್ಲಿ ಹೆಚ್ಚಿನ ಪ್ರಮಾಣದಲ್ಲಿರುವುದು ತಿಳಿದು ಬಂದಿದೆ. ಆದರೆ ನಗರಸಭೆಯ ಸದಸ್ಯರಲ್ಲಿ ಇವೆರೆಡು ಪ್ರಮಾಣದೊಂದಿಗೆ ಚುನಾಯಿತ ಸದಸ್ಯರಲ್ಲಿ ಹೆಚ್ಚಿನ ಸ್ಥಳೀಯ ನೈರ್ಮಲೀಕರಣದ ಬಗ್ಗೆ ಅರಿವು ಹೊಂದುವುದರೊಂದಿಗೆ ಸ್ವಚ್ಛತೆಯಲ್ಲಿ ಭಾಗವಹಿಸುವುದರಿಂದ ಸಂಪೂರ್ಣವಾಗಿ ನೈರ್ಮಲೀಕರಣ ಸಾಧಿಸುವ ಮೂಲಕ ಉತ್ತಮ ಜೀವನಮಟ್ಟದಿಂದ ಅಭಿವೃದ್ಧಿಯನ್ನು

ಸಾಧಿಸಬಹುದು ಎಂಬುದನ್ನು ಗ್ರಹಿಸಲಾಗಿದೆ. ಇಲ್ಲಿ ಗಮನಿಸಬೇಕಾದ ಒಂದು ಅಂಶವೆಂದರೆ ಹಿಂದುಳಿದ ಪಟ್ಟಣ ಪಂಚಾಯಿತಿಯು ಆಡಳಿತದಲ್ಲಿನ ನಿರ್ಲಕ್ಷತೆಯಿಂದಾಗಿ, ಅನುಭವದ ಕೊರತೆ, ಅನಕ್ಷರತೆಯಿಂದಾಗಿ ನೈರ್ಮಲೀಕರಣಕ್ಕೆ ಸಂಬಂಧಿಸಿದಂತೆ ಕೆಲಸಗಾರರು ಮೂಲ ಅಭಿವೃದ್ಧಿಯ ನೆಲೆಯಲ್ಲಿ ಆಗುತ್ತಿಲ್ಲ ಅಲ್ಲದೇ ಸ್ಥಳೀಯ ಜನರ ಅವಶ್ಯಕತೆಯನ್ನು ಗಣನೆಗೆ ತೆಗೆದುಕೊಳ್ಳದೆ ಮತ್ತು ಸರ್ಕಾರದಿಂದ ಒದಗಿಸಿದ ಹಣವನ್ನು ತಮಗೆ ಬೇಕಾದ ರೀತಿ ವೆಚ್ಚ ಮಾಡುತ್ತಾ ಸಾಗುತ್ತಿರುವುದು ತಿಳಿದು ಬಂದಿದೆ. ಹೆಚ್ಚಿನ ರೀತಿಯಲ್ಲಿ ನೈರ್ಮಲೀಕರಣಕ್ಕೆ ಸಂಬಂಧಿಸಿದಂತೆ ಕಾರ್ಯಕ್ರಮಗಳನ್ನು ಹಾಕಿಕೊಳ್ಳುವುದರ ಜೊತೆಗೆ ಜನರ ಭಾಗವಹಿಸುವ ಮೂಲಕ ಅಭಿವೃದ್ಧಿನ್ನು ಸಾಧಿಸುವ ಅಗತ್ಯವಿದೆ ಎಂದು ತಿಳಿಯಲಾಗಿದೆ.

**ರಸ್ತೆ ಸ್ಥಿತಿಗಳ ಬಗ್ಗೆ ಸದಸ್ಯರ ಅಭಿಪ್ರಾಯಗಳು**

| **ಅಭಿಪ್ರಾಯಗಳು** | **ಹೊಸಪೇಟೆ** | | **ಕೂಡ್ಲಿಗಿ** | |
|---|---|---|---|---|
| ಪಕ್ಕ ರಸ್ತೆಗಳು ಇದೆ. | ೧೨ | ೩೪.೨೯ | ೧೩ | ೬೫.೦೦ |
| ಪಕ್ಕ ರಸ್ತೆಗಳು ಇಲ್ಲ | ೨೩ | ೬೫.೭೧ | ೭ | ೩೫.೦೦ |
| **ಒಟ್ಟು** | ೩೫ | ೧೦೦ | ೨೦ | ೧೦೦ |

**ಮೂಲ: ಕ್ಷೇತ್ರ ಕಾರ್ಯದ ಮಾಹಿತಿ**

ನಗರ ಪ್ರದೇಶಗಳಾದ ಹೊಸಪೇಟೆ ನಗರಸಭೆಯ ಶೇ. ೩೪.೨೯ರಷ್ಟು ಚುನಾಯಿತ ಸದಸ್ಯರು ಮತ್ತು ಕೂಡ್ಲಿಗಿ ಪಟ್ಟಣ ಪಂಚಾಯಿತಿಯ ಶೇ. ೬೫ರಷ್ಟು ಚುನಾಯಿತ ಸದಸ್ಯರು ಪಕ್ಕ ರಸ್ತೆಗಳನ್ನು ಮಾಡಿಸಲಾಗಿದೆ ಎಂಬುದಾಗಿ ಉಳಿದ ನಗರಸಭೆಯ ಶೇ. ೬೫.೭೧ರಷ್ಟು ಚುನಾಯಿತ ಪ್ರತಿನಿಧಿಗಳು ಮತ್ತು ಪಟ್ಟಣ ಪಂಚಾಯಿತಿಯಲ್ಲಿ ಶೇ. ೩೫ರಷ್ಟು ಚುನಾಯಿತ ಪ್ರತಿನಿಧಿಗಳು ಪಕ್ಕ ರಸ್ತೆಗಳನ್ನು ಹೊಂದಿರುವುದಿಲ್ಲ ಎಂಬುದಾಗಿ ಹೊಸಪೇಟೆ ನಗರಸಭೆಯ ಸದಸ್ಯರು ಮತ್ತು ಪಟ್ಟಣ ಪಂಚಾಯಿತಿಯ ಸದಸ್ಯರು ಉತ್ತಮ ರಸ್ತೆಯನ್ನು ಮಾಡಿಸುವುದಾಗಿ ಆಶ್ವಾಸನೆ ಕೊಟ್ಟಿದ್ದಾರೆ. ಒಟ್ಟಾರೆಯಾಗಿ ಗಮನಿಸುವ ಅಂಶವೆಂದರೆ ಪಕ್ಕಾ ರಸ್ತೆಯನ್ನು ಹೊಂದಿರುವುದರಲ್ಲಿ ತೀರಾ ಹಿಂದುಳಿದ ಪಟ್ಟಣ ಪಂಚಾಯಿತಿಯ ಪ್ರಮಾಣ ಹೆಚ್ಚಿದ್ದು ನಗರಸಭೆಯ ಪ್ರಮಾಣ ಕಡಿಮೆಯಿರುವುದು ಅಧ್ಯಯಗಳಿಂದ ತಿಳಿದು ಬಂದಿದೆ. ಹಿಂದುಳಿದ ಪಟ್ಟಣ ಪಂಚಾಯಿತಿಯು ಉತ್ತಮ ರಸ್ತೆಯನ್ನು ಹೊಂದುವುದರೊಂದಿಗೆ ಅಭಿವೃದ್ಧಿಯ ಒಂದು ಭಾಗವನ್ನು ಪ್ರೋತ್ಸಾಹಿಸಿದಂತೆ ಕಂಡು ಬರುತ್ತದೆ. ಒಟ್ಟಾರೆಯಾಗಿ ಈ ವಿಶ್ಲೇಷಣೆಯಿಂದ ತೀಳಿಯಬಹುದಾದ ಸಂಗತಿಯೆಂದರೆ ವಾರ್ಡ್‌ಗಳ ಸಂಪರ್ಕ ರಸ್ತೆಗಳ ಇಂಥ ಸ್ಥಿತಿಗೆ ಯಾರು ಕಾರಣ? ಸತತವಾಗಿ ಆಯ್ಕೆಯಾದರೂ ರಸ್ತೆಗಳನ್ನು ಸುಧಾರಿಸದೇ ಇರುವ ಜನಪ್ರತಿನಿಧಿಗಳಾ? ೫–೧೦ ವರ್ಷ ಒಬ್ಬರಿಗೇ ಮತ ನೀಡಿ ಗೆಲ್ಲಿಸುತ್ತಲೇ ಬರುತ್ತೀರುವ ಜನರ ಮುಗ್ಧತೆಯೋ, ದಡ್ಡತನವೋ? ರಾಜಕಾರಣೆಗಳು, ಅಧಿಕಾರಿಗಳು ಹಾಗೂ ಗುತ್ತಿಗೆದಾರರ ನಡುವಿನ ಉತ್ತಮ ಸಮಬಂಧದ ಫಲವೋ? ಅದಲ್ಲದೇ, ನಗರಗಳ ಅಭಿವೃದ್ಧಿಗಾಗಿ ಕೇಂದ್ರ ಸರ್ಕಾರ ಮತ್ತು ರಾಜ್ಯ ಸರ್ಕಾರದ ಎಸ್.ಎಫ್.ಸಿ. ಯೋಜನೆಯನ್ನು ರೂಪಿಸಿವೆ. ಇಂತಹ ಯೋಜನೆಗಳ ಬಳಕೆಯಲ್ಲಿದ್ದರು ಈ ಯೋಜನೆಗಳು ಪ್ರಗತಿ ಪರಶೀಲನಾ ಸಭೆಯಲ್ಲಿ ಮಾತ್ರ ಅಭಿವೃದ್ಧಿಯಾಗಿವೆ ಎಂದು ಹೇಳಲಾಗಿದೆ ಹೊರತು ವಾರ್ಡಿನ ಜನರು ಮಾತ್ರ ಅದೇ ಕೆಟ್ಟ ರಸ್ತೆಯಲ್ಲಿ ಬದುಕು ಸವೆಸುತ್ತಿದ್ದಾರೆ. ಒಟ್ಟಾರೆಯಾಗಿ,

ನಗರ ಪ್ರದೇಶಗಳಲ್ಲಿ ಕೆಟ್ಟ ಸಂಪರ್ಕ ರಸ್ತೆಗಳು ಬಹುತೇಕ ಕಡೆ ಹೆಣ್ಣು ಮಕ್ಕಳ ಶಿಕ್ಷಣವನ್ನು, ರೋಗಿಗಳ ಜೀವನವನ್ನು, ಮಧ್ಯಮ ವರ್ಗದವರ ಭವಿಷ್ಯವನ್ನು ಮಂಕು ಮಾಡಿವೆ. ಇಡೀ ವಾರ್ಡಿನ ಕೆಟ್ಟ ರಸ್ತೆಯ ದೆಸೆಯಿಂದಾಗಿ ಎರಡು ನಗರ ಸ್ಥಳೀಯ ಸಂಸ್ಥೆಗಳು ಸರಿಸುಮಾರು ಹಿಂದುಳಿದಿವೆ ಎನ್ನಬಹುದಾಗಿದೆ. ಆದ್ದರಿಂದ ಕಳಪೆ ರಸ್ತೆಯನ್ನು ಹೊಂದಿರುವ ಪ್ರದೇಶವು ಈ ವಿಭಾಗಕ್ಕೆ ಹೆಚ್ಚಿನ ಆದ್ಯತೆ ಕೊಡುವ ಅವಶ್ಯಕತೆ ಇದೆ ಎಂದು ತಿಳಿಯಲಾಗಿದೆ.

ಒಟ್ಟಾರೇ ವಿಶ್ಲೇಷಣೆಯಿಂದ ತಿಳಿದು ಬರುವುದೇನೆಂದರೆ, ನಗರ ಬದುಕನ್ನು ಸಹನೀಯಗೊಳಿಸುವ ಈ ಎಲ್ಲಾ ಕಾರ್ಯಕ್ರಮಗಳಲ್ಲಿ ಜನರ ಸಹಭಾಗಿತ್ವ ಮತ್ತು ಪ್ರಾತಿನಿಧ್ಯವನ್ನು ದೊರಕಿಸುವುದಿಲ್ಲವೊ ಅಲ್ಲೀತನಕ ಸ್ಥಳೀಯ ಸಂಸ್ಥೆಗಳು ದುರ್ಬಲವಾಗಿಯೇ ಮುಂದುವರಿಯುತ್ತವೆ. ಹೀಗೇ ಇದ್ದರೇ ಈ ಸಂಸ್ಥೆಗಳಲ್ಲಿನ ಅಧಿಕಾರಿಗಳು ಮತ್ತು ಜನಪ್ರತಿನಿಧಿಗಳ ಸೇವಾ ವೈಫಲ್ಯಗಳು ಮುಂದುವರಿಯುತ್ತಲೆ ಹೋಗುತ್ತವೆ. ಇದರಿಂದ, ಸಮಸ್ಯೆ ಅಷ್ಟೆ ಅಲ್ಲದೇ ಉದ್ಯೋಗ ಅವಕಾಶಗಳೂ ಸೃಷ್ಟಿಯಾಗುವಂತೆ, ಆರ್ಥಿಕವಾಗಿ ದುರ್ಬಲರಾದವರಿಗೆ ವಿದ್ಯಾಭ್ಯಾಸ ಹಾಗೂ ಆರೋಗ್ಯ ಸೇವಾ ಸೌಲಭ್ಯ ಮತ್ತು ಮೂಲಭೂತ ಸೌಲಭ್ಯಗಳನ್ನು ಒದಗಿಸಿಲು ಪ್ರೇರೇಪಿಸಬೇಕಾಗಿದೆ. ಆದಾಗ್ಯೂ ಇವುಗಳ ಸಾಫಲ್ಯತೆಯಲ್ಲಿ ಕ್ರಮಿಸಬೇಕಾದ ಹಾದಿ ಸಾಕಷ್ಟಿದೆ. ಆದರೆ ಕಳೆದ ಮೂರು ದಶಕಗಳಲ್ಲಿ ನಗರ ಸ್ಥಳೀಯ ಸಂಸ್ಥೆಗಳು ಕಾರ್ಯನಿರ್ವಹಣೆ ಮತ್ತು ಸಂಪನ್ಮೂಲ ಕ್ರೋಢೀಕರಣಕ್ಕೆ ಸಂಬಂಧಿಸಿದಂತೆ ನಿರೀಕ್ಷಿತ ಪ್ರಗತಿಯನ್ನು ಸಾಧಿಸದೆ ಇರುವುದು ಮೇಲ್ನೋಟಕ್ಕೆ ಕಂಡುಬರುತ್ತಿದೆ. ತಳಮಟ್ಟದ ಆಡಳಿತದ ಘಟಕವಾಗಿ ಈ ಸಂಸ್ಥೆಗಳನ್ನು ಬಲಗೊಳಿಸಲಿಕ್ಕಾಗಿ ಅಧಿಕಾರ ಮತ್ತು ಸಂಪನ್ಮೂಲವನ್ನು ವರ್ಗಾಯಿಸಲು ರಾಜ್ಯ ಸರ್ಕಾರಗಳು ಹಿಂದೇಟು ಹಾಕುತ್ತಿರುವುದು ಇದಕ್ಕೆ ಮುಖ್ಯ ಕಾರಣ.

**ನಗರ ಸ್ಥಳೀಯ ಸಂಸ್ಥೆಗಳ ಚುನಾಯಿತ ಸದಸ್ಯರ ತೌಲನಿಕ ವಿವರಣೆ**

ಹೊಸಪೇಟೆ ನಗರಸಭೆ ಮತ್ತು ಕೂಡ್ಲಿಗಿ ಪಟ್ಟಣ ಪಂಚಾಯಿತಿಯ ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿ-ಗತಿಯನ್ನು ಗಮನಿಸಿದಾಗ ಮುಂದುವರಿದ ಹೊಸಪೇಟೆ ನಗರಸಭೆಯ ಸದಸ್ಯರಿಗಿಂತ ಹಿಂದುಳಿದ ಪಟ್ಟಣ ಪಂಚಾಯಿತಿಯ ಸದಸ್ಯರು ಹೆಚ್ಚಿನ ಸಂಖ್ಯೆಯಲ್ಲಿ ಅನಕ್ಷರಸ್ಥರು, ಒಣಭೂಮಿಯನ್ನು ಹೊಂದಿದ್ದು ಜೀವನಾಧಾರಕ್ಕೆ ಕೂಲಿಯನ್ನು ಮಾಡುತ್ತಾ ಹೆಚ್ಚಿನ ವರಮಾನವನ್ನು ಹೊಂದದೆ ವೈಯಕ್ತಿಕ ಜೀವನವನ್ನು ಗುಣಮಟ್ಟ ಜೀವನದಿಂದ ನಡೆಸಿಕೊಂಡು ಹೋಗುವಲ್ಲಿ ವಿಫಲವಾಗಿದ್ದು ವಾರ್ಡಿನ ಅಭಿವೃದ್ಧಿಯನ್ನು ಸಾಧಿಸಲು ವಿಫಲವಾಗಿರುವುದರಿಂದ ಹಿಂದುಳಿದಿದೆ ಎನ್ನಬಹುದು.

ನಗರ ಸ್ಥಳೀಯ ಸಂಸ್ಥೆಗಳ ಚುನಾಯಿತ ಪ್ರತಿನಿಧಿಗಳ ಆಯ್ಕೆ, ಶಿಕ್ಷಣ ಸ್ಪರ್ಧೆ ಮತ್ತು ಗೆಲುವಿನ ಅಂಶಗಳನ್ನು ಗಮನಿಸಿದಾಗ ಮುಂದುವರಿದ ಹೊಸಪೇಟೆ ನಗರಸಭೆಗಿಂತ ಹಿಂದುಳಿದ ಪಟ್ಟಣ ಪಂಚಾಯಿತಿಯ ಸದಸ್ಯರು ಹೆಚ್ಚಿನ ಸಂಖ್ಯೆಯ ಬೆಂಬಲವನ್ನು ಪಡೆದು ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಜಾತಿಯ ಸಾಧನದಿಂದ ಗೆದ್ದು ಹಾಗೂ ಶಿಕ್ಷಣದಿಂದ ಹೆಚ್ಚಿನ ಸಂಖ್ಯೆಯಲ್ಲಿ ವಂಚಿತಗೊಂಡಿದ್ದರಿಂದ ವಾರ್ಡಿನ ಅಭಿವೃದ್ಧಿಯನ್ನು ಮಾಡದೆ ಹಿಂದುಳಿದಿದೆ ಎನ್ನಬಹುದು.

ಎರಡು ಸ್ಥಳೀಯ ಸಂಸ್ಥೆಗಳಲ್ಲಿ ಮುಂದುವರಿದ ಹೊಸಪೇಟೆ ನಗರಸಭೆಗಿಂತ ಹಿಂದುಳಿದ ಕೂಡ್ಲಿಗಿ ಪಟ್ಟಣ ಪಂಚಾಯಿತಿಯ ಸದಸ್ಯರು ತಮ್ಮ ಚುನಾವಣೆಗೆ ಸ್ಪರ್ಧಿಸಲು ವಾರ್ಡಿನ ಉದ್ಧಾರಕ್ಕಾಗಿಯೇ ಎಂಬ ಅಂಶವು ಕೆಳಮಟ್ಟದಲ್ಲಿದ್ದು ಅದರಂತೆ ಕ್ಷೇತ್ರ ಮೀಸಲು ಹಿರಿಯರು

ರಾಜಕೀಯದಲ್ಲಿದ್ದುದ್ದರಿಂದ ಹೆಚ್ಚಿನ ಸಂಖ್ಯೆಯನ್ನು ಹೇಳಿಕೊಂಡಿರುತ್ತಾರೆ. ಹಾಗೆಯೇ ಹಿಂದುಳಿದ ಪ್ರದೇಶದಲ್ಲಿ ಸ್ಥಳೀಯ ಸಂಸ್ಥೆಗಳಲ್ಲಿ ಮೀಸಲಾತಿ ಕಾರಣದಿಂದ ಮಹಿಳೆಯು ರಾಜಕೀಯದಲ್ಲಿ ಭಾಗವಹಿಸಿ ಅವರ ನಿರ್ಣಯವು ಇರದೇ ಎಲ್ಲಾ ವಿಚಾರದ ತೀರ್ಮಾನದಲ್ಲಿ ಗಂಡಂದಿರ ಹಸ್ತಕ್ಷೇಪ ಹೆಚ್ಚಾಗಿರುವುದು ತಿಳಿದುಬಂದಿದೆ. ಅಂದರೆ ಹಿಂದುಳಿದ ಪಟ್ಟಣ ಪಂಚಾಯಿತಿಯಲ್ಲಿ ಮೀಸಲಾತಿಯ ಅನುಗುಣವಾಗಿ ಮಹಿಳೆಯ ಆಯ್ಕೆಯಾಗಿ ರಾಜಕೀಯದಲ್ಲಿ ಸಮರ್ಥವಾಗಿ ಭಾಗವಹಿಸದೆ ಮಹಿಳಾ ಸಬಲೀಕರಣ ಪರಿಕಲ್ಪನೆಯನ್ನು ಸ್ಥಳೀಯ ಸಂಸ್ಥೆಯಿಂದ ಈಡೇರಿಸುವುದರಲ್ಲಿ ಕೂಡ ವಿಫಲತೆಯಿಂದ ಕೂಡ್ಲಿಗಿ ಪಟ್ಟಣ ಪಂಚಾಯಿತಿ ಹಿಂದುಳಿದಿದೆ ಎನ್ನಬಹುದು.

ಹೊಸಪೇಟೆ ನಗರಸಭೆ ಮತ್ತು ಕೂಡ್ಲಿಗಿ ಪಂಚಾಯಿತಿ ಸದಸ್ಯರ ಚುನಾವಣೆಯ/ರಾಜಕೀಯದ ಅನುಭವಗಳನ್ನು ನೋಡಿದಾಗ ಇಲ್ಲಿಯೂ ಕೂಡ ನಗರಸಭೆಗಿಂತ ಪಟ್ಟಣ ಪಂಚಾಯಿತಿಯಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ವೈಯಕ್ತಿಕವಾಗಿ ಹೆಚ್ಚಿನ ಜನರ ಸಂಪರ್ಕ ಹೊಂದದಿರುವುದು, ಚುನಾವಣೆಯಲ್ಲಿ ಗೆಲ್ಲಲು ಹಣ–ಮದ್ಯಪಾನವು ಹೆಚ್ಚಿನ ಪ್ರಮಾಣದಲ್ಲಿರುವುದು, ಚುನಾವಣೆಗಾಗಿ ಆದಾಯವನ್ನು ಹೆಚ್ಚಿನ ಪ್ರಮಾಣವನ್ನು ಹೊಂದದೆ ಸಾಲವನ್ನು ಮಾಡಿ ಗೆಲ್ಲಲು ಹಣ ಖರ್ಚು ಮಾಡಿದ್ದಾಗಿಯು ಮತ್ತು ಅಭಿವೃದ್ಧಿಗಾಗಿ ಚುನಾವಣಾ ಪೂರ್ವದಲ್ಲಿ ನೀಡಿದಂತಹ ಆಶ್ವಾಸನೆಗಳನ್ನು ಈಡೇರಿಸದೇ ಯಾವ ಅಭಿವೃದ್ಧಿಯನ್ನು ಸಾಧಿಸದೆ ವಿಫಲವಾಗಿರುವುದದ್ದರಿಂದ ಕೂಡ್ಲಿಗಿ ಪಟ್ಟಣ ಪಂಚಾಯಿತಿಯು ಹಿಂದುಳಿದಿದೆ ಎನ್ನಬಹುದಾಗಿದೆ.

ಎರಡು ನಗರ ಸ್ಥಳೀಯ ಸಂಸ್ಥೆಗಳ ಚುನಾಯಿತ ಪ್ರತಿನಿಧಿಗಳ ರಾಜಕೀಯ ಅರಿವು ಮತ್ತು ಭಾಗವಹಿಸುವಿಕೆಯ ಅಂಶಗಳನ್ನು ನೋಡಿದಾಗ ಮುಂದುವರಿದ ನಗರಸಭೆಯ ಸದಸ್ಯರಿಗಿಂತ ಹಿಂದುಳಿದ ಪಟ್ಟಣ ಪಂಚಾಯಿತಿಯ ಸದಸ್ಯರು ಕಡಿಮೆ ಸಂಖ್ಯೆ ಜನರ ಸಮಸ್ಯೆಗಳಿಗೆ ಪರಿಹಾರಕ್ಕಾಗಿ, ಫಲಾನುಭವಿಗಳ ಆಯ್ಕೆಯಿರಬಹುದು ಕಾರಣಗಳಿಗಾಗಿ ಸ್ಥಳೀಯ ಸಂಸ್ಥೆಗಳಿಗೆ ದಿನಾಲು ಹೋಗದೇ ಇರುವುದು, ಸಾಮಾನ್ಯ ಸಭೆಯ ಬಗ್ಗೆ ಅರಿವು ಮತ್ತು ಅದರಲ್ಲಿ ಭಾಗವಹಿಸದೇ ಇರುವುದು ಹಾಗೂ ಅಧಿಕಾರಿಗಳೊಂದಿಗೆ ಹೆಚ್ಚಿನ ಪ್ರಮಾಣದಲ್ಲಿ ಚರ್ಚಿಸದೇ, ಸ್ಥಾಯಿ ಸಮಿತಿಗಳ ಬಗ್ಗೆಯಾಗಲಿ ಮತ್ತು ಸ್ಥಳೀಯ ಸಂಸ್ಥೆಗಳ ನಿಯಮಿತವಾಗಿ ಜವಾಬ್ದಾರಿಗಳನ್ನು ನಿರ್ವಹಿಸದೆ ಆಡಳಿತವನ್ನು ಸಮರ್ಥವಾಗಿ ನಿರ್ವಹಿಸದೆ ಇಂತಹ ಹಲವು ಕಾರಣಗಳಿಂದ ಮುಂದುವರಿದ ನಗರಸಭೆಯ ಸದಸ್ಯರಿಗಿಂತ ಹಿಂದುಳಿದ ಪಟ್ಟಣ ಪಂಚಾಯಿತಿಯ ಸದಸ್ಯರು ಹೆಚ್ಚಿನ ರೀತಿಯಲ್ಲಿ ವಿಫಲಗೊಂಡಿರುವುದ್ದರಿಂದ ಕೂಡ್ಲಿಗಿ ಪಟ್ಟಣ ಪಂಚಾಯಿತಿ ಹಿಂದುಳಿದಿದೆ ಎನ್ನಬಹುದು.

ಎರಡು ಸ್ಥಳೀಯ ಸಂಸ್ಥೆಗಳ ಚುನಾಯಿತ ಸದಸ್ಯರಲ್ಲಿ ಪುರುಷ ಮತ್ತು ಮಹಿಳೆಯರ ಪ್ರತ್ಯೇಕ ಆಸನಗಳಿದ್ದು ನಗರಸಭೆಯ ಸದಸ್ಯರಿಗಿಂತ ಪಟ್ಟಣ ಪಂಚಾಯಿತಿಯ ಸದಸ್ಯರು ಪ್ರದೇಶದಲ್ಲಿ ಜಾತಿಯ ಕಾರಣದಿಂದ ಹಿಂದೆ ಕುಳಿತುಕೊಳ್ಳುವುದು ಯಾವ ಚರ್ಚೆಯಲ್ಲಿ ಭಾಗವಹಿಸದೇ ಇರುವುದು, ಅಂತೆಯೇ ಚರ್ಚೆಯಲ್ಲಿ ಹೆಣ್ಣು ಭಾಗವಹಿಸದೇ ಇರುವುದು, ಅದರಂತೆ ಸಾಮಾನ್ಯ ಸಭೆಯ ಚರ್ಚೆಯಲ್ಲಿ ಕೂಡ ಕೆಳವರ್ಗದವರು (ಅನಕ್ಷರಸ್ಥರು) ಭಾಗವಹಿಸದೇ ಇರುವುದು ಹಾಗೆಯೇ ಚರ್ಚೆಯ ಸಮಯದಲ್ಲಿ ಅಧಿಕಾರಿಗಳು ಕೆಳಜಾತಿಯವರ ಮಾತಿಗೆ ಬೆಲೆ ಕೊಡದೇ ಇರುವುದು ಒಟ್ಟಾರೆಯಾಗಿ ಮುಂದುವರಿದ ನಗರಸಭೆಯ ಸದಸ್ಯರಿಗಿಂತ ಹಿಂದುಳಿದ ಪಟ್ಟಣ ಪಂಚಾಯಿತಿಯ

ಸದಸ್ಯರು ಸಮರ್ಥವಾಗಿ ಆಡಳಿತದಲ್ಲಿ ಪಾಲ್ಗೊಳ್ಳುವುದರಲ್ಲಿಯೂ ವಿಫಲಗೊಂಡಿರುವುದರಿಂದ ಕೂಡ್ಲಿಗಿ ಪಟ್ಟಣ ಪಂಚಾಯಿತಿಯು ಹಿಂದುಳಿದಿದೆ ಎಂದು ಹೇಳಲಾಗಿದೆ.

ನಗರಸಭೆ ಮತ್ತು ಕೂಡ್ಲಿಗಿ ಸ್ಥಳೀಯ ಸಂಸ್ಥೆಗಳ ಅಭಿವೃದ್ಧಿಯ ಒಂದು ಸಾಧನವಾಗಿರುವ ತೆರಿಗೆ ಸಂಗ್ರಹಣೆಯಾಗಿದೆ. ಅದರಲ್ಲಿ ತೆರಿಗೆಯನ್ನು ನಿಯಮಿತವಾಗಿ ಕಟ್ಟುವುದು, ನಗರಸಭೆಯ ಸದಸ್ಯರಿಗಿಂತ ಪಟ್ಟಣ ಪಂಚಾಯಿತಿಯ ಸದಸ್ಯರು ಮುಂದಿದ್ದು ಕೂಡ್ಲಿಗಿ ಪಟ್ಟಣ ಪಂಚಾಯಿತಿಯು ಅಭಿವೃದ್ಧಿಯನ್ನು ಸಾಧಿಸದೇ ಹಿಂದುಳಿದಿದೆ. ನಗರ ಸ್ಥಳೀಯ ಸಂಸ್ಥೆಗಳಾದ ನಗರಸಭೆ ಮತ್ತು ಪಟ್ಟಣ ಪಂಚಾಯಿತಿಗಳು ವಾರ್ಡಿನ ಅಭಿವೃದ್ಧಿಗಾಗಿ ಸಮರ್ಥವಾದ ಮೂಲಭೂತ ಸೌಲಭ್ಯಗಳಾದ ಕುಡಿಯುವ ನೀರನ್ನು ವಿವಿಧ ಮೂಲಗಳ ಮೂಲಕ ಒದಗಿಸುವುದು ಸಮಸ್ಯೆ ಬಂದಾಗ ಸಮಸ್ಯೆಗೆ ಪರಿಹಾರವನ್ನು ನೀಡುವುದು ಅಲ್ಲದೇ ಶೌಚಾಲಯ, ಆರೋಗ್ಯ, ಶಿಕ್ಷಣ, ಬೀದಿ ದೀಪ ಮತ್ತು ರಸ್ತೆಗೆ ಸಂಬಂಧಿಸಿದ ಪರಿಹಾರಗಳನ್ನು ಹೆಚ್ಚು ಜವಾಬ್ದಾರಿಯುತವಾಗಿ ನಿರ್ವಹಣೆ ಮಾಡುವುದರಲ್ಲಿ ಮುಂದುವರಿದ ನಗರಸಭೆಗಿಂತ ಹಿಂದುಳಿದ ಪಟ್ಟಣ ಪಂಚಾಯಿತಿಯ ಸದಸ್ಯರು ಕೆಳಮಟ್ಟದಲ್ಲಿರುವುದರಿಂದ ಕೂಡ್ಲಿಗಿ ಪಟ್ಟಣ ಪಂಚಾಯಿತಿಯ ಹಿಂದುಳಿದಿದೆ ಎಂದು ತಿಳಿಯಲಾಗಿದೆ.

ನಗರದ ವಾರ್ಡಿನ ಅಭಿವೃದ್ಧಿಗೆ ನಗರ ಸ್ಥಳೀಯ ಸಂಸ್ಥೆಗಳಿಂದ ನೇರವಾದ ಪ್ರಮುಖ ಅಭಿವೃದ್ಧಿ ಕಾರ್ಯಗಳನ್ನು ಮಾಡದಿದ್ದರೂ ಸಹ ಚರಂಡಿ ನಿರ್ಮಾಣ, ಸಮರ್ಪಕ ಕುಡಿಯುವ ನೀರಿನ ಪೂರೈಕೆ, ಬೀದಿ ದೀಪಗಳ ವ್ಯವಸ್ಥೆ, ನಿಯಮಿತವಾಗಿ ಸ್ವಚ್ಛತೆಯನ್ನು ಕೈಗೊಳ್ಳುವುದು ಮತ್ತು ಶೌಚಾಲಯ ನಿರ್ಮಾಣ ಕೆಲವು ವಾರ್ಡ್‌ಗಳಲ್ಲಿ ಕಾಣಬಹುದಾಗಿದೆ. ನಗರ ಸ್ಥಳೀಯ ಸಂಸ್ಥೆಗಳು ಸಮರ್ಪಕ ರೀತಿಯಲ್ಲಿ ಅಭಿವೃದ್ಧಿ ಕಾರ್ಯವನ್ನು ಕೈಗೊಳ್ಳುತ್ತವೆಯೋ ಎಂಬುದನ್ನು ವಾರ್ಡಿನ ಜನರು ರೋಸಿ ಹೋಗಿದ್ದಾರೆ. ನಿರಂತರ ಮೇಲೆ ಹೇಳಿದ ಕೆಲವು ಕೆಲಸ-ಕಾರ್ಯಗಳನ್ನು ಕೈಗೊಳ್ಳಲಾಗುತ್ತದೆ ಎಂದು ಗ್ರಹಿಸಲಾಗಿದೆ. ಹೀಗೆ ನಗರ ಸ್ಥಳೀಯ ಸಂಸ್ಥೆಗಳು ವಾರ್ಡಿನ ಅಭಿವೃದ್ಧಿಗಾಗಿ ಶ್ರಮ ವಹಿಸುತ್ತಿವೆ. ಆದರೆ ಚುನಾಯಿತ ಪ್ರತಿನಿಧಿಗಳು ಮತ್ತು ವಾರ್ಡಿನ ಜನರು ಪರಸ್ಪರ ಸ್ಥಳೀಯ ಆಡಳಿತದಲ್ಲಿ ಹೆಚ್ಚು-ಹೆಚ್ಚು ಅರಿವು ಹೊಂದುವುದರ ಜೊತೆಯಲ್ಲಿ ಭಾಗವಹಿಸುವುದೊಂದಿಗೆ ಅಭಿವೃದ್ಧಿಯನ್ನು ಹೊಂದಬಹುದಾಗಿದೆ.

ಮೇಲಿನ ಅಂಶಗಳನ್ನು ನೋಡಿದಾಗ ಒಟ್ಟಾರೆ ಈ ವಿಶ್ಲೇಷಣೆಯಿಂದ ವಾರ್ಡಿನ ಜನರ ಮತ್ತು ಚುನಾಯಿತ ಪ್ರತಿನಿಧಿಗಳ ಹೆಚ್ಚು ಹೆಚ್ಚು ಸಾಕ್ಷರತೆಯನ್ನು ಪಡೆಯುತ್ತಾ ಆಡಳಿತದ ಬಗ್ಗೆ ತರಬೇತಿಯನ್ನು ಹೊಂದಿ ಪ್ರಶ್ನಿಸುವುದರೊಂದಿಗೆ ತಮ್ಮ ವೈಯಕ್ತಿಕವಾಗಿ ಉತ್ತಮ ಜೀವನ ಮಟ್ಟವನ್ನು ನಿರ್ವಹಿಸಿಕೊಂಡಾಗ ಅಭಿವೃದ್ಧಿಯನ್ನು ಹೊಂದಬಹುದಾಗಿದೆ. ಹಾಗಾಗಿ ಆಯಾ ವಾರ್ಡಿನ ಜನರಲ್ಲಿ ಆಡಳಿತದ ಬಗ್ಗೆ ಬೇಸರದ ಭಾವನೆ, ರಾಜಕಾರಣಿಗಳಲ್ಲಿ ನಿರ್ವಹಿಣೆ ಸಮಸ್ಯೆ, ಇಚ್ಛಾಶಕ್ತಿಯ ಕೊರತೆ ಪರಸ್ಪರವಾಗಿ ಭಾಗವಹಿಸದಿರುವುದು, ಸರ್ಕಾರಿ ಯೋಜನೆಗಳ ಮೇಲೆ ಹೆಚ್ಚಾಗಿ ಅವಲಂಬನೆ ಯಾಗಿರುವುದು. ಅಧ್ಯಯನದಿಂದ ತಿಳಿದುಬಂದಿದೆ. ಆದ್ದರಿಂದ ಮುಂದುವರಿದ ಹೊಸಪೇಟೆ ನಗರಸಭೆಗಿಂತ ಮೇಲಿನ ಹೇಳಿದ ಅಂಶಗಳ ಬಗ್ಗೆ ಬದಲಾವಣೆಯ ಆದ್ಯತೆಯನ್ನು ಮೊದಲು ಹಿಂದುಳಿದ ಪಟ್ಟಣ ಪಂಚಾಯಿತಿಗೆ ಕೊಡಬೇಕಾಗಿದೆ. ಹೀಗೆ ನಗರ ಸ್ಥಳೀಯ ಸಂಸ್ಥೆಗಳು ಕೆಲವು ಅಭಿವೃದ್ಧಿ ಕಾರ್ಯಗಳನ್ನು ಮಾಡಿವೆ ಎಂದು ತಿಳಿಯಬಹುದಾಗಿದೆ.

**ಪೀಠಿಕೆ**

ಪ್ರಬಂಧದ ಆರನೆಯಾ ಅಧ್ಯಯನವು ನಗರ ಸ್ಥಳೀಯ ಸಂಸ್ಥೆಗಳಲ್ಲಿ ಚುನಾಯಿತ ಸದಸ್ಯರ ಪಾಲ್ಗೊಳ್ಳುವಿಕೆಯನ್ನು ಅಧ್ಯಯನ ಮಾಡುವ ಉದ್ದೇಶವನ್ನಿಟ್ಟುಕೊಂಡು ಚುನಾಯಿತ ಸದಸ್ಯರು ಸ್ಥಳೀಯ ಸಂಸ್ಥೆಗಳ ಮೂಲಕ ನಗರ ಪ್ರದೇಶದಲ್ಲಿ ವಾರ್ಡಿನ ಜನರಿಗೆ ಯಾವ ರೀತಿಯಲ್ಲಿ ಉತ್ತಮ ಜೀವನವನ್ನು ಕಲ್ಪಿಸಿಕೊಟ್ಟಿದ್ದಾರೆ ಎಂಬುದನ್ನು ಅಧ್ಯಯನ ಮಾಡಲಾಗಿದೆ. ಪ್ರಸ್ತುತ ಅಧ್ಯಯನವು ನಗರ ಸ್ಥಳೀಯ ಸಂಸ್ಥೆಗಳಿಗೆ ಯಾವ ಯಾವ ಮೂಲಗಳಿಂದ ಅನುದಾನ ಬರುತ್ತದೆ ಅದರಿಂದ ಸ್ಥಳೀಯ ಸಂಸ್ಥೆಗಳು ಹೇಗೆ ನೀರ್ಮಾಣಗೊಂಡಿದ್ದಾವೆ ಎಂಬುದನ್ನು ನಗರ ಸ್ಥಳೀಯ ಸಂಸ್ಥೆಗಳ ಹಣಕಾಸಿನ ನಿರ್ವಹಣೆಯ ಹಿನ್ನೆಲೆಯಲ್ಲಿ ಅಧ್ಯಯನ ಮಾಡುವ ಉದ್ದೇಶವಾಗಿದೆ. ೧೯೯೦ರ ಖಾಸಗೀಕರಣ ಬಂದ ನಂತರ ಬಂಡವಾಳಷಾಹಿ ಪ್ರಭಾವದಿಂದ ಹಳ್ಳಿಗಳಿಂದ ನಗರ ಪ್ರದೇಶಗಳಿಗೆ ಹೆಚ್ಚಿನ ಗ್ರಾಮೀಣ ಜನರು ಉದ್ಯೋಗ ಮತ್ತು ಇತರ ಸೌಲಭ್ಯಗಳಿಗಾಗಿ ವಲಸೆ ಹೋಗುವಿಕೆ ಹೆಚ್ಚಿನ ರೀತಿಯಲ್ಲಿ ನಿರ್ಮಾಣವಾದವು ಇದು ಕೇವಲ ಮಹಾನಗರಗಳಾದ ಬಾಂಬೆ, ದೆಹಲಿ, ಕಲ್ಕತ್ತಾ ಮತ್ತು ಬೆಂಗಳೂರಿನ ಸಮಸ್ಯೆಯಾಗಿರದೇ ಸಣ್ಣ–ಪುಟ್ಟ ನಗರಗಳು ಸಹ ಇದರಿಂದ ಹೊರತಾಗಿಲ್ಲ ಎಂಬ ಅಂಶವು ಹಲವು ಅಧ್ಯಯಗಳಿಂದ ತಿಳಿಯಲಾಗಿದೆ. ಈ ನಗರಗಳ ಬೆಳವಣೆಗೆಯಿಂದ ಎಲ್ಲಾ ನಗರಗಳ ಗಾತ್ರ ದೊಡ್ಡದಿರಲಿ ಅಥವಾ ಸಣ್ಣದಿರಲಿ ಅವು ಒಂದೇ ರೀತಿಯಾದ ಸಮಸ್ಯೆಗಳನ್ನು ಎದುರಿಸುತ್ತೀವೆ. ನಗರ ಬೆಳವಣಿಗೆ ಒಂದೇ ಸಮನೇ ಏರುತ್ತಿರುವುದು ಒಂದು ಕಡೆಯಾದರೆ ಮತ್ತೊಂದು ಕಡೆ ಸಾರ್ವಜನಿಕ ಹಿತಾಸಕ್ತಿಯ ವಿಷಯಗಳ ಬಗ್ಗೆ ಆಸಕ್ತಿ ವಹಿಸುವುದು ಮತ್ತು ಆರ್ಥಿಕ ಅಭಿವೃದ್ಧಿಯ ಪ್ರಕ್ರಿಯೆ, ಸ್ಥಳೀಯ ಸಂಸ್ಥೆಗಳ ಸಮರ್ಪಕ ಕಾರ್ಯನಿರ್ವಹಣೆಯಿಂದ ನಗರ ಸ್ಥಳೀಯ ಸಂಸ್ಥೆಗಳು ಜವಾಬ್ದಾರಿಯುತ ಕಾರ್ಯಗಳ ಕಡೆಗೆ ಗಮನಹರಿಸುವುದು ಹೆಚ್ಚಾದವು. ಇಂತಹ ಸಂಗತಿಗಳಿಂದ ನಗರ ಸ್ಥಳೀಯ ಸಂಸ್ಥೆಗಳ ಪ್ರಭಾವವು ಒತ್ತಡಕ್ಕೊಳಪಟ್ಟಿತ್ತು. ಅದಲ್ಲದೇ, ಜಿಲ್ಲೆಯ ಗಣಿಗಾರಿಕೆ ಮತ್ತು ಕೈಗಾರೀಕರಣದಿಂದ ಇದೇ ತೆರನಾದ ಸ್ಥಿತಿಯು ಹೊಸಪೇಟೆ

ನಗರಸಭೆ-ಕೂಡ್ಲಿಗಿ ಪಟ್ಟಣ ಪಂಚಾಯಿತಿಯಲ್ಲಿಯೂ ಕಾಣಬಹುದಾಗಿದೆ. ಇಂತಹ ಸಂದರ್ಭದಲ್ಲಿ ಯಾವುದೇ ತರಹದ ವಿಸ್ತಾರಕ ಅವಶ್ಯಕತೆಗಳನ್ನು ನಗರ ಜನತೆಗೆ ಪೂರೈಸಲು ಹಣಕಾಸು ಪ್ರಬಲವಾದ ಮತ್ತು ಪ್ರಮುಖ ಪಾತ್ರವಹಿಸುತ್ತದೆ. ಯಾವುದೇ ನಗರ ಸ್ಥಳೀಯ ಸಂಸ್ಥೆಗಳು ಕನಿಷ್ಠ ಹಣಕಾಸು ಇಲ್ಲದೆ ಅಸ್ತಿತ್ವದಲ್ಲಿರಲು ಸಾಧ್ಯವಿಲ್ಲ, ಅದು ತನ್ನ ಅಭಿಪ್ರಾಯಗಳನ್ನು ಪೂರ್ಣ ಮಟ್ಟದಲ್ಲಿ ಗೆಲ್ಲಲ್ಲು ಸಾಧ್ಯವಿಲ್ಲ. ಎಲ್ಲಾ ಪ್ರಯತ್ನಗಳು ಹಣಕಾಸಿನ ಮೇಲೆ ಅವಲಂಬಿತವಾಗಿವೆ. ಹಾಗಾಗಿ ಅಭಿವೃದ್ಧಿ ಕೆಲಸಗಳನ್ನು ಅನುಷ್ಠಾನಗೊಳಿಸುವಂತಹ ಎಲ್ಲಾ ಸಂಸ್ಥೆಗಳಿಗೆ ಹಣಕಾಸು ನಿರ್ವಹಣೆಯ ವ್ಯವಸ್ಥೆ ಅತಿ ಅವಶ್ಯಕ. ಈ ಉದ್ದೇಶವನ್ನು ಇಟ್ಟುಕೊಂಡು ಹಣಕಾಸಿನ ನಿರ್ವಹಣೆಯನ್ನು ನಾವು ಮೂರು ಭಾಗಗಳನ್ನಾಗಿ ವಿಂಗಡಿಸಕೊಳ್ಳಲಾಗಿದೆ. ಅಂದರೆ, ಆಯವ್ಯಯ, ಲೆಕ್ಕ ಪತ್ರಗಳ ನಿರ್ವಹಣೆ ಮತ್ತು ಲೆಕ್ಕ ಪರಿಶೋಧನೆ ಎಂಬುದಾಗಿದೆ. ನಗರ ಸ್ಥಳೀಯ ಸಂಸ್ಥೆಗಳ ಅಭಿವೃದ್ಧಿ ಯೋಜನೆಗಳ ಯಶಸ್ವಿ ಅನುಷ್ಠಾನಕ್ಕಾಗಿ ಒಂದು ಪೂರ್ವಯೋಜಿತ ಕಾರ್ಯಕ್ರಮ ಅವಶ್ಯಕ. ಈ ರೀತಿಯ ಯೋಜನೆಗಳನ್ನು ಅನುಷ್ಠಾನಗೊಳಿಸಲು ಮೊದಲು ಸಂಪನ್ಮೂಲದ ಕ್ರೋಢೀಕರಣ ಆಗಬೇಕು (ಆಯ) ಆನಂತರ ಕ್ರೋಢೀಕರಣಗೊಂಡ ಸಂಪನ್ಮೂಲವನ್ನು ಅವಲಂಬಿಸಿ ವಿವಿಧ ಉದ್ದೇಶಗಳಿಗಾಗಿ, ಆದತ್ಯೆಗಳನ್ನು ಆಧರಿಸಿ ನ್ಯಾಯೋಚಿತವಾಗಿ ಅದರ ಹಂಚಿಕೆ ಆಗಬೇಕು (ವ್ಯಯ). ಅಭಿವೃದ್ಧಿ ಕಾರ್ಯಗಳ ಅನುಷ್ಠಾನ ಸಂಗ್ರಹಿಸಿದ ಆದಾಯವನ್ನೇ ಅವಲಂಬಿಸಿರುವುದರಿಂದ ನಗರ ಸ್ಥಳೀಯ ಸಂಸ್ಥೆಗಳಲ್ಲಿ ಆದಾಯದ ಮೂಲಗಳನ್ನು ಸರಿಯಾಗಿ ಗುರುತಿಸಿ ಸಂಪನ್ಮೂಲ ಕ್ರೋಢೀಕರಣಕ್ಕೆ ಹೆಚ್ಚಿನ ಆದತ್ಯೆಯನ್ನು ನೀಡುವುದರ ಹಿನ್ನೆಲೆಯಲ್ಲಿ ಹಣಕಾಸಿನ ನಿರ್ವಹಣೆ ಸ್ಥಳೀಯ ಸಂಸ್ಥೆಗಳಲ್ಲಿ ಯಾವ ರೀತಿಯಾಗಿ ನಿರ್ಮಾಣಗೊಂಡಿದೆ ಎಂಬು ಉದ್ದೇಶವನ್ನು ಇಟ್ಟುಕೊಂಡು ಈ ಅಧ್ಯಯನವನ್ನು ಮಾಡಲಾಗಿದೆ.

**೭.೧. ಭಾರತದಲ್ಲಿ ಪ್ರಸ್ತುತ ನಗರ ಸ್ಥಳೀಯ ಸಂಸ್ಥೆಗಳ ಹಣಕಾಸು ಮತ್ತು ಸೇವೆಗಳು**

ಭಾತರವು ಪಟ್ಟಣ ಜನಸಂಖ್ಯೆ ಇತ್ತೀಚಿನ ವರ್ಷಗಳಲ್ಲಿ ಕ್ಷಿಪ್ರಗತಿಯಲ್ಲಿ ಏರುತ್ತಿದೆ ೧೯೬೧ ರಲ್ಲಿ ೭೯ ದಶಲಕ್ಷ (ಮಿಲಿಯನ್) ಜನರು ಪಟ್ಟಣ ಪ್ರದೇಶದಲ್ಲಿ ವಾಸಿಸುತ್ತಿದ್ದಾರೆ, ೧೯೯೧ ರಲ್ಲಿ ೨೧೭ ದಶಲಕ್ಷ (ಮಿಲಿಯನ್) ಜನರು ಪಟ್ಟಣ ಪ್ರದೇಶದಲ್ಲಿ ಅದೇ ರೀತಿಯಾಗಿ ೨೦೧೧ ರಲ್ಲಿ ೪೨೦ ದಶಲಕ್ಷ ಜನರು ನಗರ ಪ್ರದೇಶಗಳಲ್ಲಿ ವಾಸಿಸುತ್ತಿರುವುದು ಇದು ೨೦೨೧ರ ವೇಳೆಗೆ ಅಂದಾಜು ೫೫೩ ಮಿಲಿಯನ್‌ಗಳಾಗಬಹುದು ಎಂದು ಜನಸಂಖ್ಯೆ ತಜ್ಞರ ನಿರೀಕ್ಷೆಯಾಗಿರುತ್ತದೆ.

ಈ ನಿಟ್ಟಿನಲ್ಲಿ ರಾಷ್ಟ್ರೀಯ, ರಾಜ್ಯ ಮತ್ತು ವಿವಿಧ ಸಂಘ ಸಂಸ್ಥೆಗಳು ನಗರ ಸ್ಥಳೀಯ ಸಂಸ್ಥೆಗಳ ಬಗ್ಗೆ ಕೈಗೊಂಡ ಅಧ್ಯಯನಗಳನ್ವಯ ರಾಷ್ಟ್ರದ ಬಹುತೇಕ ಪಟ್ಟಣ ಪ್ರದೇಶಗಳಲ್ಲಿ ಸಾಮಾನ್ಯ ಜೀವನದ ವರ್ಗ ಮತ್ತು ಮೌಲ್ಯಗಳಲ್ಲಿ ತೀವ್ರ ಇಳಿಕೆ ಕಂಡು ಬಂದಿದೆ. ಪರಿಶೀಲಿಸಿದ ಪ್ರತಿಯೊಂದು ಪಟ್ಟಣ ಕೇಂದ್ರಗಳಲ್ಲಿ ಪಟ್ಟಣದ ಗಾತ್ರ ಹಾಗೂ ಶ್ರೇಣಿಯ ಹೊರತಾಗಿಯೂ, ಅಗತ್ಯ ಸೇವೆಗಳ ಲಭ್ಯತೆಯಲ್ಲಿ ಇಳಿಕೆ ಕಂಡುಬಂದಿದ್ದು, ಬಹುತೇಕ ಜನಸಂಖ್ಯೆ ಹಲವು ಸೌಲಭ್ಯ ಹಾಗೂ ಸೇವೆಗಳಿಂದ ವಂಚಿತಗೊಂಡಿರುತ್ತಾರೆ. ೨೦೧೪-೧೫ರ ಮಾಹಿತಿಯ ಪ್ರಕಾರ ಅಂದಾಜು ಪ್ರತಿಶತ ೬೦ರಷ್ಟು ಜನಸಂಖ್ಯೆಗೆ ಸುರಕ್ಷಿತ ಕುಡಿಯುವ ನೀರು ದೊರಕುತ್ತಿಲ್ಲ ಹಾಗೂ ಅಂದಾಜು ಪ್ರತಿಶತ ೫೦ರಷ್ಟು ಜನತೆಗೆ ಮೂಲಭೂತ ನೈರ್ಮಲ್ಯದ ಸವಲತ್ತುಗಳಲ್ಲಿ ಕಸಕಡ್ಡಿ ವಿಲೇವಾರಿ ಸಂಬಂಧಪಟ್ಟ

ವಿಷಯವಂತೂ ತೀರಾ ಕೆಳಮಟ್ಟದಲ್ಲಿದ್ದು, ವಿಲೇವಾರಿ ಸೇವೆ ಪೂರ್ಣ ಮಟ್ಟದಲ್ಲಿ ಎಲ್ಲಾ ಜನವಸತಿ ಪ್ರದೇಶವನ್ನು ಒಳಗೊಂಡಿಲ್ಲ. ಸರಾಸರಿ ಶೇ. ೩೦–೪೦ರಷ್ಟು ಮಲಿನ ವಸ್ತುಗಳನ್ನು ಸಂಗ್ರಹಿಸದೇ ಹಾಗೆಯೇ ರಸ್ತೆಗಳಲ್ಲಿ ಕೊಳೆಯುತ್ತಾ ಬಿದ್ದಿರುವುದನ್ನು ಕಾಣಬಹುದಾಗಿದೆ. ಈ ರೀತಿ ಸಂಗ್ರಹಿಸದೇ, ವಿಲೇವಾರಿಗೊಳ್ಳದೆ ಬಿದ್ದಿರುವ ವಸ್ತುಗಳಿಂದ ಹಲವಾರು ರೋಗ ಹರಡುವಿಕೆಗೆ ಮೂಲವಾಗಿ ನಗರ ಪ್ರದೇಶಗಳ ಆರೋಗ್ಯಕ್ಕೆ ತೊಡಕಾಗುವ ಸಂಬಂಧವೇ ಅಧಿಕ. ಇದರ ಪರಿಣಾಮವಾಗಿ ನಗರ ಪ್ರದೇಶದಲ್ಲಿ ಶ್ರೀಮಂತರು ಮತ್ತು ಮಧ್ಯಮವರ್ಗದವರು ಖಾಸಗೀ ಸೌಲಭ್ಯಗಳ ಮೊರೆ ಹೋಗಿರುವುದು ಹಲವಾರು ಅಧ್ಯಯನಗಳಿಂದ ತಿಳಿದು ಬಂದಿದೆ.[೨] ಸದ್ಯದಲ್ಲೇ ಚಾಲ್ತಿಯಲ್ಲಿರುವ ಆರ್ಥಿಕ ಸುಧಾರಣೆಗಳು ನಗರ ಪ್ರದೇಶದ ನಿರ್ವಹಣೆ ಹಾಗೂ ಆರ್ಥಿಕತೆಯ ಮೇಲೆ ತೀವ್ರ ಒತ್ತಡ ಬೀರಲಿದೆ. ನಗರೀಕರಣದಿಂದ ನಗರ ಸೇವೆ ಹಾಗೂ ನಗರದ ಮೂಲಭೂತ ಸೌಕರ್ಯಗಳ ಮೇಲೆ ಹಲವಾರು ಬಗೆಯ ತೊಡಕುಗಳಿಗೆ ಕಾರಣವಾಗುತ್ತಲಿದೆ. ವ್ಯಾಪಾರ ಸಂಬಂಧವಾದ ಹಣ ಹೂಡಿಕೆಗಳು ಹಾಗೂ ಕೈಗಾರಿಕಾ ಚಟುವಟಿಕೆಗಳು ಸಾಧಾರಣವಾಗಿ ನಗರ ಹಾಗೂ ನಗರಗಳಿಗೆ ಸಮೀಪವಿರುವ ಪ್ರದೇಶಗಳಲ್ಲಿ ಆರಂಭಗೊಳ್ಳುತ್ತಿತ್ತು, ಇದು ನಗರಗಳ ಸೇವೆಗಳು ಹಾಗೂ ಮೂಲಭೂತ ಸೌಕರ್ಯಗಳ ಮೇಲೆ ನೇರವಾಗಿ ಮತ್ತಷ್ಟು ಒತ್ತಡಗಳನ್ನು ಹೇರುತ್ತಿರುವುದು ನಾವು ದಿನನಿತ್ಯ ವಾಸ್ತವವಾಗಿ ನೋಡುತ್ತಿರುವುದಾಗಿದೆ.

ನಗರ ಪ್ರದೇಶಗಳಿಗೆ ಮೂಲಭೂತ ಸೌಕರ್ಯಗಳು ಹಾಗೂ ಸೇವೆಗಳನ್ನು ನೀಡಲು ಕಾನೂನು ಪ್ರಕಾರವಾಗಿ ರಚಿಸಲ್ಪಟ್ಟ ಸಂಸ್ಥೆಗಳು ಸದ್ಯಕ್ಕಿರುವ ಸೇವೆಗಳನ್ನು ಸಮರ್ಪಕವಾಗಿ ನೀಡಲು ಆರ್ಥಿಕ ಬಲವಿಲ್ಲದೇ ಸಂಕಷ್ಟದಲ್ಲಿ ಸಿಲುಕಿವೆ. ಸದರೀ ಸೇವೆಗಳನ್ನು ಇನ್ನೂ ಉತ್ತಮ ಪಡಿಸುವ ಮಾತು ದೂರವೇ ಆಗಿದೆ. ಒಂದೆಡೆ ಸಂಸ್ಥೆಗಳು ಸಮರ್ಪಕ ಸೇವೆ ನೀಡಲಾಗದೆ ತೀವ್ರ ಒತ್ತಡಕ್ಕೆ ಸಿಲುಕಿದರೆ ಇನ್ನೊಂದಡೆ ಸೇವೆ ನೀಡಲು ಅತೀ ಅಗತ್ಯವಾದ ಹಣಕಾಸು ಆದಾಯದಲ್ಲಿ ಸಮನಾಂತರ ಬೆಳವಣಿಗೆಯಿಲ್ಲದೇ ಕಷ್ಟ ಪರಿಸ್ಥಿತಿ ಎದುರಿಸುತ್ತಿವೆ. ಸದಾ ಈ ಬಗೆಯ ಸಮಸ್ಯೆಗಳ ಸರಪಳಿಯಲ್ಲಿ ಸಿಕ್ಕಿಕೊಂಡಿರುವ ನಗರ ಸ್ಥಳೀಯ ಸಂಸ್ಥೆಗಳು ನಿರ್ವಹಣೆಗಾಗಿ ಉನ್ನತ ಮಟ್ಟದ ಸರ್ಕಾರ ಸಂಸ್ಥೆಗಳು ನೀಡುವ ಹಣಕಾಸು ನೀಡಿಕೆ ಮೇಲೆ ಅವಲಂಬಿತವಾಗಬೇಕಿದೆ. ಮುಂದುವರಿದು, ಬೇಸರಪಡಬೇಕಾದ ಮತ್ತೊಂದು ವಿಷಯವೆಂದರೆ ಹಲವಾರು ನಗರ ಹಾಗೂ ಪಟ್ಟಣ ಸಂಸ್ಥೆಗಳು ಆಗಾಧ ಸಾಲದ ಸುಳಿಯಲ್ಲಿ ಸಿಲುಕಿದ್ದು ಸದರೀ ಸಾಲವನ್ನು ತೀರಿಸಲಾಗದೇ ಸಮಸ್ಯೆಗೊಳಗಾಗಿವೆ. ನಗರ ಪ್ರದೇಶಗಳಲ್ಲಿ ಸೇವೆಗಳ ಲಭ್ಯತೆ ಹಾಗೂ ಗುಣಮಟ್ಟದ ಸೇವೆಯ ಮೇಲೆ ಹಣಕಾಸು ಪರಿಸ್ಥಿತಿಯ ಒತ್ತಡಗಳು ತೀವ್ರ ಪರಿಣಾಮ ಬೀರುತ್ತಿವೆ. ಯೋಜನಾ ಆಯೋಗದ ಅಂದಾಜಿನಂತೆ ಮುನಿಸಿಪಾಲಿಟಿ ವೆಚ್ಚ, ಒಟ್ಟು ಸಾರ್ವಜನಿಕ ಸೇವಾ ವೆಚ್ಚದಲ್ಲಿ ೧೯೬೦–೬೧ರಲ್ಲಿ ಪ್ರತಿಶತ ೮ರಷ್ಟು ಇದ್ದದ್ದು, ೧೯೭೭–೭೮ರಲ್ಲಿ ೪.೫%ಕ್ಕೂ, ೧೯೮೬–೮೭ರಲ್ಲಿ ೩%ಕ್ಕೂ, ೧೯೯೧–೯೨ರಲ್ಲಿ ೨%,ಕ್ಕೂ ಇಳಿಕೆಯಾಗಿರುವುದು ಕಂಡುಬಂತು. ೨೦೦೦–೦೧ರಲ್ಲಿ ೨.೫%, ೨೦೦೦೧–೧೧ರಿಂದ ಈ ಪ್ರಮಾಣದಲ್ಲಿ ಏರಿಕೆಯಾಗಿರುವುದನ್ನು ಕಾಣಬಹುದಾಗಿದೆ.[೩] ಅಂತೆಯೇ, ರಾಷ್ಟ್ರೀಯ ಸಾರ್ವಜನಿಕ ಹಣಕಾಸು ಹಾಗೂ ಕೌಶಲ್ಯ ಸಂಸ್ಥೆ ನಡೆಸಿದ ಅಧ್ಯಯನದಂತೆ ನಗರೀಕೃತ ಸಂಸ್ಥೆಗಳ ಹಣಕಾಸು ವ್ಯವಹಾರಗಳು ಗೊಂದಲಗಳ ಗೂಡಾಗಿದೆ ಹೆಚ್ಚಿನ ಸಂಸ್ಥೆಗಳಿಗೆ ಅಗತ್ಯವಿರುವ ಸಂಪನ್ಮೂಲಗಳನ್ನು ಕ್ರೂಢೀಕರಿಸಲು ಸಾಧ್ಯವಾಗುತ್ತಿಲ್ಲ. ಸಂಪನ್ಮೂಲ ಸಂಗ್ರಹಣೆಯಿಲ್ಲದೆ ಏರಿಕೆಗೊಳ್ಳುತ್ತಿರುವ ಅಗತ್ಯ ಸೇವಾ ಖರ್ಚುಗಳನ್ನು ನಿಭಾಯಿಸಲಾಗುತ್ತಿಲ್ಲ.

ನಗರಗಳು ಪ್ರತಿಶತ ೬೦ಕ್ಕೆ ಸಮೀಪ ದೇಶದ ಜಿಡಿಪಿಗೆ ತಮ್ಮ ಕೊಡುಗೆ ನೀಡುತ್ತಿದ್ದರೂ ನಗರ ಸಂಸ್ಥೆಗಳು ತಮ್ಮ ಪ್ರದೇಶದಲ್ಲೇ ನಡೆದ ಆರ್ಥಿಕ ಚಟುವಟಿಕೆಗಳಿಂದ ಯಾವುದೇ ಲಾಭ ಪಡೆಯಲು ವಿಫಲವಾಗಿದೆಯೆಂದು ವೇದ್ಯವಾಗುತ್ತದೆ. ನಗರ ಪ್ರದೇಶಗಳಲ್ಲಿ ನಡೆದ ಆರ್ಥಿಕ ಚಟುವಟಿಕೆಗಳು ಭಾರತದ ಆರ್ಥಿಕತೆಗೆ ಬೆಂಬಲವಾಗಿವೆ ಎಂಬುದನ್ನು ಇಲ್ಲಿ ಗಮನಿಸಬೇಕಾಗಿದೆ.

**ಕೋಷ್ಟಕ: ೭.೧. ನಗರ ಪ್ರದೇಶದ ಮಾನವ ಅಭಿವೃದ್ಧಿಗಾಗಿ ಬೇಕಾಗಿರುವ ಸೌಲಭ್ಯಗಳ ವಿವರ ಕನಿಷ್ಠ ಮಟ್ಟದ ಸೇವೆ ಪಡೆಯಲಿಕ್ಕೆ ಬೇಕಾಗಬಹುದಾದ ಹಂತ**

| ಪ್ರಮುಖ ಸೇವೆ ಕ್ಷೇತ್ರಗಳು | ಜನಸಂಖ್ಯೆ/ವ್ಯಾಪ್ತಿ | ಸೇವೆಯ ಹಂತದ ವ್ಯಾಪ್ತಿ | ರೀಮಾರ್ಕ್ಸ್ |
|---|---|---|---|
| **ನೀರು ಸರಬುರಾಜು** | ಶೇ.೧೦೦ರಷ್ಟು ಪೂರೈಕೆ | ಶುದ್ಧ/ಅಶುದ್ಧ ನೀರು ಸರಬುರಾಜ ವ್ಯವಸ್ಥೆಗಾಗಿ ಪೈಪ್‌ಲೈನ್ ೭೦*ಎಲ್‌ಪಿಸಿಡಿ/ ೧೫೦*ಎಲ್‌ಪಿಸಿಡಿ ಮತ್ತು ಇದ್ದ ಸ್ಥಳದಲ್ಲೇ ೪೦*ಎಲ್‌ಪಿಸಿಡಿ | ಕಡಿಮೆ ವೆಚ್ಚದಲ್ಲಿ ಸಾರ್ವಜನಿಕ ಪೈಪ್ ಲೈನ್‌ನಿಂದ ನೀರಿ ವ್ಯವಸ್ಥೆ ಮತ್ತು ೧೦೦ಮೀ ಒಳಗೆ ೨೦ ಕುಟುಂಬಗಳಿಗಂತೆ ನೀರಿನ ಮೂಲ |
| **ನೈರ್ಮಲ್ಯ/ಅಶುದ್ಧ** | ಶೇ. ೧೦೦ರಷ್ಟು ಬೃಹತ್ ನಗರಗಳ ರೀತಿಯಲ್ಲೇ ಸೌಲಭ್ಯ ಗಳನ್ನು ಒದಗಿಸುವುದು | ಬೃಹತ್‌ನಗರ:ಅಶುದ್ಧತೆಯೊಂದಿಗೆ ಪೂರ್ಣ ನಗರಕ್ಕೆ ಅಳವಡಿಕೆ, ಮಧ್ಯಮ ನಗರ: ಸಾರ್ವಜನಿಕ ಅಶುದ್ಧತೆಯಲ್ಲಿ ಅಪೂರ್ಣತೆ ಮತ್ತು ಸಣ್ಣ ಪುಟ್ಟ ನಗರ ಪ್ರದೇಶದಲ್ಲಿ ಕಡಿಮೆ ವೆಚ್ಚದ ನೈರ್ಮಲೀಕರಣದ ವ್ಯವಸ್ಥೆ | ಬೃಹತ್ ನಗರಗಳಲ್ಲಿ ಕಡಿಮೆ ಆದಾಯವನ್ನು ಹೊಂದಿರುವ ಸಮುದಾಯಗಳಿಗೆ ಶೌಚಾಲಯ ಗಳನ್ನು ಕೊಡಬಹುದಾಗಿದೆ. ಅಲ್ಲದೇ, ಅವು ಸೆಪ್ಟಿಂಕ್ ಟ್ಯಾಂಕ್‌ಗಳಾಗಿರುತ್ತವೆ |
| **ಘನತ್ಯಾಜ್ಯ ಮತ್ತು ವಿಘಟನೆ** | ನಗರದ ಎಲ್ಲಾ ಘನ ತ್ಯಾಜ್ಯಮಾಡುವುದು ಮತ್ತು ಅದನ್ನು ವಿಘಟನೆ ಮಾಡುವುದು | ಪ್ರತೇಕ ಸ್ಥಳದಿಂದ ಕಸ ಸಂಗ್ರಹಿಸಿ ಸಾಗಿಸುವುದು, ಆಸ್ಪತ್ರೆ, ಎಲೆಕ್ಟ್ರಾನಿಕ್ಸ್ ಇನ್ನಿತರ ಘನತ್ಯಾಜ್ಯವನ್ನು ಸಂಗ್ರಹಿಸುವುದು ಮತ್ತು ಕಸ ವಿಘಟನಗಾಗಿ ಸಣ್ಣ ಪಟ್ಟ ನಗರ ಆಯ್ಕೆ | ಸಂಗ್ರಹಿಸಿದ ಕಸವನ್ನು ಸಂಗ್ರಹಿಸಲು ಆಯಾಯ ಬೀದಿಯಲ್ಲಿ ಕಸದ ಬುಟ್ಟಿ, ಸಂಗ್ರಹ ಕೇಂದ್ರ, ಸಾಗಾಣಿಕೆ ಗಾಗಿ ವಾಹನಗಳು ಮತ್ತು ಅದರ ನಿರ್ವಹಣೆಗಾಗಿ ಪೌರ ಕಾರ್ಮಿಕರನ್ನು ವಿವಿಧ ಚಟುವಟಿಕೆಗಳಿಗೆ ಉಪಯೋಗಿಸುವುದು |
| **ಪ್ರಾಥಮಿಕ ಶಿಕ್ಷಣ** | ರಾಷ್ಟ್ರದ ಮುಖ್ಯ ಗುರಿ ೧೪ ವರ್ಷದವರಿಗೆ ಪ್ರಾಥಮಿಕ ಶಿಕ್ಷಣವನ್ನು ರಾಷ್ಟ್ರೀಕರಣಗೊಳಿಸುವುದು | ಪ್ರತಿ ಶಾಲೆಗೆ ಕನಿಷ್ಠ ಪರಿಸರಕ್ಕೆ ಹೊಂದಿಕೊಂಡಂತೆ ಮೂರು ರೂಮ್‌ಗಳನ್ನು ನಿರ್ಮಿಸುವುದು, ಒಂದು ಕೊಠಡಿ/ ವಿಭಾಗಕ್ಕೆ ಕನಿಷ್ಠ ಒಬ್ಬ ಶಿಕ್ಷಕನಿರಬೇಕು ಮತ್ತು ಒಂದು ಪ್ರಾಥಮಿಕ ಶಾಲೆಗಾಗಿ ೩೦೦೦-೪೦೦೦ ಜನಸಂಖ್ಯೆ, ೩ ಎಕರೆ ಜಾಗ, ೩೦೦೦-೪೦೦೦ ಸೀಟ್ಸ್‌ಗಳಿರಬೇಕು | ಉತ್ತಮ ಶಾಲೆಯು ವಿದ್ಯಾರ್ಥಿಗಳ ಸೇರುವಿಕೆಗೆ ಪ್ರೋತ್ಸಾಹಿಸಬೇಕು, ಶಾಲೆಯು ನಡೆದುಕೊಂಡು ಹೋಗುವ ಹಂತದಲ್ಲಿ ೧-೨ ಕಿ.ಮೀ. ಅಂತರದಲ್ಲಿ ಇರಬೇಕು |
| **ಆರೋಗ್ಯ ಸುರಕ್ಷತೆ** | ರಾಷ್ಟ್ರದ ಮುಖ್ಯ ಗುರಿ | ೨೦,೦೦೦-೩೦,೦೦೦ | ಪ್ರಾಥಮಿಕ ಆರೋಗ್ಯ ಸುರಕ್ಷತೆಯು |

|  | ಎಲ್ಲಾರಿಗೂ ಸುರಕ್ಷಿತ ಆರೋಗ್ಯವನ್ನು ಒದಗಿಸುವುದು. | ಜನಸಂಖ್ಯೆಗೆ ಒಂದು ಪಿ.ಹೆಚ್.ಎಸ್.ಇರಬೇಕು, ೩೦೦೦-೫೦೦೦ ಜನಸಂಖ್ಯೆಗೆ ಒಂದು ಉಪ-ಕೇಂದ್ರ ಇರಬೇಕು ಮತ್ತು ೧ ಲಕ್ಷ ಜನಸಂಖ್ಯೆಗೆ ಒಂದು ಸಮುದಾಯ ಆರೋಗ್ಯ ಕೇಂದ್ರ ಇರಬೇಕು | ಪ್ರಮುಖ ಗುರಿಯೆಂದರೆ 'ಎಲ್ಲಾರಿಗೂ ಆರೋಗ್ಯ' |
|---|---|---|---|

ಮೇಲಿನ ಕೊಷ್ಟಕದಲ್ಲಿ ನೀಡಿರುವ ಮಾಹಿತಿಯಂತೆ ನಗರ ಸ್ಥಳೀಯ ಸಂಸ್ಥೆಗಳು ಆ ಗುರಿಯನ್ನು ಈಡೇರಿಸದೆ ಒಂದು ವಿಶಿಷ್ಟ ಬಗೆಯ ಪರಿಸ್ಥಿತಿ ಎದುರಿಸುತ್ತಿವೆ. ಒಂದೆಡೆ ಹೆಚ್ಚುತ್ತಿರುವ ನಗರೀಕರಣದ ಲಭ್ಯವಿರುವ ಸೇವೆಗಳ ಮೇಲೆ ಅಧಿಕ ಬೇಡಿಕೆಯಿದ್ದರೆ ಮತ್ತೊಂದೆಡೆ ಸದರೀ ಸೇವೆಗಳನ್ನು ಸಮರ್ಪಕವಾಗಿ ನೀಡಲು ಅಗತ್ಯವಿರುವ ಆದಾಯವಿಲ್ಲದೆ ಸೊರಗುತ್ತಿವೆ. ನಗರ ಸ್ಥಳೀಯ ಸಂಸ್ಥೆಗಳ ನಿರ್ವಹಣೆ, ಅಸಮರ್ಪಕ ಸ್ಥಳೀಯ ಆಡಳಿತ, ನಿರ್ವಹಣಾ ದೋಷ, ಅಸಮರ್ಪಕ ಯೋಜನಾ ನಿರ್ವಹಣೆ, ಕಾಲಮಿತಿಯಲ್ಲಿ ಕಂದಾಯ ಪರಿಷ್ಕರಣೆ ಇಲ್ಲದಿರುವಿಕೆ, ಅಸಮರ್ಪಕ ಮಾಹಿತಿ ಕಲೆ ಹಾಕುವ ಬಗ್ಗೆ ಹಾಗೂ ದಾಖಲಿಸುವಿಕೆ ಹೀಗೆ ಇನ್ನಿತರ ದೋಷಗಳಿಂದ ನಗರ ಸ್ಥಳೀಯ ಸಂಸ್ಥೆಗಳು ಬಳಲುತ್ತಿವೆ. ಭಾರತದ ಹಲವಾರು ನಗರ ಸಂಸ್ಥೆಗಳು ಪ್ರಮುಖವಾಗಿ ಅತಿ ಚಿಕ್ಕ ಹಾಗೂ ಮಧ್ಯಮ ಗಾತ್ರದ ಸಂಸ್ಥೆಗಳಲ್ಲಿ ಅಗತ್ಯಕ್ಕೆ ತಕ್ಕ ಸಿಬ್ಬಂದಿಗಳಿಲ್ಲ, ಸಿಬ್ಬಂದಿ ಕಾರ್ಯತಖ್ತೆ ಸ್ಪಷ್ಟವಿಲ್ಲ ಹಾಗೂ ಹೆಚ್ಚಿನ ವಿಷಯಗಳಲ್ಲಿ ಚೂರುಪಾರಗಿದೆ. ನಗರ ಸಿಬ್ಬಂದಿಗೆ ಹೆಚ್ಚುತ್ತಿರುವ ನಗರದ ಬೇಡಿಕೆಗಳಿಗೆ ಸ್ಪಂದಿಸಲು ಅತೀ ಕಡಿಮೆ ಸಾಮಾರ್ಥ್ಯ ಹಾಗೂ ಪ್ರೇರಣೆ ಹೊಂದಿದ್ದು, ಈಗಾಗಲೇ ಕಡಿಮೆಯಿರುವ ಸಂಪತ್ತು, ಸರಿಯಿಲ್ಲದೆ ನಿರ್ವಹಣೆ ಒಂದು ರೀತಿಯಲ್ಲಿ ವ್ಯಕ್ತವಾಗುತ್ತಿದೆ. ೨೦೨೦ನೇ ಇಸವಿಯ ವೇಳೆಗೆ ಭಾರತದ ಎಲ್ಲಾ ನಗರೀಕೃತ ಸಂಸ್ಥೆಗಳು ಬಳಲುತ್ತಿರುವ ವಿತ್ತೀಯ ಅಭಾವಗಳನ್ನು ತೊಲಗಿಸಿ ಸಮರ್ಪಕ ಸೇವೆ ಸಲ್ಲಿಸಬೇಕಾದಲ್ಲಿ ವೈಜ್ಞಾನಿಕ ತರಬೇತಿ ಕಾರ್ಯಕ್ರಮಗಳ ಹಾಗೂ ಹೆಚ್ಚಿನ ಸಂಪನ್ಮೂಲದ ಅಗತ್ಯವಿದೆ. ನಗರ ಸಂಸ್ಥೆಗಳು ನೀಡುವ ಸೇವೆಗಳನ್ನು ಅತೀ ಅಗತ್ಯ ಕನಿಷ್ಟ ತಮ್ಮ ಹಾದಿಯಲ್ಲಿ ನಡೆಸಬೇಕೆಂದರೂ ಕನಿಷ್ಟ ವಾರ್ಷಿಕ ಸರಾಸರಿ ರೂ ೧೮,೦೦೦ ಕೋಟಿ ಅನುದಾನದ ಅಗತ್ಯವಿದೆ. ಸದ್ಯದಲ್ಲಿ ಚಾಲ್ತಿಯಲ್ಲಿರುವ ನಗರ ಕರಗಳು, ಉಪಯೋಗ ಕರಗಳು, ಹಾಗೂ ಸಾಮಾರ್ಥ್ಯದಂತೆ ಅಂದಾಜು ಮೂರರಲ್ಲಿ ಎರಡೂ ಭಾಗ ನಿರ್ವಹಣೆ ಹಾಗೂ ಸಂರಕ್ಷಣೆ ವೆಚ್ಚವನ್ನು ನಗರ ಸ್ಥಳೀಯ ಸಂಸ್ಥೆಗಳೇ ಭರಿಸುವ ಅವಶ್ಯಕತೆಯಿದೆ.[೫] ಹೀಗೆ ಪ್ರಸಕ್ತವಾಗಿ ಕಂಡುಬರುವ ಆರ್ಥಿಕ ಅಗತ್ಯಗಳನ್ನು ಭರಿಸುವುದು ಹಾಗೂ ಆಯವ್ಯಯದಲ್ಲಿ ಕಾಣಬರುವ ವ್ಯತ್ಯಾಸಗಳನ್ನು ತುಂಬುವ ಕೆಲಸವಾಗಿದ್ದು, ಇದಕ್ಕೆ ಹೊಂದಿಕೊಂಡಂತೆ ಅಗತ್ಯ ಸೇವೆ ವಿಸ್ತರಿಸಬೇಕಾಗಿದೆ. ಆಗಾಧ ಆರ್ಥಿಕ ಆಯಾಮದ ಸೇವೆಗಳನ್ನು ಸಮರ್ಪಕವಾಗಿ ಒದಗಿಸಲು ಅತೀ ಅಗತ್ಯವಾದ ಆರ್ಥಿಕ ಸವಾಲುಗಳ ಬಗ್ಗೆ ಸಂಬಂಧಪಟ್ಟವರಿಗೆ ಕನಿಷ್ಟ ಅರಿವು ಇದ್ದಂತಿಲ್ಲ, ಇದರ ನೇರ ಪರಿಣಾಮ ನಗರ ಜನತೆಯ ಮೇಲೆ ಅಗಿದ್ದು, ಜನತೆ ನೀರು, ಸ್ವಚ್ಚತೆ, ಆರೋಗ್ಯ, ದಾರಿದೀಪ, ಪ್ರಾಥಮಿಕ ಶಿಕ್ಷಣ ಹಾಗೂ ಇನ್ನಿತರ ಸೌಲಭ್ಯಗಳಿಂದ ವಂಚಿತರಾಗಿದ್ದಾರೆ. ಇದರ ನೇರ ಪರಿಣಾಮದಿಂದ ನಗರದ ಜೀವನಮಟ್ಟ ದುಃಸ್ಥಿತಿಗೆ ಕಾರಣವಾಗಿದೆ.(ಕೋಷ್ಟಕ ೭.೧) ಈ ಒಂದು ದುಷ್ಪರಿಣಾಮವನ್ನು

ಎದುರಿಸಲು ಹಲವಾರು ಕಮಿಟಿಗಳು, ಹಾಗೂ ಕಮಿಷನರ್‌ಗಳು ನಗರಾಭಿವೃದ್ಧಿ ಸಂಸ್ಥೆಗಳನ್ನು ಆರ್ಥಿಕವಾಗಿ ಸಬಲೀಕರಣಗೊಳಿಲು ಅಗತ್ಯವಿರುವ ಕ್ರಮಗಳ ಬಗ್ಗೆ ಯೋಚಿಸಿರುವ ಪರಿಣಾಮವಾಗಿ ೭೪ ಸಂವಿಧಾನ ತಿದ್ದುಪಡಿಯ ಜಾರಿಗೊಳಿಸಲಾಗಿದೆ. ಸ್ವಾತಂತ್ರೋತ್ತರ ಭಾರತದಲ್ಲಿ ನಗರಾಡಳಿತವನ್ನು ಶಕ್ತಗೊಳಿಸಲು ಅಗತ್ಯವಿರುವ ಯೋಜನೆಗಳನ್ನು ಹಾಕಿಕೊಡುವುದು ಒಂದು ಸ್ವಾಗತಾರ್ಹ. ಸ್ವಾತಂತ್ರೋತ್ತರ ಭಾರತದ ನಗರೀಕೃತ ಸರಕಾರಗಳನ್ನು ಸಂವಿಧಾನ ಗುರುತಿಸಿ ನಗರದಲ್ಲಿ ಮೂಲಭೂತ ಬದಲಾವಣೆಗಳನ್ನು ತರುವಲ್ಲಿ ಈ ಕಾನೂನು ಯಶಸ್ವಿಯಾಗಿದೆ. ಮೊದಲಿಗೆ ನಗರ ಸಂಸ್ಥೆಗಳಿಗೆ ಖಾಯಂ ಆಗಿ ಹಾಗೂ ಕ್ರಮಬದ್ದವಾಗಿ ಚುನಾವಣೆಗಳನ್ನು ರಾಜ್ಯ ಚುನಾವಣಾ ಆಯೋಗ ನಡೆಸುವಂತೆ ಮಾಡಿರುವುದು. ಎರಡನೆಯದಾಗಿ ಸಂವಿಧಾನದ ೧೨ ಶೆಡ್ಯೂಲ್‌ನಲ್ಲಿ ನಗರ ಸಂಸ್ಥೆಗಳಿಗೆ ನಿರ್ದಿಷ್ಟ ಪೌರತ್ವದ ಅಂಶಗಳನ್ನು ನೀಡಿರುವುದು. ಸಾಂಪ್ರದಾಯಿಕ ಕಾರ್ಯಗಳ ಜೊತೆಯಲ್ಲಿ ಈಗ ಸದರೀ ಸಂಸ್ಥೆಗಳು ಸ್ಥಳೀಯ ಅಭಿವೃದ್ದಿ ಯೋಜನೆಗಳನ್ನು ಹಮ್ಮಿಕೊಳ್ಳುವುದು ಹಾಗೂ ಸಾಮಾಜಿಕ ನ್ಯಾಯ ಒದಗಿಸುವ ಕೆಲಸ ಕಾರ್ಯಗಳನ್ನು ಹಮ್ಮಿಕೊಳ್ಳುವಲ್ಲಿ ಪ್ರಮುಖ ಪಾತ್ರವಹಿಸಬಹುದಾಗಿದೆ. ಮೂರನೆಯದಾಗಿ ಈ ತಿದ್ದುಪಡಿಯ ಪ್ರಧಾನವಾದ ವೈಶಿಷ್ಟ್ಯಯೆಂದರೆ ಹಣಕಾಸಿನ ವಿಕೇಂದ್ರೀಕರಣ. ಆದ್ದರಿಂದ ಸಂವಿಧಾನ ತಿದ್ದುಪಡಿಯು ಪ್ರಕಾರ ನಗರ ಪ್ರದೇಶದಲ್ಲಿ ೨೪೩-X ತೆರಿಗೆ ಮತ್ತು ನಿಧಿಗಳ ನಿರ್ವಹಣೆ, ತೆರಿಗೆ ಸ್ವೀಕರಿಸಲು, ಡ್ಯೂಟಿ ಸೆಸ್ ಆಫ್ ಆಕರಿಸಲು, ಅನುದಾನವನ್ನು ನೀಡುವುದು. ೨೪೩-Y, ಹಣಕಾಸು ಆಯೋಗ– ೨೪೩-I ಮತ್ತು ೨೪೩-Z ಲೆಕ್ಕ ಪರಿಶೋಧನೆಯಲ್ಲಿ ಜಿಲ್ಲೆಯ ನಗರ ಸ್ಥಳೀಯ ಸಂಸ್ಥೆಗಳಲ್ಲಿ ಸಿದ್ಧಗೊಳಿಸಿದ ಯೋಜನೆಗಳನ್ನು ಕೇಂದ್ರೀಕರಿಸುತ್ತದೆ ಮತ್ತು ಕರಡು ಪೂರ್ಣ ಜಿಲ್ಲೆಯ ಕರಡು ಯೋಜನೆಯನ್ನು ಸಿದ್ಧಗೊಳಿಸುತ್ತದೆ. ಐದು ವರ್ಷಗಳಿಗೊಮ್ಮೆ ವಿತ್ತೀಯ ಕಮಿಷನ್‌ಗಳನ್ನು ರಚಿಸಿ ಮುನಿಸಿಪಲ್ ಸಂಸ್ಥೆಗಳ ವಿತ್ತೀಯ ಆರೋಗ್ಯವನ್ನು ಉತ್ತಮಪಡಿಸಬಹುದಾಗಿದೆ. ನಾಲ್ಕನೆಯದಾಗಿ ಮೂರು ಲಕ್ಷಕ್ಕೂ ಅಧಿಕ ಜನಸಂಖ್ಯೆ ಇರುವ ನಗರಗಳಲ್ಲಿ ವಾರ್ಡ್ ಕಮಿಟಿಗಳನ್ನು ರಚಿಸುವಂತೆ ಮಾಡಿದೆ.[೬] ಈ ಬಗೆಯ ಸಮಿತಿಗಳನ್ನು ಸಣ್ಣ ಪಟ್ಟಣಗಳನ್ನು ರಚಿಸಲು ಅವಕಾಶವಿದೆ. ಕೊನೆಯಲ್ಲಿ ಈ ಪರಿಚ್ಛೆದವು ಜಿಲ್ಲಾ ಸಮಿತಿಗಳನ್ನು ರಚಿಸಿ ಯೋಜನೆಗಳ ಆರಂಭ ಹಾಗೂ ಅಭಿವೃದ್ದಿ ಕಾರ್ಯಕ್ರಮಗಳನ್ನು ಒಟ್ಟುಗೂಡಿಸಲು ಅವಕಾಶ ಕಲ್ಪಿಸಿದೆ. ಈ ಎಲ್ಲಾ ಬೆಳವಣೆಗಳ ಪರಿಣಾಮವಾಗಿ ಸಂವಿಧಾನ ಪ್ರಕಾರ ನಗರ ಸ್ಥಳೀಯ ಸಂಸ್ಥೆಗಳನ್ನು ಅಭಿವೃದ್ಧಿಗೊಳಿಸಲು ಸಂಪನ್ಮೂಲದ ಕ್ರೋಢೀರಣ, ಖರ್ಚು ಮತ್ತು ವೆಚ್ಚಗಳನ್ನು ಒಟ್ಟುಗೂಡಿಸಿಕೊಂಡು ಹಣಕಾಸಿನ ನಿರ್ವಹಣೆಯನ್ನು ಮೂರು ಭಾಗಗಳಾಗಿ ವಿಂಗಡಿಸಿಕೊಂಡು ಅಧ್ಯಯನದ ಉದ್ದೇಶವನ್ನು ಗುರುತಿಸಲಾಗಿದೆ.

**೭.೨. ಹಣಕಾಸಿನ ನಿರ್ವಹಣೆಯ ಮೂರು ಭಾಗಗಳು**

೧. ಆಯವ್ಯಯ

೨. ಲೆಕ್ಕಪತ್ರಗಳ ಪರಿಶೋಧನೆ

೩. ಲೆಕ್ಕಪತ್ರಗಳ ನಿರ್ವಹಣೆ

**೧. ಆಯವ್ಯಯದ ಅರ್ಥ**

ಆಯವ್ಯಯ ಎಂದರೆ ಆಯ ಎಂದರೆ "ಆದಾಯ" ವ್ಯಯ ಎಂದರೆ "ಖರ್ಚು" ಈ ಆಯ ಮತ್ತು ವ್ಯಯಗಳ ವಾರ್ಷಿಕ ಪಟ್ಟಿಯನ್ನು ಬಜೆಟ್ ಆಥವಾ ಆಯವ್ಯಯ ಎನ್ನಲಾಗುವುದು.

ಇದೊಂದು ಸಂಸ್ಥೆಯ ವಾರ್ಷಿಕ ವಿತ್ತ ನಿರೂಪಣೆಯಾಗಿರುತ್ತದೆ. ನಗರ ಸ್ಥಳೀಯ ಸಂಸ್ಥೆಗಳ ಒಂದು ವರ್ಷದ ಸಂಭವನೀಯ ಜಮೆ ಮತ್ತು ಖರ್ಚುಗಳ ಅಂದಾಜನ್ನು ಖಚಿತಪಡಿಸುವ ಪಟ್ಟಿಯೇ ಬಜೆಟ್ ಎನ್ನಲಾಗುವುದು.

ಬಜೆಟ್‌ನ ಅವಶ್ಯಕತೆ ಏನು?

ಅ. ಅನುಮೋದಿಸಲ್ಪಟ್ಟ ಆಯವ್ಯಯ ಇಲ್ಲದಿದ್ದರೆ ಜಮೆ ಮತ್ತು ಖರ್ಚುಗಳಿಗೆ ಯಾವುದೇ ಗೊತ್ತು ಗುರಿ ಇರುವುದಿಲ್ಲ.

ಆ. ಆಯವ್ಯಯದಿಂದ ನಗರ ಸ್ಥಳೀಯ ಸಂಸ್ಥೆಗಳ ಅರ್ಥ ವ್ಯವಸ್ಥೆ ಸಂಪೂರ್ಣ ನಿಯಂತ್ರಣ ಸಾಧ್ಯವಾಗುತ್ತದೆ.

ಇ. ಆಯವ್ಯಯವು ನಗರ ಸ್ಥಳೀಯ ಸಂಸ್ಥೆಗಳ ಹಣಕಾಸು ನಿರ್ವಹಣೆಯಲ್ಲಿ ಶಿಸ್ತನ್ನು ಕಾಪಾಡುತ್ತದೆ.

**೨. ಲೆಕ್ಕಪತ್ರಗಳ ಪರಿಶೋಧನೆ**

ಲೆಕ್ಕ ಪರಿಶೋಧನೆ ಅಥವಾ ಆಡಿಟ್ ಎಬುಂದು ಲ್ಯಾಟಿನ್ ಭಾಷೆಯ ಅಡ್ಯೆರ್ ಎಂಬ ಪದ ಬಳಕೆಯಿಂದ ಬಂದದ್ದು, ಇದರ ಅರ್ಥ ಆಲಿಸು, ಕೇಳು ಎಂದರ್ಥ. ಲೆಕ್ಕ ಪರಿಶೋಧನೆಯು ಆರ್ಥಿಕ ನಿಯಂತ್ರಣದ ಒಂದು ಸಾಧನ. ಇದರ ಉದ್ದೇಶ ಆಯಾ ಸಂಸ್ಥೆಯವರು ನಿರ್ವಹಿಸಿರುವ ಹಣಕಾಸು ವ್ಯವಹಾರವನ್ನು ಹಾಗೂ ಲೆಕ್ಕ ಪತ್ರಗಳನ್ನು ಪರಿಶೀಲಿಸುವುದಾಗಿದೆ.

ಮೂಲ ದಾಖಲೆಗಳಾದ,

೧. ನಗದು ಪುಸ್ತಕ

೨. ಬ್ಯಾಂಕ್ ಲೆಕ್ಕ

೩. ದಾಸ್ತಾನು ಲೆಕ್ಕ

೪. ಖರ್ಚಿನ ವೋಚರ್‌ಗಳು

೫. ಮುಂಗಡಗಳ ಲೆಕ್ಕ

**೩. ಲೆಕ್ಕಪತ್ರಗಳ ನಿರ್ವಹಣೆ**

ನಗರ ಸ್ಥಳೀಯ ಸಂಸ್ಥೆಗಳ ಆದಾಯವು ನಗರಪಾಲಿಕ ಅಧಿನಿಯಮದ ವಿವಿಧ ಪ್ರಕರಣಗಳಲ್ಲಿ ಸೂಚಿಸಿದ ಪ್ರಕಾರ ಸರ್ಕಾರದ ಅನುದಾನಗಳಿಂದ ತೆರಿಗೆಗಳ, ಕರ ಸಂಗ್ರಹಗಳ, ನಗರ ಪ್ರದೇಶಗಳ ಆಸ್ತಿಗಳಿಂದ ಶುಲ್ಕಗಳ ವಸೂಲಾತಿಯಿಂದ ಅಥವಾ ಇನ್ನಿತರ ಆದಾಯದ ಮೂಲಗಳಿಂದ ಕೂಡಿರುತ್ತದೆ.

**ಅ) ಆಸ್ತಿ ತೆರಿಗೆ:** ಖಾಲಿ ನಿವೇಶನಗಳು, ಕಟ್ಟಡಗಳು [ಸರ್ಕಾರೇತರ ಕಟ್ಟಡಗಳು], ವಾಸದ ಮನೆಗಳು [ಸರ್ಕಾರದ ಮತ್ತು ಖಾಸಗಿ ಮನೆಗಳು], ವಾಣಿಜ್ಯ ಸಂಕೀರ್ಣ, ಛತ್ರಗಳು, ಶಾಲೆಗಳು ಮತ್ತು ಆಸ್ಪತ್ರೆಗಳು, ಸ್ವಂತ ಕಟ್ಟಡಗಳ ಬಾಡಿಗೆ, ಸಿಬ್ಬಂದಿ ವಸತಿ ಗೃಹಗಳ ಬಾಡಿಗೆ, ಮಾರುಕಟ್ಟೆ ಶುಲ್ಕ, ಕಸಾಯಿಖಾನೆ ಶುಲ್ಕ, ನೆಲ ಬಾಡಿಗೆ (ರಸ್ತೆ ಬದಿ ವ್ಯಾಪಾರ ಮತ್ತು ಜಾಹಿರಾತು ಫಲಕಗಳ ನೆಲಬಾಡಿಗೆ), ಯಂತ್ರೋಪಕರಣಗಳಿಂದ ಆದಾಯ, ಬಸ್ ನಿಲ್ದಾಣ, ವಾಹನ ನಿಲ್ದಾಣ ಶುಲ್ಕ, ಕಸ ಗೊಬ್ಬರ ಮಾರಾಟದಿಂದ ಬಂದ ಆದಾಯ ಮತ್ತು ಹೂಡಿಕೆಯಿಂದ ಬಂದ ಆದಾಯ.

೧. ಉಪಕರ (ಸೆಸ್)

ಈ ತೆರಿಗೆಯ ಮೇಲೆ ಉಪಕರ(ಸೆಸ್)ಗಳಾದ ಆರೋಗ್ಯ (ತೆರಿಗೆಯ ಮೇಲೆ ೧೫%), ಗ್ರಂಥಾಲಯ (ತೆರಿಗೆಯ ಮೇಲೆ ೬%) ಮತ್ತು ಬಿಕ್ಷುಕ ಕರ (ತೆರಿಗೆಯ ಮೇಲೆ ೩%) ಎಲ್ಲಾ ಸೇರಿ ಒಟ್ಟು ೨೪%. ಈ ಹಣವನ್ನು ಸಂಗ್ರಹಿಸಿ, ಬಿಕ್ಷುಕರ ಕರ ಹೊರತುಪಡಿಸಿ, ಮಿಕ್ಕ ಕರಗಳಲ್ಲಿ ಶೇ.೧೦ರಷ್ಟು ಸಂಗ್ರಹಣಾ ಸೇವಾಶುಲ್ಕ ಮುರಿದುಕೊಂಡು, ಉಳಿದ ಹಣವನ್ನು ಆಯಾ ಇಲಾಖೆಗಳಿಗೆ ವರ್ಗಾಯಿಸಬೇಕಾಗುತ್ತದೆ ಎಂದು ತಿಳಿಸಿರುತ್ತಾರೆ.

೧. ಅಧಿಕಾರ:

ಅಧಿಕಾರದಿಂದ ಬರುವಂತಹ ಶುಲ್ಕಗಳಾದ ಅಪಾಯಕಾರಿ ವ್ಯಾಪಾರ ಶುಲ್ಕ (ಸೆಕ್ಷನ್ ೨೫೬), ಬೆಟರ್‌ಮೆಂಟ್ ಶುಲ್ಕ (ಸೆಕ್ಷನ್ ೧೬೦) (ಇದನ್ನು ನಗರ ಯೋಜನಾ ಪ್ರಾಧಿಕಾರ ವಸೂಲಿ ಮಾಡಿದ್ದಲ್ಲಿ ಸ್ಥಳೀಯ ಸಂಸ್ಥೆಗಳು ಮಾಡುವ ಹಾಗಿಲ್ಲ), ಅಭಿವೃದ್ಧಿ ಶುಲ್ಕ (ಸೆಕ್ಷನ್ ೧೭೦), ಆಸ್ತಿ ವರ್ಗಾವಣೆ (ಮ್ಯುಟೇಶನ್) ಶುಲ್ಕ, ಕಟ್ಟಡನಿರ್ಮಾಣ ಶುಲ್ಕ ಮತ್ತು ನೋಟೀಸ್ ಶುಲ್ಕ ಮತ್ತು ದಂಡ. ನಗರ ಸ್ಥಳೀಯ ಸಂಸ್ಥೆಗಳಿಗೆ ಸಂವಿಧಾನ ನೀಡಿರುವ ಸಂಪನ್ಮೂಲದ ಕ್ರೋಢೀಕರಣದ ಹಿನ್ನೆಲೆಯಾಗಿ ಹೊಸಪೇಟೆ ನಗರಸಭೆ ಮತ್ತು ಕೂಡ್ಲಿಗಿ ಪಟ್ಟಣ ಪಂಚಾಯಿತಿಗಳು ಸಾಧಿಸಿಕೊಂಡಿರುವ ಅಭಿವೃದ್ಧಿಯನ್ನು ಈ ಕೆಳಗಿನಂತೆ ತೆರಿಗೆ ಸಂಗ್ರಹಣೆಯ ಹಿನ್ನೆಲೆಯಲ್ಲಿ ಚರ್ಚಿಸಲಾಗಿದೆ.

**ಆ) ಜಾಹಿರಾತು ತೆರಿಗೆ**

**ಇ) ನೀರಿನ ದರ** [ಮೀಟರ್ ಅಳವಡಿಸುವುದರಿಂದ ಸಂಪನ್ಮೂಲ ಹೆಚ್ಚಿಸಬಹುದು ಮತ್ತು ಇರತಕ್ಕ ನೀರು ಪೋಲಾಗದೆ ಎಲ್ಲರಿಗೂ ಸಮಾನವಾಗಿ ಹಂಚಬಹುದು].[೭]

## ೭.೩. ತೆರಿಗೆ ಸಂಗ್ರಹಣೆ

ಕರ್ನಾಟಕ ನಗರಪಾಲಿಕಾ ಕಾಯ್ದೆ ೧೯೬೪ರಲ್ಲಿ ಹೇಳಿದಂತೆ ರಾಜ್ಯದ ಪ್ರತಿಯೊಂದು ನಗರ ಸ್ಥಳೀಯ ಸಂಸ್ಥೆಗಳು ಸ್ವಂತ ನಿಧಿಯನ್ನು ಹೊಂದಿವೆ. ಜನರಿಗೆ ಮೂಲಭೂತ ಸೌಕರ್ಯಗಳನ್ನು ನೀಡುವುದು ಈ ಸಂಸ್ಥೆಗಳ ಮೊದಲ ಕರ್ತವ್ಯ. ಇವುಗಳ ಜವಾಬ್ದಾರಿಯಲ್ಲಿ ಆದಾಯ ಮೂಲಗಳ ಅನ್ವೇಷಣೆ ಹಾಗೂ ಸಾಮಾಜಿಕ ನ್ಯಾಯ ಒದಗಿಸುವ ಹಿನ್ನೆಲೆಯಲ್ಲಿ ಹಣಕಾಸು ಹಂಚಿಕೆಯನ್ನು ಯೋಜಿಸುವುದೂ ಸೇರಿರುತ್ತದೆ. ಯಾವುದೇ ಒಂದು ಸಂಸ್ಥೆ ಸಮರ್ಪಕವಾಗಿ ಕೆಲಸ ಮಾಡಬೇಕಾದರೆ, ಆ ಸಂಸ್ಥೆಯ ಹಣಕಾಸು ವ್ಯವಹಾರ ಸುವ್ಯವಸ್ಥಿತವಾಗಿರಬೇಕು, ಪಾರದರ್ಶಕವಾಗಿರಬೇಕು ಇಲ್ಲದಿದ್ದರೆ ಅದು ಜನರ ನಂಬಿಕೆ ಕಳೆದುಕೊಳ್ಳುತ್ತದೆ ಮಾತ್ರವಲ್ಲ. ಇಡೀ ವ್ಯವಸ್ಥೆಯೇ ಕುಸಿದು ಬೀಳುವ ಅಪಾಯವೂ ಇರುತ್ತದೆ. ಅಂದರೆ ಯಾವುದೇ ಒಂದು ಸ್ಥಳೀಯ ಸಂಸ್ಥೆಗಳಲ್ಲಿ ಆರ್ಥಿಕ ಯೋಜನೆಯನ್ನು ರೂಪಿಸುವ ಸಂದರ್ಭದಲ್ಲಿ ಎರಡು ಮುಖ್ಯ ಅಂಶಗಳನ್ನು ಗಮನದಲ್ಲಿರಿಸಿಕೊಂಡಿರಬೇಕಾಗುತ್ತದೆ. ಅಂದರೆ ಯಾವುದೇ ನಗರದಲ್ಲಿ ಪ್ರತಿಯೊಂದು ಘಟಕದ ಮುಖ್ಯ ಅಗತ್ಯಗಳೇನು ಎಂಬುದನ್ನು ಗಮನಿಸದೇ, ಎಲ್ಲಾ ಭಾಗಗಳಿಗೂ ಏಕರೂಪವಾಗಿ ಯೋಜನೆಗಳನ್ನು ರೂಪಿಸಿದರೆ ಅದರಿಂದ ಜನರಿಗೆ ಪ್ರಯೋಜನವಾಗುತ್ತದೆಯೇ, ಅದರ ಬದಲಿಗೆ ಆ ಪ್ರದೇಶವನ್ನು ಕಾಡುತ್ತಿರುವ ತೀವ್ರವಾದ ಸಮಸ್ಯೆಗಳೇನು, ಅಲ್ಲಿನ ಜನರ ಪ್ರಮುಖ ಬೇಡಿಕೆಗಳೇನು, ಅಲ್ಲಿ ಕೈಗೊಳ್ಳಬೇಕಾದ ಆದ್ಯತೆಯ ಕೆಲಸಗಳೇನು ಎಂಬುದನ್ನು ಮೊದಲಿಗೆ ಗುರುತಿಸಿಕೊಂಡರೆ ಅದಕ್ಕೆ ತಕ್ಕಂತೆ ಸರಿಯಾಗಿ, ಸ್ಪಷ್ಟವಾಗಿ

ಯೋಜನೆಗಳನ್ನು ರೂಪಿಸುವುದು ಸುಲಭವಾಗುತ್ತದೆ. ಈ ರೀತಿ ಯೋಜನೆ ತಯಾರಿಸುವಾಗ ಕರ್ನಾಟಕ ಪೌರಸಭೆ ಕಾಯ್ದೆ ೧೯೬೪ರ ಸೆಕ್ಷನ್ ೮೭, ೮೮ ಮತ್ತು ೯೧ರಲ್ಲಿ ನೀಡಿರತಕ್ಕ ಅಂಶಗಳನ್ನು ಗಮನಿಸಿ ಆದ್ಯತೆಗಳನ್ನು ಗುರುತಿಸಕ್ಕದ್ದು. ಮತ್ತೊಂದು ನಗರದ ಅಗತ್ಯಗಳನ್ನು ಗುರುತಿಸಿದ ಬಳಿಕ ಇದಕ್ಕೆ ಎಷ್ಟು ಹಣ ಬೇಕಾಗಬಹುದೆಂಬುದನ್ನು ಅಂದಾಜಿಸುವುದು. ಬಳಿಕ ಈ ಹಣವನ್ನು ಹೊಂದಿಸಲು ಹಣಕಾಸು ಮೂಲಗಳನ್ನು ಗುರುತಿಸುವುದು. ಜನರಿಗೆ ಮೂಲಭೂತ ಸೌಕರ್ಯಗಳು ಸೇರಿದಂತೆ ಬೇರೆ ಬೇರೆ ರೀತಿಯ ಸೌಕರ್ಯಗಳನ್ನು ನೀಡುವ ಹೊಣೆಯನ್ನು ಹೊತ್ತುಕೊಂಡಿರುತ್ತದೆ. ಇದಕ್ಕೆ ಸಂಬಂಧಿಸಿದಂತೆ ಸಾಕಷ್ಟು ಹಣವನ್ನು ವ್ಯಯ ಮಾಡಬೇಕಾಗುತ್ತದೆ. ಹೀಗೆ ವ್ಯಯ ಮಾಡುವುದಕ್ಕೆ ಈ ಸಂಸ್ಥೆಗಳಿಗೆ ಹಣ ಎಲ್ಲಿಂದ ಬರಬೇಕು? ಎಂಬ ಪ್ರಶ್ನೆಯನ್ನು ಇಟ್ಟುಕೊಂಡು ನೋಡಿದಾಗ ಸ್ಥಳೀಯವಾಗಿ ತೆರಿಗೆ ಸಂಗ್ರಹವು ಒಂದು ಮೂಲವಾಗಿದ್ದು, ಇದರಲ್ಲಿ ನಗರದ ಜನತೆ ಭಾಗವಹಿಸುವಂತೆ ಮಾಡಿ ತೆರಿಗೆ ರೂಪದಲ್ಲಿ ಸಂಪನ್ಮೂಲವನ್ನು ಸಂಗ್ರಹಿಸಲಾಗುತ್ತದೆ. ಸಂವಿಧಾನ ೭೪ನೆಯ ತಿದ್ದುಪಡಿ ಮುಖಾಂತರ ವಿಕೇಂದ್ರೀಕರಣ ವ್ಯವಸ್ಥೆಯಲ್ಲಿ ತೆರಿಗೆಯನ್ನು ನಿರ್ಧರಿಸಿ ವಸೂಲಿ ಮಾಡಿ, ಖರ್ಚು ಮಾಡುವ ಅಧಿಕಾರ ನಗರ ಸ್ಥಳೀಯ ಸಂಸ್ಥೆಗಳಿಗೆ ಇದೆ. ನಗರ ಪ್ರದೇಶದ ಚುನಾಯಿತ ಸದಸ್ಯರು ನಗರ ಜನ ಸಾಮಾನ್ಯರಿಗೆ ವಾರ್ಡಿನ ಮೂಲಭೂತ ಸೌಕರ್ಯಗಳಾದ ಶುದ್ಧ ಕುಡಿಯುವ ನೀರು, ರಸ್ತೆ, ಬೀದಿ ದೀಪ, ನೈರ್ಮಲ್ಯ, ಚರಂಡಿ ವ್ಯವಸ್ಥೆ ಮತ್ತು ಸಾಮಾಜಿಕ ಕಾರ್ಯಗಳನ್ನು ತಲುಪಿಸುವ ಕೆಲಸಗಳನ್ನು ಮಾಡಲು ಉತ್ಸುಕರಾಗಿರುತ್ತಾರೆ. ಇತಂಹ ಸಂದರ್ಭಗಳಲ್ಲಿ ಅಗತ್ಯವಾಗಿ ಬೇಕಾಗಿರುವುದು ಆರ್ಥಿಕ ಸಂಪನ್ಮೂಲವಾಗಿದೆ.

ಇಂದಿನ ದಿನಮಾನಗಳಲ್ಲಿ ರಾಜ್ಯ ಸರ್ಕಾರವು ಶಾಸನ ಬದ್ಧ ಅನುದಾನವು ಜನಸಂಖ್ಯೆ ಆಧಾರದ ಮೇಲೆ ಮತ್ತು ಕೇಂದ್ರ ಸರ್ಕಾರದಿಂದ ೧೩ನೆಯಾ ಹಣಕಾಸನ್ನು ಜನಸಂಖ್ಯೆ ಮೇಲೆ ನೀಡುತ್ತದೆ. ಈ ಮೊತ್ತವು ಸಾಕಾಗುವುದಿಲ್ಲ ಎಂಬ ಅಂಕಿ-ಅಂಶಗಳಿಂದ ತಿಳಿದು ಬಂದಿದೆ. ಅಂದರೆ, ಹೆಚ್ಚಿನ ಸಂಖ್ಯೆಯ ನಗರ ಸ್ಥಳೀಯ ಸಂಸ್ಥೆಗಳು ಸರ್ಕಾರ ನೀಡುವ ಅನುದಾನದ ಮೇಲೆ ಅವಲಂಬಿತವಾಗಿವೆ. ಹಲವು ಕಾರಣಗಳಿಂದ ತೆರಿಗೆಯು ಕ್ರೋಢೀಕರಣವಾಗದೆ ಸಿಬ್ಬಂದಿಗಳಿಗೆ ವೇತನ ಕೊಡದಾಗದ ಸ್ಥಿತಿಯಲ್ಲಿವೆ. ಹಾಗೂ ರಾಜ್ಯ ಸರ್ಕಾರ ಜಾರಿಗೊಳಿಸಿದ ನಗರ ಪ್ರದೇಶಗಳಲ್ಲಿ ಕಾಯ್ದೆಗಳ ಪ್ರಕಾರ, ನಗರ ಸ್ಥಳೀಯ ಸಂಸ್ಥೆಗಳು ಈ ಕೆಳಗಿನ ತೆರಿಗೆಗಳನ್ನು ವಿಧಿಸಲು ಅಧಿಕಾರ ಹೊಂದಿರುತ್ತದೆ. ಬದಲಾಗಿ ನಗರ ಸ್ಥಳೀಯ ಸಂಸ್ಥೆಗಳಿಗೆ ಬರಬೇಕಾಗಿರುವ ಇನ್ನೂ ಅನೇಕ ಆದಾಯದ ಮೂಲಗಳಿಂದ ಸರಿಯಾದ ಸಂಪನ್ಮೂಲ ಕ್ರೋಢೀಕರಿಸಲು ಸಾಧ್ಯವಾಗಿರುವುದಿಲ್ಲ. ಜಿಲ್ಲೆಯ ಎರಡು ನಗರ ಸ್ಥಳೀಯ ಸಂಸ್ಥೆಗಳಲ್ಲಿ ಶೇ.೬೦ರಷ್ಟು ತೆರಿಗೆ ವಸೂಲಿಯಾಗುತ್ತಿದ್ದು,[೮] ತೆರಿಗೆ ವಸೂಲಿ ಮಾಡುವುದು ಒಂದು ದೊಡ್ಡ ಸಂಗತಿಯನ್ನಾಗಿ ಕಾಣುತ್ತೇವೆ. ನಗರ ಪ್ರದೇಶಗಳಲ್ಲಿ ತೆರಿಗೆ ವಸೂಲಿ ಮೊತ್ತವು, ತೆರಿಗೆ ವಸೂಲಿ ಖರ್ಚಿಗೆ ಸಮನಾಗಿರುತ್ತದೆ. ನಿಗದಿತ ಸಮಯದಲ್ಲಿ ಕೇಬಲ್ ಬಿಲ್ಲು, ಪೋನ್ ಬಿಲ್ಲು ಮತ್ತು ವಿದ್ಯುತ್ ಬಿಲ್ಲು ಕಟ್ಟುವ ನಗರ ಜನ ಸಾಮಾನ್ಯರಿಗೆ ನಗರಸಭೆ ಮತ್ತು ಪಟ್ಟಣ ಪಂಚಾಯಿತಿಯಿಂದ ಬರುವ ಕುಡಿಯುವ ನೀರಿನ ಸೌಲಭ್ಯ, ರಸ್ತೆ, ಬೀದಿ ದೀಪ, ಚರಂಡಿ ವ್ಯವಸ್ಥೆ ಅಗತ್ಯ ಸೇವೆಗಳನ್ನು ನೀಡುವ ನಗರಸ್ಥಳೀಯ ಸಂಸ್ಥೆಗಳಿಗೆ ತೆರಿಗೆ ಪಾವತಿಯಲ್ಲಿ ನಿರ್ಲಕ್ಷ್ಯತೆಯನ್ನು ತಾಳುತ್ತಾರೆ. ಹಾಗಾಗಿ, ಈ ತೆರಿಗೆಗಳು ಸರ್ಕಾರ ಸೂಚಿಸಿರುವ ಗರಿಷ್ಠ ಮತ್ತು ಕನಿಷ್ಟ ಮಿತಿಯ ಒಳಗೆ ಇರುವಂತೆ ನೋಡಿಕೊಳ್ಳುವ ಅಗತ್ಯವಿದೆ.

ಹೀಗೆ ತೆರಿಗೆ ಸಂಗ್ರಹದಿಂದ ನಗರ ಜನತೆಯು ಅಭಿವೃದ್ಧಿಯಲ್ಲಿ ಭಾಗವಹಿಸಿದಂತಾಗುತ್ತದೆ. ತೆರಿಗೆ ಕ್ರೋಢೀಕರಣದಿಂದ ಸ್ಥಳೀಯ ಸಂಪನ್ಮೂಲ ಆದಾಯದ ಭಾಗವಾಗಿದೆ. ಆದ್ದರಿಂದ ತೆರಿಗೆ ತಪ್ಪದೇ ಕಟ್ಟುವುದು ಅಭಿವೃದ್ಧಿಯ ಮಾನದಂಡವೆಂದು ಹೇಳಲಾಗಿದೆ. ಅಂತೆಯೇ ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡ ನಗರ ಸ್ಥಳೀಯ ಸಂಸ್ಥೆಗಳಲ್ಲಿ ತೆರಿಗೆ ಸಂಗ್ರಹದ ಮೂಲಕ ವಾರ್ಡಿನ ಜನರು ಭಾಗವಹಿಸುವಿಕೆ ಮತ್ತು ಅರಿವಿನ ಮಟ್ಟವನ್ನು ತಿಳಿಯುತ್ತಾ ಸ್ಥಳೀಯ ಸಂಸ್ಥೆಗಳ ಅಭಿವೃದ್ಧಿಯನ್ನು ನೋಡಲಾಗಿದೆ. ನಗರ ಸ್ಥಳೀಯ ಸಂಸ್ಥೆಗಳಲ್ಲಿ ಹೇಗೆ ತೆರಿಗೆ ಸಂಗ್ರಹವಾಗಿದೆ? ಕಾಲಾನುಕಾಲಕ್ಕೆ ತೆರಿಗೆ ಸಂಗ್ರವಾಗಿದೆಯಾ? ವಾರ್ಡಿನ ಎಲ್ಲಾ ಜನರು ತೆರಿಗೆ ಕಟ್ಟುತ್ತಾರೆಯೇ? ಅಭಿವೃದ್ಧಿಗೆ ತೆರಿಗೆ ಬಳಕೆಯಾಗುತ್ತದೆಯಾ? ತೆರಿಗೆಯ ಬಗ್ಗೆ ಚುನಾಯಿತ ಸದಸ್ಯರ ಮತ್ತು ವಾರ್ಡಿನ ಜನರ ಹೇಳಿಕೆಗಳೇನು? ಒಟ್ಟಾರೆಯಾಗಿ ಸ್ಥಳೀಯ ಸಂಸ್ಥೆಗಳಲ್ಲಿ ತೆರಿಗೆ ಸಂಗ್ರಹಣೆಯು ಅಭಿವೃದ್ಧಿಯ ಒಂದು ಸಾಧನವೆಂದು ತಿಳಿದು ಯೋಜನೆಗಳ ಮೂಲಕ ಎರಡು ನಗರ ಸ್ಥಳೀಯ ಸಂಸ್ಥೆಗಳ ಅಭಿವೃದ್ಧಿಯನ್ನು ಅವಲೋಕಿಸಲಾಗಿದೆ.

**ಕೋಷ್ಟಕ: ೭.೨**

**ನಗರ ಸ್ಥಳೀಯ ಸಂಸ್ಥೆಗಳವಾರು ಕಳೆದ ಐದು ವರ್ಷಗಳಲ್ಲಿ ತೆರಿಗೆ ಸಂಗ್ರಹದ ವಿವರ**

**2009–2014**

| ಕ್ರ.ಸಂ. | ವರ್ಷಗಳು | ಹೊಸಪೇಟೆ ನಗರಸಭೆ | | | ಕೂಡ್ಲಿಗಿ ಪಟ್ಟಣ ಪಂಚಾಯಿತಿ | | |
|---|---|---|---|---|---|---|---|
| | | ನೀರು | ಆಸ್ತಿ | ಮಳಿಗೆ ಬಾಡಿಗೆ | ನೀರು (ಲಕ್ಷಗಳಲ್ಲಿ) | ಆಸ್ತಿ (ಲಕ್ಷಗಳಲ್ಲಿ) | ಮಳಿಗೆ ಬಾಡಿಗೆ (ಲಕ್ಷಗಳಲ್ಲಿ) |
| ೧ | ೨೦೦೯-೧೦ | ೫೯,೮೪,೦೦೦ | ೨,೪೬,೦೦೦೦೦ | ೨೮,೪೫,೦೦೦ | ೦೯.೬೮ | ೬.೧೩ | ೦.೯೮ |
| ೨ | ೨೦೧೦-೧೧ | ೬೬,೧೪,೦೦೦ | ೨,೦೯,೦೦೦೦೦ | ೧೪,೯೬,೦೦೦ | ೧೧.೯೬ | ೭.೮೭ | ೧.೮೭ |
| ೩ | ೨೦೧೧-೧೨ | ೫೭,೬೨,೦೦೦ | ೩,೦೧,೭೨೦೦೦ | ೨೧,೦೯,೦೦೦ | ೧೨.೦೦ | ೮.೯೮ | ೨.೧೧ |
| ೪ | ೨೦೧೨-೧೩ | ೮೮,೯೭,೦೦೦ | ೨,೫೮,೦೦೦೦೦ | ೧೭,೫೫,೦೦೦ | ೧೨.೧೩ | ೯.೧೨ | ೨.೪೫ |
| ೫ | ೨೦೧೩-೧೪ | ೧,೦೪,೦೦,೦೦೦ | ೨,೭೭,೦೦೦೦೦ | ೮,೭೩,೦೦೦ | ೧೪.೮೭ | ೯.೦೦ | ೨.೬೪ |

**(ಮೂಲ: ಪೌರಾಯುಕ್ತರು, ಹೊಸಪೇಟೆ ನಗರಸಭೆ, ಡಿಸೆಂಬರ್-೨೦೧೪ ಮತ್ತು ಮುಖ್ಯಾಧಿಕಾರಿಗಳು, ಕೂಡ್ಲಿಗಿ ಪಟ್ಟಣ ಪಂಚಾಯಿತಿ, ಕೂಡ್ಲಿಗಿ ಮಾರ್ಚ್ ೫, ೨೦೧೪)**

ಮೇಲಿನ ಕೊಷ್ಠಕದಲ್ಲಿ ತೋರಿಸಿರುವಂತೆ ಸಾಪೇಕ್ಷವಾಗಿ ಅಭಿವೃದ್ಧಿ ಹೊಂದಿದ ಹೊಸಪೇಟೆ ನಗರಸಭೆ ಮತ್ತು ತೀರಾ ಹಿಂದುಳಿದಿರುವ ಕೂಡ್ಲಿಗಿ ಪಟ್ಟಣ ಪಂಚಾಯಿತಿಯಲ್ಲಿನ ತೆರಿಗೆ ಸಂಗ್ರಹಣೆಯಿಂದ ನಗರಸಭೆ ಮತ್ತು ಪಟ್ಟಣ ಪಂಚಾಯಿತಿಯ ಮೂಲಕ ಚುನಾಯಿತ ಸದಸ್ಯರ ಕೆಲಸ ಕಾರ್ಯಗಳನ್ನು ನೋಡಲಾಗಿದೆ. ಎರಡು ನಗರ ಸ್ಥಳೀಯ ಸಂಸ್ಥೆಗಳಲ್ಲಿ ತೆರಿಗೆ ಸಂಗ್ರಹವನ್ನು ನೋಡಿದಾಗ ಅಭಿವೃದ್ಧಿ ಹೊಂದಿದ ನಗರಸಭೆಯ ತೆರಿಗೆ ಸಂಗ್ರಹಗಳಿಂದ ತೀರಾ ಹಿಂದುಳಿದ ಪಟ್ಟಣ ಪಂಚಾಯತಿಯಲ್ಲಿನ ತೆರಿಗೆ ಸಂಗ್ರಹವು ಉತ್ತಮವಾಗಿಲ್ಲದಿರುವುದು ಕಂಡುಬಂದಿದೆ. ಅಭಿವೃದ್ಧಿ ಹೊಂದಿದ ಹೊಸಪೇಟೆ

ನಗರಸಭೆಯಲ್ಲಿನ ತೆರಿಗೆ ಸಂಗ್ರಹವು ಉತ್ತಮವಾಗಿರಲು ನೀರಾವರಿ ಪ್ರದೇಶದಿಂದ ಕೂಡಿದ್ದು ಆರ್ಥಿಕವಾಗಿ ಉತ್ತಮವಾಗಿದ್ದು, ಹೆಚ್ಚಿನ ಮಟ್ಟದಲ್ಲಿ ಅಕ್ಷರಸ್ಥರಾಗಿದ್ದಾರೆ. ಹಾಗೆಯೇ ಸಮರ್ಪಕ ಮೂಲಭೂತ ಸೌಲಭ್ಯಗಳ ಹಂಚಿಕೆಯಿಂದ ಸರಿಯಾದ ಸಮಯಕ್ಕೆ ತೆರಿಗೆಯನ್ನು ಪಾವತಿಸುತ್ತಾರೆ. ಇಲ್ಲಿನ ಹೆಚ್ಚಿನ ಜನರು ಚುನಾಯಿತ ಪ್ರತಿನಿಧಿಗಳೊಂದಿಗೆ ಸಂಪರ್ಕ ಹೊಂದಿ ಅವರನ್ನು ಪ್ರಶ್ನಿಸಿ ಸಮಸ್ಯೆಗಳ ಹಿಂದೆ ಹೋಗಿ ಪರಿಹಾರ ಕೇಳಿಕೊಳ್ಳುತ್ತಾ ಸ್ಥಳೀಯ ರಾಜಕೀಯದ ಬಗ್ಗೆ ಅರಿವು ಮತ್ತು ಭಾಗವಹಿಸುವುದು ತೀರಾ ಹಿಂದುಳಿದ ಪಟ್ಟಣ ಪಂಚಾಯತಿಗಿಂತ ಉತ್ತಮವಾಗಿದೆ. ಈ ಸ್ಥಳೀಯ ಪ್ರದೇಶದ ವ್ಯಾಪ್ತಿಯಲ್ಲಿ ೨-೩ ಕೈಗಾರಿಕೆಗಳು, ಹೆಚ್ಚು ನೀರಾವರಿ ಭೂಮಿ, ಹೆಚ್ಚು-ಹೆಚ್ಚು ಸಣ್ಣ ಮಾರುಕಟ್ಟೆ ಹೊಂದಿರುವುದರಿಂದ ಯಾವುದೇ ಉದ್ಯೋಗಕ್ಕೆ ಸಮಸ್ಯೆಯಿಲ್ಲ ಎಂದು ಹೇಳಬಹುದು. ಇವುಗಳನ್ನು ನೋಡಿದಾಗ ಕಾಲ ಕಾಲಕ್ಕೆ ತೆರಿಗೆ ಸಂಗ್ರಹವಾಗುತ್ತದೆ ಎಂದು ತಿಳಿಯಲಾಗಿದೆ. ಅದರಂತೆ ತೀರಾ ಹಿಂದುಳಿದ ಪ್ರದೇಶಗಳನ್ನು ಗಮನಿಸಿದಾಗ ಒಣಭೂಮಿ ಪ್ರದೇಶವನ್ನು ಜಿಲ್ಲೆಯಲ್ಲಿಯೇ ಹೆಚ್ಚಾಗಿ ಹೊಂದಿದ್ದು, ಕೃಷಿ ಕೂಲಿಯನ್ನೆ ಹೆಚ್ಚು ಅವಲಂಬಿಸಿ ಆರ್ಥಿಕವಾಗಿ ದುರ್ಬಲರಾಗಿದ್ದು, ಉದ್ಯೋಗ ಇಲ್ಲದೇ ಸೋಮಾರಿಗಳಾಗಿದ್ದಾರೆ. ಉಳಿದ ಮೂಲಭೂತ ಸೌಲಭ್ಯಗಳಾದ ರಸ್ತೆ, ಶುದ್ಧ ಕುಡಿಯುವ ನೀರು, ಚರಂಡಿ ವ್ಯವಸ್ಥೆ, ಬೀದಿ ದೀಪ, ಆರೋಗ್ಯದ ರಕ್ಷಣೆ ಮತ್ತು ಶಿಕ್ಷಣದ ಅವಕಾಶಗಳು ಇದ್ದರೂ ಅವುಗಳು ಸಮರ್ಪಕವಾಗಿ ಬಳಕೆಯಾಗದೆ ಅಧಿಕ ತೆರಿಗೆ ಸಂಗ್ರಹದಿಂದ ವಂಚಿತಗೊಂಡು ಅಭಿವೃದ್ಧಿ ಆಗದೇ ಹಿಂದುಳಿದಿದೆ ಎಂದು ಹೇಳಬಹುದು. ಅಧ್ಯಯನಕ್ಕಾಗಿ ಆಯ್ಕೆ ಮಾಡಿಕೊಂಡ ಎರಡು ನಗರ ಸ್ಥಳೀಯ ಸಂಸ್ಥೆಗಳಲ್ಲಿ ತೀರಾ ಹಿಂದುಳಿದ ಕೂಡ್ಲಿಗಿ ಪಟ್ಟಣ ಪಂಚಾಯತಿಯ ಪಟ್ಟಣ ಕೇಂದ್ರದಿಂದ ದೂರವಿರುವ ವಾರ್ಡುಗಳನ್ನು ಮತ್ತು ಮೂಲಭೂತ ಸೌಲಭ್ಯದಿಂದ ವಂಚಿತಗೊಂಡವರು ತೆರಿಗೆಯನ್ನು ಪಾವತಿಸುವುದಿಲ್ಲ ಎಂಬ ಹೇಳಿಕೆಯ ಹಿನ್ನೆಲೆಯಲ್ಲಿ ಅವರು ಅಭಿವೃದ್ಧಿಯಲ್ಲಿ ಭಾಗವಹಿಸದಿರುವುದು ಕಂಡುಬಂದಿದೆ. ಅಂದರೆ ಇಂತಹ ಅಭಿಪ್ರಾಯಗಳು ಸಾಪೇಕ್ಷವಾಗಿ ಅಭಿವೃದ್ಧಿ ಹೊಂದಿದ ನಗರಸಭೆ ಜನತೆಗಿಂತ ತೀರಾ ಹಿಂದುಳಿದ ಪಟ್ಟಣ ಪಂಚಾಯಿತಿಯ ವಾರ್ಡಿನ ಜನರು ನಿರಾಶಾದಾಯಕ ಅಂಶವನ್ನು ತಿಳಿಸಿರುತ್ತಾರೆ. ಅಭಿವೃದ್ಧಿ ಹೊಂದಿದ ನಗರಸಭೆಯಲ್ಲಿ ಸಿಬ್ಬಂದಿ ಮತ್ತು ಚುನಾಯಿತ ಪ್ರತಿನಿಧಿಗಳ ಪಾತ್ರ ಹೆಚ್ಚಾಗಿರುವುದರಿಂದ ನಗರವಾಸಿಗಳ ಜೀವನ ಸಾಪೇಕ್ಷವಾಗಿ ಉತ್ತಮವಾಗಿರುವುದು. ಅದಕ್ಕೆ ವಿರುದ್ಧವಾಗಿ ತೀರಾ ಹಿಂದುಳಿದ ಪಟ್ಟಣ ಪಂಚಾಯತಿಯಲ್ಲಿ ಅಧಿಕಾರಿಗಳು ಮತ್ತು ಚುನಾಯಿತ ಸದಸ್ಯರೊಂದಿಗೆ ಉತ್ತಮ ಸಂಬಂಧವಿರದೇ ಅಭಿವೃದ್ಧಿಯಲ್ಲಿ ಹಿಂದುಳಿದಿದೆ ಎಂದು ಹೇಳಲಾಗಿದೆ. ಅಲ್ಲದೇ, ಈ ರೀತಿಯಾದ ಬೆಳವಣಿಗೆಯನ್ನು ನಗರ ಸ್ಥಳೀಯ ಸಂಸ್ಥೆಗಳ ಅಭಿವೃದ್ಧಿಗೆ ಪೂರಕವಾಗುವ ಪ್ರಮುಖ ಅಂಶಗಳೊಂದಾದ ಅನುದಾನದ ಹಂಚಿಕೆ ಮೇಲೆ ಅಷ್ಟೇ ಪರಿಣಾಮ ಬೀರುತ್ತದೆ. ಈ ಹಿನ್ನೆಲೆಯಲ್ಲಿ ಕೇಂದ್ರ, ರಾಜ್ಯ, ಸಂಘ ಸಂಸ್ಥೇಗಳು, ಬಹು ರಾಷ್ಟ್ರೀಯ ಸಂಸ್ಥೆಗಳು, ಅಂತರ್ ರಾಷ್ಟ್ರೀಯ ಸಂಸ್ಥೆಗಳು, ಏಷ್ಯಾನ್ ಅಭಿವೃದ್ಧಿ ಬ್ಯಾಂಕ್ ಹಾಗೂ ವಿಶ್ವ ಬ್ಯಾಂಕ್ ನೀಡುವಂತಹ ಹಣದ ಹಂಚಿಕೆಯನ್ನು ಈ ಕೆಳಗೆ ಚರ್ಚಿಸಲಾಗಿದೆ.

**ಕೊಷ್ಟಕ: ೭.೩. ಕೇಂದ್ರ ಮತ್ತು ರಾಜ್ಯ ಸರ್ಕಾರದ ಅನುದಾನ ವಿವರ**

**ಭಾರತದಲ್ಲಿ ನಗರ ಪ್ರದೇಶದ ವಿವಿಧ ಮೂಲಭೂತ ಸೌಲಭ್ಯಗಳಿಗೆ ಬರುವ ಹಣಕಾಸಿನ ಮೂಲಗಳು**

| **ಮೂಲ** | **ಪ್ರತಿ ವಾರ್ಷಿಕ ಅನುದಾನಗಳು** | |
|---|---|---|
| | **ರೂ.ಕೋಟಿಗಳಲ್ಲಿ** | **ಒಟ್ಟು ಶೇಕಡಾವಾರು** |
| ಯೋಜನಾ ವೆಚ್ಚ | | |
| ಕೇಂದ್ರ ಯೋಜನೆ | ೭೩ | ೩.೮೦ |
| ರಾಜ್ಯ ಯೋಜನೆ | ೧೪೯೭ | ೭೭.೯೭ |
| ಹುಡ್ಕೋ ಮತ್ತು ಇತರೆ | ೨೫೦ | ೧೩.೦೨ |
| ಬಹುರಾಷ್ಟ್ರೀಯ ಮತ್ತು ಅಂತರ್ ರಾಷ್ಟ್ರೀಯ ಏಜೆನ್ಸಿಗಳು | ೧೦೦ | ೫.೨೦ |
| **ಒಟ್ಟು** | ೧೯೨೦ | ೧೦೦.೦೦ |

ಪ್ರತಿ ವರ್ಷ ನಗರ ಸ್ಥಳೀಯ ಸಂಸ್ಥೆಗಳಿಗೆ ಪಾಲನ್ನು ಕೊಡಬೇಕಾದಾಗ ಆದಾಯವೆಂದು ಯಾವುದನ್ನು ಪರಿಗಣಿಸಬೇಕು? ಬರೀ ತೆರಿಗೆ ಆದಾಯವನ್ನೋ? ಆಥಾವ ಕೇಂದ್ರದಿಂದ ಬರುವ ಅನುದಾನ ಮತ್ತು ಸರ್ಕಾರಕ್ಕೆ ಇತರೆ ಮೂಲಗಳಿಂದ ಬರುವ ಆದಾಯವನ್ನೋ? ಎಂಬಂತಹ ಉದ್ದೇಶದಿಂದ ಸ್ಥಳೀಯ ಸಂಸ್ಥೆಗಳ ಹಣಕಾಸಿನ ಅನುದಾನದ ಹಂಚಿಕೆಯನ್ನು ನೋಡಲಾಗಿದೆ. ಅಧಿಕಾರ ವಿಕೇಂದ್ರೀಕರಣದ ಮುಖ್ಯ ಉದ್ದೇಶಗಳಲ್ಲಿ ಸಂಪನ್ಮೂಲ ಹಂಚಿಕೆಯು ಒಂದು ಅಂಶವಾಗಿದೆ. ಕೇಂದ್ರ ಸರ್ಕಾರ ರಾಜ್ಯಗಳೊಂದಿಗೆ ಸಂಪನ್ಮೂಲ ಹಂಚಿಕೆ ಮಾಡುವಂತೆ, ನಗರ ಸ್ಥಳೀಯ ಸಂಸ್ಥೆಗಳಿಗೂ ಒಂದು ವ್ಯವಸ್ಥೆಯನ್ನು ಸಂವಿಧಾನ ತಿದ್ದುಪಡಿಯ ಮೂಲಕ ಮಾಡಲಾಗಿದೆ. ಸಂವಿಧಾನದ ೭೪ನೆಯಾ ತಿದ್ದುಪಡಿಯಲ್ಲಿ ನಗರ ಸ್ಥಳೀಯ ಸಂಸ್ಥೆಗಳ ಆರ್ಥಿಕ ಪರಿಸ್ಥಿತಿಯನ್ನು ಕಾಲಕಾಲಕ್ಕೆ ಪರೀಶಿಲಿಸಲು ರಾಜ್ಯ ಹಣಕಾಸು ಆಯೋಗವನ್ನು ರಚಿಸಲಾಗಿದೆ. (ವಿಧಿ ೨೪೩-Y) ಅಂದಹಾಗೆ ಹಣಕಾಸು ಆಯೋಗದ ಕೆಲಸವೆಂದರೆ ರಾಜ್ಯಗಳಿಗೆ ಬರುವ ತೆರಿಗೆ, ಕರ, ಶುಲ್ಕ ಇವುಗಳನ್ನು ನಿರ್ಧರಿಸುವುದು, ರಾಜ್ಯದ ಸಂಚಿತ ನಿಧಿಯಿಂದ ನಗರ ಸ್ಥಳೀಯ ಸಂಸ್ಥೆಗಳಿಗೆ ಅನುದಾನವನ್ನು ಕೊಡುವುದನ್ನು ನಿರ್ಧರಿಸುವುದು ಮತ್ತು ಸ್ಥಳೀಯ ಸಂಸ್ಥೆಗಳ ಆರ್ಥಿಕ ಪರಿಸ್ಥಿತಿಗಳನ್ನು ಸುಧಾರಿಸಲು ತೆಗೆದುಕೊಳ್ಳಬೇಕಾದ ನಿರ್ಧಾರಗಳನ್ನು ಸೂಚಿಸುವುದಾಗಿದೆ. ಹಣಕಾಸು ಆಯೋಗದ ಪ್ರತಿ ವರದಿಯನ್ನು ಸರ್ಕಾರಕ್ಕೆ ಮಂಡಿಸಿ ಅದರ ಶಿಫಾರಸ್ಸುಗಳನ್ನು ಸರ್ಕಾರದ ಚರ್ಚೆಯಲ್ಲಿಡಬೇಕಾದ ಕರ್ತವ್ಯವನ್ನು ರಾಜ್ಯದ ಪ್ರಥಮರು ಮಾಡಬೇಕಾಗುತ್ತದೆ ಎಂದು ಸಂವಿಧಾನದಲ್ಲಿ ಹೇಳಲಾಗಿದೆ.[8]

ಸಂವಿಧಾನಿಕ ತಿದ್ದುಪಡಿಗಿಂತ ಮೊದಲು ಹಣಕಾಸಿನ ನಿರ್ವಹಣೆಯು ಸಂಪೂರ್ಣವಾಗಿ ರಾಜ್ಯ ಸರ್ಕಾರದ ಕೈಯಲ್ಲಿ ಕೇಂದ್ರೀಕೃತವಾಗಿತ್ತು. ಅಂದರೆ ತಿದ್ದುಪಡಿಯ ನಂತರ ನಗರ ಸ್ಥಳೀಯ ಸಂಸ್ಥೆಗಳಿಗೆ ತಮ್ಮದೆ ಆದ ಸಂಪನ್ಮೂಲ ಕ್ರೋಢೀಕರಣಕ್ಕಾಗಿ ಅಧಿಕಾರಗಳನ್ನು ನೀಡಲಾಯಿತು. ಅದಲ್ಲದೇ, ನಗರ ಸ್ಥಳೀಯ ಸಂಸ್ಥೆಗಳಿಗೆ ಮತ್ತಷ್ಟು ಬಲ ನೀಡುವ ಉದ್ದೇಶದಿಂದ ನಗರಸಭೆ ಮತ್ತು ಪಟ್ಟಣ ಪಂಚಾಯಿತಿ ವಿವಿಧ ಮೂಲಗಳಿಂದ ಸಂಪನ್ಮೂಲಗಳನ್ನು ಒದಗಿಸಲಾಗುತ್ತದೆ. ಕೇಂದ್ರ

ಸರ್ಕಾರ, ರಾಜ್ಯ ಸರ್ಕಾರಗಳು, ಏಷ್ಯಾ ಅಭಿವೃದ್ಧಿ ಬ್ಯಾಂಕ್ ಮತ್ತು ವಿಶ್ವಬ್ಯಾಂಕ್‌ನ ಹಣಕಾಸಿನ ನೆರವಿನ ಮೂಲಕ ನಗರ ಪ್ರದೇಶಗಳ ಅಭಿವೃದ್ಧಿಗಾಗಿ ಹಲವು ಯೋಜನೆಗಳನ್ನು ಜಾರಿಗೆ ತಂದಿವೆ. ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಈ ಸಂಸ್ಥೆಗಳಿಗೆ ಕೊಡುವ ಸಂಪನ್ಮೂಲವನ್ನು ಬಳಸುವ ಕ್ರಮದಲ್ಲಿ ಪ್ರತಿ ಸ್ಥಳೀಯ ಸಂಸ್ಥೆಗಳು ಖರ್ಚು ಮಾಡತಕ್ಕದ್ದು. ಈ ಅನುದಾನಗಳನ್ನು ಸದಸ್ಯರ ಸಂಭಾವನೆ ಮತ್ತು ನೌಕರರ ಸಂಬಳಕ್ಕೆ ಬಳಸಕೂಡದು. ಸರ್ಕಾರದ ನಿಯಾಮವಳಿ ಪ್ರಕಾರ ವೆಚ್ಚ ಮಾಡತಕ್ಕದ್ದು. ಹೀಗೆ ರಾಜ್ಯದ ಸ್ಥಳೀಯ ಸಂಸ್ಥೆಗಳು ಸ್ಥಳೀಯ ಸಂಪನ್ಮೂಲಗಳ ಜೊತೆಗೆ ಸರ್ಕಾರದ ಅನುದಾನಗಳನ್ನು ಅಭಿವೃದ್ಧಿ ಚಟುವಟಿಕೆಗಳಿಗೆ ಹೊಂದಿವೆ. ಸ್ಥಳೀಯ ಸಂಸ್ಥೆಗಳ ಹಣಕಾಸು ಪರಿಸ್ಥಿತಿಯನ್ನು ಸುಧಾರಿಸಲು ಕೈಗೊಳ್ಳಬೇಕಾದ ಕಾರ್ಯಕ್ರಮಗಳ ಬಗ್ಗೆ ವರದಿ ಮಾಡಲು ಡಾ. ಜಿ. ತಿಮ್ಮಯ್ಯನವರು ಅಧ್ಯಕ್ಷತೆಯಲ್ಲಿ ಹಣಕಾಸು ಆಯೋಗವನ್ನು ಸಂವಿಧಾನದ ವಿಧಿ ೨೪೩(Y) ರಚಿಸಲಾಯಿತು. ಆಯೋಗವು ಅಧ್ಯಯನ ನಡೆಸಿ ೧೯೯೫ರಲ್ಲಿ ಸಂಪನ್ಮೂಲ ಹೆಚ್ಚಳದ ಬಗ್ಗೆ ಸಮಿತಿಯು ವರದಿಯನ್ನು ಸಲ್ಲಿಸಿತು.[೧೦] ತಳಮಟ್ಟದ ದೈನಂದಿನ ಅಗತ್ಯಗಳು ಹಾಗೂ ಸ್ಥಳೀಯ ಪರಿಸ್ಥಿತಿಗಳ ನಡುವೆ ಹೆಚ್ಚು ಸಾದೃಶ್ಯವಿರುವುದರಿಂದ ತಳಮಟ್ಟದಲ್ಲಿ ಯೋಜನೆಯನ್ನು ವಿಕೇಂದ್ರೀಕರಣಗೊಳಿಸುವುದರ ಜೊತೆಗೆ ಎಲ್ಲಾ ದೃಷ್ಟಿಯಿಂದ ನಮ್ಮ ನಗರಗಳು ಅಭಿವೃದ್ಧಿಗೊಳಬೇಕು. ಅಂದರೆ ಸದ್ಯದ ಅಭಿವೃದ್ಧಿಯ ಘಟ್ಟದ ದೃಷ್ಟಿಯಿಂದ ಅವಲೋಕಿಸಿದಾಗ ಇದಕ್ಕೆ ಪೂರಕವಾಗಿ ಎಲ್ಲಾ ರೀತಿಯ ಅಗತ್ಯ ಸೌಲಭ್ಯಗಳನ್ನು ಅನುದಾನಗಳ ಮೇಲೆ ಅವಲಂಬನೆಯಾಗಿ ನಗರ ಪ್ರದೇಶದ ಜನರ ಜೀವನವನ್ನು ಗುಣಮಟ್ಟದಲ್ಲಿ ಇಡಲು ಸಾಧ್ಯವಾಗದೆ ಇರುವುದರಿಂದ ಕರ್ನಾಟಕ ಪೌರ ನಿಗಮ ಅಧಿನಿಯಮ- ೧೯೬೪ ಪ್ರಕರಣ ೮೧ರ ಆಯಾ ಸ್ಥಳೀಯ ಸಂಸ್ಥೆಗಳ ವ್ಯಾಪ್ತಿಯಲ್ಲಿ ಬರುವ ಸ್ಥಿರ ಮತ್ತು ಚರ ಆಸ್ತಿಯನ್ನು ಅರ್ಜಿಸುವ, ಖರೀದಿ ಮಾಡುವ, ಮಾರಾಟ ಮಾಡುವ, ವರ್ಗಾವಣೆ ಮಾಡುವ ಎಲ್ಲಾ ಅಧಿಕಾರಿಗಳು ಸ್ಥಳೀಯ ಸಂಸ್ಥೆಗಳಿಗೆ ಇರುತ್ತದೆ. ಸ್ಥಳೀಯ ಸಂಸ್ಥೆಗಳ ನಿಧಿಯಿಂದ ಮಾಡಿಸಿದ ಪ್ರತಿಯೊಂದು ಕಾಮಗಾರಿಯು ಮತ್ತು ಸೃಷ್ಟಿಸಿದ ಆಸ್ತಿಯು ಸ್ಥಳೀಯ ಸಂಸ್ಥೆಗಳ ಸ್ವತ್ತು ಆಗತಕ್ಕದ್ದು. ಸ್ಥಳೀಯ ಸಂಸ್ಥೆಗಳ ವ್ಯಾಪ್ತಿಯಲ್ಲಿರುವ ಮರಗಳು, ಕಟ್ಟಡಗಳು ಮತ್ತು ಸಾರ್ವಜನಿಕ ಆಸ್ತಿಗಳು ಸಂಸ್ಥೆಗಳ ಸ್ವತ್ತಾಗತಕ್ಕದ್ದು. ಈ ಸ್ವತ್ತಗಳ ರಕ್ಷಣೆ, ನಿರ್ವಹಣೆ ಮತ್ತು ಹಣಕಾಸಿನ ಎಲ್ಲಾ ಅಧಿಕಾರಗಳನ್ನು ಸಂಸ್ಥೆಗಳು ಹೊಂದಿರುತ್ತದೆ. ಅಲ್ಲದೇ, ಪ್ರಕರಣ ೮೩ ಸಂಸ್ಥೆಗಳು ಸೃಷ್ಟಿಸಿದ ಮತ್ತು ಇತರೆ ಮೂಲಗಳಿಂದ ಬರುವ ಆದಾಯವನ್ನು ಪೌರಸಭಾ ನಿಧಿಗೆ ಸೇರತಕ್ಕದ್ದು. ಈ ಆದಾಯದಿಂದ ಪೌರಸಭಾ ನಿಧಿಯ ವಿನಿಯೋಗ ಸ್ಥಾಪಿಸತಕ್ಕದ್ದು. ಸರ್ಕಾರ ನಿರ್ದಿಷ್ಟಪಡಿಸುವ ಉದ್ದೇಶಗಳಿಗೆ ಬಳಸತಕ್ಕದ್ದು, ಪೌರಸಭೆಗಳ ನಿಧಿಯನ್ನು ಅಧ್ಯಕ್ಷ, ಉಪಾಧ್ಯಕ್ಷ ಮತ್ತು ಸಿಬ್ಬಂದಿ ವೇತನಗಳಾಗಿ ಮತ್ತು ತಿಂಗಳ ಸಭೆಗಳಿಗೆ, ಸದಸ್ಯರ ಪ್ರಯಾಣ ಭತ್ಯೆ, ದಿನ ಭತ್ಯೆಗಳಿಗೆ ಬಳಸಬಹುದಾಗಿದೆ.[೧೧] ಈ ರೀತಿ ಪ್ರತಿಯೊಂದು ಸ್ಥಳೀಯ ಸಂಸ್ಥೆಗಳು ಸ್ವತ್ತುಗಳು ಮತ್ತು ನಿಧಿಯನ್ನು ಹೊಂದಿ ಅದರ ಮೂಲಕ ನಿರ್ವಹಣೆ ಮಾಡಿದಾಗ ಗುಣಾತ್ಮಕವಾಗಿ ನಗರಗಳ ಅಭಿವೃದ್ಧಿಯನ್ನು ನೋಡಬಹುದಾಗಿದೆ.

ಕೋಷ್ಟಕ: ೭.೪

ನಗರ ಸ್ಥಳೀಯ ಸಂಸ್ಥೆಗಳವಾರು ಕಳೆದ ಐದು ವರ್ಷಗಳಲ್ಲಿ ಕೈಗೊಂಡಿರುವ ವಿವಿಧ ಯೋಜನೆಗಳ ವಿವರ ೨೦೦೯-೨೦೧೪

| ಕ್ರಸಂ. | ವರ್ಷ | ಎಸ್.ಎಫ್.ಸಿ | ಅನುದಾನ | |
|---|---|---|---|---|
| | | ಯೋಜನೆಯಡಿ | ಹೊಸಪೇಟೆ ನಗರಸಭೆ | ಕೂಡ್ಲಿಗಿ ಪಟ್ಟಣ ಪಂಚಾಯಿತಿ |
| ೧ | ೨೦೦೯-೧೦ | ಎಸ್.ಎಫ್.ಸಿ. | ೧೪,೭೩,೯೭,೫೪೯ | ೨೮೦.೦೦ |
| ೨ | ೨೦೧೦-೧೧ | ಎಸ್.ಎಫ್.ಸಿ. | ೧೪,೩೫,೩೧,೨೦೮ | ೨೩೬.೩೩ |
| ೩ | ೨೦೧೧-೧೨ | ಎಸ್.ಎಫ್.ಸಿ. | ೨೦,೭೫,೨೦,೧೬೧ | ೨೭೯.೯೯ |
| ೪ | ೨೦೧೨-೧೩ | ಎಸ್.ಎಫ್.ಸಿ. | ೨೦,೭೫,೨೦,೧೬೧ | ೧೯೪.೭೨ |
| ೫ | ೨೦೧೩-೧೪ | ಎಸ್.ಎಫ್.ಸಿ. | ೧೫,೪೮,೧೬,೧೨೦ | ೧೬೩.೫೫ |

(ಸಿ.ಸಿ.ರಸ್ತೆ, ನೈರ್ಮಲೀಕರಣ, ಬೀದಿ ದೀಪ, ಆರ್.ಸಿ.ಸಿ.ಚರಂಡಿ, ಕುಡಿಯುವ ನೀರಿನ ಪೈಪ್ ಲೈನ್, ವಿದ್ಯುತ್ ಕಂಬ, ಯುಜಿಡಿ ಕಾಮಗಾರಿ, ಕಿರು ನೀರು ಸರಬುರಾಜು, ರಸ್ತೆ ಡಾಂಬರೀಕರಣ ಕಾಮಾಗಾರಿಗಳಿಗೆ ವೆಚ್ಚ ಮಾಡಲಾಗಿದೆ.) (ಮೂಲ: ಪೌರಾಯುಕ್ತರು, ಹೊಸಪೇಟೆ ನಗರಸಭೆ, ಡಿಸೆಂಬರ್-೨೦೧೪ /ಮುಖ್ಯಾಧಿಕಾರಿಗಳು, ಪಟ್ಟಣ ಪಂಚಾಯಿತಿ, ಕೂಡ್ಲಿಗಿ, ಮಾರ್ಚ್ ೨೦೧೪.)

ಈ ಮೇಲಿನ ಕೋಷ್ಟಕಕ್ಕೆ ಸಂಬಂಧಿಸಿದಂತೆ ಎಸ್.ಎಫ್.ಸಿ. ಯೋಜನೆಯಡಿ ಬರುವ ಯೋಜನೆಗಳ ಬಗ್ಗೆ ತೋರಿಸಲಾಗಿದೆ. ರಾಜ್ಯ ಹಣಕಾಸು ಆಯೋಗದಡಿಯಲ್ಲಿ ಬರುವ ಕನಿಷ್ಠ ಅವಶ್ಯಕತೆಯ ಕಾರ್ಯಕ್ರಮವು ಸಿ.ಸಿ.ರಸ್ತೆ, ನೈರ್ಮಲೀಕರಣ, ಬೀದಿ ದೀಪ, ಶೌಚಾಲಯ ವ್ಯವಸ್ತೆ, ಆರ್.ಸಿ.ಸಿ. ಚರಂಡಿ, ಕುಡಿಯುವ ನೀರಿನ ಪೈಪ್ ಲೈನ್, ವಿದ್ಯುತ್ ಕಂಬ, ಯು.ಜಿ.ಡಿ ಕಾಮಗಾರಿ, ಕಿರು ನೀರು ಸರಬುರಾಜು, ರಸ್ತೆ ಡಾಂಬರೀಕರಣ ಕಾಮಗಾರಿ ಕಾರ್ಯಕ್ರಮಗಳನ್ನು ಒಳಗೊಂಡಿದೆ. ಈ ವಿಭಾಗಕ್ಕೆ ಕೇಂದ್ರ ಸರ್ಕಾರವು ಅನುದಾನವನ್ನು ಕೊಡುವುದಿಲ್ಲ. ಎಲ್ಲಾ ನಗರ ಸ್ಥಳೀಯ ಸಂಸ್ಥೆಗಳ ಮೂಲಭೂತ ಸೌಲಭ್ಯಗಳು ಎಸ್. ಎಫ್. ಸಿ. ಯೋಜನೆಯಡಿ ಬರುತ್ತವೆ. ನಗರ ಜನರಿಗೆ ಸಮರ್ಪಕವಾದ ಮೂಲಭೂತ ಸೌಲಭ್ಯಗಳನ್ನು ಒದಗಿಸುವುದರೊಂದಿಗೆ ಉತ್ತಮ ಜೀವನವನ್ನು ನಿರ್ಮಾಣ ಮಾಡುವುದು ಈ ಯೋಜನೆಯ ಉದ್ದೇಶ. ಈ ಯೋಜನೆಯಿಂದ ನಗರದ ಜನರಿಗೆ ಕನಿಷ್ಠವಾಗಿ ಇರುವ ಎಲ್ಲಾ ಮೂಲಭೂತ ಸೌಲಭ್ಯಗಳು ದೊರೆಯುವುದು ತಿಳಿಯುತ್ತದೆಯೇ ಹೊರತು ಅವುಗಳು ಸಮರ್ಥವಾಗಿ ಎಲ್ಲಾರಿಗೂ ಮುಟ್ಟಿದವೋ ಎಂಬುದು ಗೊತ್ತಾಗುವುದಿಲ್ಲ. ನಾವು ಅಧ್ಯಯನಕ್ಕೆ ತೆಗೆದುಕೊಂಡಿರುವ ರಾಜ್ಯ ಹಣಕಾಸು ಆಯೋಗದಲ್ಲಿ ಬರುವ ಕಾರ್ಯಯೋಜನೆಗಳು ಒಂದೇ ರೀತಿಯಾಗಿಲ್ಲ. ಏಕೆಂದರೆ ಎಲ್ಲಾ ಸ್ಕೀಂಗಳ ಅಂಕಿಗಳು ಲಭ್ಯವಿಲ್ಲ. ನಗರ ಜನರಿಗೆ ಕನಿಷ್ಠ ಮೂಲಭೂತ ಅವಶ್ಯಕತೆಗಳನ್ನು ಒದಗಿಸಲು ಹಲವು ಅಂಶಗಳಿರುವುದರಿಂದ ಅವುಗಳಿಗೆ ವೆಚ್ಚವಾಗುತ್ತಿರುವ ಹಣವು ಸರಿಯಾದ ಅಂಕಿಗಳಿಂದ ದೊರೆಯುದಿಲ್ಲ. ಕೋಷ್ಟಕದಲ್ಲಿ ಒದಗಿಸುತ್ತಿರುವ ಹಣ ಮೊತ್ತ ೨೦೦೯-೧೦ ರಿಂದ ಹೊಸಪೇಟೆ ನಗರಸಭೆಗೆ ೧೪,೭೩,೯೭,೫೪೯ ಕೋಟಿ ಮತ್ತು ಕೂಡ್ಲಿಗಿ ಪಟ್ಟಣ ಪಂಚಾಯಿತಿಗೆ ೨೮೦.೦೦ಲಕ್ಷ ಪ್ರಾರಂಭವಾಗಿ ೨೦೧೩-೧೪ನೇ ವರ್ಷಗಳಲ್ಲಿ ನಗರಸಭೆಗೆ

೧೫,೪೮,೧೬,೧೨೦, ಮತ್ತು ಪಟ್ಟಣ ಪಂಚಾಯಿತಿಗೆ ೧೬೩.೫೫ ಲಕ್ಷ ರೂಪಾಯಿಗಳಿಗೆ ಮುಟ್ಟಿದೆ. ಈ ಕಾರ್ಯಯೋಜನೆಯ ಅಡಿಯಲ್ಲಿ ಹೆಚ್ಚಿನ ಹಣ ವೆಚ್ಚವಾಗುತ್ತಿಲ್ಲ. ಆದುದರಿಂದ ಈ ಕಾರ್ಯಯೋಜನೆಗಳಿಗೆ ಒದಗಿಸುತ್ತಿರುವ ಹಾಗೂ ವೆಚ್ಚವಾಗುತ್ತಿರುವ ಹಣದ ಬೆಳವಣಿಗೆಯನ್ನು ನೋಡಿದಾಗ ತಿಳಿದುಬಂದ ಅಂಶವಾಗಿದೆ.

ಒಟ್ಟಾರೆಯಾಗಿ ಸಾಪೇಕ್ಷ ಮುಂದುವರಿದ ನಗರಸಭೆಗಿಂತ ಹಾಗೂ ತೀರಾ ಹಿಂದುಳಿದ ಪಟ್ಟಣ ಪಂಚಾಯಿತಿಗೆ ಎಸ್.ಎಫ್.ಸಿ ಅನುದಾನ ಹಂಚುವಿಕೆಯಲ್ಲಿ ಹೆಚ್ಚಿನ ಪ್ರಮಾಣದಲ್ಲಿ ಅಂತರ ಹಾಗೂ ವರ್ಷದಲ್ಲಿ ಕಡಿಮೆ ಪ್ರಮಾಣದ ಅನುದಾನ ಬಿಡುಗಡೆಯಾಗುವುದನ್ನು ಕಂಡು ಬಂದಿದೆ. ಈ ವಿಶ್ಲೇಷಣೆಯಿಂದ ಗಮನಿಸುವ ಒಂದು ಅಂಶವೆಂದರೆ ಯಾವುದೇ ಒಂದು ಪ್ರದೇಶವು ಅಭಿವೃದ್ಧಿ ಹೊಂದಬೇಕಾದರೆ ಮುಖ್ಯವಾಗಿ ಅನುದಾನ ಬಳಕೆಯು ಪ್ರಮುಖ ಅಂಶವಾಗಿರುತ್ತದೆ. ಅಂದರೆ ಇಲ್ಲಿ ಹಣ ಹಂಚಿಕೆಯಲ್ಲಿ ತೀವ್ರವಾದ ತಾರತಮ್ಯವಿರುವುದರಿಂದ ಸಂಪನ್ಮೂಲದ ಕೊರತೆಯಿಂದ ಅಭಿವೃದ್ಧಿ ಕೆಲಸ ಕಾರ್ಯಗಳನ್ನು ಕೈಗೊಳ್ಳದೆ ಇರುವುದರಿಂದ ಮಾನವ ಅಭಿವೃದ್ಧಿಯ ಮೇಲೆ ನೇರ ಪರಿಣಾಮ ಬೀರಿ ಹಿಂದುಳಿದಿದೆ ಎನ್ನಲಾಗಿದೆ. ಬದಲಾಗಿ ಸ್ಥಳೀಯ ಸಂಪನ್ಮೂಲ ಕ್ರೋಢೀಕರಣದಲ್ಲಿ ಹಿಂದಿಳಿದು ಹಣಕಾಸಿನ ಹೆಚ್ಚಿನ ತೊಂದರೆಯಿಂದ ಕೂಡ್ಲಿಗಿ ಪಟ್ಟಣ ಪಂಚಾಯಿತಿಯ ಸ್ಥಿತಿ ಶೋಚನೀಯವಾಗಿದೆ. ಆದ್ದರಿಂದ, ಹಿಂದುಳಿದ ಕೂಡ್ಲಿಗಿ ಪಟ್ಟಣ ಪಂಚಾಯಿತಿಗೆ ಹೆಚ್ಚಿನ ಅನುದಾನದ ಹಂಚಿಕೆಯ ಅಗತ್ಯವಿದೆ.

**ಕೋಷ್ಟಕ: ೭.೫.**

**ನಗರ ಸ್ಥಳೀಯ ಸಂಸ್ಥೆಗಳವಾರು ಕಳೆದ ಐದು ವರ್ಷಗಳಲ್ಲಿ ಕೈಗೊಂಡಿರುವ ವಸತಿ ಯೋಜನೆಗಳ ವಿವರ ೨೦೦೯-೨೦೧೪**

| ಕ್ರ.ಸಂ. | ವರ್ಷಗಳು | ವಾಜಪೇಯಿ ನಗರ ವಸತಿ ಯೋಜನೆ | | | |
|---|---|---|---|---|---|
| | | ಹೊಸಪೇಟೆ ನಗರಸಭೆ | | ಕೂಡ್ಲಿಗಿ ಪಟ್ಟಣ ಪಂಚಾಯಿತಿ | |
| | | ಅನುದಾನ | ಮನೆಗಳ ಸಂಖ್ಯೆ | ಅನುದಾನ | ಮನೆಗಳ ಸಂಖ್ಯೆ |
| ೧. | ೨೦೦೯-೧೦ | ಇಲ್ಲ | ಇಲ್ಲ | ಇಲ್ಲ | ಇಲ್ಲ |
| ೨ | ೨೦೧೦-೧೧ | ೪,೨೦,೯೦,೦೦ | ೨೩೦೧ | ೪೨೨ | ೧,೨೬,೦೦೦,೦೦ |
| ೩ | ೨೦೧೧-೧೨ | ಇಲ್ಲ | ಇಲ್ಲ | ಇಲ್ಲ | ಇಲ್ಲ |
| ೪ | ೨೦೧೨-೧೩ | ಇಲ್ಲ | ಇಲ್ಲ | ಇಲ್ಲ | ಇಲ್ಲ |
| ೫ | ೨೦೧೩-೧೪ | ಇಲ್ಲ | ೧೨೫ | ೪೦ | ೧೨,೦೦೦,೦೦ |

**(ಮೂಲ: ಪೌರಾಯುಕ್ತರು, ಹೊಸಪೇಟೆ ನಗರಸಭೆ, ಡಿಸೆಂಬರ್-೨೦೧೪ ಮತ್ತು ಮುಖ್ಯಾಧಿಕಾರಿಗಳು, ಕೂಡ್ಲಿಗಿ-ಪಟ್ಟಣ ಪಂಚಾಯಿತಿ, ಮಾರ್ಚ್ ೫, ೨೦೧೪.)**

ಈ ಮೇಲಿನ ಕೋಷ್ಟಕಕ್ಕೆ ಸಂಬಂಧಿಸಿದಂತೆ ೨೦೦೯-೨೦೧೪ರವರೆಗೆ ಮನೆಗಳನ್ನು ಹಂಚಿರುವುದರ ವಿವರವನ್ನು ತೋರಿಸಲಾಗಿದೆ. ಕೇಂದ್ರ ಸರ್ಕಾರದಡಿಯಲ್ಲಿ ಬರುವ ನಗರದ ವಸತಿ ಇಲ್ಲದವರನ್ನು ಹುಡುಕಿ ಆರ್ಹತೆಯಿರುವವರಿಗೆ ವಸತಿಗಳನ್ನು ಕಲ್ಪಿಸಿಕೊಡಲು ವಾಜಪೇಯ ನಗರ

ವಸತಿ ಯೋಜನೆಯಾಗಿದೆ. ವಿಭಾಗಕ್ಕೆ ಕೇಂದ್ರ ಸರ್ಕಾರದಿಂದ ನೆರವು ಬರುತ್ತದೆ. ಎಲ್ಲಾ ನಗರ ಸ್ಥಳೀಯ ಸಂಸ್ಥೆಗಳ ವ್ಯಾಪ್ತಿಯಲ್ಲಿ ಬರುವ ನಗರ ಜನತೆ ಬಡತನ ರೇಖೆಗಿಂತ ಕೆಳಗಿದ್ದು, ವಸತಿ ಇಲ್ಲದವರಿಗೆ ಒಂದು ಸೂರನ್ನು ಒದಗಿಸಿ ಕೊಡುವುದು ಈ ಯೋಜನೆಯ ಉದ್ದೇಶವಾಗಿದೆ. ಈ ಯೋಜನೆಯಿಂದ ಸೂರು ಇಲ್ಲದ ಕೊರತೆಯಿಂದ ಮುಕ್ತಿ ಪಡೆದು ಅವರು ಉತ್ತಮ ಜೀವನವನ್ನು ಕಲ್ಪಿಸಿಕೊಳ್ಳುವುದಕ್ಕೆ ಈ ಯೋಜನೆಯು ತುಂಬಾ ಉಪಯುಕ್ತವಾಗಿದೆ. ಈ ಯೋಜನೆಯಿಂದ ಕೊಳಗೇರಿ ನಿವಾಸಿಗಳಿಗೆ ಬಡತನ ರೇಖೆಗಿಂತ ಕೆಳಗಿನವರು ಹಾಗೂ ಸೂರು ಇಲ್ಲದವರಿಗೆ ಈ ಯೋಜನೆಯು ಮೀಸಲು ಅಷ್ಟು ಮಾತ್ರ ಗೊತ್ತು? ಆದರೆ ಎಷ್ಟು ನಗರ ಜನತೆಗೆ ಅರ್ಹತೆಯಿರುವವರಿಗೆ ಸಿಕ್ಕಿದೆಯೊ ಗೊತ್ತಿಲ್ಲ. ಕೋಷ್ಟಕದಲ್ಲಿ ಒದಗಿಸಿರುವ ಬಿಡುಗಡೆಯ ಮೊತ್ತ ೨೦೦೯–೨೦೧೪ರಿಂದ ಹೊಸಪೇಟೆ ನಗರಸಭೆಗೆ ಯಾವ ಅನುದಾನ ಇಲ್ಲ ಹಾಗೂ ಕೂಡ್ಲಿಗಿ ಪಟ್ಟಣ ಪಂಚಾಯಿತಿಗೂ ಇರುವುದಿಲ್ಲ ಎನ್ನುವುದರಿಂದ ಆರಂಭವಾಗಿ ೨೦೧೩–೨೦೧೪ರವರೆಗೆ ಹೊಸಪೇಟೆ ನಗರಸಭೆಗೆ ೧೨೫ ಮನೆಗಳನ್ನು ಸಂಸ್ಥೆಯಿಂದ ಶಿಫಾರಸ್ಸು ಮಾಡಿಕಳುಹಿಸಲಾಗಿದೆ. ಅದೇ ರೀತಿಯಾಗಿ ಕೂಡ್ಲಿಗಿ ಪಟ್ಟಣ ಪಂಚಾಯಿತಿಗೆ ೪೦ ಮನೆಗಳು (೧೨,೦೦೦,೦೦) ರೂಪಾಯಿವರೆಗೆ ಮುಟ್ಟಿದೆ. ಈ ಯೋಜನೆಯಲ್ಲಿ ಮನೆಗಳು ಅರ್ಹರಿಗೆ ಸರಿಯಾದ ರೀತಿಯಲ್ಲಿ ದೊರೆಯದೇ ಹಾಗೇ ಉಳಿದಿರುವ ಮತ್ತು ಅನುದಾನ ವಾಪಸು ಸರ್ಕಾರದ ಖಜಾನೆಗೆ ಹೋಗಿರುವುದು ಅಧ್ಯಯಗಳಿಂದ ತಿಳಿದು ಬಂದಿತು.

ಸಾಪೇಕ್ಷವಾಗಿ ಮುಂದುವರಿದ ಹೊಸಪೇಟೆ ನಗರಸಭೆಗಿಂತ ಹಾಗೂ ತೀರಾ ಹಿಂದುಳಿದ ಪಟ್ಟಣ ಪಂಚಾಯಿತಿಯಲ್ಲಿ ತಕ್ಕಮಟ್ಟಿಗೆ ಮನೆಗಳು ಹಂಚದೆ ಹಾಗೆಯೇ ಉಳಿದಿರುವುದು ವರದಿಯಿಂದ ತಿಳಿದುಬರುತ್ತದೆ. ಇವೆರೆಡೂ ಕಡೆಗೂ ನಗರದ ಜನತೆ ಕೊಳಗೇರಿಯಲ್ಲಿ ವಾಸಿಸುವವರ ಸಂಖ್ಯೆ ಸರಿಸುಮಾರು ಸಮಾನಾದ ರೀತಿಯಲ್ಲಿ ಕಂಡುಬರುತ್ತದೆ. ಸರ್ಕಾರವು ಕೊಡುವ ಅನುದಾನವನ್ನು ಶ್ರೀಮಂತ ವರ್ಗದಿಂದ ಆಯ್ಕೆಯಾಗಿ ಬಂದ ಸದಸ್ಯರು ಮತ್ತು ಸದಸ್ಯೆಯರು ರಾಜಕೀಯ ನಿರ್ಲಕ್ಷ್ಯದಿಂದ ಅವುಗಳ ಉಪಯೋಗ ಮಾಡಿಕೊಳ್ಳದೇ ಹಾಗೆಯೇ ಬಿಟ್ಟು ಬಿಡುವ ಸಂಗತಿ ತಿಳಿದು ಬರುತ್ತದೆ. ಇದರಿಂದ ಹಿಂದುಳಿದ ಪ್ರದೇಶಗಳು ಯಾವುದೇ ಸೌಲಭ್ಯವನ್ನು ಪಡೆಯದೆ ಸ್ವ–ಇಚ್ಛೆ ಬೆಳವಣಿಗೆಯನ್ನು ಹೊಂದದೆ ಹಾಗೇ ಅವರು ಕೊಳಗೇರಿಯಲ್ಲಿದ್ದು, ನೈರ್ಮಲ್ಯದ ಕೊರತೆಯಿಂದ ಅನಾರೋಗ್ಯ ಪದೇ ಪದೇ ಈಡಾಗಿ ಅಭಿವೃದ್ಧಿಯನ್ನು ಕಾಣದೇ ಹಿಂದುಳಿಯಲು ಕಾರಣವಾಗಿರುತ್ತದೆ. ಬೆರಳೆಣಿಕೆ ಜನ ತಮ್ಮ ಸಾಮಾರ್ಥ್ಯಕ್ಕೆ ಅನುಗುಣವಾಗಿ ಖಾಸಗಿ ಮನೆಗಳನ್ನು ಮಾಡಿಕೊಂಡು ಆಡಳಿತ ವ್ಯವಸ್ಥೆಯ ಬಗ್ಗೆ ಬೇಸರವನ್ನು ವ್ಯಕ್ತಪಡಿಸಿರುವುದಾಗಿದೆ. ಇಂತಹ ಸದಸ್ಯರನ್ನು ಗುರುತಿಸಿ ಆಡಳಿತದ ಕಾನೂನಾತ್ಮಕ ಜವಾಬ್ದಾರಿಯ ಬಗ್ಗೆ ಅರಿವು ಮೂಡಿಸುವ ಅಗತ್ಯವಿದೆ ಎಂದು ತಿಳಿಯಬಹುದಾಗಿದೆ

ಕೋಷ್ಟಕ: ೭.೬.

ನಗರ ಸಂಸ್ಥೆಗಳವಾರು ಕಳೆದ ಐದು ವರ್ಷಗಳಲ್ಲಿ ಕೈಗೊಂಡಿರುವ ಶೌಚಾಲಯಗಳ ವಿವರ-೨೦೦೯-೨೦೧೪

| ಕ್ರ.ಸಂ. | ವರ್ಷಗಳು | ಎಸ್.ಎಫ್.ಸಿ.ಯೋಜನೆಯಡಿಯಲ್ಲಿ ಮಂಜೂರಾದ ಶೌಚಾಲಯಗಳ ವಿವರ | | | | |
|---|---|---|---|---|---|---|
| | | | ಕೂಡ್ಲಿಗಿ ಪಟ್ಟಣ ಪಂಚಾಯಿತಿ | | ಹೊಸಪೇಟೆ ನಗರಸಭೆ | |
| | | ಅನುದಾನ | ವೈಯಕ್ತಿಕ | ಸಮುದಾಯ | ವೈಯಕ್ತಿಕ | ಸಮುದಾಯ |
| ೧. | ೨೦೦೯-೧೦ | ಇಲ್ಲ | ಇಲ್ಲ | ಇಲ್ಲ | ಇಲ್ಲ | ಇಲ್ಲ |
| ೨ | ೨೦೧೦-೧೧ | ಎಸ್.ಎಫ್.ಸಿ. | ೧೪ | ೧ | ಇಲ್ಲ | ೧ |
| ೩ | ೨೦೧೧-೧೨ | ಎಸ್.ಎಫ್.ಸಿ. | ೭೩ | ಇಲ್ಲ | ೧೦೩ | ೧ |
| ೪ | ೨೦೧೨-೧೩ | ಎಸ್.ಎಫ್.ಸಿ. | ಇಲ್ಲ | ೩ | ಇಲ್ಲ | ೧ |
| ೫ | ೨೦೧೩-೧೪ | ಎಸ್.ಎಫ್.ಸಿ. | ೪೧ | ೧ | ೧೫೦ | ೧ |

(ಮೂಲ: ಪೌರಾಯುಕ್ತರು, ಹೊಸಪೇಟೆ ನಗರಸಭೆ, ಡಿಸೆಂಬರ್-೨೦೧೪ ಮತ್ತು ಮುಖ್ಯಾಧಿಕಾರಿಗಳು, ಕೂಡ್ಲಿಗಿ ಪಟ್ಟಣ ಪಂಚಾಯಿತಿ, ಮಾರ್ಚ್ ೨೦೧೪.)

ಈ ಮೇಲಿನ ಕೋಷ್ಟಕಕ್ಕೆ ಸಂಬಂಧಿಸಿದಂತೆ ೨೦೦೯-೨೦೧೪ರವರೆಗೆ ಮಂಜುರಾದ ಶೌಚಾಲಯಗಳ ವಿವರಗಳನ್ನು ತೋರಿಸಲಾಗಿದೆ. ರಾಜ್ಯ ಹಣಕಾಸು ಯೋಜನೆಯಡಿಯಲ್ಲಿ ಬರುವ ನಗರದ ಜನತೆಗೆ ನೈರ್ಮಲೀಕರಣದ ವ್ಯವಸ್ಥೆಗಾಗಿ ವೈಯಕ್ತಿಕ ಮತ್ತು ಸಮುದಾಯ ಶೌಚಾಲಯಗಳನ್ನು ಅರ್ಹತೆಯಿರುವವರಿಗೆ ಶೌಚಾಲಯಗಳ ಒದಗಿಸಿಕೊಡುವುದು ಈ ಯೋಜನೆಯ ಪ್ರಾಮುಖ್ಯತೆ ಯಾಗಿರುತ್ತದೆ. ವಿಭಾಗಕ್ಕೆ ರಾಜ್ಯ ಹಣಕಾಸು ಆಯೋಗದಿಂದ ನೆರವು ಬರುತ್ತಿದ್ದು ಎಲ್ಲಾ ನಗರ ಸ್ಥಳೀಯ ಸಂಸ್ಥೆಗಳ ವ್ಯಾಪ್ತಿಯಲ್ಲಿ ಬರುವ ವಾರ್ಡಿನ ಜನತೆ ಬಡತನ ರೇಖೆಗಿಂತ ಕೆಳಗಿರುವ, ಶೌಚಾಲಯ ರಹಿತವಾಗಿರುವವರಿಗೆ, ಸ್ತ್ರೀಯರಿಗೆ ರಕ್ಷಣೆಯ ದೃಷ್ಠಿಯಿಂದ ಸಮುದಾಯ ಶೌಚಾಲಯಗಳನ್ನು ನಿರ್ಮಿಸಿಕೊಡುವುದು ಈ ಯೋಜನೆಯ ಉದ್ದೇಶ. ಈ ಯೋಜನೆಯಿಂದ ಮಹಿಳೆಯರು ಬಯಲು ಶೌಚಮುಕ್ತದಿಂದಿರುವುದು, ಪರಿಸರವನ್ನು ಸ್ವಚ್ಛತೆಯನ್ನಾಗಿ ಇಡಲು ಶೌಚಾಲಯ ಬಳಕೆಯು ಒಂದು ವಿಧಾನವಾಗಿದೆ. ಅಂದರೆ ಶೌಚಾಲಯ ಕಟ್ಟಿದ ಕೂಡಲೇ ಜನ ಅದನ್ನು ಬಳಸುವುದಿಲ್ಲ. ಹೀಗಾಗಿ ಉತ್ತಮ ಶೌಚ ವ್ಯವಸ್ಥೆ ಎಂದರೆ ಅದನ್ನು ಸ್ವಚ್ಛಗೊಳಿಸಲು ಮತ್ತೊಬ್ಬರ ಅಗತ್ಯವಿಲ್ಲದಂತಿರಬೇಕು. ಅದರ ಬಳಕೆ, ತುರ್ತು ಏನೆಂದು ಜನರಿಗೆ ತಿಳಿಯಬೇಕಾಗಿದೆ.

ಸಾಪೇಕ್ಷವಾಗಿ ಮುಂದುವರಿದ ಹೊಸಪೇಟೆ ನಗರಸಭೆಗೆ ೨೦೦೯-೧೦ರಿಂದ ಆರಂಭವಾಗಿ ಈ ಸಾಲಿನಲ್ಲಿ ಯಾವುದೋ ಅನುದಾನ ಬಿಡುಗಡೆಯಿಲ್ಲದಿರುವುದನ್ನು ಕಂಡು ಬರುತ್ತದೆ. ಹಾಗೂ ತೀರಾ ಹಿಂದುಳಿದ ಪಟ್ಟಣ ಪಂಚಾಯಿತಿಗೆ ೨೦೦೯-೧೦ರಿಂದ ಆರಂಭವಾಗಿ ಈ ಸಾಲಿನಲ್ಲಿಯೂ ಸಹಿತ ಯಾವುದೇ ಅನುದಾನ ಬಿಡುಗಡೆಯಾಗಿಲ್ಲ. ನಂತರ ಹೊಸಪೇಟೆ ನಗರಸಭೆ ೨೦೧೩-೧೪ರ ಸಾಲಿನಲ್ಲಿ ವೈಯಕ್ತಿಕ ಶೌಚಾಲಯ ೧೫೦, ಸಮುದಾಯ ಶೌಚಾಲಯ ೧ರ ಸಂಖ್ಯೆಯಲ್ಲಿ

ಮಂಜೂರಾಗಿರುತ್ತದೆ. ಅದೇ ರೀತಿಯಾಗಿ ಕೂಡ್ಲಿಗಿ ಪಟ್ಟಣ ಪಂಚಾಯಿತಿಗೆ ೨೦೧೩-೧೪ರ ಸಾಲಿನಲ್ಲಿ ವೈಯಕ್ತಿಕ ಶೌಚಾಲಯ ೪೧, ಸಮುದಾಯ ಶೌಚಾಲಯ ಕೇವಲ ೧ ಶೌಚಾಲಯಗಳು ಮಂಜೂರಾಗಿರುವುದು ತಿಳಿದು ಬಂದಿತು. ಇಲ್ಲಿ ಗಮನಿಸಬೇಕಾದ ಅಂಶವೆಂದರೆ ಮುಂದುವರಿದ ಹೊಸಪೇಟೆ ನಗರಸಭೆ ಮತ್ತು ತೀರಾ ಹಿಂದುಳಿದ ಕೂಡ್ಲಿಗಿ ಪಟ್ಟಣ ಪಂಚಾಯಿತಿಯಲ್ಲಿ ಸರಿಸುಮಾರು ಶೌಚಾಲಯಗಳು ಮಂಜುರಾಗದೆ ಇರುವುದನ್ನು ನೋಡಿದರೆ ಅಲ್ಲಿ ಸ್ವಚ್ಛತೆಯ ಬಗ್ಗೆಯಾಗಲಿ, ಆರೋಗ್ಯದ, ಮೂಲಭೂತ ಸೌಲಭ್ಯಗಳ ಬಗ್ಗೆಯಾಗಲಿ ಯಾವುದೇ ಜವಾಬ್ದಾರಿಗಳು ಸರ್ಕಾರಕ್ಕೂ ಮತ್ತು ಸ್ಥಳೀಯ ಸಂಸ್ಥೆಗಳಿಗೂ ಅರಿವು ಇರದಿರುವುದು ಕಂಡುಬರುತ್ತದೆ. ಮುಂದುವರಿದು ಮುಂದುವರಿದ ಹೊಸಪೇಟೆ ನಗರಸಭೆಗೆ ಹೆಚ್ಚಾಗಿ ಶೌಚಾಲಯಗಳ ಮಂಜುರಾಗಿರುವುದಕ್ಕಿಂತ ತೀರಾ ಹಿಂದುಳಿದ ಕೂಡ್ಲಿಗಿ ಪಟ್ಟಣ ಪಂಚಾಯಿತಿಗೆ ತಕ್ಕಮಟ್ಟಿನ ಶೌಚಾಲಯಗಳು ಬಿಡುಗಡೆಯಾಗಿರುವುದು ತಿಳಿದು ಬರುತ್ತದೆ. ಆದ್ದರಿಂದ ಹಿಂದುಳಿದ ಮತ್ತು ಮುಂದುವರಿದ ಸ್ಥಳೀಯ ಸಂಸ್ಥೆಗಳು ಜನಕ್ಕೆ ಯಾವಾಗಲೂ ತಮಗೆ ಅಗತ್ಯ, ಅನಿವಾರ್ಯ ಎನಿಸಿದ ಆಧುನಿಕ ವಿಧಾನಗಳನ್ನು ಯಾವ ಪ್ರಚಾರ, ಅಭಿಮಾನವಿಲ್ಲದೆ ಒಪ್ಪಿಕೊಂಡಿದ್ದಾರೆ. ಸುಲಭದ, ಕಡಿಮೆ ದರದ, ಬಳಕೆಗೆ ಸೂಕ್ತವಾದಂತಹ ಮನೆ ಬಳಕೆಯ ಅನಿಲ ತಯಾರಿಸಬಲ್ಲ ಶೌಚ ವ್ಯವಸ್ಥೆ ಬರಬೇಕು. ಅದು ಭಾರತದ ವಿಭಿನ್ನ ಭೌಗೋಳಿಕ ಪ್ರದೇಶಗಳಿಗೆ, ಅಲ್ಲಿನ ಜನ ಸಮುದಾಯಗಳಿಗೆ ಹೊಂದುವಂತಿರಬೇಕು.[೧] ಇಂತಹ ಘನತೆಯ ಬದುಕು-ಆರೋಗ್ಯ ಹೊಂದುವಂತಹ ಕೆಲಸ-ಕಾರ್ಯಗಳು ನಡೆಯುವ ಅಗತ್ಯವಿದೆ.

ಈ ವಿಶ್ಲೇಷಣೆಯಿಂದ ತಿಳಿಯಬಹುದಾದ ಸಂಗತಿಯೆಂದರೆ ಒಟ್ಟಾರೆಯಾಗಿ ನಗರ ಕೇಂದ್ರಿತ ಜನರು ಒಳಗೊಂಡ ಅಭಿವೃದ್ಧಿಯ ಚಿತ್ರಣ ಸಿಗಬೇಕಿದ್ದರೆ ಈ ಕುರಿತ ಕೇಂದ್ರ, ರಾಜ್ಯ ಪ್ರಾಯೋಜಿತ ಯೋಜನೆಗಳ ಸೂಕ್ಷ್ಮ ಅಧ್ಯಯನ ಅಡಿಯಲ್ಲಿ ನಗರ ಸ್ಥಳೀಯ ಸಂಸ್ಥೆಗಳನ್ನು ನೋಡಿದಾಗ ನಗರಾಭಿವೃದ್ಧಿ ಸಚಿವಾಲಯದ ಕೆಳಗೆ ಬರುವ ಜೆ-ನರ್ಮ್ ಯೋಜನೆಯು ನಗರದಲ್ಲಿ ನೀರು ಮತ್ತು ಶೌಚ ವ್ಯವಸ್ಥೆ ಒದಗಿಸುವುದಲ್ಲದೆ ನಗರಗಳ ಆರ್ಥಿಕ ಹಾಗೂ ಸಾಮಾಜಿಕ ಮೂಲಸೌಕರ್ಯ ಅಭಿವೃದ್ಧಿ, ನಗರದ ಬಡಜನರಿಗೆ ಕಡಿಮೆ ದರದಲ್ಲಿ ವಸತಿಯ ಜೊತೆಗೆ ಇತರ ಮೂಲಸೌಕರ್ಯಗಳನ್ನು ಒದಗಿಸುವುದು ಮತ್ತು ೭೪ನೇ ಸಾಂವಿಧಾನಿಕ ತಿದ್ದುಪಡಿಯ ಅನ್ವಯ ಮುನಿಸಿಪಾಲಿಟಿ ಮತ್ತು ಅದರ ಕಾರ್ಯವೈಖರಿಯನ್ನು ಬಲಗೊಳಿಸುವ ಗುರಿಯನ್ನು ಹೊಂದಿದ್ದು, ನಗರದ ಬಡಜನರಿಗೆ ಮೂಲಸೌಕರ್ಯಗಳನ್ನು ಒದಗಿಸುವುದರಲ್ಲಿ ಮುಖ್ಯವಾದದ್ದು ಸಮರ್ಪಕವಾದ ಹಣಕಾಸನ್ನು ಬಳಸಿ ಕಾರ್ಯಕ್ರಮಗಳನ್ನು ನಿಯಮಿತವಾಗಿ ಅನುಷ್ಠಾನಗೊಳಿಸಿದಾಗ ನಗರ ಸ್ಥಳೀಯ ಸಂಸ್ಥೆಗಳು ಅಭಿವೃದ್ಧಿಯನ್ನು ಕಾಣಲು ಸಾಧ್ಯಯೆಂದು ಮನಗಾಣಲಾಗಿದೆ. ಇದು ಮುಖ್ಯವಾಗಿ ಸ್ಥಳೀಯ ಆಡಳಿತದ ಕಾರ್ಯಕ್ಷಮತೆಯ ಮೇಲೆ ಆಧಾರಿತವಾಗಿದೆ. ಮುಂದುವರಿದು ತೀರಾ ಹಿಂದುಳಿದ ಕೂಡ್ಲಿಗಿ ಪಟ್ಟಣ ಪಂಚಾಯತಿಯ ಕುಟುಂಬಗಳು ಮತ್ತು ಚುನಾಯಿತ ಸದಸ್ಯರುಗಳಗಿಂತ ಸಾಪೇಕ್ಷವಾಗಿ ಮುಂದುವರಿದ ಹೊಸಪೇಟೆ ನಗರಸಭೆ ಕುಟುಂಬಗಳು ಮತ್ತು ಚುನಾಯಿತ ಪ್ರತಿನಿಧಿಗಳು ಮೇಲಿನ ಸೌಲಭ್ಯಗಳಿಗೆ ಗಮನಹರಿಸಿ ಹೆಚ್ಚಿನ ರೀತಿಯಲ್ಲಿ ಒದಗಿಸುವಂತೆ ಮಾಡಿ ಸಾಪೇಕ್ಷವಾಗಿ ಅಭಿವೃದ್ಧಿಯಾಗಿರುವುದನ್ನು ಗಮನಿಸಲಾಗಿದೆ ಎನ್ನಲಾಗಿದೆ.

## ಕೊನೆ ಟಿಪ್ಪಣಿಗಳು


೧. ಮುಖೇಶ್ ಪಿ. ಮಥೂರ್, ಸ್ಟ್ರಟಾಜಿ ಫಾರ್ ಕ್ಯಾಪಸಿಟಿ ಬ್ಯೂಲ್ಡಿಂಗ್ ಆಫ್ ಅರ್ಬನ್ ಗೌರ್ನಮೆಂಟ್– ಇನಿಸ್ಟ್ಯೂಟ್ ಇನ್ ಇಂಡಿಯಾ, ಪಿ.ಸಿ., ಎನ್‌ಐಯುಎ ಮತ್ತು ಎನ್‌ಐಪಿಎಫ್‌ಪಿ, ರೀಸರ್ಚ್ ಸ್ಟೇಡಿ ಸೀರಿಸ್, ನಂ. ೬೨, ಭಾರತ ಸರಕಾರ, ದೆಹಲಿ, ೧೯೮೩, ೧೯೮೯ ಮತ್ತು ೧೯೯೫.

೨. ಪ್ರದೀಪ್ ಸಚ್‌ದೇವ್, ಲೋಕಲ್ ಗವರ್ನಮೆಂಟ್ ಇನ್ ಇಂಡಿಯಾ, ಡೋರಲಿಂಗ್ ಕೈನರ್ಡಸಲೇ ಪಬ್ಲೀಕೇಷನ್, ದೆಹಲಿ, ೨೦೧೧, ಪುಟ ೧–೨.

೩. ಅರ್ಬನ್ ಅಫೇರ್ಸ್ ಕ್ವಾರ್ಟಲಿ, ವ್ಯಾಲೂಂ–ಫಿಫಿಫಿಖ, ೧ ಜನೇವರಿ–ಮಾರ್ಚ್, ೧೯೯೯, ಪು.೩೨–೩೪

೪. ಅದೇ ಪುಸ್ತಕ, ೧೯೯೫.

೫. ರಿಪೋರ್ಟ್ ಆಫ್ ದಿ ನ್ಯಾಶನಲ್ ಕಮಿಶನ್ ಆನ್ ಅರ್ಬನೈಜೇಶನ್, ನ್ಯೂಡೆಲ್ಲಿ, ಮಿನಿಸ್ಟರಿ ಆಫ್ ಡೆವಲಪ್ಪಮೆಂಟ್ ಗೌರ್ನಮೆಂಟ್ ಆಫ್ ಇಂಡಿಯಾ, ೧೯೮೮, ಪುಟ.೧

೬. ಅದೇ ಪುಸ್ತಕ, ಪುಟ. ೧–೧೭.

೭. ಎ. ಜಿ. ಕೊಡ್ಗಿ, ಮೂರನೇ ಹಣಕಾಸು ಆಯೋಗದ ವರದಿ–೨೦೦೩, ಕರ್ನಾಟಕ ಸರ್ಕಾರ, ಬೆಂಗಳೂರು.

೮. ಕರ್ನಾಟಕ ಸರ್ಕಾರ, ಪ್ರಜಾಪ್ರಭುತ್ವ , ವಿಕೇಂದ್ರೀಕರಣ ಮತ್ತು ಅಭಿವೃದ್ಧಿ (ಆಯವ್ಯಯ ಮತ್ತು ಲೆಕ್ಕಗಳು), ಎಸ್.ಐ.ಆರ್.ಡಿ. ಸಂಸ್ಥೆ, ಮೈಸೂರು.

೯. ಸತ್ಯಪಾಲ್ ಪುಲಿಯಾನಿ, ಕರ್ನಾಟಕ ಪೌರನಿಗಮಗಳ ಅಧಿನಿಯಮ–೧೯೬೪, ಪ್ರಕಾಶಕರು ಕೆಎಲ್‌ಜೆ ಗವರ್ನಮೆಂಟ್ ಆಫ್ ಇಂಡಿಯಾ, ಬೆಂಗಳೂರು, ೨೦೧೦, ಪುಟ.೧೪–೨೧

೧೦. ಪ್ರದೀಪ್ ಸಚ್‌ದೇವ್, ಲೋಕಲ್ ಗವರ್ನಮೆಂಟ್ ಇನ್ ಇಂಡಿಯಾ, ಡೋರಲಿಂಗ್ ಕೈನರ್ಡಸಲೇ ಪಬ್ಲೀಕೇಷನ್, ದೆಹಲಿ, ೨೦೧೧, ಪುಟ ೧–೨.

೧೧. ಕಾತ್ಯಾಯನಿ ಚಾಮರಾಜ್ ಮತ್ತು ಪ್ರಸನ್ನ ರಾವ್, ಜನತೆಗೆ ಅಧಕಾರ, ಸಿವಿಕ್ ಪಬ್ಲಿಕೇಷನ್, ಬೆಂಗಳೂರು, ೨೦೧೧, ಪು.೯–೧೬.

೧೨. ಎ.ಜಿ. ಕೊಡ್ಗಿ, ಮೂರನೇ ಹಣಕಾಸು ಆಯೋಗದ ವರದಿ–೨೦೦೩, ಕರ್ನಾಟಕ ಸರ್ಕಾರ, ಬೆಂಗಳೂರು.

೧೩. ಪೌರಾಯುಕ್ತರು, ಹೊಸಪೇಟೆ ನಗರಸಭೆ, ಡಿಸೆಂಬರ್–೨೦೧೪ ಮತ್ತು ಮುಖ್ಯಾಧಿಕಾರಿಗಳು, ಕೂಡ್ಲಿಗಿ–ಪಟ್ಟಣ ಪಂಚಾಯಿತಿ, ಮಾರ್ಚ್ ೫, ೨೦೧೪.

ಭಾರತದಲ್ಲಿ ನಗರೀಕರಣವು ಪ್ರಪಂಚದ ಬೇರೆಡೆಯಂತೆ ತ್ವರಿತಗತಿಯಲ್ಲಿ ಸಾಗುತ್ತಿದೆ. ೧೯೫೭ರಲ್ಲಿ ಭಾರತದಲ್ಲಿ ನಗರ ಜನಸಂಖ್ಯೆಯು ೨೫ ಮಿಲಿಯನ್ ಇದ್ದು, ೨೦೨೦ರ ಹೊತ್ತಿಗೆ ಅದು ೫೫೦ ಮಿಲಿಯನ್ ಮುಟ್ಟಬಹುದೆಂದು ಅಂದಾಜಿಸಲಾಗಿದೆ. ನಗರೀಕರಣದಲ್ಲಿ ಈ ಅಪ್ರತ್ಯಾಕ್ಷಿತ ಬೆಳವಣಿಗೆಯು ಗ್ರಾಮೀಣ ಜನರನ್ನು ನಗರ ಪ್ರದೇಶಗಳಿಗೆ ವಲಸೆ ಹೋಗಲು ಪ್ರೇರೆಪಿಸುತ್ತದೆ. ನಗರೀಕರಣದ ಇತರ ಉತ್ತೇಜನಕಾರಿ ಅಂಶಗಳೆಂದರೆ ಕೈಗಾರೀಕರಣ, ಆರ್ಥಿಕ ಬೆಲವಣಿಗೆ, ಸಾರಿಗೆ ಸಾಧನಗಳ ವಿಸ್ತರಣೆ, ವ್ಯಾಪಾರ ಮತ್ತು ವಾಣಿಜ್ಯದಲ್ಲಿ ವೃದ್ಧಿ ಹಾಗೂ ಕೈಗಾರಿಕಾ ಕ್ಷೇತ್ರದಲ್ಲಿ ಹೊಸ ನಗರ ಸ್ಥಾಪನೆ ಇತ್ಯಾದಿ. ತೀವ್ರಗತಿಯಲ್ಲಿ ಬೆಳೆಯುತ್ತಿರುವ ನಗರೀಕರಣವೂ ನಗರ ಸರಕಾರದ ಮೇಲೆ ವಸತಿಯ ಕೊರತೆ, ನಗರ ಸೌಂದರ್ಯದ ಮೇಲೆ ಪ್ರಯಾಸ, ಬೇಕಾಬಿಟ್ಟಿ ನಗರಗಳ ಬೆಳವಣಿಗೆ, ಕೊಳಚೆ ಪ್ರದೇಶಗಳ ಬೆಳವಣಿಗೆ, ನಗರ ಬಡತನ, ಉದ್ಯೋಗವಕಾಶದ ಕೊರತೆ, ಸಾಮಾಜಿಕ ಯೋಜನೆ, ನಗರ ಪ್ರದೇಶಗಳನ್ನು ಗ್ರಾಮೀಣವಾಗಿಸುವುದು, ವ್ಯವಸಾಯದ ಭೂಮಿಯನ್ನು ಅತಿಕ್ರಮಿಸುವುದು, ನಗರ ಜೀವನದ ವಿಭಿನ್ನ ನ್ಯೂನ್ಯತೆಗಳು, ನೈತಿಕ ಮೌಲ್ಯಗಳ ಸವಕಳಿ ಇತ್ಯಾದಿ ಅಂತಹ ಗಂಭೀರ ಸವಾಲುಗಳನ್ನು ಒಡ್ಡಿದೆ.

ಸಂವಿಧಾನ ತಿದ್ದುಪಡಿಯ ೭೪ನೇ ಪರಿಚ್ಛೇದವು ನಗರ ಪ್ರದೇಶ ಸಮಾಜದಲ್ಲಿ ಅರ್ಥಗರ್ಭಿತ ಬದಲಾವಣೆಗಳನ್ನು ತಂದಿದೆ. ಮಾರ್ಪಡಿಸಿದ ರಚನೆಯ ಪ್ರಕಾರ ದೊಡ್ಡ ಪ್ರದೇಶಗಳಲ್ಲಿ ನಗರಸಭೆಯನ್ನು, ಸಣ್ಣ ನಗರಗಳಲ್ಲಿ ಪಟ್ಟಣ ಪಂಚಾಯಿತಿಯನ್ನು, ಸಂಕ್ರಮಣ ಕಾಲೀಣ ಗ್ರಾಮೀಣ ಪ್ರದೇಶಗಳಲ್ಲಿ 'ನಗರ ಪಂಚಾಯಿತಿ'ಯ ಹೊಸ ವ್ಯವಸ್ಥೆಯು ಒಳಗೊಂಡಿದೆ. ವಿವಿಧ ಸಮಿತಿಯಲ್ಲಿ ಜನರಿಗೆ ಸಾರ್ಥಕವಾಗಿ ಭಾಗಿಧಾರಿಗಳಾಗಲು ಅವಕಾಶವಿದೆ. ಸ್ಥಳೀಯ ಸಂಸ್ಥೆಗಳಿಗೆ ಚುನಾವಣೆಯು ನಿಯಮಿತವಾಗಿ ನಡೆಯುವವು. ಪ್ರತ್ಯೇಕ ರಾಜ್ಯ ಚುನಾವಣೆ ಸಮಿತಿಯನ್ನು ಸ್ಥಾಪಿಸಲಾಗಿದೆ. ಈ ಹೊಸ ತಿದ್ದುಪಡಿಯು ಪ್ರತ್ಯೇಕ ರಾಜ್ಯ ಹಣಕಾಸು ಸಮಿತಿಯನ್ನು ಪೂರೈಸುತ್ತದೆ. ಸಂಬಂಧಿತ ಸ್ಥಳೀಯ ಸಂಸ್ಥೆಗಳ ಹಾಗೂ ಆಯಾಯ ಸ್ಥಳೀಯ ಯೋಜನೆಗಳು ಜಿಲ್ಲಾ ಯೋಜನಾ ಸಮಿತಿ ಮತ್ತು ಮಹಾನಗರ ಯೋಜನಾ ಸಮಿತಿ, ಸ್ಥಳೀಯ ಸಂಸ್ಥೆಗಳ ಮೂಲಕ ದೃಢವಾಗುತ್ತದೆ. ಇದು

ಒಂದು ಸಮಗ್ರ ಅಭಿವೃದ್ಧಿಯ ಮಾರ್ಗವಾಗಿದೆ. ಅಲ್ಲದೇ, ಮಹಿಳೆಯರಿಗೆ ಮತ್ತು ಹಿಂದುಳಿದ ಜಾತಿಗಳಿಗೆ ಮೀಸಲಾತಿಯನ್ನು ಸಹ ಅವಕಾಶ ಮಾಡಿಕಟ್ಟಿದೆ ಹಾಗೂ ಅಧ್ಯಕ್ಷರ ಮೀಸಲಾತಿಯನ್ನೂ ಸಹ ೭೪ನೇ ತಿದ್ದುಪಡಿಯಲ್ಲಿ ಸೇರಿಸಲಾಗಿದೆ. ಸಂವಿಧಾನದ ೧೨ನೇ ಅಧಿಸೂಚಿಯು ನಗರ ಸ್ಥಳೀಯ ಸಂಸ್ಥೆಗಳ ೧೮ ವಿಷಯಗಳನ್ನು ಪಟ್ಟಿಮಾಡಿದೆ. ಅವುಗಳು ನಗರ ಶಕ್ತಿ ಯೋಜನೆ, ನಗರ ಬಡತನ, ನಗರ ಅರಣ್ಯಸಂಪನ್ಮೂಲ ಯೋಜನೆಗಳು, ನಗರ ಪರಿಸರ ಸಂರಕ್ಷಣೆ, ಸಾಂಸ್ಕೃತಿಕ, ಶಿಕ್ಷಣ ಮತ್ತು ಆರೆಗ್ಯ, ಇತ್ಯಾದಿ, ಇತರ ನಿಯಮಿತ ಕಾರ್ಯಗಳೆಂದರೆ ನೀರು ಸರಬರಾದು, ರಸ್ತೆ ಬೀದಿ ದೀಪಗಳು ಮತ್ತು ನೈರ್ಮಲ್ಯೀಕರಣ ಹಾಗೂ ವಸತಿ ಒದಗಿಸುವುದು ಇತ್ಯಾದಿ.

ನಗರಗಳ ವಿಷಯಗಳನ್ನು ಸಮರ್ಪಕವಾಗಿ ನಿರ್ವಹಿಸಲು ಮೂರು ಅಂಶಗಳ ಅವಶ್ಯಕವಿದೆ ಅವುಗಳೆಂದರೆ ಅನುಕೂಲಕರ ಅಧಿಕಾರ ರಚನೆ, ಗತಿಶೀಲ ಮತ್ತು ದೂರದರ್ಶಿ ನಾಯಕತ್ವ ಮತ್ತು ಪ್ರಭಾವಿ ನಾಗರಿಕತ್ವ. ಯಾವುದೇ ಸಂಘಗಳಲ್ಲಿ ಸಮರ್ಥ ಮತ್ತು ಪ್ರಭಾವಿ ಕಾರ್ಯಗಳು ನಡೆಯಬೇಕಾದರೆ ಅದು ಮುಖ್ಯವಾಗಿ ಕಾರ್ಯನೀತಿ ಮತ್ತು ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುವ ಸಿಬ್ಬಂದಿ/ನೌಕರರ ಮೇಲೆ ಅವಲಂಬಿತವಾಗಿದೆ. ಹರ್‌ಮನ್ ಫೈನಲ್ ಅವಲೋಕಿಸಿದಂತೆ "ಎಷ್ಟೇ ಸಮರ್ಪಕವಾಗಿ ಸಂಘಟಿಸಿದ್ದರೂ, ರಾಜಕೀಯ ತತ್ವಗಳನ್ನು ಹೊಂದಿದ್ದರೂ, ಎತ್ತರದ ನಾಯಕತ್ವ ಮತ್ತು ಹಿಡಿತ ಹೊಂದಿದ್ದರೂ ಅಂತಹ ವಿಶೇಷ ಸಂದರ್ಭಗಳಲ್ಲಿ ಖಾಯಂ ಆಗಿ ಅಥವಾ ವಿಶೇಷವಾಗಿ ಅದೇ ಉದ್ದೇಶಕ್ಕಾಗಿ ನೇಮಿಸಿದ್ದಲ್ಲಿ ಅಧಿಕಾರವನ್ನು ಮತ್ತು ಜ್ಞಾನವನ್ನು ಪೂರ್ತಿಗೊಳಿಸಲು ಸರಕಾರಿ ವಿಶೇಷಜ್ಞರು ಇರದ ಹೊರತು ಅದು ಯಾವುದೇ ಪರಿಣಾಮ ಬೀರುವುದಿಲ್ಲ.೧ ಆದ್ದರಿಂದ ನಗರಸಭೆ ಮಟ್ಟದಲ್ಲಿ ಸಮರ್ಥ ಕುಶಲ ಶಾಸನಿಕ ಮತ್ತು ತಾಂತ್ರಿಕ ಸಿಬ್ಬಂದಿಯನ್ನು ಸರಕಾರದಲ್ಲಿ ಹೊಂದುವುದು ಅನಿವಾರ್ಯವಾಗಿದೆ. ಮತ್ತೊಮ್ಮೆ ಸ್ಥಳೀಯ ಸರಕಾರದ ಯಶಸ್ಸು ಹೆಚ್ಚಾಗಿ ಅಧಿಕಾರಿಗಳ ಮತ್ತು ಗೈರು ಅಧಿಕಾರಿಗಳ ವಿವಿಧ ಗುಣಗಳ ಪ್ರಭಾವಿ ಒಕ್ಕೂಟದ ಗುಣಧರ್ಮ ಹೊಂದಿದೆ.

ಹೊಸಪೇಟೆ-ಕೂಡ್ಲಿಗಿ ಸ್ಥಳೀಯ ಸಿಬ್ಬಂದಿ ಆಡಳಿತವು ಚೆನ್ನಾಗಿ ಕಾರ್ಯನಿರ್ವಹಿಸುವುದರಲ್ಲಿ ಪಟ್ಟಣ ಪಂಚಾಯಿತಿಗಿಂತ ನಗರಸಭೆಯು ಸಾಪೇಕ್ಷವಾಗಿ ಸಫಲತೆಯನ್ನು ಕಂಡಿವೆ. ಈ ವಿಷಯದಲ್ಲಿ ಹೆಚ್ಚಿನ ಸಾಮರ್ಥ್ಯತೆ ಹೊಂದಬೇಕಾದ ಅವಶ್ಯಕತೆ ಇದೆ. ಏಕೀಕೃತ ಅಥವಾ ಪ್ರನಾಳೆ ವ್ಯವಸ್ಥೆಯು ವಾಸ್ತವಿಕವಲ್ಲದಿದ್ದರೂ ಪ್ರತ್ಯೇಕ ಸಿಬ್ಬಂದಿ ವ್ಯವಸ್ಥೆಗಿಂತ ಉತ್ತಮ, ಮತ್ತು ಅದನ್ನು ಉಪಯುಕ್ತವಾಗಿ ಸುಧಾರಣೆ ಮಾಡಿದಲ್ಲಿ ಅದು ಸ್ಥಳೀಯ ಸಂಸ್ಥೆಗಳಲ್ಲಿ ಸೇವೆ ಸಲ್ಲಿಸಲು ಸಮರ್ಪಕ ಸಾಧನವಾಗಬಹುದು ಎಂದು ಹೇಳಬಹುದಾಗಿದೆ. ಅಲ್ಲದೇ ಅದು ನಗರ ಸ್ಥಳೀಯ ಸಂಸ್ಥೆಗಳ ಸರಕಾರದ ಮೂಲಭೂತ ಮೌಲ್ಯಗಳ ಅನುಸಾರವಾಗಿಯೂ ಇರುವುದು. ಎಲ್ಲಾ ಸಂಘಗಳು, ಸರ್ಕಾರವಾಗಿರಲಿ ಅಥವಾ ಸಕಾರೇತರ ಸಂಸ್ಥೆಗಳಾಗಲಿ ಅದರ ಸದಸ್ಯರನ್ನು ತಮ್ಮ ಉದ್ದೇಶಗಳನ್ನು ಸಾಧಿಸಲು ಸಾಮೂಹಿಕ ಪ್ರಯತ್ನ ಮಾಡಲು ಪ್ರೇರೇಪಿಸಲು, ಉತ್ಸಾಹಿಸಲು ಮತ್ತು ಮಾರ್ಗದರ್ಶಿಸಲು ಉತ್ತಮ ನಾಯಕತ್ವದ ಅವಶ್ಯಕತೆ ಇದೆ. ರಾಜ್ಯ ಮತ್ತು ಕೇಂದ್ರ ಸರಕಾರಗಳ ಜೊತೆಗೆ ಹೋಲಿಸಿ ನೋಡಿದಾಗ ಸ್ಥಳೀಯ ಮಟ್ಟದ, ನಗರ ಮಟ್ಟದ ನಾಯಕತ್ವವು ಬಹಳ ಮಹತ್ವಪೂರ್ಣವಾಗಿದೆ. ಏಕೆಂದರೆ ಅದು ಕಡಿಮೆ ಕ್ಷೇತ್ರಗಳಲ್ಲಿ ಮತ್ತು ಕಡಿಮೆ ಪ್ರಮಾಣದ ಜನಸಂಖ್ಯೆಗೆ ತನ್ನ ಸೇವೆಯನ್ನು ಒದಗಿಸುತ್ತದೆ.

ಭಾರತದ ನಗರಗಳು ಮತ್ತು ಪಟ್ಟಣಗಳು ನಗರ ಸ್ಥಳೀಯ ಸಂಸ್ಥೆಗಳಿಗೆ ಕ್ಷಮತೆಯುಳ್ಳ ಪ್ರತಿನಿಧಿಗಳನ್ನು ಕಳಿಸುವಲ್ಲಿ ವಿಫಲವಾಗಿವೆ. ಕೆಲವೇ ಸಮರ್ಥ ಸಭಾಸದಸ್ಯರನ್ನು ಇಲ್ಲಿ ಅಲ್ಲಿ

ಕಾಣಬಹುದು. ಆದರೆ ಅವರು ಸಾಮಾನ್ಯವಾಗಿ ಪೂರ್ಣವಲ್ಲದ ಮತ್ತು ತೀವ್ರ ಅಭಾವದಲ್ಲಿರುತ್ತಾರೆ. ಇದು ಸಮನಾಗಿ ಒಳ್ಳೆಯ ಆಡಲಿತಗಾರರಿಗೂ ಅನ್ವಯಿಸುತ್ತದೆ. ನಗರ ಸ್ಥಳೀಯ ಸಂಸ್ಥೆಯ ಕೆಲಸಗಳಿಗಾಗಿ ನೇಮಕವಾದ ಅಧಿಕಾರಿಗಳು ತಮಗೆ ನಿಯಮಿಸಿದ ಕೆಲಸಗಳಿಗೆ ಹೊಂದಿಕೊಳ್ಳುವುದಿಲ್ಲ. ಸ್ಥಳೀಯ ಮಟ್ಟದ ಮತ್ತು ಏರುತ್ತಿರುವ ಪ್ರಮುಖ ಅಭಿಲಾಷೆಯ ವಾತಾವರಣದ ಮುಖಾ-ಮುಖಿ ಸ್ಥಿತಿಯಲ್ಲಿ ಸ್ಥಳೀಯ ಸಂಸ್ಥೆಗಳ ಅಧಿಕಾರಿಗಳಿಗೆ ಕರ್ತವ್ಯ ನಿರ್ವಹಿಸುವುದು ಕಷ್ಟಕರವಾಗಿದೆ ಎಂದು ತಿಳಿಯಲಾಗಿದೆ. ಪ್ರಸ್ತುತ ಅಧ್ಯಯನದಿಂದ ಅಧಿಕಾರ ರಚನೆಯು ಸಮನಾಗಿಲ್ಲವೆಂದು ತಿಳಿಯುತ್ತದೆ. ಹೊಸಪೇಟೆ-ಕೂಡ್ಲಿಗಿ ಸ್ಥಳೀಯ ಸಂಸ್ಥೆಗಳಲ್ಲಿ ಜಾತಿ ಆಧಾರದ ಮೇಲೆ ಅಧಿಕಾರ ರಚನೆ ಪ್ರಬಲವಾಗಿದೆ. ನಗರಸಭೆಯ-ಪಟ್ಟಣ ಪಂಚಾತಿಯ ಅಧಿಕಾರ ರಚನೆಯಲ್ಲಿ ಸೀಮಿತ ಭೂಮಿಕೆಯಿದೆ. ಹಾಗಿದ್ದರೂ ಸ್ಥಳೀಯ ಸಂಸ್ಥೆಯ ಅಧಿಕಾರ ರಚನೆಯಲ್ಲಿ ಮಹಿಳೆಯರ ಪ್ರಾತಿನಿಧಿತ್ವ ಹೋಲಿಕೆಯ ದೃಷ್ಟಿಯಿಂದ ಚೆನ್ನಾಗಿದೆ. ಅವರಲ್ಲಿ ಅಭಿವ್ಯಕ್ತಿ ಮಟ್ಟವನ್ನು ಕಾಣಬಹುದು. ಸ್ಥಳೀಯ ಸಂಸ್ಥೆಗಳ ಅಧಿಕಾರ ರಚನೆಯು ವಿವಿಧ ಜನರ ಅಭಿವ್ಯಕ್ತಿ ಮತ್ತು ಆಕಾಂಕ್ಷೆಗಳನ್ನು ಮತ್ತು ಪ್ರದೇಶ ಅವಶ್ಯಕತೆಗಳನ್ನು ನಿರ್ಧಾರ ತೆಗೆದುಕೊಳ್ಳುವ ಪ್ರಕ್ರೀಯ ಮೂಲಕ ಸುಲಭ ಮಾಡಬೇಕು. ಇದನ್ನು ಪೂರ್ಣ ಪ್ರಮಾಣದಲ್ಲಿ ತಿಳಿಯಲಾಗಿಲ್ಲ. ಜನತೆಯ ಅವಶ್ಯಕತೆಯ ಅಭಿವ್ಯಕ್ತಿಯು ರಾಜಕೀಯ ವ್ಯವಸ್ಥೆಯ ಒಂದು ಕಾರ್ಯವಾಗಿದೆ. ಆದರೆ ಸ್ಥಳೀಯ ಸಂಸ್ಥೆಯು ಪೂರ್ತಿಯಾಗಿ ಜನತೆಯ ಅವಶ್ಯಕತೆಗಳನ್ನು ಅಭಿವ್ಯಕ್ತಿಸುವ ಸ್ಥಿತಿಯಲ್ಲಿಲ್ಲ. ಜನತೆಯ ಪ್ರತಿನಿಧಿಗಳಿಗೆ ಸರಿಯಾಗಿ ಪ್ರೇರಣೆ, ತರಬೇತಿ ಮತ್ತು ಸಹಾಯ ದೊರೆತರೆ ಅದು ಉತ್ತಮವಾಗಿ ಕಾರ್ಯನಿರ್ವಹಿಸಬಹುದಾಗಿದೆ. ಕೆಲವು ಸಭಾ ಸದಸ್ಯರು ನಿಜವಾಗಿಯೂ ಉತ್ಸುಕವಾಗಿದ್ದು ಮತ್ತು ಜನತೆಯ ಅವಹಾಲುಗಳಿಗೆ ಕಾಳಜಿ ಇರುವುದು ಒಂದು ಸಮಾಧಾನಕರ ವಿಷಯವಾಗಿದೆ. ಇದು ಸ್ಥಳೀಯ ಸಂಸ್ಥೆಗಳ ವಿಷಯದಲ್ಲಿ ವಾಸ್ತವ ಎದ್ದು ಹೇಳಲಾಗುತ್ತದೆ.

ಸ್ಥಳೀಯ ಸಂಸ್ಥೆಗಳಿಗೆ ನೀಡಿದ ಅಧಿಕಾರ ರಚನೆ ಮತ್ತು ನಾಯಕತ್ವದ ಸಾಮಾರ್ಥ್ಯವು ಬಹಳವಾಗಿ ನಾಗರಿಕರ ಸ್ವಭಾವದ ಮೇಲೆ ಅವಲಂಬಿಸಿದೆ. ಪ್ರಬುದ್ಧ ಮತ್ತು ಶಾಸನೀಯ ನಾಗರೀಕರು ಒಂದು ಬಹು ಅಮೂಲ್ಯ ಆಸ್ತಿಯಾಗಿದ್ದಾರೆ. ಇದರ ಅನುಪಸ್ಥಿತಿಯಲ್ಲಿ ಎಲ್ಲ ಮಟ್ಟದಲ್ಲಿ ರಾಜಕೀಯ ವ್ಯವಸ್ಥೆಯು ಸರಿಯಾಗಿ ಕಾರ್ಯನಿರ್ವಹಿಸಲು ಮತ್ತು ಸೇವೆ ಒದಗಿಸಲು ಸಾಧ್ಯವಿಲ್ಲ. ಆದ್ದರಿಂದ ಅದು 'ಮೆದು ರಾಜ್ಯ'ದ ಉದ್ಭವಕ್ಕೆ ದಾರಿಯಾಗುತ್ತದೆ. ಮೆದುರಾಜ್ಯವನ್ನು ಗುನ್ನರ್ ಮಿರಾಡಲ್ ಪುಷ್ಠಿಕರಿಸುತ್ತಾರೆ. ಅದು ನಾಯಕರ ಸಹನಶೀಲತೆ ಮತ್ತು ಸಾಮಾಜಿಕ ಅನುಶಾಸನದ ತಳಸ್ಥರವನ್ನು ಸೂಚಿಸುತ್ತದೆ.  ಈ ಪದ್ಧತಿಯು ನಗರ ಜನಸಂಖ್ಯೆಯ ಒಡಕಿಗೆ ಕಾರಣವಾಗುತ್ತದೆ, ಆದಕಾರಣ ನಗರ ಸ್ಥಳೀಯ ಸಂಸ್ಥೆಗಳಲ್ಲಿ ಬಹಳಷ್ಟು ತೊಂದರೆಗಳು ಒಳ ಹೊಕ್ಕವು. ಈ ರೀತಿಯ ನಾಗರೀಕತೆಯಿಂದ ನಗರ ಸರಕಾರಗಳ ಪ್ರದರ್ಶನ ಮತ್ತು ಪ್ರಭಾವವು ಪ್ರತಿಬಂಧಿಸಲ್ಪಟ್ಟಿತು. ಇದೇ ತೆರನಾದ ಸ್ಥಿತಿಯು ಹೊಸಪೇಟೆ ನಗರಸಭೆ – ಕೂಡ್ಲಿಗಿ ಪಟ್ಟಣ ಪಂಚಾಯಿತಿಯಲ್ಲಿ ಕಾಣಬಹುದಾಗಿದೆ. ಯಾವುದೇ ತರಹದ ವಿಸ್ತಾರಕ ಅವಶ್ಯಕತೆಗಳನ್ನು ಪೂರೈಸಲು ಹಣಕಾಸು ಪ್ರಬಲವಾದ ಮತ್ತು ಪ್ರಮುಖ ಪಾತ್ರವಹಿಸುತ್ತದೆ. ಯಾವುದೇ ಸಂಘವು ಕನಿಷ್ಠ ಹಣಕಾಸು ಇಲ್ಲದೆ ಅಸ್ತಿತ್ವದಲ್ಲಿರಲು ಸಾಧ್ಯವಿಲ್ಲ, ಅದು ತನ್ನ ಅಭಿಪ್ರಾಯಗಳನ್ನು ಪೂರ್ಣ ಮಟ್ಟದಲ್ಲಿ ಗೆಲ್ಲಲ್ಲು ಸಾಧ್ಯವಿಲ್ಲ. ಎಲ್ಲಾ ಪ್ರಯತ್ನಗಳು ಹಣಕಾಸಿನ ಮೇಲೆ ಅವಲಂಬಿತವಾಗಿವೆ. ಆದ್ದರಿಂದ ಪ್ರಪ್ರಥಮ ಗಮನವನ್ನು ಖಜಾನೆ ಕಡೆ

ಕೊಡಬೇಕು. ಹಣಕಾಸಿನ ಪ್ರಾಮುಖ್ಯತೆ ಆಡಳಿತದಲ್ಲಿ ಎಷ್ಟು ಮಹತ್ವದ್ದಾಗಿದೆ ಎಂದು ತಿಳಿಸುತ್ತಾ ಪ್ರಖ್ಯಾತ ಬ್ರಿಟನ್ನಿನ ಪ್ರಧಾನ ಮಂತ್ರಿ ಲಾಯ್ಡ್‌ಜಾರ್ಜ್ ಒಮ್ಮೆ ಸರಕಾರವನ್ನು ಹಣಕಾಸು ಎಂದು ಅಭಿಪ್ರಾಯ ಪಟ್ಟರು. ಸ್ಥಳೀಯ ಸರಕಾರದ ಹಣಕಾಸು ಈ ರೀತಿಯಾಗಿ ಮಹತ್ವದ್ದಾಗಿದೆ. ಸ್ಥಳೀಯ ಸಂಸ್ಥೆಗಳಿಗೆ ಆಯಾಯ ಸ್ಥಳೀಯ ಸಂಸ್ಥೆಗಳು ಅಭಿವೃದ್ಧಿ ಮತ್ತು ಸುಧಾರಣೆಯನ್ನು ತರಲು ತನ್ನ ಉತ್ತರದಾಯಿತ್ವವನ್ನು ನಿರ್ವಹಿಸಲು ಯೋಗ್ಯವಾಗಿಸಲು ಪರ್ಯಾಯವಾಗಿ ಹಣಕಾಸಿನ ಸಹಾಯದ ಅವಶ್ಯಕತೆಯಿದೆ. ದುರದೃಷ್ಟದ ಸಂಗತಿಯೆಂದರೆ ಭಾರತದಲ್ಲಿನ ಸ್ಥಳೀಯ ಸಂಸ್ಥೆಗಳು ಸಂಪನ್ಮೂಲಗಳ ಕೊರತೆ ಹೊಂದಿದ್ದು ಹಣಕಾಸು ಮತ್ತು ಸೇವೆಯ ಅಪೇಕ್ಷಣೀಯ ಮಟ್ಟದ ನಡುವಿನ ಅಂತರವು ನಿರಂತವಾಗಿ ದೊಡ್ಡದಾಗುತ್ತಿದೆ. ಸ್ಥಳೀಯ ಸಂಸ್ಥೆಗಳಲ್ಲಿ ಸ್ಥಾಪಿತ ಹಣಕಾಸು ಸ್ಥಿತಿಯು ವ್ಯವಸಾಯಾರ್ಥವಾಗಿಲ್ಲ. ರಾಜ್ಯ ಸರಕಾರದ ಬಂಡವಾಳದ ಮಾದರಿಯು ಬಹಳ ಉದಾರವಾಗಿರಬೇಕು. ಅದೇ ರೀತಿ ನಗರಸಭೆ–ಪಟ್ಟಣ ಪಂಚಾಯಿತಿಗಳು ಗರಿಷ್ಠ ಮಟ್ಟದಲ್ಲಿ ಸ್ವಂತ ಸಂಪನ್ಮೂಲಗಳನ್ನು ಸಂಘಟಿಸಿಕೊಳ್ಳಬೇಕು. ಇದರಿಂದ ಅದು ರಾಜ್ಯ–ಕೇಂದ್ರ ಸರಕಾರದ ಬಂಡವಾಳದ ಮೇಲೆ ಹೆಚ್ಚಾಗಿ ಅವಲಂಬಿಸುವುದನ್ನು ತಪ್ಪಿಸಬಹುದಾಗಿದೆ. ಹೊಸಪೇಟೆ–ಕೂಡ್ಲಿಗಿ ಸ್ಥಳೀಯ ಸಂಸ್ಥೆಗಳು ಆದಾಯದ ಸಂಪನ್ಮೂಲಗಳು ತನ್ನ ಕಾರ್ಯಗಳನ್ನು ಸಮರ್ಥವಾಗಿ ನಿರ್ವಹಿಸಲು ಸಾಲದಾಗಿದೆ. ಸ್ಥಳೀಯ ಸಂಸ್ಥೆಯ ಕಾರ್ಯಗಳು ಯಾವಾಗಲೂ ಹೆಚ್ಚುತ್ತಿರುತ್ತವೆ. ಇಷ್ಟಾಗಿಯೂ ಸರಕಾರವು ಇದರ ಕಡೆಗೆ ಗಂಭೀರವಾಗಿ ಪರಿಗಣಿಸಿ ಸ್ಥಳೀಯ ಸಂಸ್ಥೆಗಳಿಗೆ ತನ್ನ ಹಲವಾರು ಕಾರ್ಯಗಳನ್ನು ಕೈಗೊಳ್ಳಲು ವಿಶೇಷ ಹಣಕಾಸಿನ ಸಹಾಯವನ್ನು ನೀಡುತ್ತಿಲ್ಲ. ಸ್ಥಳೀಯ ಸಂಸ್ಥೆಯ ವ್ಯವಸ್ಥೆಯು ಸಮರ್ಪಕರವಾಗಿರಬೇಕು. ಆದಾಯ ಮತ್ತು ವೆಚ್ಚಗಳ ನಡುವೆ ಸಮತೋಲನೆಯನ್ನು ಕಾಪಾಡಿಕೊಳ್ಳಬೇಕು. ಇಲ್ಲವಾದಲ್ಲಿ ನಗರಸಭೆ ಪಟ್ಟಣಪಂಚಾಯಿತಿ ಹಣಕಾಸಿನ ತೊಂದರೆಯನ್ನು ಎದುರಿಸಬೇಕಾಗುತ್ತದೆ. ಚುನಾಯಿತ ಪ್ರತಿನಿಧಿಗಳನ್ನು ಒಳಗೊಂಡು ಸ್ಥಳೀಯ ಸಂಸ್ಥೆಗಳು ಅಧಿಕಾರಿಗಳು ಬಂಡವಾಳವನ್ನು ಹುಟ್ಟಿಸಲು ಹೊಸ ತೆರಿಗೆಗಳನ್ನು ವಿಧಿಸಲು ಹಿಂಜರಿಯಬಾರದು. ನಮ್ಮ ಸ್ಥಳೀಯ ಸಂಸ್ಥೆಯಲ್ಲಿ ಹೊಸ ತೆರಿಗೆಗಳನ್ನು ಬಹಳ ವರ್ಷಗಳಿಂದ ವಿಧಿಸಿಲ್ಲ. ಸ್ಥಳೀಯ ಸಂಸ್ಥೆಯ ಆಡಳಿತದಲ್ಲಿ ಲೆಕ್ಕ ಮತ್ತು ಲೆಕ್ಕ ಪರೀಕ್ಷಣೆಗೆ ಪ್ರಮುಖ ಸ್ಥಾನವಿದೆ. ಇವೆರಡೂ ಸಾರ್ವಜನಿಕರ ಹಣದ ಸಂಗ್ರಹ ಮತ್ತು ಬಳಕೆಯನ್ನು ತಿಳಿಯುವ ಸಾಧನಗಳಾಗಿವೆ. ಹೊಸಪೇಟೆ ನಗರಸಭೆಯಲ್ಲಿ ಲೆಕ್ಕ ಮತ್ತು ಲೆಕ್ಕ ಪರೀಕ್ಷಣ ವ್ಯವಸ್ಥೆಯು ಚೆನ್ನಾಗಿದ್ದು, ಕೂಡ್ಲಿಗಿ ಪಟ್ಟಣ ಪಂಚಾಯಿತಿಯಲ್ಲಿ ಲೆಕ್ಕ ಮತ್ತು ಲೆಕ್ಕ ಪರೀಕ್ಷಣ ವ್ಯವಸ್ಥೆಯು ಸುಧಾರಣೆಯನ್ನು ಕಾಣಬೇಕಾಗಿದೆ. ಹಾಗಿದ್ದರೂ ಲೆಕ್ಕ ಪರೀಕ್ಷೆಯ ತಕರಾರುಗಳನ್ನು ಬಲಿಷ್ಠ ಹಣಕಾಸಿನ ಆಡಳಿತದ ಹಿತಾಸಕ್ತಿಯಿಂದ ಬಹಳ ಕಾಲದವರೆಗೂ ಮುಂದೂಡಬಾರದು.

ರಾಜ್ಯ ಸರಕಾರವು ಸ್ಥಳೀಯ ಸರಕಾರಗಳಿಗೆ ನಗರಾಭಿವೃದ್ಧಿ ಕಾರ್ಯಕ್ರಮಗಳನ್ನು ಕೈಗೊಳ್ಳಲು ಹಣಕಾಸು ಒದಗಿಸಲು ಗಂಭೀರವಾಗಿ ಪರಿಗಣಿಸಿ ಪರಿಕ್ರಮ ನಿಧಿಯನ್ನು ಸ್ಥಾಪಿಸಬೇಕು ಎಂದು ಸೂಚಿಸಿದೆ. ಸ್ಥಳೀಯ ಸಂಸ್ಥೆಯ ಅವಶ್ಯಕತೆಗಳನ್ನು ನೆರವೇರಿಸಲು ನಗರಸಭೆ ಮತ್ತು ಪಟ್ಟಣ ಪಂಚಾಯಿತಿ ಹಣಕಾಸು ರಚಿಸುವುದು ಸೂಕ್ತವಾಗಿದೆ. ಸ್ಥಳೀಯ ಸಂಸ್ಥೆಗಳ ಅಭಿವೃದ್ಧಿ ಯೋಜನೆ ಮತ್ತು ಉಪಾಯಗಳನ್ನು ಪ್ರೋತ್ಸಾಹಿಸಲು ಹಣಕಾಸು ಪ್ರಾಧಿಕಾರವನ್ನು ರಚಿಸಲು ಸೂಚಿಸಲಾಗಿದೆ. ಅಮೇರಿಕೆಯಂತಹ ದೇಶವು ಕೂಡ ಇಂತಹ ಕೇಂದ್ರ ಸಾಲ ಬೇಡಿಕೆಯನ್ನು ಬೆಂಬಲಿಸುತ್ತಾ ಹೀಗೆ ಅಭಿಪ್ರಾಯ ಪಟ್ಟಿದೆ. ಇಂತಹ ಏಜನ್ಸಿಗಳು ಕಡಿಮೆ ದರದಲ್ಲಿ ಸಾಲವನ್ನು ಕೊಡುವುದು ಮಾತ್ರವಲ್ಲದೆ

ಸ್ಥಳೀಯ ಮಟ್ಟದಲ್ಲಿ ವೈಯಕ್ತಿಕ ಯೋಜನೆ ಮತ್ತು ದೊಡ್ಡ ಅವಧಿ, ಭೌತಿಕ ಯೋಜನೆಗಳಿಗೆ ತಾಂತ್ರಿಕ ಸಲಹೆಯನ್ನು ಸಹ ನೀಡುತ್ತದೆ. ಭಾರತೀಯ ಸಂವಿಧಾನದ ೭೪ನೇ ತಿದ್ದುಪಡಿಯು ನಗರ ಸ್ಥಳೀಯ ಸಂಸ್ಥೆಗಳ ಹಣಕಾಸು ಅವಶ್ಯಕತೆಗಳನ್ನು ಪೂರೈಸಲು ಸ್ಥಳೀಯ ಸಂಸ್ಥೆಗಳ ಹಣಕಾಸು ಸಮಿತಿಯ ಸ್ಥಾಪನೆಗೆ ಶಿಫಾರಸು ಮಾಡಿದೆ. ಒಟ್ಟಾರೆಯಾಗಿ ಮೇಲಿನ ಅಧ್ಯಯನಗಳ ನಂತರ ತಿಳಿಯಬಹುದಾದ ಅಂಶವೆಂದರೆ ಆಡಳಿತದ ದೃಷ್ಟಿಯಿಂದ ನೋಡಿದಾಗ ಸ್ಥಳೀಯ ಸಂಸ್ಥೆಗಳಲ್ಲಿ ಕೆಲಸ ಕಾರ್ಯಗಳು ಜನರ ಅಭಿವೃದ್ಧಿಗಾಗಿ ಹೇಗೆ ನಿರ್ವಹಿಸಿದ್ದಾರೆ ಎಂದು ವಿವಿಧ ಅಧ್ಯಯನಗಳ ಮೂಲಕ ಸಮೀಕ್ಷಾ ವಿಧಾನವನ್ನು ಅನುಸರಿಸಿ ಎರಡು ಸ್ಥಳೀಐ ಸಂಸ್ಥೆಗಳಲ್ಲಿ ನೋಡಿದಾಗ ಕೂಡ್ಲಿಗಿ ಪಟ್ಟಣ ಪಂಚಾಯಿತಿ ಚುನಾಯಿತ ಸದಸ್ಯಗಿಂತ ಹೊಸಪೇಟೆ ನಗರ ಸಭೆಯ ಸದಸ್ಯರು ನಗರ ಪ್ರದೇಶದ ಅಭಿವೃದ್ಧಿಗಾಗಿ ಹೆಚ್ಚಿನ ಮಟ್ಟದಲ್ಲಿ ಶ್ರಮಿಸಿರುವುದು ಕಂಡು ಬರುತ್ತದೆ. ಅಂದರೆ, ಆರೋಗ್ಯ, ಶಿಕ್ಷಣ, ಮೂಲಭೂತ ಸೌಲಭ್ಯಗಳ ಇನ್ನಿತರ ಅವಶ್ಯಕತೆಗಳನ್ನು ಒದಗಿಸುವಲ್ಲಿ ಸಾಪೇಕ್ಷವಾಗಿ ನಗರಸಭೆಯು ಈಡೆರಿಸುತ್ತಾ ಬಂದಿರುವುದು ಮತ್ತು ಹಲವು ವಾರ್ಡಿನಲ್ಲಿ ಸಹ ಹಲವು ಸಮಸ್ಯೆಗಳಿಂದ ಇರುವುದನ್ನು ಕಾನಬಹುದಾಗಿದೆ. ಇಂತಹ ಬೆಳವಣಿಗೆಯನ್ನು ನೋಡಿದಾಗ ಅಭಿವೃದ್ಧಿಯನ್ನು ಸಾಮಾಜಿಕ ನ್ಯಾಯದ ನೆಲೆಯಲ್ಲಿ ನೋಡಿದಾಗ ಕೂಡ್ಲಿಗಿ ಪಟ್ಟಣ ಪಂಚಾಯಿತಿಯು ಹಿಂದುಳಿದಿರುವುದರಿಂದ ಅದಕ್ಕೆ ಅಭಿವೃದ್ಧಿಗಾಗಿ ಹೆಚ್ಚಿನ ರೀತಿಯಲ್ಲಿ ಸಹಕಾರ ನೀಡುತ್ತಾ ಅದನ್ನು ನಗರಸಭೆಗೆ ಹೋಲಿಕೆಯಂತೆ ಮುಂದುವರಿಸಲು ಹೆಚ್ಚಿನ ಹಣಕಾಸು, ಸಮರ್ಥ ಆಡಳಿತ ನಿಯೋಜನೆ, ಚುನಾಯಿತ ಸದಸ್ಯರ ರಾಜಕೀಯ ಇಚ್ಛಾಶಕ್ತಿಯನ್ನು ಸಾಧಿಸಿದಾಗ ಅಭಿವೃದ್ಧಿಯನ್ನು ನೋಡಬಹುದಾಗಿದೆ ಇಂದು ಹೇಳಲಾಗುತ್ತದೆ.

**ಅಧ್ಯಯದ ಫಲಿತಗಳು**

ನಗರ ಸ್ಥಳೀಯ ಸಂಸ್ಥೆಗಳ ಆಡಳಿತ ಸುಧಾರಣೆ ತರಲು ವಾರ್ಡಿನ ಜನರು ಭಾಗವಹಿಸುವಿಕೆ ಮುಖ್ಯ. ನಗರಸಭೆ ಮತ್ತು ಪಟ್ಟಣ ಪಂಚಾಯಿತಿಗಳ ಮುಖ್ಯಸ್ಥರು ಅವರು ವ್ಯಾಪ್ತಿಯಲ್ಲಿ ಬರುವ ವಾರ್ಡ್‌ಗಳಲ್ಲಿ ಜನರ ಸಮಸ್ಯೆಗಳ ಬಗ್ಗೆ ಏಕಕಾಲದಲ್ಲಿ ಗಮನ ನೀಡಲು ಆಗುವುದಿಲ್ಲ. ಎಲ್ಲಾ ನಗರಗಳಲ್ಲಿ ವಾರ್ಡ್ ಸಮಿತಿಗಳನ್ನು ಕಟ್ಟುನಿಟ್ಟಾಗಿ ಜಾರಿಗೊಳಿಸಿದರೆ ಆಡಳಿತದಲ್ಲಿ ಜನರ ನೇರ ಭಾಗವಹಿಸುವಿಕೆಗೆ ವೇದಿಕೆ ದೊರೆತಂತಾಗುತ್ತದೆ. ವಾರ್ಡಿನಲ್ಲಿ ಬಗೆಹರಿಯದಿರುವ ಸಮಸ್ಯೆಗಳ ಬಗ್ಗೆ ಚುನಾಯಿತ ಪ್ರತಿನಿಧಿಗಳು ಕಾರಣೀಭೂತರಾಗುತ್ತಾರೆ. ಈ ಎಲ್ಲ ಅಂಶಗಳು ತೀರಾ ಹಿಂದುಳಿದ ಕೂಡ್ಲಿಗಿ ಪಟ್ಟಣ ಪಂಚಾಯಿತಿಗಿಂತ ಸಾಪೇಕ್ಷವಾಗಿ ಅಭಿವೃದ್ಧಿ ಹೊಂದಿದ ಹೊಸಪೇಟೆ ನಗರಸಭೆಯಲ್ಲಿ ಉತ್ತಮವಾಗಿದೆ. ಜನರಿಗೆ ಮತ ಚಲಾವಣೆಯ ಹಕ್ಕಿನೊಂದಿಗೆ ಪ್ರಶ್ನಿಸುವ ಅಧಿಕಾರವನ್ನು ನೀಡಿದಾಗ ಮಾತ್ರ ಆಡಳಿತದಲ್ಲಿ ಪಾರದರ್ಶಕತೆ ತರಲು, ಸಮಸ್ಯೆಗಳಿಗೆ ಪರಿಹಾರ ಕಂಡುಕೊಳ್ಳಲು ಸಾಧ್ಯ. ಇದರಿಂದ ಪ್ರಜಾಪ್ರಭುತ್ವದ ಆಶಯ ಸಾಕಾರಗೊಳ್ಳುತ್ತದೆ. ಎಲ್ಲಾ ಅಂಶಗಳನ್ನು ಕಾರ್ಯಕ್ಷಮತೆಯ ದೃಷ್ಟಿಯಿಂದ ಗಮನಿಸಿದಾಗ ತೀರಾ ಹಿಂದುಳಿದ ಪಟ್ಟಣ ಪಂಚಾಯಿತಿಗಿಂತ ಮುಂದುವರಿದ ನಗರಸಭೆಯ ಯೋಜನೆಗಳು ಫಲಾನುಭವಿಗಳಿಗೆ ತಲುಪಿಸಲಾಗಿದೆ ಎಂಬ ತೀರ್ಮಾನಕ್ಕೆ ಬರಲಾಗಿದೆ. ತೀರಾ ಹಿಂದುಳಿದ ಪಟ್ಟಣ ಪಂಚಾಯಿತಿಯಲ್ಲಿ ಮೇಲಿನ ಅಂಶಗಳ ಕೊರತೆಯಿರುವುದರಿಂದ ಕಾರ್ಯಕ್ಷಮತೆಯು ಉತ್ತಮವಾಗಿರದೆ ಇರುವುದು ಎಂಬ ಅಂಶವನ್ನು ಗಮನಿಸಲಾಗಿದೆ.

ನಗರ ಸ್ಥಳೀಯ ಸಂಸ್ಥೆಗಳಲ್ಲಿ ನಗರ ಜನತೆಯ ಹಿತದೃಷ್ಟಿಯಿಂದ ಯಾವ ಯೋಜನೆಗಳು ರೂಪಿತಗೊಂಡಿಲ್ಲ. ಸ್ಥಳೀಯ ಸಂಸ್ಥೆಗಳು ಪ್ರಜಾಪ್ರಭುತ್ವವನ್ನು ಯಶಸ್ವಿಗೊಳಿಸುವ ಉದ್ದೇಶದಿಂದ ನಗರ ಪ್ರದೇಶದಲ್ಲಿ ಜನರ ಭಾಗವಹಿಸುವಿಕೆಗೆ ಅವಕಾಶ ನೀಡಲಾಗಿದೆ. ನಗರ ಪ್ರದೇಶಗಳಲ್ಲಿ ಇಂದಿಗೂ ಬಡತನ, ಅನಕ್ಷರತೆಯಂತಹ ಸಮಸ್ಯೆಗಳು ಜೀವಂತವಾಗಿವೆ. ನಗರ ಜನರಲ್ಲಿ ಸರ್ಕಾರದ ಯೋಜನೆಗಳು ಮತ್ತು ಅವುಗಳ ಜಾರಿ ಹೇಗೆ ಆಗಬೇಕು ಎಂಬ ತಿಳುವಳಿಕೆ ಕೊರತೆ ತಕ್ಕಮಟ್ಟಿಗೆ ಇದ್ದು ಆಯಾ ವಾರ್ಡುಗಳಲ್ಲಿ ಜನರು ಎದುರಿಸುತ್ತಿರುವಂತಹ ಕುಂದುಕೊರತೆಗಳ ಬಗ್ಗೆ ಪರಿಹಾರ ಕಂಡುಕೊಳ್ಳುವ ಅಗತ್ಯವಿದೆ. ನಗರ ಸ್ಥಳೀಯ ಸಂಸ್ಥೆಗಳಿಗೆ ಅನುದಾನ ಒದಗಿಸುವುದು ರಾಜ್ಯ ಅಥವಾ ಕೇಂದ್ರ ಸರ್ಕಾರಗಳ ಬದ್ಧತೆ. ಸರ್ಕಾರಕ್ಕೆ ನಗರದ ಜನತೆ ಪಾವತಿಸುವ ತೆರಿಗೆಯಿಂದ ಸಾಕಷ್ಟು ಆದಾಯ ಬರುತ್ತದೆ. ನಗರಗಳ ಮೂಲ ಸೌಕರ್ಯ ಕಲ್ಪಿಸಲು ತೆರಿಗೆ ಆದಾಯದ ಪಾಲನ್ನು ಸರ್ಕಾರ ವಿನಿಯೋಗಿಸಲೇಬೇಕು. ನಗರದ ಅಭಿವೃದ್ಧಿಗೆ ಕೇವಲ ಸರ್ಕಾರದ ಅನುದಾನವನ್ನೇ ನೆಚ್ಚಿಕೊಂಡಿರಲು ಸಾಧ್ಯವಿಲ್ಲ. ಹಾಗೆಯೇ ಕೇಂದ್ರ ಮತ್ತು ರಾಜ್ಯ ಸರ್ಕಾರದ ಯೋಜನೆಗಳನ್ನು ನಗರ ಸ್ಥಳೀಯ ಸಂಸ್ಥೆಗಳ ಮೂಲಕ ನಗರ ಜನತೆಗೆ ತಲುಪಿಸುವ ಕಾರ್ಯ ಮಾಡುತ್ತಿವೆ. ಕಾನೂನು ಹೇಳಿದ ಹಾಗೆ ಆಯಾಯ ವಾರ್ಡಿಗೆ ಸಂಬಂಧಿಸಿದ ಸದಸ್ಯರನ್ನು ಒಳಗೊಂಡು ಳ ಸ್ಥಾಯಿ ಸಮಿತಿಗಳನ್ನು ರಚಿಸುವುದು, ಕ್ರಿಯಾ ಯೋಜನೆಯನ್ನು ತಯಾರಿಸುವುದು, ಫಲಾನುಭವಿಗಳ ಆಯ್ಕೆ ಮಾಡುವುದು ಈ ಎಲ್ಲಾ ಅಂಶಗಳ ಅಡಿಯಲ್ಲಿ ಹೊಸಪೇಟೆ ನಗರಸಭೆ ಕಾರ್ಯಕ್ಷಮತೆಯು ಉತ್ತಮವಾಗಿದೆ. ಈ ಅಂಶಗಳ ಬಗ್ಗೆ ತೀರಾ ಹಿಂದುಳಿದ ಕೂಡ್ಲಿಗಿ ಪಟ್ಟಣ ಪಂಚಾಯಿತಿಯು ಕೊರತೆಯನ್ನು ಎದುರಿಸುತ್ತಿದ್ದು ಕಾರ್ಯಕ್ಷಮತೆಯು ಉತ್ತಮವಾಗಿಲ್ಲ ಎಂಬ ತೀರ್ಮಾನಕ್ಕೆ ಬರಲಾಗಿದೆ.

ರಾಜ್ಯದಲ್ಲಿ ನಗರೀಕರಣದ ಹೊದಿಕೆಯಲ್ಲಿರುವ ಪ್ರದೇಶಗಳು ಈಗ ಆಡಳಿತ, ಅಭಿವೃದ್ಧಿ ಮತ್ತು ಮೂಲಭೂತ ಸೌಲಭ್ಯಗಳ ಗುಣಾತ್ಮಕ ಕೊರತೆಯನ್ನು ಅನುಭವಿಸುವುದು ವಾರ್ಡಿನ ಜನರ ಅಸಮಾಧಾನದ ಹೇಳಿಕೆಗಳಿಂದ ಗೊತ್ತಾಗುತ್ತದೆ. ಈ ಅಂಶಗಳು ತೀರಾ ಹಿಂದುಳಿದ ಪಟ್ಟಣ ಪಂಚಾಯಿತಿಯಲ್ಲಿ ಹೆಚ್ಚಾಗಿರುವುದು ಕಂಡುಬಂದಿದೆ. ವಾರ್ಡುಗಳಲ್ಲಿ ಆರ್ಥಿಕವಾಗಿ ದುರ್ಬಲವಾಗಿರುವುದು ಕಂಡುಬಂದಿದೆ. ಸಾಪೇಕ್ಷವಾಗಿ ಅಭಿವೃದ್ಧಿ ಹೊಂದಿದ ನಗರಸಭೆಯು ಆರ್ಥಿಕವಾಗಿ ಬಲಿಷ್ಠರಾಗಿದ್ದುಕೊಂಡು ಮೂಲಭೂತವಾಗಿ ಸಮರ್ಪಕ ಹಂಚಿಕೆಯಲ್ಲಿ ಉತ್ತಮ ವಾತಾವರಣವನ್ನು ಹೊಂದಿರುವುದು ಕಂಡುಬಂದಿದೆ. ಆದರೆ ಹಿಂದುಳಿದ ಪಟ್ಟಣ ಪಂಚಾಯಿತಿಯಲ್ಲಿ ನಗರದಲ್ಲಿ ಉತ್ತಮ ಆಡಳಿತ ನೀಡುವ ದೃಷ್ಟಿಯಿಂದ ಆಡಳಿತದಲ್ಲಿ ಕೆಳವರ್ಗದ ಜನರ ಪ್ರಾತಿನಿಧ್ಯವನ್ನು ಶಕ್ತಿಶಾಲಿಗೊಳಿಸಿದ್ದರು. ಆ ಜಾತಿ ವರ್ಗಗಳ ಸಶಕ್ತಿಕರಣ ಪ್ರಕ್ರಿಯೆಗೆ ತೊಡಗಿಸಿಕೊಂಡಿಲ್ಲ. ತೊಡಗಿಸಿಕೊಳ್ಳುವಷ್ಟು ಅವರಲ್ಲಿ ಸಾಕ್ಷರತೆ, ಅರಿವು, ಆರ್ಥಿಕವಾಗಿ ಮುಂದುವರಿದಿರುವಂತಹ ಪರಿಸರ ಇಲ್ಲ. ಈ ನಿಟ್ಟಿನಲ್ಲಿ ನೋಡಿದಾಗ ನಗರ ಪ್ರದೇಶಗಳ ತೀರಾ ಹಿಂದುಳಿದ ಪಟ್ಟಣ ಪಂಚಾಯಿತಿಯ ಸ್ಥಳೀಯ ಆಡಳಿತ ಯಂತ್ರದಲ್ಲಿ ಸಾರ್ವಜನಿಕ ಪ್ರಾತಿನಿಧ್ಯ ತುಂಬ ದುರ್ಬಲ ಎನಿಸಿದ್ದು, ವಿವಿಧ ಅಧಿಕಾರಿಗಳೊಂದಿಗೆ ಸರಿಯಾದ ಸಂಬಂಧ ಇಲ್ಲ. ಫಲಾನುಭವಿಗಳ ಆಯ್ಕೆ ಸಮರ್ಪಕವಾಗಿರದಿರುವುದು, ಕೆಳಜಾತಿಗಳ ಪ್ರಾತಿನಿಧ್ಯವನ್ನು ಹೊಂದಿರುವ ದಲಿತರ ಅವರ ವರ್ಗಕ್ಕೆ ಶ್ರಮವಹಿಸದೆ ಇರುವುದು, ಆರ್ಥಿಕವಾಗಿ ದುರ್ಬಲವಾಗಿರುವುದು ಈ ಎಲ್ಲಾ ಅಂಶಗಳಿಂದ ನಗರಾಭಿವೃದ್ಧಿ ಯೋಜನೆ ಫಲಗಳು ಫಲಾನುಭವಿಗಳಿಗೆ ದೊರಕದೇ ಇರುವುದಾಗಿದೆ ಎಂದು ಗ್ರಹಿಸಲಾಗಿದೆ.

ದೊಡ್ಡ ನಗರಗಳ ಬೆಳವಣಿಗೆಯಲ್ಲಿ ಸರ್ಕಾರದ ನೀತಿ ಮತ್ತು ಕಾರ್ಯಕ್ರಮಗಳು ಕೆಲವೊಮ್ಮೆ ಪ್ರಭಾವ ಬೀರಿದ್ದರೂ ಸಣ್ಣ ಪಟ್ಟಣ ಮತ್ತು ನಗರಗಳ ಮೇಲೆ ಸರ್ಕಾರದ ನೀತಿ ಮತ್ತು ಕಾರ್ಯಕ್ರಮಗಳು ಪರಿಣಾಮ ಬೀರುವುದಿಲ್ಲ ಎಂಬ ಷಾ ವರದಿಯ ಹೇಳಿಕೆಯನ್ನು ಗಮನಿಸುತ್ತಾ, ದೊಡ್ಡ ನಗರಗಳಿಗಿಂತ ಸಣ್ಣ ಮತ್ತು ಮಧ್ಯಮ ನಗರಗಳಲ್ಲಿ ಅತ್ಯಂತ ಗಂಭೀರವಾದ ಮೂಲಸೌಕರ್ಯಗಳ ಕೊರತೆ ಇದ್ದು ಮತ್ತು ಯಾವುದೇ ರೀತಿಯ ಮೂಲ ಅನುಕೂಲತೆಗಳನ್ನು ಹೊಂದಿಲ್ಲದೆ ಜೀವನ ನಡೆಸಿಕೊಂಡು ಹೋಗುತ್ತಿರುವುದು ಹೊಸಪೇಟೆ ನಗರಸಭೆಯ ೨-೩ ವಾರ್ಡುಗಳು ಮತ್ತು ಕೂಡ್ಲಿಗಿ ಪಟ್ಟಣ ಪಂಚಾಯಿತಿಯ ವ್ಯಾಪ್ತಿಯಲ್ಲಿ ಗುರುತಿಸಲಾಗಿದೆ. ಅಂದರೆ ನಗರಕೇಂದ್ರಿತದಿಂದ ದೂರ ಇರುವ ವಾರ್ಡ್‌ಗಳು ಮತ್ತು ತೀರಾ ಹಿಂದುಳಿದ ಪಟ್ಟಣ ಪಂಚಾಯಿತಿಯಲ್ಲಿ ಸಮರ್ಪಕ ವಿದ್ಯುತ್, ಶುದ್ಧ ಕುಡಿಯುವ ನೀರು, ಶೌಚಾಲಯ ಮತ್ತು ವಸತಿ ಸೌಲಭ್ಯ ಮುಂತಾದವುಗಳನ್ನು ನಗರದ ವಾರ್ಡುಗಳಿಗೆ ಅತ್ಯಂತ ತುರ್ತಾಗಿ ಒದಗಿಸಬೇಕಾಗಿದೆ. ಸ್ಥಳೀಯ ಸಂಸ್ಥೆಗಳಿಗೆ ಮೂಲ ಸೌಕರ್ಯಗಳನ್ನು ಕಲ್ಪಿಸಲು ನರ್ಮ ಯೋಜನೆಗೆ ಸಮನಾದ ಒಂದು ಹೊಸ ಯೋಜನೆಯ ಅವಶ್ಯವಿದೆ. ತೀರಾ ಹಿಂದುಳಿದ ಪಟ್ಟಣ ಪಂಚಾಯಿತಿಯು ಆರ್ಥಿಕವಾಗಿ ದುರ್ಬಲವಾಗಿದ್ದು, ಮುಂದಿನ ಸಂದರ್ಭಗಳಲ್ಲಿ ಅಭಿವೃದ್ಧಿ ನಗರಗಳಾಗಿ ಬೆಳವಣಿಗೆ ಆಗದೆ ನಗರೀಕರಣದಿಂದಲೇ ಇನ್ನಷ್ಟು ಕ್ಷೀಣಿಸುವ ಸಂದರ್ಭ ಬಂದು ಒದಗಬಹುದು. ಇದರ ಪರಿಣಾಮವಾಗಿ ಸಾಪೇಕ್ಷವಾಗಿ ಮುಂದುವರಿದ ಹೊಸಪೇಟೆ ನಗರಸಭೆ ಕುಟುಂಬ ಚುನಾಯಿತ ಪ್ರತಿನಿಧಿಗಳಿಗಿಂತ ತೀರಾ ಹಿಂದುಳಿದ ಕೂಡ್ಲಿಗಿ ಪಟ್ಟಣ ಪಂಚಾಯಿತಿಯಲ್ಲಿ ಕುಟುಂಬಗಳು ಚುನಾಯಿತ ಜನಪ್ರತಿನಿಧಿಗಳು ಇಂತಹ ಕೊರತೆಯನ್ನು ಎದುರಿಸುತ್ತಿರುವುದನ್ನು ಗಮನಿಸಬಹುದಾಗಿದೆ.

ಹೊಸಪೇಟೆ ನಗರಸಭೆಯ ೨-೩ ವಾರ್ಡುಗಳು ಮತ್ತು ಕೂಡ್ಲಿಗಿ ಪಟ್ಟಣ ಪಂಚಾಯಿತಿಯ ಎರಡು ನಗರ ಸ್ಥಳೀಯ ಸಂಸ್ಥೆಗಳನ್ನು ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡು ನೀರಾವರಿ ಪ್ರದೇಶವನ್ನು ಹೊಂದಿದ ನಗರಸಭೆ ಮತ್ತು ಒಣಭೂಮಿ ಪ್ರದೇಶವನ್ನು ಹೊಂದಿರುವ ಪಟ್ಟಣ ಪಂಚಾಯಿತಿಯಲ್ಲಿನ ಅಭಿವೃದ್ಧಿಯ ಪರಿಸ್ಥಿತಿಯನ್ನು ಸೂಕ್ಷ್ಮವಾಗಿ ಗಮನಿಸಿದಲ್ಲಿ ಸಮಗ್ರ ನಗರಾಭಿವೃದ್ಧಿಯ ಕಲ್ಪನೆಯಡಿಯಲ್ಲಿ ನಗರಗಳಿಗಾಗಿ ಯೋಜನೆಗಳನ್ನು ರೂಪಿಸುವ ನಗರ ಯೋಜನೆಗಳಿಗೆ ಸೂಕ್ತ ಸ್ಪಂದನೆ ದೊರಕದ ಕಾರಣ ತೀರಾ ಹಿಂದುಳಿದ ಪಟ್ಟಣ ಪಂಚಾಯಿತಿಯು ಯೋಜಿತ ರೀತಿಯಲ್ಲಿ ಅಭಿವೃದ್ಧಿಯು ಉತ್ತಮಪಡಿಸಲು ಸಾಧ್ಯವಾಗದೇ ಇರುವುದಾಗಿದೆ ಎಂದು ಗ್ರಹಿಸಬಹುದಾಗಿದೆ. ಹಾಗೆಯೇ ಈ ಅಂಶವನ್ನು ಸಾಪೇಕ್ಷವಾಗಿ ಅಭಿವೃದ್ಧಿ ಹೊಂದಿದ ಹೊಸಪೇಟೆ ನಗರಸಭೆಯಲ್ಲಿ ಸೂಕ್ತ ಸ್ಪಂದನೆಯು ಪಡೆದು ಅಭಿವೃದ್ಧಿಯಲ್ಲಿ ೨-೩ ವಾರ್ಡ್‌ಗಳನ್ನು ಹೊರತುಪಡಿಸಿ ಉತ್ತಮವಾಗಿದೆ ಎಂದು ತಿಳಿದುಕೊಳ್ಳಬಹುದಾಗಿದೆ. ಏಕೆಂದರೆ ಪಟ್ಟಣ ಕೇಂದ್ರದಿಂದ ದೂರ ಉಳಿದಿದ್ದರಿಂದ ಉತ್ತಮ ಅಭಿವೃದ್ಧಿಯಾಗದೆ ತಕ್ಕಮಟ್ಟಿನ ಬೆಳವಣಿಗೆಯನ್ನು ಹೊಂದಿರುವುದು ಗಮನಿಸಬಹುದಾಗಿದೆ.

**ಕೆಲವು ಸಲಹೆ**

ಮೇಲೆ ನೋಡಿದ ವಿವರಗಳ ಪರಿಣಾಮವಾಗಿ ಸ್ಥಳೀಯ ಸಂಸ್ಥೆಗಳ ಸುಧಾರಣೆಗಾಗಿ ಈ ಕೆಳಗಿನ ಕ್ರಮಗಳನ್ನು ಸೂಚಿಸಲಾಗಿದೆ.

೧. ಸ್ಥಳೀಯ ಸಂಸ್ಥೆಗಳು ನಗರ ಜನರಿಗೆ ಜವಾಬ್ದಾರಿಯುತವಾಗಿ ಸೇವೆಗಳನ್ನು ಒದಗಿಸಿ, ಸಮುದಾಯ ಭಾಗವಹಿಸುವಿಕೆ, ಪಾರದರ್ಶಕತೆ ಹಾಗೂ ಸ್ಥಳೀಯ ಸಂಸ್ಥೆಗಳಿಗೆ ಹಣ ನೇರ ತಲುಪುವಿಕೆ

ಮುಂತಾದವುಗಳಿಂದ ಸೂಕ್ತ ಫಲಾನಿಭವಿಗಳಿಗೆ ಅಭಿವೃದ್ಧಿ ಯೋಜನೆಗಳು ಶೀಘ್ರವಾಗಿ ಮತ್ತು ಸರಿಯಾಗಿ ಪಲುಪುವಂತೆ ನೋಡಿಕೊಳ್ಳಬೇಕಾಗುತ್ತದೆ.

೨. ನಗರ ಸ್ಥಳೀಯ ಸಂಸ್ಥೆಗಳಲ್ಲಿ ಕೆಲಸ ಮಾಡುವ ಅಧಿಕಾರಿಗಳು ಚುನಾಯಿತ ಸದಸ್ಯರ ಸಲಹೆಗಳನ್ನು ಗಣನೆಗೆ ತೆಗೆದುಕೊಳ್ಳುವ ಅಗತ್ಯ ಇದೆ.

೩. ಪ್ರಜಾಪ್ರಭುತ್ವವನ್ನು ಯಶಸ್ವಿಗೊಳಿಸುವ ಉದ್ದೇಶದಿಂದ ಗ್ರಾಮೀಣ ಪ್ರದೇಶಗಳಲ್ಲಿ ಜನರ ಭಾಗವಹಿಸುವಿಕೆಗೆ ಅವಕಾಶ ನೀಡಲು ಗ್ರಾಮ ಸಭೆಗಳ ಮೂಲಕ ವೇದಿಕೆ ಒದಗಿಸಲಾಗಿದೆ. ಈ ವ್ಯವಸ್ಥೆ ನಗರ ಪ್ರದೇಶಗಳಲ್ಲಿ ಇಲ್ಲ. ನಗರ ಆಡಳಿತದಲ್ಲಿಯೂ ಜನರ ಭಾಗವಹಿಸುವಿಕೆಗೆ ವೇದಿಕೆ ಒದಗಿಸಿದರೆ, ಆಯಾ ವಾರ್ಡುಗಳಲ್ಲಿ ಜನರು ಎದುರಿಸುತ್ತಿರುವ ಕುಂದುಕೊರತೆಗಳ ಬಗ್ಗೆ ಚರ್ಚಿಸಲು, ಪರಿಹಾರ ಕಂಡುಕೊಳ್ಳಲು ಸಹಾಯವಾಗುತ್ತದೆ.

೪. ನಗರ ಮಟ್ಟದ ನೈರ್ಮಲ್ಯ ಕಾರ್ಯಕ್ರಮಗಳ ಪ್ರಗತಿ ಮತ್ತು ಸಾಧನೆ ಮೇಲೆ ನಿಗಾವಹಿಸಲು ಕಾರ್ಯತಂತ್ರವೊಂದನ್ನು ಪರಿಚಯಿಸುವ ಅಗತ್ಯವಿದೆ.

೫. ಎಲ್ಲಾ ನಗರ ಆಡಳಿತಗಳಲ್ಲಿ ವಾರ್ಡ್ ಸಮಿತಿಗಳು ಕಾರ್ಯನಿರ್ವಹಿಸಲು ಅವಕಾಶ ಮಾಡಿಕೊಡಬೇಕು. ವಾರ್ಡ್‌ಗಳ ಅಭಿವೃದ್ಧಿಗೆ ಬಿಡುಗಡೆ ಆಗುವ ಹಣಕಾಸನ್ನು ನಿರ್ವಹಿಸುವ ಅಧಿಕಾರವನ್ನು ಈ ಸಮಿತಿಗಳಿಗೆ ನೀಡಬೇಕು.

೬. ಜನರಿಗೆ ಮತಚಲಾವಣೆಯ ಹಕ್ಕಿನೊಂದಿಗೆ ಪ್ರಶ್ನಿಸುವ ಅಧಿಕಾರವನ್ನು ನೀಡಿದಾಗ ಮಾತ್ರ ಅಧಿಕವಾಗಿ ಅರಿವು ಮತ್ತು ಭಾಗವಹಿಸುವಿಕೆಯನ್ನು ಉತ್ತಮಗೊಳಿಸಿದಂತಾಗುತ್ತದೆ.

೭. ಉತ್ತಮ ಮತ್ತು ಶಾಶ್ವತವಾದ ಕುಡಿಯುವ ನೀರು, ನೈರ್ಮಲ್ಯ ಮತ್ತು ವಿದ್ಯುಚ್ಛಕ್ತಿ ಇನ್ನಿತರೆ ಸೌಲಭ್ಯಗಳನ್ನು ನಗರ ಪ್ರದೇಶದ ವಂಚಿತ ಸಮುದಾಯಗಳಿಗೆ ಸಿಗುವಂತೆ ಅಭಿವೃದ್ಧಿ ಪಡಿಸಬೇಕು.

೮. ಎಲ್ಲಾರಿಗೂ ವಸತಿ ಮತ್ತು ಇತರೆ ಅನುಕೂಲಗಳನ್ನು ಒದಗಿಸಲು ಮುಖ್ಯವಾಗಿ ಭಾಗವಹಿಸುವಿಕೆಯ ವಿಧಾನವನ್ನು ಅನುಸರಿಸಿಕೊಂಡು ಮತ್ತು ನಗರ ಸ್ಥಳೀಯ ಜನರನ್ನು ಅದರಲ್ಲಿ ಭಾಗವಹಿಸುವಂತೆ ಮಾಡಿ ಅವರಿಗ ಸೂಕ್ತ ತಿಳುವಳಿಕೆಯನ್ನು ನೀಡಬೇಕಾಗಿದೆ. ಏಕೆಂದರೆ, ಶೇ. ೭೦ರಷ್ಟು ಕುಟುಂಬಗಳಿಗೆ ಕುಡಿಯುವ ನೀರು ಮತ್ತು ನೈರ್ಮಲ್ಯದ ಸಮಸ್ಯೆಯನ್ನು ಎದುರಿಸುತ್ತದ್ದಾರೆ.

೯. ಆರೋಗ್ಯ ಸಂಬಂಧಿ ಸುಧಾರಣೆಯನ್ನು ತರಲು ಸರ್ಕಾರವು ಖಾಸಗೀ ಮಾದರಿಗಳ ಅವಶ್ಯಕತೆಯಿದೆ. ಇದು ಆರೋಗ್ಯ ಸೇವೆಯನ್ನು ಪಡೆಯಲು ಗುಣಮಟ್ಟದ ಚಿಕಿತ್ಸೆಯನ್ನು ಹೊಂದಲು ಅನ್ವಯಿಸುತ್ತದೆ. ಎಲ್ಲಾ ಮಟ್ಟದಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಉತ್ತಮ ಸಿಬ್ಬಂದಿಗಳ ನೇಮಕ ಮಾಡಬೇಕು.

೧೦. ಅಷ್ಟೇ ಮುಖ್ಯವಾಗಿ ನಗರದ ಸುತ್ತ ಮುತ್ತ ಪರಿಸರ ಸ್ನೇಹಿ ಗಿಡ ಮರಗಳನ್ನು ನೆಡುವುದು ಮತ್ತು ಅರಣ್ಯ ಅಭಿವೃದ್ಧಿ ಯೋಜನೆ, ಕುಡಿಯುವ ನೀರಿಗೆ ಸಂಬಂಧಿಸಿದಂತಹ ಯೋಜನೆಗಳನ್ನು –ಇವೆಲ್ಲಾವುಗಳನ್ನು ಕೈಗೊಂಡಾಗ ಮಾತ್ರ ನಗರ ಸ್ಥಳೀಯ ಸಂಸ್ಥೆಗಳು ಸರ್ವಾಂಗೀಣ ಅಭಿವೃದ್ಧಿಯನ್ನು ಕಾಣಲು ಸಾಧ್ಯ.

# ಪರಾಮರ್ಶನ ಗ್ರಂಥಗಳು


೧. ಚಂದ್ರಪೂಜಾರಿ.ಎಂ. ದೇಶೀಯತೆ ನೆರಳಲ್ಲಿ ವಿಕೇಂದ್ರೀಕರು, ಹಂಪಿ: ಕನ್ನಡ ವಿಶ್ವವಿದಾಲಯ, ೨೦೦೧.

೨. ಡಾ. ಎಂ. ಚಂದ್ರಪೂಜಾರಿ. ರಾಜಕೀಯ ಬಡತನ (A collection of Articles on poverty of politic), ಸಿದ್ದಾರ್ಥ ಪ್ರಕಾಶನ, ಬಳ್ಳಾರಿ, ೨೦೦೮.

೩. ಡಾ.ರವೀಂದ್ರ ನಗರಾಭಿವೃದ್ಧಿ ನೀತಿ (ಕರಡು) ಕುರಿತು ವಿಚಾರಸಂಕಿರಣ ವರದಿ, ಎಸ್ ಐಯುಡಿ–ಮೈಸೂರು, ಡಿಸೆಂಬರ್–೨೦೦೯.

೪. ಎಂ. ಚಂದ್ರಪೂಜಾರಿ. ಕರ್ನಾಟಕ ಪಂಚವಾರ್ಷಿಕ ಯೋಜನೆಗಳು, ಪ್ರಸಾರಾಂಗ ಕ.ವಿ.ವಿ, ಹಂಪಿ, ೨೦೧೦.

೫. ಡಾ. ಎ. ಶ್ರೀಧರ್, ಪಂಚಾಯಿತಿಗಳು ಮತ್ತು ಅಧಿಕಾರ(ಲೇಖನ), ಅಭಿವೃದ್ಧಿ ಅಧ್ಯಯನ ಪತ್ರಿಕೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ೨೦೦೬.

೬. ಟಿ.ಆರ್. ಚಂದ್ರಶೇಖರ್. ಜನರ ಯೋಜನೆ, ಮಂಟಪ ಮಾಲೆ–೧೩೦, (ಕರ್ನಾಟಕದ ಅನುಭವಗಳು) ಪ್ರಸಾರಾಂಗ ಕ.ವಿ.ವಿ, ಹಂಪಿ, ೨೦೦೫.

೭. ಟ.ಅರ್. ಚಂದ್ರಶೇಖರ್ ವಿಕೇಂದ್ರೀಕರಣ ತತ್ವ ಆಚರಣೆ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

೮. ಹರ್‌ಬರ್ಟ್ ಪೈನರ್, ಥೇರಿ ಅಂಡ್ ಪ್ರಾಕ್ಟಿಸ್ ಆಫ್ ಮಾಡರ್ನ್ ಗೌರ್ನಮೆಂಟ್, ಲಂಡನ್, ಮೃತ್ಯು ಆಂಡ್ ಕಂಪನಿ ಲಿ., ೧೯೬೫, ಪುಟ.೭೨೩.

೯. ಎಸ್. ಆರ್. ಮಹೇಶ್ವರಿ, ಲೋಕಲ್ ಗೌರ್ನಮೆಂಟ್ ಇನ್ ಇಂಡಿಯಾ, ಆಗ್ರಾ, ಲಕ್ಷ್ಮಿ ಅಗರವಾಲ, ೧೯೮೪, ಪುಟ. ೨೪೭.

೧೦. ಅಶೋಕ ಮುಖ್ಯೋಪಾಧ್ಯಾಯ, ಮುನ್ಸಿಪಲ್ ಪರ್ಸನಲ್ ಎಡ್ಮಿನಿಸ್ಟ್ರೇಶನ್(ಅರ್ಬನ್ ಅಧ್ಯಯನ ಕೆಂದ್ರ), ಐಐಪಿಎ. ನವದೆಹಲಿ, ೧೯೮೫, ಪುಟ.೧೦೪–೧೦೫.

೧೧. ಕೆ. ಶೇಷಾದ್ರಿ, ದಿ ಸಿಟಿಜನ್ ಆಂಡ್ ದಿ ಮುನ್ಸಿಪಾಲಿಟಿ ಇನ್ ಎಮ್.ಎ. ಮುತಾಲಿಖ್ ಮತ್ತು ಉಮಾಪತಿ ಎನ್. ಅರ್ಬನ್ ಗೌರ್ನಮೆಂಟ್ ಆಂಡ್ ಎಡ್ಮಿನಿಷ್ಟ್ರೇಶನ್, ಹೈದರಾಬಾದ್, ನಗರ ಅಧ್ಯಯನದ ಪ್ರಾದೇಶಿಕ ಕೇಂದ್ರ, ೧೯೮೧, ಪುಟ.೯೧–೯೯.

೧೨. ಗುನ್ನರ್ ಮಿರಾಡಲ್, ಏಶಿಯನ್ ಡ್ರಾಮ ಯಾನ್ ಎನ್ಕ್ವಯರಿ ಇನ್ ಟು ದ ಪಾವರ್ಟಿ ಆಫ್ ನೇಶನ್ಸ್, ಪೆಂಗ್ವಿನ್ ಪ್ರಸ್ತಕಾಲಯ, ೧೯೬೮, ಪುಟ.೮೯೫–೯೦೦.

೧೩. ಶರ್ಮಾ, ಪಬ್ಲಿಕ್ ಎಡ್ಮಿನಿಸ್ಟ್ರೇಶನ್ ಥೇರಿ ಆ್ಯಂಡ್ ಪ್ರಾಕ್ಟೀಸ್, ಅಲಹಾಬಾದ್ ಕೀತಾಬ ಮಹಲ್, ೧೯೭೮, ಪುಟ.೪೪೯

೧೪. ಎಂ.ಜೆ.ಕೆ. ತಾವರಾಜ, ಪೈನಾನ್ಸ್ ಆಫ್ ಲೋಕಲ್ ಗೌರ್ನಮೆಂಟ್ ಇನ್ ಇಂಡಿಯಾ, ಇಂಡಿಯನ್ ಜರ್ನಲ್ ಆಫ್ ಪಬ್ಲಿಕ್ ಎಡ್ಮಿನಿಸ್ಟ್ರೇಶನ್, ವ್ಯಾಲ್ಯುಂ ನಂ.ಫಿಫಿ೫ಗಿ, ೧೯೭೮.

೧೫. ಯುನೈಟೆಡ್ ನೇಶನ್ಸ್, ಡಿಸೆಂಟ್ರೈಜೇಶನ್ ಫಾರ್ ನ್ಯಾಶನಲ್ ಆ್ಯಂಡ್ ಲೋಕಲ್ ಗೌರ್ನ್‌ಮೆಂಟ್, ನ್ಯೂಯಾರ್ಕ್, ೨೦೬೨, ಪು.೬೫.

